ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಸೃಷ್ಟಿಖಂಡ—ಎರಡನೆಯ ಭಾಗ

(೧೬—೨೪ ಅಧ್ಯಾಯಗಳು)

ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ,**

ಸಾಹಿತ್ಯವಿದ್ವಾನ್

ಕನ್ನಡಪಂಡಿತ (ಮೈಸೂರು) ಕನ್ನಡವಿದ್ವಾನ್ (ಮದ್ರಾಸು)

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೫

# ಮುನ್ನುಡಿ



ಈ ಭಾಗದಲ್ಲಿ ಹದಿನಾರರಿಂದ ಇಪ್ಪತ್ತನಾಲ್ಕರವರೆಗಿನ ಅಧ್ಯಾಯಗಳು ಕ್ರೋಢೀಕೃತವಾಗಿವೆ. ಇದರಲ್ಲಿ ಬ್ರಹ್ಮನು ಯಜ್ಞಮಾಡುವುದು, ಅದಕ್ಕೆ ಬೇಕಾದ ಸಂರಂಭಗಳು ವರ್ಣಿತವಾಗಿವೆ. ಕಾಲಕ್ಕೆ ಸರಿಯಾಗಿ ಸಾವಿತ್ರಿಯು ದೀಕ್ಷಾಮಂಟಪಕ್ಕೆ ಬರದಿರಲು ಇಂದ್ರನು ಗೋಪಕನ್ಯೆಯನ್ನೇ ತಂದು ಬ್ರಹ್ಮನಿಗೆ ಮದುವೆಮಾಡುವುದೂ, ಆಕೆಗೆ ಗಾಯಿತ್ರೀ ಎಂಬ ಹೆಸರು ಬಂದುದೂ, ಅನಂತರ ಸಾವಿತ್ರಿಯು ಕೋಪಗೊಂಡುದೂ ರಮಣೀಯವಾಗಿವೆ. ಇದರಿಂದ ನಾವು ಕೊಂಚಮಟ್ಟಿಗೆ ಎಲ್ಲರಲ್ಲಿಯೂ ಹೇಗೆ ತೊಂದರೆಗಳಿವೆಯೆಂಬುದನ್ನು ತಿಳಿದು ನಮ್ಮ ಸಂಸಾರದ ವಿಷಯದಲ್ಲಿ ಪಾರಮಾರ್ಥ ಪಟ್ಟುಕೊಳ್ಳುವಂತಾಗುತ್ತದೆ. ಇದರಿಂದಲೇ ಪುಷ್ಕರವು ಮಹಿಮೆಯುಳ್ಳದ್ದಾಗುವುದನ್ನು ನಾವು ಕಾಣಬಹುದು. ಇಲ್ಲಿ ಹೇಳಿರುವ ಗೋವಿನ ಕಥೆಯನ್ನು ನೋಡಿದರೆ ಜನಗಳಿಗೆ ಇದಕ್ಕಿಂತಲೂ ಮತ್ತೊಂದು ನೀತಿಮಾರ್ಗವೇ ಮಾರ್ಗದರ್ಶಕವಾಗಬೇಕಿಲ್ಲವೆನಿಸುತ್ತದೆ. ವೃತ್ರಾಸುರನಿಂದ ದೇವತೆಗಳು ತೊಂದರೆಪಟ್ಟು, ದಧೀಚಿ ಋಷಿಯನ್ನು ಅವನ ಬೆನ್ನುಮೂಳೆಯನ್ನು ಕೇಳಲು ಅವನು ದಾನಮಾಡಿದುದನ್ನು ನೋಡಿದರೆ ಮಹಾತ್ಮರು ಸರ್ವಶಕ್ತರಾಗಿದ್ದರೂ ಏನನ್ನು ತಾನೆ ಕೊಡುವುದಿಲ್ಲವೆನ್ನುವಂತಾಗುತ್ತದೆ. ಈ ಸಂದರ್ಭದಲ್ಲಿ ದಾನಧರ್ಮಗಳ ನಿಯಮಗಳ ಪ್ರಶಂಸೆಯು ಅತಿ ರಮಣೀಯವೂ ಉಪಾದೇಯವೂ ಆಗಿರುತ್ತದೆ. ದಾನಗಳ ವಿಷಯವಲ್ಲದೆ ಬಸವನನ್ನು ಯಾವಾಗ ಬಿಡಬೇಕೆಂಬುದೂ ಅದರ ಫಲವೂ ವರ್ಣಿತವಾಗಿವೆ. ಸೂರ್ಯನ ಸಂಬಂಧಿಯಾದ ವ್ರತಗಳನ್ನೂ, ಗೌರೀ ಸಂಬಂಧವಾದ ವ್ರತಗಳನ್ನೂ ಅನೇಕವಾಗಿ ವರ್ಣಿಸಿದೆ. ವೀರಭದ್ರನು ಅಂಗಾರಕನಾಗಿ ಆಗುವುದೂ, ಅಂಗಾರಕ ಚತುರ್ಥಿಯ ವರ್ಣನೆಯೂ ಉಪಾದೇಯಗಳಾಗಿವೆ.

ಧರ್ಮಾತ್ಮರೂ ವಿದ್ಯಾವಂತರೂ ಆಗಿ ವಿದ್ಯೆಗಳಲ್ಲಿ ಪಕ್ಷಪಾತವನ್ನು ಅಧಿಕವಾಗಿ ತೋರಿಸುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀಮುಮ್ಮಡಿಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ.,** ರವರಿಗೆ ಸರ್ವೇಶ್ವರನು ಸಕಲ ಸೌಭಾಗ್ಯಗಳನ್ನು ದಯಪಾಲಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

**—ಅನುವಾದಕ.**



## ಪದ್ಮಮಹಾಪುರಾಣದ ಸೃಷ್ಟಿಖಂಡದ ಎರಡನೆಯ ಭಾಗದ

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

**ಹದಿನಾರನೆಯ ಅಧ್ಯಾಯ—**



**ಹದಿನೇಳನೆಯ ಅಧ್ಯಾಯ—**

ನಿಗೆ ನಂದೆಯೆಂಬ ಹಸುವಿನೊಡನೆ ಸೇರುವಿಕೆ. ಹುಲಿಯಾಗಿದ್ದ ಪ್ರಭಂಜನನಿಗೂ ನಂದೆಗೂ ಚರ್ಚೆ. ನಂದೆಯು ಮತ್ತೆ ಬರುವೆನೆಂದು ಹುಲಿಯನ್ನು ಕೇಳಿ ಮಗನ ಬಳಿಗೆ ಬರುವುದು. ಆಗ ನಂದೆಯು ಬಹುವಾಗಿ ಪ್ರತಿಜ್ಞೆಗಳನ್ನು ಮಾಡುವುದು. ಮದುವೆ ಮುಂತಾದುವುಗಳಲ್ಲಿ ಪ್ರತಿಜ್ಞೆಮಾಡುವುದರಿಂದ ದೋಷವಿಲ್ಲದಿರುವಿಕೆ. ನಂದೆಯು ಮನೆಗೆ ಬಂದು ಮಗನೊಡನೆ ತನ್ನ ಸಾವಿನ ವಿಷಯವನ್ನು ತಿಳಿಸುವುದು. ಮಗನಿಗೆ ಉಪದೇಶ ಮಾಡುವುದು. ತಾಯಿ ಸಖಿಯರೊಡನೆ ಮಾತುಕಥೆ. ಸತ್ಯದ ಪ್ರಶಂಸೆ. ನಂದೆಯು ತನ್ನ ಮಗನನ್ನು ಕಾಪಾಡಲು ವನದೇವತೆಗಳನ್ನು ಪ್ರಾರ್ಥಿಸಿ ಮತ್ತು ಹುಲಿಯ ಬಳಿಗೆ ಹಿಂದಿರುಗುವುದು. ಹುಲಿಗೆ ತಾನು ಬಂದಿರುವುದನ್ನು ಹೇಳುವುದು. ನಂದೆಯ ಹೆಸರನ್ನು ಮತ್ತೆ ಕೇಳಿದೊಡನೆಯೇ ಹುಲಿಗೆ ಮೊದಲಿನ ದೇಹ ಬರುವುದು. ಧರ್ಮನು ನಂದೆಗೂ ಪ್ರಬಂಧನನೆಂಬ ಹುಲಿಯಾಗಿದ್ದವನಿಗೂ ವರ ಕೊಡುವುದು. ಸರಸ್ವತಿಯೇ ನಂದೆಯಾಗಿರುವುದನ್ನು ತಿಳಿಸುವುದು. ಖರ್ಜೂರೀ ವನದಿಂದ ಬೇರೆಕಡೆ ನಂದೆಯು ಹೋಗುವುದು. ಸರಸ್ವತೀ ನದಿಯಲ್ಲಿ ದಾನಮಾಡಿದ ಫಲದ ಪ್ರಶಂಸೆ. 100-191

ಹತ್ತೊಂಭತ್ತನೆಯ ಅಧ್ಯಾಯ—

ಋಷಿಗಳು ತೀರ್ಥವನ್ನು ವಿಭಾಗಿಸಿರುವುದು. ಬ್ರಹ್ಮನು ಋಷಿಗಳಿಗೆ ವರ ದಾನಮಾಡುವುದು. ಪುಷ್ಕರ ಮಹಿಮೆಯ ವರ್ಣನೆ. ಪುಷ್ಕರದಲ್ಲಿ ಮಾಡಿದ ಸ್ನಾನದಾನಗಳ ವರ್ಣನೆ. ಪುಷ್ಕರದ ಆಶ್ರಮಗಳ ವರ್ಣನೆ. ಅಗಸ್ತ್ಯನ ಮಹಿಮೆ. ವೃತ್ರಾಸುರನ ವಧೆಯ ಕಥೆ. ವೃತ್ರನ ಕಡೆಯ ಕಾಲೇಯರಿಂದ ಹೆದರಿದ ದೇವತೆಗಳು ಬ್ರಹ್ಮನ ಬಳಿಗೆ ಹೋಗುವುದು. ಬ್ರಹ್ಮನ ಅಪ್ಪಣೆಯಂತೆ ದೇವತೆಗಳು ದಧೀಚಿಯ ಬಳಿಗೆ ಹೋಗುವುದು.

॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಷೋಡಶೋಽಧ್ಯಾಯಃ

॥ ಭೀಷ್ಮ ಉವಾಚ ॥

ಯದೇತತ್ಕಥಿತಂ ಬ್ರಹ್ಮಂಸ್ತೀರ್ಥಮಾಹಾತ್ಮ್ಯಮುತ್ತಮಂ ।
ಕಮಲಸ್ಯಾಭಿಪಾತೇನ ತೀರ್ಥಂ ಜಾತಂ ಧರಾತಲೇ ॥ ೧ ॥

ತತ್ರಸ್ಥೇನ ಭಗವತಾ ವಿಷ್ಣುನಾ ಶಂಕರೇಣ ಚ ।
ಯತ್ಕೃತಂ ಮುನಿಶಾರ್ದೂಲ ತತ್ಸರ್ವಂ ಪರಿಕೀರ್ತಯ ॥ ೨ ॥

ಕಥಂ ಯಜ್ಞೋ ಹಿ ದೇವೇನ ವಿಭುನಾ ತತ್ರ ಕಾರಿತಃ ।
ಕೇ ಸದಸ್ಯಾ ಋತ್ವಿಜಶ್ಚ ಬ್ರಾಹ್ಮಣಾಃ ಕೇ ಸಮಾಗತಾಃ ॥ ೩ ॥

ಕೇ ವಿಭಾಗಾಸ್ತಸ್ಯ ಯಜ್ಞೇ ಕಿಂ ದ್ರವ್ಯಂ ಕಾ ಚ ದಕ್ಷಿಣಾ ।
ಕಾ ವೇದೀ ಕಿಂ ಪ್ರಮಾಣಂ ಚ ಕೃತಂ ತತ್ರ ವಿರಿಂಚಿನಾ ॥ ೪ ॥

---

## ಹದಿನಾರನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು :—ಎಲೈ ಬ್ರಾಹ್ಮಣನೇ, ಬ್ರಹ್ಮನ ಹಸ್ತಪಲ್ಲವ ಕಮಲವು ಜಾರಿ ಭೂಮಿಯಲ್ಲಿ ಬಿದ್ದು ಪುಷ್ಕರವೆಂಬ ತೀರ್ಥವು ಉತ್ಪತ್ತಿಯಾಯಿತೆಂದೂ, ಆ ತೀರ್ಥದ ಮಹಿಮೆಯೇನೆಂದೂ ಹೇಳಿರುವೆ.

೨. ಈಗ ಅಲ್ಲಿದ್ದ ಶಂಕರನೂ ವಿಷ್ಣುವೂ ಆ ಕ್ಷೇತ್ರದಲ್ಲಿ ಏನುಮಾಡಿದರು ?

೩. ಅಲ್ಲಿ ಆ ಸ್ವಾಮಿಯಾದ ಬ್ರಹ್ಮನು ಯಜ್ಞವನ್ನು ಹೇಗೆ ಮಾಡಿಸಿದನು ? ಸದಸ್ಯರಾರು ? ಋತ್ವಿಕ್ಕುಗಳಾರು ? ಯಾವ ಯಾವ ಬ್ರಾಹ್ಮಣರು ಬಂದಿದ್ದರು ?

೪. ಅವರ ಯಜ್ಞದಲ್ಲಿ ವಿಭಾಗಗಳಾವುವು ? ದ್ರವ್ಯವೇನು ? ದಕ್ಷಿಣೆಯೇನು ? ವೇದಿಕೆಯಾವುದು ? ಅದರ ಪ್ರಮಾಣವೆಷ್ಟು ? ಇವನ್ನು ಬ್ರಹ್ಮನು ಹೇಗೆ ಮಾಡಿದನು ?

**ಯೋ ಯಾಜ್ಯಃ ಸರ್ವದೇವಾನಾಂ ವೇದ್ಯೈಃ ಸರ್ವತ್ರ ಪಠ್ಯತೇ ।**
**ಕಂ ಚ ಕಾಮಮಭಿಧ್ಯಾಯ ವೇಧಾ ಯಜ್ಞಂ ಚಕಾರ ಹ ॥ ೫ ॥**

**ಯಥಾಸೌ ದೇವದೇವೇಶೋ ಹ್ಯಜರಶ್ಚಾಮರಶ್ಚ ಹ ।**
**ತಥಾ ಚೈವಾಕ್ಷಯಃ ಸ್ವರ್ಗಸ್ತಸ್ಯ ದೇವಸ್ಯ ದೃಶ್ಯತೇ ॥ ೬ ॥**

**ಅನ್ಯೇಷಾಂ ಚೈವ ದೇವಾನಾಂ ದತ್ತಃ ಸ್ವರ್ಗೋ ಮಹಾತ್ಮನಾ ।**
**ಅಗ್ನಿಹೋತ್ರಾರ್ಥಮುತ್ಪನ್ನಾ ವೇದಾಶ್ಚೈವಾಗ್ನಯಸ್ತಥಾ ॥ ೭ ॥**

**ಯೇ ಚಾನ್ಯೇ ಪಶವೋ ಭೂಮೌ ಸರ್ವೇ ತೇ ಯಜ್ಞಕಾರಣಾತ್ ।**
**ಸೃಷ್ಟಾ ಭಗವತಾ ತೇನ ಇತ್ಯೇಷಾ ವೈದಿಕೀ ಶ್ರುತಿಃ ॥ ೮ ॥**

**ತದತ್ರ ಕೌತುಕಂ ಮಹ್ಯಂ ಶ್ರುತ್ವೇದಂ ತವ ಭಾಷಿತಂ ।**
**ಯಂ ಕಾಮಮಧಿಕೃತ್ಯೈಕಂ ಯತ್ಫಲಂ ಯಾಂ ಚ ಭಾವನಾಂ ॥ ೯ ॥**

---

೫. ಯಾವನನ್ನು ದೇವತೆಗಳು ಪೂಜಿಸುತ್ತಾರೋ, ವೇದವೆಲ್ಲವೂ ಯಾವನನ್ನು ಹೊಗಳುತ್ತವೆಯೋ ಅಂತಹ ಬ್ರಹ್ಮನು ಯಾವ ಅಪೇಕ್ಷೆಯನ್ನಿಟ್ಟುಕೊಂಡು ಯಾಗವನ್ನು ಮಾಡಿದನು ?

೬. ದೇವದೇವನಾದ ಮುಪ್ಪುಮರಣಗಳಿಲ್ಲದ ಆ ಸ್ವಾಮಿಗೆ ನಾಶವಿಲ್ಲದ ಸ್ವರ್ಗವೇ ಕಾಣುತ್ತಿದೆಯಲ್ಲವೆ ?

೭. ಆ ಮಹಾತ್ಮನೇ ದೇವತೆಗಳಿಗೆ ಸ್ವರ್ಗವನ್ನು ಕೊಟ್ಟಿರುವನು. ಅಗ್ನಿಹೋತ್ರಕ್ಕೋಸ್ಕರ ವೇದಗಳೂ ಅಗ್ನಿಗಳೂ ಉತ್ಪನ್ನವಾಗಿವೆ.

೮. ಭೂಮಿಯಲ್ಲಿ ಹುಟ್ಟಿರುವ ಪಶುಗಳೆಲ್ಲವೂ ಯಜ್ಞಕ್ಕೋಸ್ಕರವೇ ಹುಟ್ಟಿವೆ ಎಂದು ವೇದದಲ್ಲಿ ಹೇಳಿದೆ.

೯. ನಿನ್ನ ಮಾತನ್ನು ಕೇಳಿ ನನಗೆ ಆಶ್ಚರ್ಯವಾಗುತ್ತಿದೆ. ಯಾವ ಅಪೇಕ್ಷೆಯನ್ನು, ಯಾವ ಫಲವನ್ನು, ಯಾವ ಉದ್ದೇಶವನ್ನು ಇಟ್ಟುಕೊಂಡು ಬ್ರಹ್ಮನು ಯಜ್ಞಮಾಡಿದನೆಂಬುದೆಲ್ಲವನ್ನು ತಿಳಿಸು.

ಕೃತವಾನ್ಯೇನ ವೈ ಯಜ್ಞಂ ಸರ್ವಂ ಶಂಸಿತುಮರ್ಹಸಿ ।
ಶತರೂಪಾ ಚ ಯಾ ನಾರೀ ಸಾವಿತ್ರೀ ಸಾ ತ್ವಿಹೋಚ್ಯತೇ ॥ ೧೦ ॥

ಭಾರ್ಯಾ ಸಾ ಬ್ರಹ್ಮಣಃ ಪ್ರೋಕ್ತಾ ಋಷೀಣಾಂ ಜನನೀ ಚ ಸಾ ।
ಪುಲಸ್ತ್ಯಾದ್ಯಾನ್ಮುನೀನ್ಸಪ್ತ ದಕ್ಷಾದ್ಯಾಂಶ್ಚ ಪ್ರಜಾಪತೀನ್ ॥ ೧೧ ॥

ಸ್ವಾಯಂಭುವಾದೀಂಶ್ಚ ಮನೂನ್ಸಾವಿತ್ರೀ ಸಮಜೀಜನತ್ ।
ಧರ್ಮಪತ್ನೀಂ ತು ತಾಂ ಬ್ರಹ್ಮಾ ಪುತ್ರಿಣೀಮಾತ್ಮನಃ ಪ್ರಿಯಾಂ ॥ ೧೨ ॥

ಪತಿವ್ರತಾಂ ಮಹಾಭಾಗಾಂ ಸುವ್ರತಾಂ ಚಾರುಹಾಸಿನೀಂ ।
ಕಥಂ ಸ ತಾಂ ಪರಿತ್ಯಜ್ಯ ಭಾರ್ಯಾಮನ್ಯಾಮವಿಂದತ ॥ ೧೩ ॥

ಕಿಂ ನಾಮ್ನೀ ಕಿಂ ಸಮಾಚಾರಾ ಕಸ್ಯ ಸಾ ತನಯಾ ವಿಭೋ ।
ಕ್ವ ಸಾ ದೃಷ್ಟಾ ಹಿ ದೇವೇನ ಕೇನ ಚಾಸ್ಯ ಪ್ರದರ್ಶಿತಾ ॥
ಕಿಂ ರೂಪಾ ಸಾ ತು ದೇವೇನ ದೃಷ್ಟಾ ಚಿತ್ತವಿಮೋಹಿನೀ ॥ ೧೪ ॥

---

೧೦. ವಿಚಿತ್ರ ರೂಪುಳ್ಳ ಹೆಂಗಸೇ ಸಾವಿತ್ರೀ ಎಂದು ಹೇಳಿಸಿಕೊಳ್ಳುತ್ತಾಳೆ. ಅವಳೇ ಬ್ರಹ್ಮನ ಹೆಂಡತಿಯು. ಋಷಿಗಳ ತಾಯಿಯು.

೧೧. ಪುಲಸ್ತ್ಯನೇ ಮುಂತಾದ ಸಪ್ತಋಷಿಗಳನ್ನು ದಕ್ಷನೇ ಮುಂತಾದ ಪ್ರಜಾತಿಪಗಳನ್ನು ಸ್ವಾಯಂಭುವನೇ ಮುಂತಾದ ಮನುಗಳನ್ನು ಆ ಸಾವಿತ್ರಿಯು ಹೆತ್ತಳು.

೧೨-೧೩. ಧರ್ಮಪತ್ನಿಯೂ, ಮಕ್ಕಳೊಂದಿಗಿತ್ತಿಯೂ, ತನ್ನ ಪ್ರೀತಿಪಾತ್ರಳೂ, ಪತಿವ್ರತೆಯೂ, ಪುಣ್ಯವತಿಯೂ, ಮನೋಹರಳೂ ಆದ ಆಕೆಯನ್ನು ಬಿಟ್ಟು, ಬೇರೆ ಹೆಂಡತಿಯನ್ನು ಹೇಗೆ ಪರಿಗ್ರಹಿಸಿದನು ?

೧೪. ಅವಳ ಹೆಸರೇನು? ಅವಳ ಆಚಾರವೇನು? ಆಕೆಯು ಯಾರ ಮಗಳು ? ಅವಳನ್ನು ಎಲ್ಲಿ ನೋಡಿದನು ? ಯಾರು ತೋರಿಸಿದರು ? ಅವಳ ರೂಪೇನು? ಇವೆಲ್ಲವನ್ನೂ ಹೇಳು.

ಯಾಂ ದೃಷ್ಟ್ವಾ ಚ ಸ ದೇವೇಶಃ ಕಾಮಸ್ಯ ವಶಮೇಯಿವಾನ್ ।
ವರ್ಣತೋ ರೂಪತಶ್ಚಾಪಿ ಸಾವಿತ್ರ್ಯಭ್ಯಧಿಕಾ ಮುನೇ ॥ ೧೫ ॥

ಯಾ ಲೋಭಿತವತೀ ದೇವಂ ಸರ್ವಲೋಕೇಶ್ವರಂ ವಿಭುಂ ।
ಯಥಾ ಗೃಹೀತವಾನ್ದೇವೋ ನಾರೀಂ ತಾಂ ಲೋಕಸುಂದರೀಂ ॥ ೧೬ ॥

ಯಥಾ ಪ್ರವೃತ್ತೋಽಸೌ ಯಜ್ಞಸ್ತಥಾ ಸರ್ವಂ ಪ್ರಕೀರ್ತಯ ।
ತಾಂ ದೃಷ್ಟ್ವಾ ಬ್ರಹ್ಮಣಃ ಪಾರ್ಶ್ವೇ ಸಾವಿತ್ರೀ ಕಿಂ ಚಕಾರ ಹ ॥ ೧೭ ॥

ಸಾವಿತ್ರ್ಯಾಂ ವೈ ತಥಾ ಬ್ರಹ್ಮಾ ಕಾಂ ತು ವೃತ್ತಿಮವರ್ತತ ।
ಸಂನಿಧೌ ಕಾನಿ ವಾಕ್ಯಾನಿ ವಾಕ್ಯಾನಿ ಸಾವಿತ್ರೀ ಬ್ರಹ್ಮಣಾ ತದಾ ॥ ೧೮ ॥

ಉಕ್ತಾಪ್ಯುಕ್ತವತೀ ಭೂಯಃ ಸರ್ವಂ ಶಂಸಿತುಮರ್ಹಸಿ ।
ಕಿಂ ಕೃತಂ ತತ್ರ ಯುಷ್ಮಾಭಿಃ ಕೋಪೋ ವಾಥ ಕ್ಷಮಾಪಿ ವಾ ॥ ೧೯ ॥

---

೧೫. ಅವಳನ್ನು ನೋಡಿ ಆ ದೇವೇಶನಾದ ಬ್ರಹ್ಮನು ಕಾಮನಿಗೆ ಅಧೀನನಾಗ ಬೇಕಾಗಿದ್ದರೆ ವರ್ಣಸೌಂದರ್ಯಗಳಲ್ಲಿ ಆಕೆಯು ಸಾವಿತ್ರಿಗಿಂತಲೂ ಹೆಚ್ಚು ಚೆನ್ನಾಗಿರ ಬೇಕು.

೧೬. ಯಾವಾಕೆಯು ಸರ್ವಲೋಕಕ್ಕೂ ಒಡೆಯನಾದ ಬ್ರಹ್ಮನನ್ನು ಮೋಹಿಸುವಂತೆ ಮಾಡಿದಳೋ ಆ ಸ್ವಾಮಿಯೂ ಕೂಡ ಆ ಸುಂದರಿಯನ್ನು ಪರಿಗ್ರಹಿಸಿದನೋ ಇಲ್ಲವೋ ಅದನ್ನು ದಯವಿಟ್ಟು ತಿಳಿಸು.

೧೭. ಈ ಯಜ್ಞವು ಯಾವರೀತಿ ನಡೆಯಿತೆಂಬುದನ್ನು ದಯವಿಟ್ಟು ತಿಳಿಸು. ಬ್ರಹ್ಮನ ಪಾರ್ಶ್ವದಲ್ಲಿ ಆ ಹೊಸಹೆಂಡತಿಯನ್ನು ನೋಡಿ ಸಾವಿತ್ರಿಯು ಏನು ಮಾಡಿದಳು ?

೧೮-೧೯. ಆಗ ಸಾವಿತ್ರಿಯನ್ನು ಬ್ರಹ್ಮನು ಹೇಗೆ ಮಾತನಾಡಿಸಿದನು ? ಆಕೆಯನ್ನು ಕುರಿತು ಬ್ರಹ್ಮನು ಏನು ಹೇಳಿದನು ? ಅವರಿಗೆ ಮಾತುಗಳು ಹೇಗೆ ನಡೆದವು ? ಅವೆಲ್ಲವನ್ನೂ ಹೇಳು. ಅಲ್ಲಿ ನೀವುಗಳು ಕೋಪಮಾಡಿದಿರಾ ? ಅಥವಾ ಕ್ಷಮೆಯಿಂದಿದ್ದಿರಾ ?

**ಯತ್ಕೃತಂ ತತ್ರ ಯದ್ಭೂತಂ ಯತ್ತದ್ಪ್ರೋಕ್ತಮಭೂತ್ತದಾ ।**
**ವಿಸ್ತರೇಣ ಹಿ ಸರ್ವಾಣಿ ಕರ್ಮಾಣಿ ಪರಮೇಷ್ಠಿನಃ ॥ ೨೦ ॥**

**ಶ್ರೋತುಮಿಚ್ಛಾಮ್ಯಶೇಷೇಣ ಕರಗ್ರಹವಿಧಿಂ ಪರಂ ।**
**ಕರ್ಮಣಾಮಾನುಪೂರ್ವ್ಯಂ ಚ ಪ್ರಾರಂಭೋ ಹೋತ್ರಮೇವ ಚ ॥ ೨೧ ॥**

**ಹೋತುರ್ಭಕ್ಷೋ ಯಥಾರ್ಚಾಪಿ ಪ್ರಥಮಾ ಕಸ್ಯ ಕಾರಿತಾ ।**
**ಕಥಂ ಚ ಭಗವಾನ್ವಿಷ್ಣುಃ ಸಾಹಾಯ್ಯಂ ಕೇನ ಕೀ ದೃಶಂ ॥ ೨೨ ॥**

**ಅಮರ್ರೈರ್ವಾ ಕೃತಂ ಯಚ್ಚ ತದ್ಭವಾನ್ವಕ್ತುಮರ್ಹತಿ ।**
**ದೇವಲೋಕಂ ಪರಿತ್ಯಜ್ಯ ಕಥಂ ಮರ್ತ್ಯಮುಪಾಗತಃ ॥ ೨೩ ॥**

**ಗಾರ್ಹಪತ್ಯಂ ಚ ವಿಧಿನಾ ಅನ್ವಾಹಾರ್ಯಂ ಚ ದಕ್ಷಿಣಂ ।**
**ಅಗ್ನಿಮಾಹವನೀಯಂ ಚ ವೇದೀಂ ಚೈವ ಕುಶಂ ಸ್ರುವಂ ॥ ೨೪ ॥**

**ಪ್ರೋಕ್ಷಣೀಯಂ ಸ್ರುಚಂ ಚೈವ ಅವಭೃಥ್ಯಂ ತಥೈವ ಚ ।**
**ಆವಾಪಾಂಸ್ತ್ರೀಣಿ ಯಶ್ಚಕ್ರೇ ಹವ್ಯಕವ್ಯಪ್ರದಾನಿ ವೈ ॥ ೨೫ ॥**

---

೨೦. ಅಲ್ಲಿ ಮಾಡಿದುವೇನು? ಅಲ್ಲಿದ್ದುದೇನು? ಆದುದೇನು? ನೀನೇನು ಹೇಳಿದೆ? ಅಲ್ಲಿ ಆ ಬ್ರಹ್ಮನು ಮಾಡಿದ ಕೆಲಸಗಳನ್ನೂ, ಮದುವೆಯನ್ನೂ ವಿಸ್ತಾರವಾಗಿ ತಿಳಿಸು. ಕೇಳಲು ಬಹು ಕುತೂಹಲವಿದೆ.

೨೧-೨೨. ಆ ಕರ್ಮಗಳ ರೀತಿಯನ್ನು ಮೊದಲು ಮಾಡಿದುದನ್ನೂ ಹೋತ್ರನಾರೆಂಬುದನ್ನೂ ಹೋತೃವಿನ ಭಕ್ಷಣವನ್ನೂ, ಅಗ್ರಪೂಜೆಯ ವಿಷಯವನ್ನೂ, ಅದಾರಿಗೆ ಆಯಿತೆಂಬುದನ್ನು ತಿಳಿಸು. ವಿಷ್ಣುವು ಏನುಮಾಡಿದನು? ಬ್ರಹ್ಮನಿಗೆ ಸಹಾಯಕರಾರು? ದೇವತೆಗಳು ಏನುಮಾಡಿದರು? ಅವೆಲ್ಲವನ್ನೂ ನೀನು ಹೇಳು.

೨೩—೨೮. ಆ ಬ್ರಹ್ಮನು ದೇವಲೋಕವನ್ನು ಬಿಟ್ಟು ಮನುಷ್ಯಲೋಕಕ್ಕೇಕೆ ಬಂದನು? ಅವನು ಮಾಡಿದ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳ ಲಕ್ಷಣವೇನು? ವೇದಿಕೆಯು ಎಷ್ಟರ ಪ್ರಮಾಣದ್ದು? ದರ್ಭೆಯ ಪ್ರಮಾಣವೇನು? ಸ್ರುವವು ಹೇಗಿರಬೇಕು? ಪ್ರೋಕ್ಷಣೀಯದ ಲಕ್ಷಣವೇನು? ಅವಭೃಥವನ್ನು ಹೇಗೆ ಮಾಡಿ

ಪವ್ಯಾದಾಂಶ್ಚ ಸುರಾಂಶ್ಚಕ್ರೇ ಕ್ರವ್ಯಾದಾಂಶ್ಚ ಪಿತೄನಪಿ ।
ಭಾಗಾರ್ಥಂ ಯಜ್ಞವಿಧಿನಾ ಯೋ ಯಜ್ಞೋ ಯಜ್ಞಕರ್ಮಣಿ ॥ ೨೬ ॥

ಯೂಪಾನ್ಸಮಿತ್ಕುಶಂ ಸೋಮಂ ಪವಿತ್ರಂ ಪರಿಧೀನಪಿ ।
ಯಜ್ಞಿಯಾನಿ ಚ ದ್ರವ್ಯಾಣಿ ಯಥಾ ಬ್ರಹ್ಮಾ ಚಕಾರ ಹ ॥ ೨೭ ॥

ವಿಬಭ್ರಾಜ ಪುರಾಯಶ್ಚ ಪಾರಮೇಷ್ಠ್ಯೇನ ಕರ್ಮಣಾ ।
ಕ್ಷಣಾ ನಿಮೇಷಾಃ ಕಾಷ್ಠಾಶ್ಚ ಕಾಲಾಸ್ತ್ರೈಕಾಲ್ಯಮೇವ ಚ ॥ ೨೮ ॥

ಮುಹೂರ್ತಾಸ್ತಿಥಯೋ ಮಾಸಾ ದಿನಸಂವತ್ಸರಂ ತಥಾ ।
ಋತವಃ ಕಾಲಯೋಗಾಶ್ಚ ಪ್ರಮಾಣಂ ತ್ರಿವಿಧಂ ಪುರಾ ॥ ೨೯ ॥

ಆಯುಃ ಕ್ಷೇತ್ರಾಣ್ಯಪಚಯಂ ಲಕ್ಷಣಂ ರೂಪಸೌಷ್ಠವಂ ।
ತ್ರಯೋ ವರ್ಣಾಸ್ತ್ರಯೋ ಲೋಕಾಸ್ತ್ರೈವಿದ್ಯಂ ಪಾವಕತ್ರಯಂ ॥ ೩೦ ॥

ತ್ರೈಕಾಲ್ಯಂ ತ್ರೀಣಿ ಕರ್ಮಾಣಿ ತ್ರಯೋ ವರ್ಣಾಸ್ತ್ರಯೋ ಗುಣಾಃ ।
ಸೃಷ್ಟಾ ಲೋಕಾಃ ಪರಾಃ ಸೃಷ್ಟಾ ಯೇನಾನನ್ಯೇನ ಚೇತಸಾ ॥ ೩೧ ॥

---

ದನು? ಆವಾಪಗಳ ಲಕ್ಷಣವೇನು? ಹವ್ಯಕವ್ಯಪ್ರದರಾರು? ಹವ್ಯಕ್ಕೆ ದೇವತೆಗಳನ್ನೂ ಕವ್ಯಕ್ಕೆ ಪಿತೃಗಳನ್ನೂ ಏಕೆ ಮಾಡಿದನು? ಯಜ್ಞವೆಂದರೇನು? ಯೂಪ, ಸಮಿತ್, ಕುಶ, ಸೋಮ, ಪವಿತ್ರ, ಪರಿಧಿ ಮುಂತಾದ ಯಜ್ಞದ ಪದಾರ್ಥಗಳನ್ನು ಬ್ರಹ್ಮನು ಹೇಗೆ ಮಾಡಿದನು? ಸಂಪಾದಿಸಿದುದು ಹೇಗೆ?

೨೮-೨೯. ಯಾವ ಬ್ರಹ್ಮನು ಪೂರ್ವದಲ್ಲಿ ಎಲ್ಲರಿಗೂ ಉಚ್ಚಸ್ಥಾನದಲ್ಲಿರುವುದರಿಂದ ಪ್ರಕಾಶಿಸುತ್ತಿದ್ದನೋ ಅವನು ಯಾಗಮಾಡಲು ಕಾರಣವೇನು? ಕ್ಷಣ, ನಿಮಿಷ, ಕಾಷ್ಠ, ಕಾಲ, ಮೂರುಕಾಲ, ಮುಹೂರ್ತ, ತಿಥಿ, ಮಾಸ, ದಿನ, ಸಂವತ್ಸರ, ಋತು, ಕಾಲದ ಸಂಬಂಧ, ಆಯಸ್ಸು, ಕ್ಷೇತ್ರ, ಹೆಚ್ಚುಕಡಿಮೆಯಾಗದಿರುವಿಕೆ, ಸೌಂದರ್ಯ ಇವನ್ನು ಆ ಬ್ರಹ್ಮನು ಸೃಷ್ಟಿಮಾಡಿರುವನು.

೩೦-೩೧. ಮೂರು ವರ್ಣಗಳು, ಮೂರು ಲೋಕಗಳು, ಮೂರು ವಿಧಗಳು, ಮೂರು ಅಗ್ನಿಗಳು, ಮೂರು ಕಾಲಗಳು, ಮೂರು ಕರ್ಮಗಳು, ಮೂರು ಬೇರೆಯಾದ ಅಕ್ಷರಗಳು, ಮೂರು ಗಣಗಳು ಮತ್ತು ಮೂರು ಲೋಕಗಳ ಸಂಬಂಧಿಗಳನ್ನೆಲ್ಲಾ ಈ ಬ್ರಹ್ಮನು ಒಂದೇ ಮನಸ್ಸಿನಿಂದ ಸೃಷ್ಟಿಸಿದನು.

**ಯಾ ಗತಿರ್ಧರ್ಮಯುಕ್ತಾನಾಂ ಯಾ ಗತಿಃ ಪಾಪಕಾರಿಣಾಂ ।**
**ಚಾತುರ್ವರ್ಣ್ಯಸ್ಯ ಪ್ರಭವಶ್ಚಾತುರ್ವರ್ಣ್ಯಸ್ಯ ರಕ್ಷಿತಾ ॥ ೩೨ ॥**

**ಚಾತುರ್ವಿದ್ಯಸ್ಯ ಯೋ ವೇತ್ತಾ ಚತುರಾಶ್ರಮಸಂಶ್ರಯಃ ।**
**ಯಃ ಪರಂ ಶ್ರೂಯತೇ ಜ್ಯೋತಿರ್ಯಃ ಪರಂ ಶ್ರೂಯತೇ ತಪಃ ॥ ೩೩ ॥**

**ಯಃ ಪರಂ ಪ್ರಾಹ ಪರತೋ ಯಃ ಪರಂ ಪರಮಾತ್ಮವಾನ್ ।**
**ಸೇತುರ್ಯೋ ಲೋಕಸೇತೂನಾಂ ಮೇಧ್ಯೋ ಯೋ ಮೇಧ್ಯಕರ್ಮಣಾಂ ॥ ೩೪ ॥**

**ವೇದ್ಯೋ ಯೋ ವೇದವಿದುಷಾಂ ಯಃ ಪ್ರಭುಃ ಪ್ರಭವಾತ್ಮನಾಂ ।**
**ಅಸೌ ಭೂತಶ್ಚ ಭೂತಾನಾಮಗ್ನಿರ್ಭೂತೋಽಗ್ನಿವರ್ಚಸಾಂ ॥ ೩೫ ॥**

**ಮನುಷ್ಯಾಣಾಂ ಮನೋಭೂತಸ್ತಪಸ್ವಿನಾಂ ತಪೋ ಮಹತ್ ।**
**ವಿನಯೋ ನಯವೃತ್ತೀನಾಂ ತೇಜಸ್ತೇಜಸ್ವಿನಾಮಪಿ ॥ ೩೬ ॥**

**ಇತ್ಯೇತತ್ಪರಮಂ ಸರ್ವಂ ಸೃಜಂಲ್ಲೋಕಾನ್ಹಿತಾಮಹಃ ।**
**ಯಜ್ಞಾದ್ಗತಿಂ ಸ್ವಾಮನಿಚ್ಛನ್ಕಥಂ ಯಜ್ಞೇ ಮತಿಃ ಕೃತಾ ॥ ೩೭ ॥**

---

೩೨-೩೩. ಧರ್ಮಿಗಳ ಗತಿ, ಪಾಪಿಗಳ ಗತಿ, ನಾಲ್ಕು ವರ್ಣಗಳ ಉತ್ಪತ್ತಿ, ನಾಲ್ಕು ವರ್ಣಗಳ ರಕ್ಷಣೆ, ನಾಲ್ಕು ವಿದ್ಯೆಗಳ ತಿಳಿವಳಿಕೆ, ನಾಲ್ಕು ಆಶ್ರಮಗಳ ಸೇರುವಿಕೆ, ಇವನ್ನೂ, ಪ್ರಸಿದ್ಧವಾದ ಜ್ಯೋತಿಸ್ಸು, ಪ್ರಸಿದ್ಧವಾದ ತಪಸ್ಸು ಇವುಗಳನ್ನೂ ಬ್ರಹ್ಮನು ಸೃಷ್ಟಿಸಿದನು.

೩೪-೩೫. ಯಾವನು ಉತ್ಕೃಷ್ಟವಾದವುಗಳಿಗೂ ಉತ್ಕೃಷ್ಟನೋ, ದೊಡ್ಡವರಿಗೂ ದೊಡ್ಡವನೋ, ಕಾಪಾಡತಕ್ಕವರಿಗೂ ಕಾಪಾಡತಕ್ಕವನೋ ಪವಿತ್ರವಾದವುಗಳಿಗೆಲ್ಲಾ ಪವಿತ್ರನೋ, ವೇದವನ್ನು ತಿಳಿದಿರುವವರಿಗೂ ತಿಳಿಯತಕ್ಕವನೋ ಒಡೆಯರಿಗೆಲ್ಲಾ ಒಡೆಯನೋ, ಪಂಚಭೂತಗಳಿಗೂ ಭೂತನೋ ಅಗ್ನಿಯಂತಿರುವ ತೇಜಸ್ಸುಗಳಿಗೆಲ್ಲಾ ಅಗ್ನಿಯಾಗಿರುವನೋ, ಅಂತಹ ಬ್ರಹ್ಮನು ಯಾಗಮಾಡಲು ಕಾರಣವೇನು?

೩೬-೩೭. ಮನುಷ್ಯರಿಗೆಲ್ಲಾ ಮನಸ್ಸಾದ, ತಪಸ್ವಿಗಳಿಗೆಲ್ಲಾ ತಪೋರೂಪನಾದ, ನಯವಂತರಿಗೆ ವಿನಯರೂಪನಾದ, ತೇಜಸ್ವಿಗಳಿಗೆ ತೇಜೋರೂಪನಾದ ಬ್ರಹ್ಮನು ಎಲ್ಲವನ್ನೂ ಈರೀತಿ ಸೃಷ್ಟಿಸಿರುವನು. ಯಜ್ಞಮಾಡುವುದರಿಂದ ಅವನಿಗೆ ಉತ್ತಮಗತಿ ಬೇಕಿಲ್ಲ. ಸ್ವತಃ ಇದ್ದೇ ಇರುವುದು. ಅಂತಹವನು ಯಜ್ಞಮಾಡಲು ಏಕೆ ಮನಸ್ಸುಮಾಡಿದನು?

**ಏಷ ಮೇ ಸಂಶಯೋ ಬ್ರಹ್ಮನ್ನೇಷ ಮೇ ಸಂಶಯಃ ಪರಃ ।**
**ಆಶ್ಚರ್ಯಂ ಪರಮಂ ಬ್ರಹ್ಮನ್ದೇವದೈತ್ಯೈಶ್ಚ ಪಠ್ಯತೇ ॥**
**ಕರ್ಮಣೈಶ್ವರ್ಯಭೂತಸ್ಯ ಪಠತಸ್ತು ಇಹೋಚ್ಯತೇ ॥ ೩೮ ॥**

**॥ ಪುಲಸ್ತ್ಯ ಉವಾಚ ॥**

**ಪ್ರಶ್ನಭಾರೋ ಮಹಾನೇಷ ತ್ವಯೋಕ್ತೋ ಬ್ರಹ್ಮಣಶ್ಚ ಯಃ ।**
**ಯಥಾಶಕ್ತಿ ತು ವಕ್ಷ್ಯಾಮಿ ಶ್ರೂಯತಾಂ ಹಿ ನ ಸಂಶಯಃ ॥ ೩೯ ॥**

**ಸಹಸ್ರಾಕ್ಷಂ ಸಹಸ್ರಾಸ್ಯಂ ಸಹಸ್ರಚರಣಂ ಚ ಯಂ ।**
**ಸಹಸ್ರಾಭರಣಂ ದೇವಂ ಸಹಸ್ರಕರಮವ್ಯಯಂ ॥ ೪೦ ॥**

**ಸಹಸ್ರಜಿಹ್ವಂ ಸಾಹಸ್ರಂ ಸಹಸ್ರಪರಮಂ ಪ್ರಭುಂ ।**
**ಸಹಸ್ರದಂ ಸಹಸ್ರಾದಿಂ ಸಹಸ್ರಭುಜಮವ್ಯಯಂ ॥ ೪೧ ॥**

**ಹವನಂ ಸವನಂ ಚೈವ ಹವ್ಯಂ ಹೋತಾರಮೇವ ಚ ।**
**ಪಾತ್ರಾಣಿ ಚ ಪವಿತ್ರಾಣಿ ವೇದೀಂ ದೀಕ್ಷಾಂ ಚರುಸ್ರುವಂ ॥ ೪೨ ॥**

---

೩೮. ಎಲೈ ಪುಲಸ್ತ್ಯನೇ, ಇದೇ ನನಗೆ ಬಂದಿರುವ ಬಹುವಾದ ಸಂಶಯವು. ಬಹುವಾದ ಆಶ್ಚರ್ಯವು. ದೇವತೆಗಳೂ ದೈತ್ಯರೂ ಕೂಡ ಈ ಯಾಗದ ವಿಷಯವನ್ನು ತಿಳಿಯುತ್ತಲೇ ಇರುವರು. ಕರ್ಮದಿಂದ ಬಂದ ಆ ಬ್ರಹ್ಮನ ಮಹಿಮೆಯನ್ನೇ ಹೇಳುತ್ತಿರುವರು. ಕಾರಣವೇನು?

೩೯. ಪುಲಸ್ತ್ಯನು ಹೇಳಿದನು:—ನೀನು ಬ್ರಹ್ಮನ ವಿಷಯದಲ್ಲಿ ಕೇಳಿದ ಪ್ರಶ್ನೆಯು ಬಹು ದೊಡ್ಡದು. ತಿಳಿದಮಟ್ಟಿಗೆ ಹೇಳುತ್ತೇನೆ ಕೇಳು. ಸಂಶಯಬೇಡ.

೪೦-೪೧. ಸಾವಿರ ಕಣ್ಣುಗಳು, ಸಾವಿರ ಮುಖ, ಸಾವಿರ ಕಾಲು, ಸಾವಿರ ಆಭರಣ, ಸಾವಿರ ಕೈ, ಸಾವಿರ ನಾಲಗೆ, ಸಹಸ್ರ ರೂಪ, ಸಹಸ್ರ ಭುಜಗಳುಳ್ಳ ನಾಶರಹಿತನಾದ ಯಾವ ಸ್ವಾಮಿಯನ್ನು ಕೇಳುತ್ತಿದ್ದೀಯೋ ಅವನನ್ನು ಹೇಳುತ್ತೇನೆ ಕೇಳು.

೪೨—೪೭. ಹೋಮ, ಸವನ, ಹವ್ಯ, ಹೋತೃ, ಪಾತ್ರೆಗಳು, ಪವಿತ್ರಗಳು, ವೇದಿ, ದೀಕ್ಷೆ, ಚರು, ಸ್ರುವವ, ಸ್ರುಕ್, ಸೋಮ, ಅವಭೃಥ, ಪ್ರೋಕ್ಷಣೀ, ದಕ್ಷಿಣೆ,

**ಸ್ರುಕ್‌ಸೋಮಮವಭೃಚ್ಚೈವ ಪ್ರೋಕ್ಷಣೀದಕ್ಷಿಣಾಧನಂ ।**
**ಅಧ್ವರ್ಯುಗಂ ಸಾಮಗಂ ವಿಪ್ರಂ ಸದಸ್ಯಂ ಸದನಂ ಸದಃ ॥ ೪೩ ॥**

**ಯೂಪಂ ಸಮಿತ್ಕುಶಂ ದರ್ವೀಮುಸಲೋಲೂಖಲಾನಿ ಚ ।**
**ಪ್ರಾಗ್ವಂಶಂ ಯಜ್ಞಭೂಮಿಂ ಚ ಹೋತಾರಂ ಬಂಧನಂ ಚ ಯತ್ ॥ ೪೪ ॥**

**ಹ್ರಸ್ವಾನ್ಯತಿಪ್ರಮಾಣಾನಿ ಸ್ಥಾವರಾಣಿ ಚರಾಣಿ ಚ ।**
**ಪ್ರಾಯಶ್ಚಿತ್ತಾನಿ ವಾಜಾಂಶ್ಚ ಸ್ಥಂಡಿಲಾನಿ ಕುಶಾಂಸ್ತಥಾ ॥ ೪೫ ॥**

**ಯಜ್ಞಭಾಗಂ ವಹ್ನಿಭಾಗಂ ಭಾಗಂ ಭಾಗವಹಂ ಚ ಯತ್ ।**
**ಅಗ್ರಭುಜಂ ಸೋಮಭುಜಂ ಹುತಾರ್ಚಿಷಮುದಾಹೃತಂ ॥ ೪೬ ॥**

**ಆಹುರ್ವೇದವಿದೋ ವಿಪ್ರಾ ಯೋ ಯಜ್ಞಃ ಶಾಶ್ವತಃ ಪ್ರಭುಃ ।**
**ಯಾಂ ಪೃಚ್ಛಸಿ ಮಹಾಭಾಗ ಪುಣ್ಯಾಂ ದಿವ್ಯಾಮಿಮಾಂ ಕಥಾಂ ॥ ೪೭ ॥**

**ಯದರ್ಥಂ ಭಗವಾನ್ಬ್ರಹ್ಮಾ ಭೂಮೌ ಯಜ್ಞಮಥಾಕರೋತ್ ।**
**ಹಿತಾರ್ಥಂ ಸರಮರ್ತ್ಯಾನಾಂ ಲೋಕಾನಾಂ ಪ್ರಭವಾಯ ಚ ॥ ೪೮ ॥**

**ಬ್ರಹ್ಮಾ ಚ ಕಪಿಲಶ್ಚೈವ ಪರಮೇಷ್ಠೀ ತಥೈವ ಚ ।**
**ದೇವಾಃ ಸಪ್ತರ್ಷಯಶ್ಚೈವ ತ್ರ್ಯಂಬಕಶ್ಚ ಮಹಾಯಶಾಃ ॥ ೪೯ ॥**

---

ಧನ, ಅಧ್ವರ್ಯು, ಸಾಮಗ, ವಿಪ್ರ (ಬ್ರಹ್ಮಾ), ಸದಸ್ಯ, ಸದನ, ಸದಸ್ಯ, ಯೂಪ ಸಮಿತ್, ಕುಶ, ದರ್ವೀ, ಮುಸಲ, ಉಲೂಖಲ, ಪ್ರಾಗ್ವಂಶ, ಯಜ್ಞಭೂಮಿ, ಹೋತೃ ಗಳು, ಚಯನ, ಹ್ರಸ್ವ, ದೀರ್ಘಸ್ಥಾವರ, ಚರ, ಪ್ರಾಯಶ್ಚಿತ್ತ, ಅಜ, ಸ್ಥಂಡಿಲ, ಕುಶ, ಯಜ್ಞಭಾಗ, ವಹ್ನಿಭಾಗ, ಭಾಗ, ಭಾಗವಹ, (ಭಾಗವನ್ನು ತೆಗೆದುಕೊಳ್ಳು ವವನು), ಅಗ್ರಭುಜ (ಅಗ್ರಪೂಜೆ), ಸೋಮಭುಜ (ಸೋಮಪಾನ), ಹುತಾರ್ಚಿಷ, ಇವುಗಳನ್ನು ವೇದವನ್ನು ಬಲ್ಲ ವಿಪ್ರರು ಯಜ್ಞದ ಪದಾರ್ಥಗಳೆಂದು ಹೇಳುವರು. ಯಜ್ಞವೆಂಬುದು ಸಾಕ್ಷಾತ್ ಸ್ವಾಮಿಯಾದ ಪ್ರಭುವು.

೪೮. ಪೂರ್ವದಲ್ಲಿ ದೇವಾಸುರರ ಹಿತಕ್ಕೂ, ಲೋಕಗಳ ಉತ್ಪತ್ತಿಗೂ, ಭಗ ವಂತನಾದ ಬ್ರಹ್ಮನು ಭೂಮಿಯಲ್ಲಿ ಯಜ್ಞವನ್ನು ಮಾಡಿದನು.

೪೯-೫೦. ಬ್ರಹ್ಮ, ಕಪಿಲ, ಪರಮೇಷ್ಠಿ, ದೇವತೆಗಳು, ಸಪ್ತ ಋಷಿಗಳು,

ಸನತ್ಕುಮಾರಶ್ಚ ಮಹಾನುಭಾವೋ
ಮನುರ್ಮಹಾತ್ಮಾ ಭಗವಾನ್ಪ್ರಜಾಪತಿಃ ।
ಪುರಾಣದೇವೋಽಥ ತಥಾಭಿಚಕ್ರೇ
ಪ್ರದೀಪ್ತವೈಶ್ವಾನರತುಲ್ಯತೇಜಾಃ ॥ ೫೦ ॥

ಪುರಾ ಕಮಲಜಾತಸ್ಯ ಸ್ವಪತಸ್ತಸ್ಯ ಕೋಟರೇ ।
ಪುಷ್ಕರೇ ಯತ್ರ ಸಂಭೂತಾ ದೇವಾ ಋಷಿಗಣಾಸ್ತಥಾ ॥ ೫೧ ॥

ಏಷ ಪುಷ್ಕರಕೋ ನಾಮ ಪ್ರಾದುರ್ಭಾವೋ ಮಹಾತ್ಮನಃ ।
ಪುರಾಣಂ ಕಥ್ಯತೇ ಯತ್ರ ವೇದಶ್ರುತಿಸಮಾಹಿತಂ ॥ ೫೨ ॥

ವರಾಹಸ್ತು ಶ್ರುತಿಮುಖಃ ಪ್ರಾದುರ್ಭೂತೋ ವಿರಿಂಚಿನಃ ।
ಸಹಾಯಾರ್ಥಂ ಸುರಶ್ರೇಷ್ಠೋ ವಾರಾಹಂ ರೂಪಮಾಸ್ಥಿತಃ ॥ ೫೩ ॥

ವಿಸ್ತೀರ್ಣಂ ಪುಷ್ಕರೇ ಕೃತ್ವಾ ತೀರ್ಥಂ ಕೋಕಾಮುಖಂ ಹಿ ತು ।
ವೇದಪಾದೋ ಯೂಪದಂಷ್ಟ್ರಃ ಕ್ರತುಹಸ್ತಶ್ಚಿತೀಮುಖಃ ॥ ೫೪ ॥

---

ತ್ರ್ಯಂಬಕನು, ಸನತ್ಕುಮಾರ ಮಹಾತ್ಮನಾದ ಮನು, ಭಗವಂತನಾದ ಪ್ರಜಾಪತಿ, ಸನಾತನನಾದ ಸ್ವಾಮಿ, ಇವರೆಲ್ಲರೂ ಅಗ್ನಿಯಂತೆ ತೇಜಸ್ಸುಳ್ಳವರು, ಇವರೆಲ್ಲರೂ ಈ ರೀತಿಯಾಗುವಂತೆ ಪುರಾಣಪುರುಷನು ಮಾಡಿದನು.

೫೧. ಪೂರ್ವದಲ್ಲಿ ಬ್ರಹ್ಮನು ಮಲಗಿರತಕ್ಕ ಕಮಲದ ಪೊಟರೆಯಲ್ಲಿ (ಬಲಗಡೆ) ದೇವತೆಗಳೂ ಋಷಿಗಳೂ ಹುಟ್ಟಿದರು.

೫೨. ವೇದದ ಶ್ರುತಿಯಿಂದ ಅನುಮೋದಿತವಾದ ಯಾವ ಪುರಾಣವನ್ನು ಹೇಳುತ್ತೇವೆಯೋ ಆ ದೇವಾದಿಗಳು ಎಲ್ಲಿ ಹುಟ್ಟಿದರೋ ಆ ಹುಟ್ಟುವಿಕೆಯೇ ಈ ಪೌಷ್ಕರಕವು.

೫೩. ಬ್ರಹ್ಮನ ಸಹಾಯಕ್ಕೋಸ್ಕರ ಸುರಶ್ರೇಷ್ಠನಾದ ವಿಷ್ಣುವು ಶ್ರುತಿಯೇ ದೇಹವುಳ್ಳವರಾಹವಾಗಿ ವರಾಹರೂಪ (ಹಂದಿಯ ರೂಪ) ವನ್ನು ಹೊಂದಿದನು.

೫೪-೫೫. ಹುಟ್ಟಿದ ಆ ವರಾಹವು ಪುಷ್ಕರವನ್ನು (ಮುಸುಡಿಯ ತುದಿಯನ್ನು) ಅಗಲವಾಗಿ ಮಾಡಿತು. (ಹಂದಿಗಳು ಮುಸುಡಿಯ ತುದಿಯನ್ನು ಚಿಕ್ಕದು ದೊಡ್ಡದು ಮಾಡುವುದು ಸ್ವಭಾವ). ಅದೇ ಕೋಕಾಮುಖವೆಂಬ ತೀರ್ಥವು. ಆ ವರಾಹಕ್ಕೆ

**ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ।**
**ಅಹೋರಾತ್ರೇಕ್ಷಣೋ ದೇವೋ ವೇದಾಂಗಶ್ರುತಿಭೂಷಣಃ ॥ ೫೫ ॥**

**ಆಜ್ಯನಾಸಃ ಸ್ರುವತುಂಡಃ ಸಾಮಘೋಷಧರೋ ಮಹಾನ್ ।**
**ಸತ್ಯಧರ್ಮರತಃ ಶ್ರೀಮಾನ್ಕರ್ಮವಿಕ್ರಮಸತ್ಕೃತಃ ॥ ೫೬ ॥**

**ಪ್ರಾಯಶ್ಚಿತ್ತನಖೋ ವೀರಃ ಪಶುಜಾನುರ್ಮಹಾಕೃತಿಃ ।**
**ಉದ್ಗಾತ್ರಂತ್ರೋ ಹೋಮಲಿಂಗೀ ಫಲಬೀಜಮಹೌಷಧೀಃ ॥ ೫೭ ॥**

**ವಾಯ್ವಂತರಾತ್ಮಾ ಮಂತ್ರಾಸ್ಥಿಃ ಸಕೃತ್ಯಃ ಸೋಮಶೋಣಿತಃ ।**
**ವೇದಸ್ಕಂಧೋ ಹವಿರ್ಗಂಧೋ ಹವ್ಯಕವ್ಯಾತಿವೇಗವಾನ್ ॥ ೫೮ ॥**

**ಪ್ರಾಗ್ವಂಶಕಾಯೋ ದ್ಯುತಿಮಾನ್ನಾನಾದೀಕ್ಷಾಭಿರರ್ಚಿತಃ ।**
**ದಕ್ಷಿಣಾಹೃದಯೋ ಯೋಗೀ ಮಹಾಸತ್ರಮಯೋ ಮಹಾನ್ ॥ ೫೯ ॥**

**ಉಪಾಕರ್ಮೇಷುರುಚಿರಃ ಪ್ರವರ್ಗ್ಯಾವರ್ತಭೂಷಣಃ ।**
**ಛಾಯಾಪತ್ನೀಸಹಾಯೋ ವೈಮಣಿಶೃಂಗಮಿವೋಚ್ಛ್ರಿತಃ ॥ ೬೦ ॥**

---

ನಾಲ್ಕು ವೇದಗಳೇ ಕಾಲುಗಳಾದವು. ಯೂಪವೇ ದಂಷ್ಟ್ರವಾಯಿತು. (ದಾಡೆಹಲ್ಲಾಯಿತು). ಕ್ರತುವೇ ಕೈ, ಚಿತಿಯೇ ಮುಖ, ಅಗ್ನಿಯೇ ನಾಲಗೆ, ದರ್ಭಗಳೇ ರೋಮಗಳು, ಬ್ರಹ್ಮನೇ ಶಿರಸ್ಸು, ಅಹಸ್ಸುರಾತ್ರಿಗಳೇ ಕಣ್ಣುಗಳು. ವೇದಾಂಗಗಳೇ ಕರ್ಣಾಭರಣಗಳು.

೫೬-೫೮. ತುಪ್ಪವೇ ಮೂಗಾಯಿತು, ಸ್ರುವವೇ ತುಟಿಯಾಯಿತು, ಸಾಮವೇ ಧ್ವನಿಯಾಯಿತು. ಸತ್ಯವೇ ಧರ್ಮವಾಯಿತು. ಅವರಲ್ಲಿ ಆಸಕ್ತನಾದನು. ಕರ್ಮವೆಂಬ ಪರಾಕ್ರಮವುಳ್ಳವನಾದನು. ಪ್ರಾಯಶ್ಚಿತ್ತವೇ ಉಗುರು, ಪಶುವೇ ಮಂಡಿ, ಉದ್ಗಾತೃವೇ ಸರ, ಹೋಮವೇ ಅಂಗ, ಔಷಧಿಗಳೇ ಫಲಬೀಜ, ವಾಯುವೇ ಅಂತರಾತ್ಮನು, ಮಂತ್ರವೇ ಮೂಳೆ, ಸೋಮವೇ ರಕ್ತ, ವೇದವೇ ಕತ್ತು, ಹವಿಸ್ಸೇ ಗಂಧ, ಹವ್ಯಕವ್ಯಗಳೇ ವೇಗ, ಈ ರೀತಿಯಾಗಿ ಆ ವರಾಹವು ಹುಟ್ಟಿತು.

೫೯-೬೧. ಪ್ರಾಗ್ವಂಶವೇ ದೇಹವು, ನಾನಾದೀಕ್ಷೆಗಳೇ ಕಾಂತಿಗಳು, ದಕ್ಷಿಣೆಯೇ ಹೃದಯವು, ಈ ರೀತಿಯಾಗಿ ದೊಡ್ಡ ಯೋಗಸ್ವರೂಪವೂ ಯೋಗಿಯೂ ಆಗಿ ಆ ವರಾಹವು ಹುಟ್ಟಿತು. ಉಪಾಕರ್ಮಗಳೇ ಸೌಂದರ್ಯಗಳು, ಪ್ರವರ್ಗ್ಯವೇ ಸುಳಿಯು,

**ಸರ್ವಲೋಕಹಿತಾರ್ಥಾಯ ದಂಷ್ಟ್ರಯಾ ಪ್ರೋಜ್ಜಹಾರ ಗಾಂ ।**
**ತತಃ ಸ್ವಸ್ಥಾನಮಾನೀಯ ಪೃಥಿವೀಂ ಪೃಥಿವೀಧರಃ ॥ ೬೧ ॥**

**ತತೋ ಜಗಾಮ ನಿರ್ವಾಣಂ ಮೇದಿನೀ ತಸ್ಯ ಧಾರಣಾತ್ ।**
**ಏವಮಾದಿವರಾಹೇಣ ಧೃತ್ವಾ ಬ್ರಹ್ಮಹಿತಾರ್ಥಿನಾ ॥ ೬೨ ॥**

**ಉದ್ಧೃತಾ ಪುಷ್ಕರೇ ಪೃಥ್ವೀ ಸಾಗರಾಂಬುಗತಾ ಪುರಾ ।**
**ವೃತಶ್ಶಮದಮಾಭ್ಯಾಂ ಚ ದಿವ್ಯೇ ಕೋಕಾಮುಖೇ ಸ್ಥಿತಃ ॥ ೬೩ ॥**

**ಆದಿತ್ಯೈರ್ವಸುಭಿಃ ಸಾಧ್ಯೈರ್ಮರುದ್ಭಿರ್ದೈವತೈಃ ಸಹ ।**
**ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಕಿಂನರೈಃ ॥ ೬೪ ॥**

**ದಿಗ್ಭಿರ್ವಿದಿಗ್ಭಿಃ ಪೃಥಿವೀ ನದೀಭಿಃ ಸಾಗರೈಸ್ತಥಾ ।**
**ಚರಾಚರಗುರುಃ ಶ್ರೀಮಾನ್ಬ್ರಹ್ಮಾ ಬ್ರಹ್ಮವಿದಾಂ ವರಃ ॥ ೬೫ ॥**

---

ಸೂರ್ಯನೇ ಮಣಿಯಂತಿರುವ ಕೊಂಬು (ಕೋರೆಹಲ್ಲು) ಇಂತಹ ವರಾಹವಾಗಿ ಲೋಕಗಳೆಲ್ಲವರ ಹಿತಕ್ಕಾಗಿ ಕೋರೆದಾಡೆಯಿಂದ ಭೂಮಿಯನ್ನು ಮೇಲಕ್ಕೆತ್ತಿದನು. ಹಾಗೆ ಎತ್ತಿ ಸ್ವಾಮಿಯಾದ ವರಾಹನು ಭೂಮಿಯನ್ನು ಅದರ ಜಾಗಕ್ಕೆ ಇಟ್ಟನು.

೬೨. ಈ ರೀತಿ ಭೂಮಿಯು, ಆ ಸ್ವಾಮಿಯು ಧರಿಸಿದುದರಿಂದ ಸೌಖ್ಯವನ್ನು ಹೊಂದಿತು. ಹೀಗೆ ಬ್ರಹ್ಮಹಿತಾರ್ಥಿಯಾದ ಆದಿ ವರಾಹದಿಂದ ಸಮುದ್ರದಲ್ಲಿ ಮುಳಗಿದ್ದ ಭೂಮಿಯು ಪುಷ್ಕರದಲ್ಲಿ ಎತ್ತಲ್ಪಟ್ಟಿತು.

೬೩. ಆ ವರಾಹವು ಶಮದಮಗಳನ್ನು ಹೊಂದಿ ಆ ಕೋಕಾಮುಖದಲ್ಲಿ ನಿಂತಿತು.

೬೪. ಆಗ ಆ ಭೂಮಿಯು ಆದಿತ್ಯರಿಂದಲೂ, ವಸುಗಳಿಂದಲೂ, ಮರುತ್ತುಗಳಿಂದಲೂ, ದೇವತೆಗಳಿಂದಲೂ, ರುದ್ರರಿಂದಲೂ ಪ್ರಪಂಚಕ್ಕೆ ಸಹಾಯಕರಾದ ಯಕ್ಷ ರಾಕ್ಷಸ ಕಿನ್ನರರಿಂದಲೂ ದಿಕ್ಕುಗಳಿಂದಲೂ ವಿದಿಕ್ಕುಗಳಿಂದಲೂ ನದಿಗಳಿಂದಲೂ ಸಾಗರಗಳಿಂದಲೂ ಕೂಡಿ ಕೊಂಡಿತು.

೬೫-೬೬. ಬ್ರಹ್ಮವನ್ನು ಬಲ್ಲವರಲ್ಲಿ ಶ್ರೇಷ್ಠನಾದ, ಚರಾಚರಗಳಿಗೆ ಗುರುವಾದ,

**ಉವಾಚ ವಚನಂ ಕೋಕಾಮುಖಂ ತೀರ್ಥಂ ತ್ವಯಾ ವಿಭೋ ।**
**ಪಾಲನೀಯಂ ಸದಾ ಗೋಪ್ಯಂ ರಕ್ಷಾ ಕಾರ್ಯಾ ಮಖೇ ತ್ವಿಹ ॥ ೬೬ ॥**

**ಏವಂ ಕರಿಷ್ಯೇ ಭಗವಂಸ್ತದಾ ಬ್ರಹ್ಮಾಣಮುಕ್ತವಾನ್ ।**
**ಉವಾಚ ತಂ ಪುನರ್ಬ್ರಹ್ಮಾ ವಿಷ್ಣುಂ ದೇವಂ ಪುರಃ ಸ್ಥಿತಂ ॥ ೬೭ ॥**

**॥ ಬ್ರಹ್ಮೋವಾಚ ॥**

**ತ್ವಂ ಹಿ ನಃ ಪರಮೋ ದೇವಸ್ತ್ವಂ ಹಿ ನಃ ಪರಮಾ ಗತಿಃ ।**
**ತ್ವಂ ಹಿ ಮೇ ಪರಮಂ ಧಾಮ ಇಂದ್ರಾದೀನಾಂ ಸುರೋತ್ತಮ ॥ ೬೮ ॥**

**ಉತ್ಫುಲ್ಲಾಮಲಪದ್ಮಾಕ್ಷ ಶತ್ರುಪಕ್ಷಕ್ಷಯಾವಹ ।**
**ಯಥಾ ಯಜ್ಞೇ ನ ಮೇ ಧ್ವಂಸೋ ದಾನವೈಶ್ಚ ವಿಧೀಯತೇ ॥ ೬೯ ॥**

**ತಥಾ ತ್ವಯಾ ವಿಧಾತವ್ಯಂ ಪ್ರಣತಸ್ಯ ನಮೋಽಸ್ತು ತೇ ॥ ೭೦ ॥**

**॥ ವಿಷ್ಣುರುವಾಚ ॥**

**ಭಯಂ ತ್ಯಜಸ್ವ ದೇವೇಶ ಕ್ಷಯಂ ನೇಷ್ಯಾಮಿ ಚಾಸುರಾನ್ ।**
**ಅನ್ಯೇಽಪಿ ವಿಘ್ನಕರ್ತಾರೋ ಯಾತುಧಾನಾಸ್ತಥಾಸುರಾಃ ॥ ೭೧ ॥**

---

ಬ್ರಹ್ಮನು ಕೋಕಾಮುಖ ತೀರ್ಥವನ್ನು ಕುರಿತು, ಎಲೈ ತೀರ್ಥವೇ, ನೀನು ಯಾವಾಗಲೂ ನನ್ನ ಯಾಗವನ್ನು ರಕ್ಷಿಸುತ್ತಿರಬೇಕು. ಎಂದು ಹೇಳಿದನು.

೬೭. ಆಗ ಆ ತೀರ್ಥವು ಹಾಗೇ ಆಗಲೆಂದಿತು. ಮತ್ತೆ ಬ್ರಹ್ಮನು ಎದುರಿಗಿರುವ ವಿಷ್ಣುವನ್ನು ಕುರಿತು ಇಂತೆಂದನು.

೬೮. ಬ್ರಹ್ಮನು ಹೇಳಿದನು:—ನೀನೇ ನಮಗೆ ಉತ್ತಮವಾದ ದೇವರು. ನೀನೇ ನಮಗೆ ಗತಿಯು, ನೀನೇ ನಮಗೂ ಇಂದ್ರಾದಿಗಳಿಗೂ ಕೂಡ ಮನೆಯು.

೬೯-೭೦. ಅರಳಿರುವ ಕಮಲದಂತಿರುವ ಕಣ್ಣುಗಳುಳ್ಳವನೆ, ಶತ್ರುಗಳನ್ನು ನಾಶಮಾಡುವವನೇ, ನನ್ನ ಯಾಗವನ್ನು ದಾನವರು ನಾಶಮಾಡದಂತೆ ನೋಡಿಕೋ. ನಿನ್ನ ಮರೆಹೊಕ್ಕಿದ್ದೇನೆ. ನಿನಗೆ ನಮಸ್ಕಾರವು.

೭೧-೭೨. ವಿಷ್ಣುವು ಹೇಳಿದನು:— ಎಲೈ ದೇವೇಶನಾದ ಬ್ರಹ್ಮನೇ, ಭಯಪಡಬೇಡ. ಅಸುರರನ್ನು ಧ್ವಂಸಮಾಡುತ್ತೇನೆ. ವಿಘ್ನವನ್ನುಂಟುಮಾಡುವ ಯಾತು

ಪಾತಯಿಷ್ಯಾಮಿ ತಾನ್ಸರ್ವಾನ್ಸ್ವಸ್ತಿ ತೇಽಸ್ತು ಪಿತಾಮಹ ।
ಏವಮುಕ್ತ್ವಾ ಸ್ಥಿತಸ್ತತ್ರ ಸಾಹಾಯ್ಯೇನ ಕೃತಕ್ಷಣಃ ॥ ೭೩ ॥

ಪ್ರವವುಶ್ಚ ಶಿವಾ ವಾತಾಃ ಪ್ರಸನ್ನಾಶ್ಚ ದಿಶೋ ದಶ ।
ಸುಪ್ರಭಾಣಿ ಚ ಜ್ಯೋತೀಂಷಿ ಸೂರ್ಯಂ ಚಕ್ರುಃ ಪ್ರದಕ್ಷಿಣಂ ॥ ೭೪ ॥

ನ ವಿಗ್ರಹಂ ಗ್ರಹಾಶ್ಚಕ್ರುಃ ಪ್ರಸನ್ನಾಶ್ಚಾಪಿ ಸಿಂಧವಃ ।
ನೀರಜಸ್ಕಾಭವನ್ಮಾರ್ಗಾಃ ಸಿಕ್ತಗಂಧಾದಯಶ್ಚ ಯೇ ॥ ೭೫ ॥

ಜಗ್ಮುಃ ಸ್ವಮಾರ್ಗಂ ಸರಿತೋ ನಾಪಿ ಚುಕ್ಷುಭುರರ್ಣವಾಃ ।
ಆಸನ್ ಶುಭಾನೀಂದ್ರಿಯಾಣಿ ನರಾಣಾಮಂತರಾತ್ಮನಾಂ ॥ ೭೬ ॥

ಮಹರ್ಷಯೋ ವೀತಶೋಕಾ ವೇದಾನುಚ್ಚೈರಪಾಠಯನ್ ।
ಯಜ್ಞೇ ತಸ್ಮಿನ್ ಹವಿಷ್ಪಾಕಂ ಶಿವಮಾಪ ಚ ಪಾವಕಃ ॥ ೭೭ ॥

---

ಧಾನರು, ಅಸುರರು, ಮತ್ತೆ ಇನ್ನೂ ಯಾರಾದರೂ ಇದ್ದರೆ ಅವರೆಲ್ಲರನ್ನೂ ನಾಶ ಮಾಡುತ್ತೇನೆ. ನಿನಗೆ ಒಳ್ಳೆಯದಾಗಲಿ ಎಂದು ಹೇಳಿ ವಿಷ್ಣುವು ಸಹಾಯವಾಗಿ ನಿಂತನು.

೭೪. ಆಗ ಗಾಳಿಯು ಮಂಗಳಕರವಾಗಿ ಬೀಸಿತು. ದಿಕ್ಕುಗಳು ನಿರ್ಮಲವಾದುವು. ಜ್ಯೋತಿಸ್ಸುಗಳು ಚೆನ್ನಾಗಿ ಬೆಳಗುತ್ತ ಸೂರ್ಯನನ್ನು ಬಲಮುಂದಾಗಿ ಸುತ್ತಿದ್ದುವು.

೭೫. ಗ್ರಹಗಳು ಯುದ್ಧಮಾಡಲಿಲ್ಲ. ಸಮುದ್ರಗಳು ಪ್ರಸನ್ನವಾದುವು. ಮಾರ್ಗಗಳಲ್ಲಿ ಧೂಳು ಅಡಗಿತು. ಅಲ್ಲಿ ಹೂ ಗಂಧದ ನೀರನ್ನು ಚುಮುಕಿಸಿದರು.

೭೬. ನದಿಗಳೆಲ್ಲವೂ ತಮ್ಮ ಸ್ವಂತ ದಾರಿಯಲ್ಲಿ ಹರಿದವು. ಸಮುದ್ರಗಳು ಅಲ್ಲೋಲಕಲ್ಲೋಲವಾಗಲಿಲ್ಲ. ಮನುಷ್ಯರ ಇಂದ್ರಿಯಗಳೆಲ್ಲವೂ ಪ್ರಸನ್ನವಾದುವು.

೭೭. ಮಹರ್ಷಿಗಳು ವ್ಯಥೆಯನ್ನು ಬಿಟ್ಟು ವೇದವನ್ನು ಗಟ್ಟಿಯಾಗಿ ಹೇಳಿದರು. ಯಜ್ಞಗಳಲ್ಲಿ ಯಜ್ಞೇಶ್ವರನು ಒಳ್ಳೆಯ ಹವಿಸ್ಸುಗಳನ್ನು ಹೊಂದಿದನು.

**ಪ್ರವೃತ್ತಧರ್ಮಸಂವೃತ್ತಾ ಲೋಕಾ ಮುದಿತಮಾನಸಾಃ ।**
**ವಿಷ್ಣೋಃ ಸತ್ಯಪ್ರತಿಜ್ಞಸ್ಯ ಶ್ರುತ್ವಾರಿನಿಧನಾ ಗಿರಃ ॥ ೭೭ ॥**

**ತತೋ ದೇವಾಃ ಸಮಾಯಾತಾ ದಾನವಾ ರಾಕ್ಷಸೈಃ ಸಹ ।**
**ಭೂತಪ್ರೇತಪಿಶಾಚಾಶ್ಚ ಸರ್ವೇ ತೇಽಪ್ಯಾಗತಾ ದ್ರುತಾಃ ॥ ೭೮ ॥**

**ಗಂಧರ್ವಾಪ್ಸರಸಶ್ಚೈವ ನಾಗಾ ವಿದ್ಯಾಧರಾ ಗಣಾಃ ।**
**ವಾನಸ್ಪತ್ಯಾಶ್ಚೌಷಧಯೋ ಯಚ್ಚೇಹದ್ಯಚ್ಚ ನೇ ಹತಿ ॥ ೭೯ ॥**

**ಬ್ರಹ್ಮಾದೇಶಾನ್ಮಾರುತೇನ ಆನೀತಾಃ ಸರ್ವತೋ ದಿಶಃ ।**
**ಯಜ್ಞಪರ್ವತಮಾಸಾದ್ಯ ದಕ್ಷಿಣಾಮಭಿತೋ ದಿಶಂ ॥ ೮೦ ॥**

**ಸುರಾ ಉತ್ತರತಃ ಸರ್ವೇ ಮರ್ಯಾದಾಪರ್ವತೇ ಸ್ಥಿತಾಃ ।**
**ಗಂಧರ್ವಾಪ್ಸರಸಶ್ಚೈವ ಮುನಯೋ ವೇದಪಾರಗಾಃ ॥ ೮೧ ॥**

---

೭೭. ಸತ್ಯಪ್ರತಿಜ್ಞನಾದ ವಿಷ್ಣುವಿನ ಶತ್ರುನಾಶಕವಾದ ಮಾತನ್ನು ಕೇಳಿ ಮೇಲೆ ಹೇಳಿದಂತಾದುದಲ್ಲದೆ ಜನರು ಸಂತೋಷಗೊಂಡು ಪ್ರವೃತ್ತಿ ಧರ್ಮದಲ್ಲಿ ಹೊರಟರು.

೭೮. ಅನಂತರ ದೇವತೆಗಳು, ದಾನವರು, ಭೂತಗಳು, ಪ್ರೇತಗಳು, ಪಿಶಾಚಿಗಳು ಅವರೆಲ್ಲರೂ ಜಾಗ್ರತೆಯಾಗಿ ಬಂದರು.

೭೯. ಗಂಧರ್ವರೂ, ಅಪ್ಸರರೂ, ನಾಗರೂ, ವಿದ್ಯಾಧರರೂ, ಗಣಗಳೂ, ವನಸ್ಪತಿಗಳೂ, ಓಷಧಿಗಳೂ, ಇಷ್ಟವುಳ್ಳವರು, ಇಷ್ಟವಿಲ್ಲದವರು, ಎಲ್ಲರೂ ಬಂದರು.

೮೦. ಬ್ರಹ್ಮನ ಅಪ್ಪಣೆಯಂತೆ ವಾಯುವು ಎಲ್ಲಾ ದಿಕ್ಕುಗಳಿಗೂ ಹೋಗಿ ಕರೆದನು. ಅವರೆಲ್ಲರೂ ಯಜ್ಞಪರ್ವತಕ್ಕೆ ಬಂದು ದಕ್ಷಿಣ ದಿಕ್ಕಿನಲ್ಲಿ ಸುತ್ತಲೂ ನಿಂತರು.

೮೧. ಹಾಗೆ ನಿಂತ ದೇವತೆಗಳು ಉತ್ತರಮುಖವಾಗಿ ಆ ಮರ್ಯಾದ ಪರ್ವತದಲ್ಲಿ ನಿಂತರು. ಗಂಧರ್ವರು, ಅಪ್ಸರರು, ವೇದಪಾರಗರಾದ ಮುನಿಗಳೂ ಪಶ್ಚಿಮ ದಿಕ್ಕಿಗೆ ಮುಖವನ್ನು ಹಾಕಿ ಆ ಮಹಾಯಾಗಕ್ಕೆ ಸಿದ್ಧರಾಗಿ ಕುಳಿತರು.

ಪಶ್ಚಿಮಾಂ ದಿಶಮಾಸ್ಥಾಯ ಸ್ಥಿತಾಸ್ತಸ್ಯ ಮಹಾಕ್ರತೋಃ ।
ಸರ್ವದೇವನಿಕಾಯಾಶ್ಚ ದಾನವಾಶ್ಚಾಸುರಾ ಜನಾಃ ॥ ೮೨ ॥

ಅನುಮರ್ಷಂ ಪೃಷ್ಠತಃ ಕೃತ್ವಾ ಸುಪ್ರೀತಾಸ್ತೇ ಪರಸ್ಪರಂ ।
ಋಷೀನ್ಪರ್ಯಚರನ್ಸರ್ವೇ ವಿಪ್ರಾನ್ ಶುಶ್ರೂಷವಸ್ತದಾ ॥ ೮೩ ॥

ಋಷಯೋ ಬ್ರಹ್ಮರ್ಷಯಶ್ಚೈವ ದ್ವಿಜಾ ದೇವರ್ಷಯಸ್ತಥಾ ।
ರಾಜರ್ಷಯೋ ಮುಖ್ಯತಮಾಸ್ತತ್ರಾಯಾತಾಃ ಸಮಂತತಃ ॥ ೮೪ ॥

ಕತಮಶ್ಚ ಸುರೋಽಪ್ಯತ್ರ ಕ್ರತೌ ಯಾಜ್ಯೋ ಭವಿಷ್ಯತಿ ।
ಪಶವಃ ಪಕ್ಷಿಣಃ ಸರ್ವೇ ತತ್ರಾಯಾತಾ ದಿದೃಕ್ಷವಃ ॥ ೮೫ ॥

ಬ್ರಾಹ್ಮಣಾ ಭೋಕ್ತುಕಾಮಾಶ್ಚ ಸರ್ವೇ ವರ್ಣಾನುಪೂರ್ವಶಃ ।
ಆಗತ್ಯ ವರುಣೋ ಲೋಕಾದ್ದಕ್ಷಶ್ಚಾನ್ನಂ ಸ್ವಯಂ ಪಚೇತ್ ॥ ೮೬ ॥

ವಾಯುರ್ಭಕ್ಷ್ಯವಿಕಾರಾಂಶ್ಚ ರಸಪಾಚೀ ದಿವಾಕರಃ ।
ಅನ್ನಪಾಚನಕೃತ್ಸೋಮೋ ಮತಿದಾತಾ ಬೃಹಸ್ಪತಿಃ ॥ ೮೭ ॥

---

೮೨. ದೇವತೆಗಳೂ, ದಾನವರೂ, ಅಸುರರೂ, ಮನುಷ್ಯರು ದ್ವೇಷಾಸೂಯೆಗಳನ್ನು ಹಿಂದಕ್ಕೆ ಓಡಿಸಿ ಅನ್ಯೋನ್ಯ ಸಂತೋಷದಿಂದ ಸೇರಿದರು.

೮೩-೮೪. ಎಲ್ಲರೂ ಋಷಿಗಳನ್ನು ಉಪಚರಿಸುತ್ತಿದ್ದರು. ಬ್ರಾಹ್ಮಣರಿಗೆ ಶುಶ್ರೂಷೆಮಾಡುತ್ತಿದ್ದರು. ಋಷಿಗಳು, ಬ್ರಹ್ಮರ್ಷಿಗಳು, ದ್ವಿಜರು, ದೇವರ್ಷಿಗಳು ಮತ್ತು ಮುಖ್ಯ ಮುಖ್ಯರಾದವರು ಎಲ್ಲರೂ ಎಲ್ಲಾ ಕಡೆಯಿಂದಲೂ ಬಂದರು.

೮೫. ಈ ಯಜ್ಞಕ್ಕೆ ಪಶುಗಳು, ಪಕ್ಷಿಗಳು, ಎಲ್ಲರೂ ನೋಡಬೇಕೆಂಬ ಇಚ್ಛೆಯಿಂದ ಬಂದರು. ಎಲ್ಲರೂ ಯಜ್ಞದಲ್ಲಿ ಯಾವ ದೇವತೆಯನ್ನು ಉದ್ದೇಶಿಸಿ ತೃಪ್ತಿಪಡಿಸುವರು ? ನೋಡಬೇಕೆಂದು ಕುತೂಹಲಿಗಳಾಗಿದ್ದರು.

೮೬. ಊಟದ ಇಚ್ಛೆಯಿಂದ ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರು ಶೂದ್ರರೂ ಕೂಡ ಬಂದರು. ವರುಣನು ತನ್ನ ಲೋಕದಿಂದ ಬಂದು ತಾನೇ ಅನ್ನವನ್ನು ಮಾಡಿದನು.

೮೭. ವಾಯುವು ಭಕ್ಷ್ಯಗಳನ್ನೂ, ಸೂರ್ಯನು ರಸಗಳನ್ನೂ, ಸೋಮನು ಅನ್ನವನ್ನೂ ಮಾಡುತ್ತಿದ್ದರು. ಬೃಹಸ್ಪತಿಯು ಇವರಿಗೆ ಬುದ್ಧಿಯನ್ನು ಹೇಳುತ್ತಿದ್ದನು.

**ಧನದಾನಂ ಧನಾಧ್ಯಕ್ಷೋ ವಸ್ತ್ರಾಣಿ ವಿವಿಧಾನಿ ಚ ।**
**ಸರಸ್ವತೀ ನದಾಧ್ಯಕ್ಷೋ ಗಂಗಾದೇವೀ ಸನರ್ಮದಾ ॥ ೮೮ ॥**

**ಯಾಶ್ಚಾನ್ಯಾಃ ಸರಿತಃ ಪುಣ್ಯಾಃ ಕೂಪಾಶ್ಚೈವ ಜಲಾಶಯಾಃ ।**
**ಪಲ್ವಲಾನಿ ತಡಾಗಾನಿ ಕುಂಡಾನಿ ವಿವಿಧಾನಿ ಚ ॥ ೮೯ ॥**

**ಪ್ರಸ್ರವಣಾನಿ ಮುಖ್ಯಾನಿ ದೇವಖಾತಾನಿ ಸರ್ವಶಃ ।**
**ಜಲಾಶಯಾನಿ ಸರ್ವಾಣಿ ಸಮುದ್ರಾಃ ಸಪ್ತ ಏವ ವೈ ॥ ೯೦ ॥**

**ಲವಣೇಕ್ಷುಸುರಾಸರ್ಪಿರ್ದಧಿದುಗ್ಧಜಲೈಃ ಸಮಂ ।**
**ಸಪ್ತ ಲೋಕಾಃ ಸಪಾತಾಲಾಃ ಸಪ್ತದ್ವೀಪಾಃ ಸಪತ್ತನಾಃ ॥ ೯೧ ॥**

**ವೃಕ್ಷಾ ವಲ್ಲ್ಯಃಸತೃಣಾನಿ ಶಾಕಾನಿ ಚ ಫಲಾನಿ ಚ ।**
**ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಂ ॥ ೯೨ ॥**

**ಸವಿಗ್ರಹಾಣಿ ಭೂತಾನಿ ಧರ್ಮಶಾಸ್ತ್ರಾಣಿ ಚೈವ ಹಿ ।**
**ವೇದಭಾಷ್ಯಾಣಿ ಸೂತ್ರಾಣಿ ಬ್ರಹ್ಮಣಾ ನಿರ್ಮಿತಂ ಹಿ ಯತ್ ॥ ೯೩ ॥**

---

೮೮-೯೦. ಹಣವನ್ನು ದಾನಮಾಡಲು ಕುಬೇರನು ನಿಂತನು. ಮತ್ತು ವಸ್ತ್ರಗಳನ್ನು ಕೊಡಲು ಸಿದ್ಧನಾದನು. ಸರಸ್ವತೀ ನದಿ, ಗಂಗೆ, ನರ್ಮದೆ, ಮತ್ತು ಎಲ್ಲಾ ಪುಣ್ಯನದಿಗಳೂ ಪುಣ್ಯತಮವಾದ ಬಾವಿಗಳೂ, ಕುಂಟೆಗಳೂ, ಕೆರೆಗಳೂ ನಾನಾ ಬಗೆಯಾದ ಕುಂಡಗಳೂ ಗಿರಿನದಿಗಳೂ ದೇವರಿಂದ ನಿರ್ಮಿತವಾದ ಜಲಾಶಯಗಳೂ ಎಲ್ಲಾ ಸಮುದ್ರಗಳೂ ಬಂದು, ಅವು ಸ್ನಾನಾಪಾನಾದಿಗಳನ್ನು ನೀಡಲು ಸಿದ್ಧವಾದುವು.

೯೧-೯೩. ಲವಣ, ಇಕ್ಷು, ಸುರೆ, ಸರ್ಪಿ, ದಧಿ, ದುಗ್ಧ, ಜಲ ಈ ಏಳು ಸಮುದ್ರಗಳೂ, ಪಾತಾಳದೊಡನೆ ಕೂಡಿದ ಏಳು ಲೋಕಗಳೂ, ಏಳು ದ್ವೀಪಗಳೂ, ಅವುಗಳ ಮುಖ್ಯಪಟ್ಟಣಗಳೂ ಮರಗಳೂ, ಬಳ್ಳಿಗಳೂ, ಹುಲ್ಲುಗಳೂ, ಕಾಯಿಪಲ್ಯಗಳೂ, ಹಣ್ಣುಗಳೂ, ಪೃಥಿವಿ, ವಾಯು, ಆಕಾಶ, ನೀರು, ಜ್ಯೋತಿಸ್ಸು, ಧರ್ಮಶಾಸ್ತ್ರಗಳು, ವೇದಭಾಷ್ಯಗಳು, ಸೂತ್ರಗಳು, ಬ್ರಹ್ಮನಿಂದ ನಿರ್ಮಿತವಾದುವು ಯಾವು ಇವೆಯೋ ಅವೆಲ್ಲವೂ ಬಂದುವು. ಆಕಾರವಿಲ್ಲದುವೆಲ್ಲಾ ಆಕಾರವನ್ನು ಹೊಂದಿ ಕಾಣುತ್ತಿದ್ದುವು.

ಅಮೂರ್ತಂ ಮೂರ್ತಮತ್ಯಂತಂ ಮೂರ್ತದೃಶ್ಯಂ ತಥಾ ಸ್ಥಿತಂ ।
ಏವಂ ಕೃತೇ ತಥಾ ತಸ್ಮಿನ್ಯಜ್ಞೇ ಪೈತಾಮಹೇ ತದಾ ॥ ೯೪ ॥

ದೇವಾನಾಂ ಸಂನಿಧೌ ತತ್ರ ಋಷಿಭಿಶ್ಚ ಸಮಾಗಮೇ ।
ಬ್ರಹ್ಮಣೋ ದಕ್ಷಿಣೇ ಪಾರ್ಶ್ವೇ ಸ್ಥಿತೋ ವಿಷ್ಣುಃ ಸನಾತನಃ ॥ ೯೫ ॥

ವಾಮಪಾರ್ಶ್ವೇ ಸ್ಥಿತೋ ರುದ್ರಃ ಪಿನಾಕೀ ಚ ಜಗತ್ಪ್ರಭುಃ ।
ಋತ್ವಿಜಾಂ ಚಾಪಿ ವರಣಂ ಕೃತಂ ತತ್ರ ಮಹಾತ್ಮನಾ ॥ ೯೬ ॥

ಭೃಗುರ್ಹೋತಾ ವೃತಸ್ತತ್ರ ಪುಲಸ್ತ್ಯೋಽಧ್ವರ್ಯುಸತ್ತಮಃ ।
ತತ್ರೋದ್ಗಾತಾ ಮರೀಚಸ್ತು ಬ್ರಹ್ಮಾ ವೈ ನಾರದಃ ಕೃತಃ ॥ ೯೭ ॥

ಸನತ್ಕುಮಾರಾದಯಶ್ಚಾನ್ಯೇ ಸದಸ್ಯಾಸ್ತತ್ರ ತೇಽಭವನ್ ।
ಪ್ರಜಾಪತಯೋ ದಕ್ಷಾದ್ಯಾ ವರ್ಣಾ ಬ್ರಾಹ್ಮಣಪೂರ್ವಕಾಃ ॥ ೯೮ ॥

ಬ್ರಹ್ಮಣಶ್ಚ ಸಮೀಪೇ ತು ಕೃತ್ವಾ ಋತ್ವಿಗ್ವಿಕಲ್ಪನಾಃ ।
ವಸ್ತ್ರೈರಾಭರಣೈರ್ಯುಕ್ತಾಃ ಕೃತಾ ವೈಶ್ರವಣೇನ ತೇ ॥ ೯೯ ॥

---

೯೪-೯೫. ಈ ರೀತಿಯಾದ ಆ ಬ್ರಹ್ಮನ ಯಜ್ಞದಲ್ಲಿ ದೇವತೆಗಳ ಮತ್ತು ಋಷಿಗಳ ಮಧ್ಯದಲ್ಲಿ ಬ್ರಹ್ಮನಿರುತ್ತಿರಲು, ಆ ಬ್ರಹ್ಮನ ಬಲಗಡೆಯಲ್ಲಿ ಸನಾತನನಾದ ವಿಷ್ಣುವು ಇದ್ದನು.

೯೬. ಎಡಗಡೆಯಲ್ಲಿ ಜಗತ್ಪ್ರಭುವಾದ ರುದ್ರನು ಪಿನಾಕಿ ಎಂಬ ಧನಸ್ಸನ್ನು ಹಿಡಿದು ನಿಂತನು. ಆಗ ಬ್ರಹ್ಮನು ಋತ್ವಿಕ್ಕುಗಳನ್ನು ವರಿಸಿದನು.

೯೭-೯೮. ಭೃಗುವು ಹೋತೃ, ಪುಲಸ್ತ್ಯನು ಅಧ್ವರ್ಯು, ಮರೀಚಿಯು ಉದ್ಗಾತೃವು, ನಾರದನು ಬ್ರಹ್ಮನು, ಸನತ್ಕುಮಾರಾದಿಗಳು ಸದಸ್ಯರು, ದಕ್ಷಾದಿ ಪ್ರಜಾಪತಿಗಳು ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರ ವರ್ಣದವರಾದರು.

೯೯. ಬ್ರಹ್ಮನ ಹತ್ತಿರ ಈ ಋತ್ವಿಕ್ಕುಗಳನ್ನು ಮಾಡಿ ಕೂರಿಸಿದರು. ಅವರೆಲ್ಲರಿಗೂ ಕುಬೇರನು ದೀಕ್ಷೆಯ ವಸ್ತ್ರಗಳನ್ನೂ ಆಭರಣಗಳನ್ನೂ ಕೊಟ್ಟು ಅಲಂಕರಿಸಿ ಗೌರವಿಸಿದನು.

**ಅಂಗುಲೀಯೈಃ ಸಕಟಕೈರ್ಮುಕುಟೈರ್ಭೂಷಿತಾ ದ್ವಿಜಾಃ ।**
**ಚತ್ವಾರೋ ದ್ವೌ ದಶಾನ್ಯೇ ಚ ಏವಂ ತೇ ಷೋಡಶ ದ್ವಿಜಾಃ ॥ ೧೦೦ ॥**

**ಬ್ರಹ್ಮಣಾ ಪೂಜಿತಾಃ ಸರ್ವೇ ಪ್ರಣಿಪಾತಪುರಃಸರಂ ।**
**ಅನುಗ್ರಾಹ್ಯೋ ಭವದ್ಭಿಸ್ತು ಸರ್ವೈರಸ್ಮಿನ್ ಕ್ರತಾವಿಹ ॥ ೧೦೧ ॥**

**ಪತ್ನೀ ಮಮೈಷಾ ಸಾವಿತ್ರೀ ಯೂಯಂ ಮೇ ಶರಣಂ ದ್ವಿಜಾಃ ।**
**ವಿಶ್ವಕರ್ಮಾಣಮಾಹೂಯ ಬ್ರಹ್ಮಣಃ ಶೀರ್ಷಮುಂಡನಂ ॥ ೧೦೨ ॥**

**ಯಜ್ಞೇ ಚ ವಿಹಿತಂ ತಸ್ಯ ಕಾರಿತಂ ದ್ವಿಜಸತ್ತಮೈಃ ।**
**ಅಕೌಶೇಯಾನಿ ವಸ್ತ್ರಾಣಿ ದಂಪತ್ಯರ್ಥೇ ತಥಾ ದ್ವಿಜೈಃ ॥ ೧೦೩ ॥**

**ಬ್ರಹ್ಮಘೋಷೇಣ ತೇ ವಿಪ್ರಾ ನಾದಯಂತಿಸ್ತ್ರಿವಿಷ್ಟಪಂ ।**
**ಪಾಲಯಂತೋ ಜಗಚ್ಚೇದಂ ಕ್ಷತ್ರಿಯಾಃ ಸಾಯುಧಾಃ ಸ್ಥಿತಾಃ ॥ ೧೦೪ ॥**

---

೧೦೦. ಉಂಗುರ, ಬಳೆಗಳು, ಕಿರೀಟ ಮುಂತಾದುವುಗಳಿಂದ ಅವರೆಲ್ಲರನ್ನೂ ಕುಬೇರನು ಅಲಂಕರಿಸಿದನು. ಅಧ್ವರ್ಯು, ಉದ್ಗಾತೃ, ಹೋತೃ, ಬ್ರಹ್ಮ ಇವರು ನಾಲ್ಕು ಜನರು. ಈಶ್ವರ, ವಿಷ್ಣು ಇವರಿಬ್ಬರೂ, ಬೇರೆ ಹತ್ತು ಜನ ಹೀಗೆ ಹದಿನಾರು ಜನರು ಋತ್ವಿಕ್ಕುಗಳಾಗಿ ಯಜ್ಞಕರ್ಮನಿರತರಾಗಿ ನಿಂತರು.

೧೦೧. ಬ್ರಹ್ಮನು ನಮಸ್ಕರಿಸಿ ಅವರನ್ನು ಗೌರವಿಸಿ ಎಲೈ ದ್ವಿಜರೇ, ನನ್ನ ಪತ್ನಿ ಸಾವಿತ್ರಿಯೂ ನಾನೂ ಯಜ್ಞಮಾಡುತ್ತೇವೆ. ನೀವು ನನ್ನನ್ನು ಅನುಗ್ರಹಿಸ ಬೇಕು. ನೀವೇ ನಮಗೆ ರಕ್ಷಕರು. ಎಂದು ಪ್ರಾರ್ಥಿಸಿದರು.

೧೦೨-೧೦೩. ವಿಶ್ವಕರ್ಮನನ್ನು ಕರೆದು ಬ್ರಹ್ಮನಿಗೆ ಕ್ಷೌರವನ್ನು ಮಾಡಿ ಸಿದರು. ಯಜ್ಞದಲ್ಲಿ ಯಾವಯಾವುದು ವಿಹಿತವೋ ಅದೆಲ್ಲವನ್ನೂ ಬ್ರಾಹ್ಮಣರು ಆ ಬ್ರಹ್ಮದಂಪತಿಗಳಿಗೆ ಮಾಡಿಸಿದರು. ರೇಷ್ಮೆಯಿಂದ ಬೆರಕೆಯಿಲ್ಲದಿರುವ ಬಟ್ಟೆಯನ್ನು ಆ ಬ್ರಾಹ್ಮಣರು ಆ ಬ್ರಹ್ಮದಂಪತಿಗಳಿಗೆ, ಸ್ವರ್ಗವನ್ನು ಭೇದಿಸುವಂತೆ ವೇದವನ್ನು ಹೇಳುತ್ತ ಕೊಟ್ಟರು.

೧೦೪. ಈ ಯಜ್ಞದ ಜಗತ್ತನ್ನು ಕಾಪಾಡುತ್ತ ಕ್ಷತ್ರಿಯರು ಆಯುಧವನ್ನು ಹಿಡಿದು ನಿಂತರು.

ಭಕ್ಷ್ಯಪ್ರಕಾರಾನ್ವಿವಿಧಾನ್ವೈಶ್ಯಾಸ್ತತ್ರ ಪ್ರಚಕ್ರಿರೇ ।
ರಸಬಾಹುಲ್ಯಯುಕ್ತಂ ಚ ಭಕ್ಷ್ಯಭೋಜ್ಯಂ ಕೃತಂ ತತಃ ॥ ೧೦೫ ॥

ಅಶ್ರುತಂ ಪ್ರಾಗದೃಷ್ಟಂ ಚ ದೃಷ್ಟ್ವಾ ತುಷ್ಟಃ ಪಿತಾಮಹಃ ।
ಪ್ರಾಗ್ವಾಟೇತಿ ದದೌ ನಾಮ ವೈಶ್ಯಾನಾಂ ಸೃಷ್ಟಿಕೃತ್ಪ್ರಭುಃ ॥ ೧೦೬ ॥

ದ್ವಿಜಾನಾಂ ಪಾದಶುಶ್ರೂಶಾ ಶೂದ್ರೈಃ ಕಾರ್ಯಾ ಸದೈವ ಹಿ ।
ಪಾದಪ್ರಕ್ಷಾಲನಂ ಭೋಜ್ಯಮುಚ್ಛಿಷ್ಟಸ್ಯ ಪ್ರಮಾರ್ಜನಂ ॥ ೧೦೭ ॥

ತೇ ತು ಚಕ್ರುಸ್ತದಾ ಚೈವ ತೇಭ್ಯೋ ಭೂಯಃ ಪಿತಾಮಹಃ ।
ಶುಶ್ರೂಷಾರ್ಥಂ ಮಯಾ ಯೂಯಂ ತುರೀಯೇ ತು ಪದೇ ಕೃತಾಃ
॥ ೧೦೮ ॥

ದ್ವಿಜಾನಾಂ ಕ್ಷತ್ರಬಂಧೂನಾಂ ವೈಶ್ಯಾನಾಂ ಚ ಭವದ್ವಿಧೈಃ ।
ತ್ರಿಭ್ಯಃ ಶುಶ್ರೂಷಣಾ ಕಾರ್ಯಾ ನಾಮ ನಾಮ್ನೈಕಸಂಜ್ಞಿತಾ ॥ ೧೦೯ ॥

ದ್ವಾರಾಧ್ಯಕ್ಷಂ ತಥಾ ಶಕ್ರಂ ವರುಣಂ ರಸದಾಯಕಂ ।
ವಿತ್ತಪ್ರದಂ ವೈಶ್ರವಣಂ ಪವನಂ ಗಂಧದಾಯಕಂ ॥ ೧೧೦ ॥

---

೧೦೫. ವೈಶ್ಯರು ರುಚಿರುಚಿಯಾದ ನಾನಾಬಗೆಯಾದ ಭಕ್ಷ್ಯಗಳನ್ನು ಭೋಜ್ಯಗಳನ್ನು ಮಾಡಿದರು. ಬ್ರಹ್ಮನು ಹಿಂದೆ ನೋಡದ, ಕೇಳದ ಆ ಪದಾರ್ಥಗಳನ್ನು ನೋಡಿ ಸಂತೋಷಪಟ್ಟನು.

೧೦೬. ಆ ವೈಶ್ಯರಿಗೆ ಸ್ರಷ್ಟನಾದ ಬ್ರಹ್ಮನು ಪ್ರಾಗ್ವಾಟ (ಪ್ರಾಗ್ವಂಶ) ವೆಂಬ ಹೆಸರನ್ನು ಕೊಟ್ಟನು.

೧೦೭. ದ್ವಿಜರ ಪಾದಶುಶ್ರೂಷೆಯನ್ನು ಶೂದ್ರರು ಮಾಡಬೇಕು. ಆದ್ದರಿಂದ ಆ ದ್ವಿಜರ ಪಾದವನ್ನು ತೊಳೆಯುವಿಕೆ, ಅವರು ತಿಂದು ಮಿಕ್ಕದ್ದನ್ನು ತಿನ್ನುವುದು, ಅವರ ಎಂಜಲನ್ನು ತೊಳೆಯುವುದು, ಇವನ್ನು ಶೂದ್ರರು ಮಾಡುತ್ತಾರೆ.

೧೦೮-೧೦೯. ಎಲೈ ಶೂದ್ರರಿರಾ, ನೀವು ಬ್ರಹ್ಮಕ್ಷತ್ರಿಯ ವೈಶ್ಯರ ಶಶ್ರೂಷೆ ಮಾಡಬೇಕೆಂದು ನಾಲ್ಕನೆಯ ಸ್ಥಾನದಲ್ಲಿಟ್ಟಿದ್ದೇನೆ. ಆ ಮೂರು ವರ್ಣದ ಜನಕ್ಕೂ ನೀವು ಶುಶ್ರೂಷೆಯನ್ನು ಮಾಡಬೇಕು. ಆದ್ದರಿಂದಲೇ ನೀವು ಹೆಸರಿನಿಂದ ಪಾದಜರು.

೧೧೦-೧೧೧. ಇಂದ್ರನನ್ನು ಬಾಗಿಲಿಗೆ ಒಡೆಯನನ್ನಾಗಿಯೂ, ವರುಣನನ್ನು ರಸವನ್ನು ಕೊಡತಕ್ಕವನನ್ನಾಗಿಯೂ, ಕುಬೇರನನ್ನು ಹಣವನ್ನು ಕೊಡುವವನನ್ನಾ

**ಉದ್ಯೋತಕಾರಿಣಂ ಸೂರ್ಯಂ ಪ್ರಭುತ್ವೇ ಮಾಧವಃ ಸ್ಥಿತಃ ।**
**ಸೋಮಃ ಸೌಮ್ಯಪ್ರದಸ್ತೇಷಾಂ ವಾಮಪಕ್ಷಮುಥಾಶ್ರಿತಃ ॥ ೧೧೧ ॥**

**ಸುಸಂಸ್ಕೃತಾ ಚ ಪತ್ನೀ ಸಾ ಸಾವಿತ್ರೀ ಚ ವರಾಂಗನಾ ।**
**ಅಧ್ವರ್ಯುಣಾ ಸಮಾಹೂತಾ ಏಹಿ ದೇವಿ ತ್ವರಾನ್ವಿತಾ ॥ ೧೧೨ ॥**

**ಉದ್ಧೃತಾಶ್ಚಾಗ್ನಯಃ ಸರ್ವೇ ದೀಕ್ಷಾಕಾಲ ಉಪಾಗತಃ ।**
**ವ್ಯಗ್ರಾ ಸಾ ಕಾರ್ಯಕರಣೇ ಸ್ತ್ರೀಭಾವೇನಾನ್ಯತಃ ಸ್ಥಿತಾ ॥ ೧೧೩ ॥**

**ಇಹ ಮೇ ನ ಕೃತಂ ಕಿಂಚಿದ್ದ್ವಾರೇ ವೈ ಮಂಡನಂ ಮಯಾ ।**
**ಭಿತ್ತ್ಯಾಂ ವೈ ಚಿತ್ರಕರ್ಮಾಣಿ ಸ್ವಸ್ತಿಕಂ ಪ್ರಾಂಗಣೇ ನ ತು ॥ ೧೧೪ ॥**

**ಪ್ರಕ್ಷಾಲನಂ ಚ ಭಾಂಡಾನಾಂ ನ ಕೃತಂ ಕಿಮಪಿ ತ್ವಿಹ ।**
**ಲಕ್ಷ್ಮೀರ್ನಾದ್ಯಾಪಿ ಆಯಾತಾ ಸತೀ ನೈವೇಹ ದೃಶ್ಯತೇ ॥ ೧೧೫ ॥**

---

ಗಿಯೂ, ವಾಯುವನ್ನು ಗಂಧವನ್ನು ಕೊಡತಕ್ಕವನನ್ನಾಗಿಯೂ, ಸೂರ್ಯನನ್ನು ಬೆಳಕು ಕೊಡತಕ್ಕವನನ್ನಾಗಿಯೂ, ಮಾಧವನನ್ನು ಯಜಮಾನನನ್ನಾಗಿಯೂ, ಸೋಮನನ್ನು ಅವರೆಲ್ಲರಿಗೂ ಆಯಾಸ ಪರಿಹಾರಕನನ್ನಾಗಿಯೂ ಮಾಡಿದನು.

೧೧೨. ಆಗ ಅಲಂಕೃತಳಾಗಿದ್ದ ಬ್ರಹ್ಮನ ಪತ್ನಿಯಾದ ಸಾವಿತ್ರಿಯನ್ನು ಅಧ್ವರ್ಯುವು, ದೇವಿಯೆ, ಬೇಗ ಬಾ ಎಂದು ಕೂಗಿದನು.

೧೧೩. ಎಲೈ ದೇವಿಯೇ, ಅಗ್ನಿಯನ್ನು ಮಥನಮಾಡಿ ತೆಗೆದುವಾಯಿತು. ದೀಕ್ಷೆಯ ಕಾಲವು ಬಂದಿತು. ಬೇಗ ಬಾ ಎಂದನು. ಆಕೆಯು ಕೆಲಸದಲ್ಲಿ ಆತುರಳಾಗಿದ್ದ ಹೆಂಗಸಿನ ಸ್ವಭಾವದಿಂದ ಬೇರೆ ಕಡೆಯಲ್ಲಿದ್ದಳು.

೧೧೪-೧೧೫. ಇಲ್ಲಿ ನಾನು ಯಾವ ಕೆಲಸವನ್ನೂ ಮಾಡಿಲ್ಲ. ಬಾಗಿಲಿಗೆ ಅಲಂಕಾರ ಮಾಡಿಲ್ಲ. ಗೋಡೆಯಲ್ಲಿ ಚಿತ್ರಗಳನ್ನು ಬರೆದಿಲ್ಲ. ಅಂಗಳದಲ್ಲಿ ಸ್ವಸ್ತಿಕಾದಿಗಳನ್ನು ಬರೆದಿಲ್ಲ. ಪಾತ್ರೆಗಳನ್ನು ಕೂಡ ತೊಳೆದಿಲ್ಲ. ಇನ್ನೂ ಲಕ್ಷ್ಮಿಯು ಬಂದಿಲ್ಲ. ಸತಿಯನ್ನಿಂತು ಕಾಣಲೇ ಕಾಣೆ.

ಮಹತಾಗ್ರಹೇಣಾಹೂತಾ ಶಕ್ರಾಣೀ ನಾಗತಾ ತ್ವಿಹ ।
ಮೇಧಾ ಶ್ರದ್ಧಾ ವಿಭೂತಿಶ್ಚ ಅನಸೂಯಾ ಧೃತಿಃ ಕ್ಷಮಾ ॥ ೧೧೬ ॥

ಗಂಗಾ ಸರಸ್ವತೀ ಚೈವ ನಾದ್ಯಾಗಚ್ಛಂತಿ ಕನ್ಯಕಾಃ ।
ಇಂದ್ರಾಣೀ ಇಂದ್ರಪತ್ನೀ ತು ರೋಹಿಣೀ ಶಶಿನಃ ಪ್ರಿಯಾ ॥ ೧೧೭ ॥

ಅಗ್ನೇಃ ಪತ್ನೀ ತಥಾ ಸ್ವಾಹಾ ಧೂಮ್ರೋರ್ಣಾ ತು ಯಮಸ್ಯ ತು ।
ವರುಣಸ್ಯ ತಥಾ ಗೌರೀ ವಾಯೋರ್ವೈ ಸುಪ್ರಭಾ ತಥಾ ॥ ೧೧೮ ॥

ಋದ್ಧಿರ್ವೈಶ್ರವಣಭಾರ್ಯಾ ಶಂಭೋರ್ಗೌರೀ ಜಗತ್ಪ್ರಿಯಾ ।
ಅರುಂಧತೀ ವಸಿಷ್ಠಸ್ಯ ಸಪ್ತರ್ಷೀಣಾಂ ಚ ಯಾಃ ಸ್ತ್ರಿಯಃ ॥ ೧೧೯ ॥

ಅನಸೂಯಾತ್ರಿಪತ್ನೀ ಚ ತಥಾನ್ಯಾಃ ಪ್ರಮದಾಸ್ತ್ವಿಹ ।
ವಧ್ವೋ ದುಹಿತರಶ್ಚೈವ ಸಖ್ಯೋ ವೈ ನಗ್ನಿಕಾಸ್ತಥಾ ॥ ೧೨೦ ॥

ನಾಗಚ್ಛಂತಿ ತು ತಾಃ ಸರ್ವಾ ಅಹಂ ತಾವತ್ಸ್ಥಿತಾ ಚಿರಂ ।
ನಾಹಮೇಕಾಕಿನೀ ಯಾಸ್ಯೇ ಯಾವನ್ನಾಯಾಂತಿ ತಾಃ ಸ್ತ್ರಿಯಃ ॥ ೧೨೧ ॥

---

೧೧೬. ಖಂಡಿತವಾಗಿ ಬರಲೇಬೇಕೆಂದು ಹೇಳಿಕಳುಹಿಸಿದರೂ ಇಂದ್ರನ ಹೆಂಡತಿಯು ಬರಲೇ ಇಲ್ಲ. ಮೇಧಾ, ಶ್ರದ್ಧೆ, ವಿಭೂತಿ, ಅನುಸೂಯೆ, ಧೃತಿ, ಕ್ಷಮೆ, ಗಂಗೆ, ಸರಸ್ವತಿಯರೂ ಕೂಡ ಇನ್ನೂ ಬರಲಿಲ್ಲ. ಕನ್ನಿಕೆಯರೂ ಕೂಡ ಬರಲೇ ಇಲ್ಲ.

೧೧೭-೧೨೧. ಶಚಿಯು ಇಂದ್ರನ ಹೆಂಡತಿ, ರೋಹಿಣಿಯು ಚಂದ್ರನಿಗೆ ಪ್ರಿಯಳು. ಅಗ್ನಿ ಪತ್ನಿಯು ಸ್ವಾಹೆಯು, ಯಮನ ಹೆಂಡತಿ ಧೂಮ್ರೋರ್ಣೆಯು, ವರುಣನ ಹೆಂಡತಿ ಗೌರಿ, ವಾಯುವಿನ ಹೆಂಡತಿ ಸುಪ್ರಭೆ, ಕುಬೇರನ ಹೆಂಡತಿ ಋದ್ಧಿ, ಶಂಭುವಿನ ಹೆಂಡತಿ ಗೌರಿ, ವಸಿಷ್ಠನ ಹೆಂಡತಿ ಅರುಂಧತಿ, ಸಪ್ತರ್ಷಿಗಳ ಹೆಂಡತಿಯರು, ಅತ್ರಿಯ ಹೆಂಡತಿ ಅನುಸೂಯೆ, ಇನ್ನೂ ಮಿಕ್ಕ ಹೆಂಗಸರು, ಸೊಸೆಯರು, ಹೆಣ್ಣು ಮಕ್ಕಳು, ಸಖಿಯರು, ಮುಟ್ಟಾಗದ ಹೆಣ್ಣು ಮಕ್ಕಳು, ಇವರೊಬ್ಬರೂ ಇಷ್ಟು ಹೊತ್ತಾದರೂ ಬರಲೇಯಿಲ್ಲ. ನಾನು ಬಹಳ ಹೊತ್ತಿನಿಂದ ಕಾದಿದ್ದೇನೆ. ನಾನೊಬ್ಬಳೇ ಬರುವುದಿಲ್ಲ. ಆ ಹೆಂಗಸರು ಬರುವವರೆಗೂ ಬರುವುದಿಲ್ಲ.

**ಬ್ರೂಹಿ ಗತ್ವಾ ವಿರಿಂಚಿಂ ತಂ ತಿಷ್ಠ ತಾವನ್ಮುಹೂರ್ತಕಂ ।**
**ಸರ್ವಾಭಿಃ ಸಹಿತಾ ಚಾಹಮಾಗಚ್ಛಾಮಿ ತ್ವರಾನ್ವಿತಾ ॥ ೧೨೨ ॥**

**ಸರ್ವೈಃ ಪರಿವೃತಃ ಶೋಭಾಂ ದೇವೈಃ ಸಹ ಮಹಾಮತೇ ।**
**ಭವಾನ್ಪ್ರಾಪ್ನೋತಿ ಪರಮಂ ತಥಾಹಂ ತು ನ ಸಂಶಯಃ ॥ ೧೨೩ ॥**

**ವದಮಾನಾಂ ತಥಾಧ್ವರ್ಯುಸ್ತ್ಯಕ್ತ್ವಾ ಬ್ರಹ್ಮಾಣಮಾಗತಃ ॥ ೧೨೪ ॥**

**॥ ಅಧ್ವರ್ಯುರುವಾಚ ॥**

**ಸಾವಿತ್ರೀ ವ್ಯಾಕುಲಾ ದೇವ ಪ್ರಸಕ್ತಾ ಗೃಹಕರ್ಮಣಿ ।**
**ಸಖ್ಯೋ ನಾಭ್ಯಾಗತಾ ಯಾವತ್ತಾವನ್ನಾಗಮನಂ ಮಮ ॥ ೧೨೫ ॥**

**ಏವಮುಕ್ತೋಽಸ್ಮಿ ವೈ ದೇವ ಕಾಲಶ್ಚಾಪ್ಯತಿವರ್ತತೇ ।**
**ಯದ್ಯೋಽದ್ಯ ರುಚಿರಂ ತಾವತ್ತತ್ಕುರಷ್ವ ಪಿತಾಮಹ ॥**
**ಏವಮುಕ್ತೋ ತದಾ ವಾಕ್ಯೇ ಕಿಂಚಿತ್ಕೋಪಸಮನ್ವಿತಃ ॥ ೧೨೬ ॥**

---

೧೨೨. ಬ್ರಹ್ಮನ ಬಳಿಗೆ ಹೋಗಿ ಸ್ವಲ್ಪ ಹೊತ್ತು ನಿದಾನಿಸು. ನಾನು ಎಲ್ಲರೂ ಬಂದ ಮೇಲೆ ಅವರೊಡನೆ ಜಾಗ್ರತೆ ಬರುತ್ತೇನೆ ಎಂದು ಹೇಳು.

೧೨೩-೧೨೪. ಎಲೈ ಮಹಾಬುದ್ಧಿಯುಳ್ಳ ಬ್ರಹ್ಮನೇ, ದೇವತೆಗಳೆಲ್ಲರೊಡನೆಯೂ ನೀನು ಕೂಡಿಕೊಂಡಿದ್ದರೆ ಶೋಭಾಯಮಾನನಾಗಿರುತ್ತೀಯೆ. ಹಾಗೆಯೇ ನಾನೂ ಎಲ್ಲ ಸ್ತ್ರೀಯರೊಡನೆಯೂ ಇದ್ದರೆ ಶೋಭಿಸುತ್ತೇನೆ. ಸಂಶಯವಿಲ್ಲ. ಎಂದು ಆ ಸಾವಿತ್ರಿಯು ಹೇಳುತ್ತಿರಲು, ಅಧ್ವರ್ಯುವು ಆಕೆಯನ್ನು ಅಷ್ಟಕ್ಕೆ ಬಿಟ್ಟು ಬ್ರಹ್ಮನ ಬಳಿಗೆ ಬಂದನು.

೧೨೫-೧೨೬. ಅಧ್ವರ್ಯುವು ಹೇಳಿದನು:—ಎಲೈ ಸ್ವಾಮಿಯಾದ ಬ್ರಹ್ಮನೇ, ಸಾವಿತ್ರಿಯು ದುಃಖಗೊಂಡು ಮನೆಯ ಕೆಲಸಗಳನ್ನು ಮಾಡುತ್ತಿದ್ದಾಳೆ. ಸಖಿಯರು ಬರುವವರೆಗೂ ನಾನು ಬರುವುದಿಲ್ಲವೆಂದು ಹೇಳಿದಳು. ಕಾಲ ಮೀರುತ್ತಿದೆ. ನಿನಗೆ ಹೇಗೆ ಅನುಕೂಲವೋ ಹಾಗೆ ಮಾಡು ಎಂದನು. ಅಧ್ವರ್ಯುವು ಹೀಗೆ ಹೇಳಲು ಬ್ರಹ್ಮನಿಗೆ ಸ್ವಲ್ಪ ಕೋಪ ಬಂದಿತು.

॥ ಬ್ರಹ್ಮೋವಾಚ ॥

ಪತ್ನೀಂ ಚಾನ್ಯಾಂ ಮದರ್ಥೇ ತು ಶೀಘ್ರಂ ಶಕ್ರ ಸಮಾನಯ ।
ಯಥಾ ಪ್ರವರ್ತತೇ ಯಜ್ಞಃ ಕಾಲಹೀನೋ ನ ಜಾಯತೇ ॥ ೧೨೭ ॥

ತಥಾ ಶೀಘ್ರಂ ವಿಧತ್ಸ್ವ ತ್ವಂ ನಾರೀಂ ಕಾಂಚಿದುಪಾನಯ ।
ಯಾವದ್ಯಜ್ಞಸಮಾಪ್ತಿರ್ಮೇ ವರ್ಣೇ ತ್ವಂ ಮಾ ಕೃಥಾ ಮನಃ ॥ ೧೨೮ ॥

ಭೂಯೋಽಪಿ ತಾಂ ಪ್ರಮೋಕ್ಷ್ಯಾಮಿ ಸಮಾಪ್ತೇ ತು ಕ್ರತಾವಿಹ ।
ಏವಮುಕ್ತಸ್ತಥಾ ಶಕ್ರೋ ಗತ್ವಾ ಸರ್ವಂ ಧರಾತಲಂ ॥ ೧೨೯ ॥

ಸ್ತ್ರಿಯೋ ದೃಷ್ಟಾಸ್ತು ಯಾಸ್ತೇನ ಸರ್ವಾಸ್ತಾಃ ಸಪರಿಗ್ರಹಾಃ ।
ಆಭೀರಕನ್ಯಾಂ ರೂಪಾಢ್ಯಾಂ ಶುಭಾಸ್ಯಾಂ ಚಾರುಲೋಚನಾಂ ॥ ೧೩೦ ॥

ನ ದೇವೀ ನ ಚ ಗಂಧರ್ವೀ ನಾಸುರೀ ನ ಚ ಪನ್ನಗೀ ।
ನ ಚಾಸ್ತಿ ತಾದೃಶೀ ಕನ್ಯಾ ಯಾದೃಶೀ ಸಾ ವರಾಂಗನಾ ॥ ೧೩೧ ॥

---

೧೨೭. ಬ್ರಹ್ಮನು ಹೇಳಿದನು:—ಎಲೈ ಇಂದ್ರನೇ, ನನಗೆ ಬೇರೊಬ್ಬ ಹೆಂಡತಿಯನ್ನು ಹುಡುಕಿಕೊಂಡು ಕರೆದುಕೊಂಡು ಬಾ. ಯಜ್ಞವು ನಡೆಯಬೇಕು. ಕಾಲವು ಮೀರಬಾರದು.

೧೨೮. ಬೇಗ ಆ ಕೆಲಸವನ್ನು ಮಾಡು. ಬೇರೊಬ್ಬ ಹೆಂಗಸನ್ನು ಕರೆದು ಕೊಂಡು ಬಾ. ಯಜ್ಞ ಪೂರೈಸುವವರೆಗೂ ಆಕೆಯಿರಲಿ. ಜಾತಿಯನ್ನು ವಿಚಾರಿಸ ಬೇಡ.

೧೨೯. ಯಜ್ಞವು ಮುಗಿದ ಮೇಲೆ ಆಕೆಯನ್ನು ಮತ್ತೆ ಬಿಟ್ಟುಬಿಡುತ್ತೇನೆ. ಎನ್ನಲು, ಇಂದ್ರನು ಭೂಲೋಕಕ್ಕೆ ಹೋಗಿ ಹೆಂಗಸರನ್ನು ಹುಡುಕುತ್ತಿರಲು ಎಲ್ಲರೂ ಮದುವೆಯಾದವರೇ ಇದ್ದರು.

೧೩೦-೧೩೧. ಅನಂತರ ಒಬ್ಬಳು ರೂಪವತಿಯಾದ, ಮನೋಹರವಾದ ಕಣ್ಣುಗಳುಳ್ಳ ಕನ್ಯೆಯನ್ನು ನೋಡಿದನು. ಆ ಕನ್ನಿಕೆಯು ಯಾವ ರೀತಿ ಸುಂದರಿಯಾಗಿದ್ದಳೋ ಆ ರೀತಿಯಾದವರು ದೇವತೆಗಳಲ್ಲೂ ಇಲ್ಲ. ಗಂಧರ್ವರಲ್ಲಿಯೂ ಇಲ್ಲ. ಅಸುರರಲ್ಲಿಯೂ ಇಲ್ಲ. ನಾಗರಲ್ಲಿಯೂ ಇಲ್ಲ. ಕಮಲದಂತೆ ಕಣ್ಣುಳ್ಳ ತನ್ನ ರೂಪ

**ದದರ್ಶ ತಾಂ ತು ಚಾರ್ವಂಗೀಂ ಕಮಲಾಯತಲೋಚನಾಂ ।**
**ಸಂಕ್ಷಿಪತೀಂ ಮನೋವೃತ್ತಿವಿಭವಂ ರೂಪಸಂಪದಾ ॥ ೧೩೨ ॥**

**ಯದ್ಯತ್ತದ್ವಸ್ತು ಸೌಂದರ್ಯಾದ್ವಿಶಿಷ್ಟಂ ಲಭ್ಯತೇ ಕ್ವಚಿತ್ ।**
**ತತ್ತಚ್ಛರೀರಸಂಲಗ್ನಂ ತಸ್ಸಂಗ್ಯಾ ದದೃಶೇ ವರಂ ॥ ೧೩೩ ॥**

**ತಾಂ ದೃಷ್ಟ್ವಾ ಚಿಂತಯಾಮಾಸ ಯದ್ಯೇಷಾ ಕನ್ಯಕಾ ಭವೇತ್ ।**
**ತನ್ಮತ್ತಃ ಕೃತಪುಣ್ಯೋಽನ್ಯೋ ನ ದೇವೋ ಭುವಿ ವಿದ್ಯತೇ ॥ ೧೩೪ ॥**

**ಯೋಷಿದ್ರತ್ನಮಿದಂ ಸೇಯಂ ಸದ್ಭಾರ್ಯಾಯಾಂ ಪಿತಾಮಹಃ ।**
**ಸರಾಗೋ ಯದಿ ವಾ ಸ್ಯಾತ್ತು ಸಫಲಸ್ತ್ವೇಷ ಮೇ ಶ್ರಮಃ ॥ ೧೩೫ ॥**

**ನೀಲಾಭ್ರಕನಕಾಂಭೋಜವಿದ್ರುಮಾಭಾಂ ದದರ್ಶ ತಾಂ ।**
**ತ್ವಿಷಂ ಸಂಬಿಭ್ರತೀಮಂಗೈಃ ಕೇಶಗಂಡೇಕ್ಷಣಾಧರೈಃ ॥ ೧೩೬ ॥**

---

ಸಂಪತ್ತಿನಿಂದ ಮನ್ಮಥನ ಸಂಪತ್ತನ್ನು ಕಿರಿದುಮಾಡುತ್ತಿರುವ ಒಬ್ಬ ಗೊಲ್ಲರ ಕನ್ಯೆಯನ್ನು ನೋಡಿದನು.

೧೩೩. ಪ್ರಪಂಚದಲ್ಲಿ ಎಲ್ಲಾದರೂ ಉತ್ತಮವಾದ ಸುಂದರ ವಸ್ತುವು ಸಿಕ್ಕಿದರೆ ಆ ಸೌಂದರ್ಯವು ಈಕೆಯ ಶರೀರದಲ್ಲಿ ಚೆನ್ನಾಗಿದ್ದಂತೆ ಕಾಣುತ್ತಿದ್ದಿತು.

೧೩೪. ಆಕೆಯನ್ನು ನೋಡಿ ಶಕ್ರನು, ಈಕೆಯು ಕನ್ಯೆಕೆಯಾಗಿದ್ದರೆ ಆಗ ನನಗಿಂತಲೂ ಪುಣ್ಯಮಾಡಿದವನು ದೇವತೆಗಳಲ್ಲಾಗಲೀ ಭೂಮಿಯಲ್ಲಾಗಲಿ ಇರುವುದಿಲ್ಲ.

೧೩೫. ಇವಳಾದರೋ ಹೆಂಗಸರಲ್ಲಿ ರತ್ನಪ್ರಾಯಳು. ಬ್ರಹ್ಮನು ಈಕೆಯನ್ನು ಹೆಂಡತಿಯನ್ನಾಗಿ ಮಾಡಿಕೊಂಡು ಇವಳಲ್ಲಿ ಪ್ರೀತಿಯುಳ್ಳವನಾದರೆ ಆಗ ನನ್ನ ಈ ಶ್ರಮವು ಫಲಕಾರಿಯಾದೀತು!

೧೩೬. ಕೂದಲು, ಕಪೋಲ, ಕಣ್ಣು, ತುಟಿಗಳೆಂಬ ಅಂಗಗಳಿಂದ ನೀಲ ಮೇಘ, ಚಿನ್ನ, ಕಮಲ ಹವಳಗಳ ಕಾಂತಿಯನ್ನು ಹೊಂದಿರುವ ಆಕೆಯನು ನೋಡಿದನು.

**ಮನ್ಮಥಾಶೋಕವೃಕ್ಷಸ್ಯ ಪ್ರೋದ್ಭಿನ್ನಾಂ ಕಲಿಕಾಮಿವ ।**
**ಪ್ರದಗ್ಧಸ್ಯಚ್ಛಯೇನೇವ ನೇತ್ರವಹ್ನಿಶಿಖೋತ್ಕರೈಃ ॥ ೧೩೭ ॥**

**ಧಾತ್ರಾ ಕಥಂ ಹಿ ಸಾ ಸೃಷ್ಟಾ ಪ್ರತಿರೂಪಮಪಶ್ಯತಾ ।**
**ಕಲ್ಪಿತಾ ಚೇತ್ಸ್ವಯಂ ಬುದ್ಧ್ಯಾ ನೈಪುಣ್ಯಸ್ಯ ಗತಿಃ ಪರಾ ॥ ೧೩೮ ॥**

**ಉತ್ತುಂಗಾಗ್ರಾವಿನೌ ಸೃಷ್ಟೌ ಯನ್ಮೇ ಸಂಪಶ್ಯತಃ ಸುಖಂ ।**
**ಪಯೋಧರೌ ನಾತಿಚಿತ್ರಂ ಕಸ್ಯ ಸಂಜಾಯತೇ ಹೃದಿ ॥ ೧೩೯ ॥**

**ರಾಗೋಪಹತದೇಹೋಽಯಮಧರೋ ಯದ್ಯಪಿ ಸ್ಫುಟಂ ।**
**ತಥಾಪಿ ಸೇವಮಾನಸ್ಯ ನಿರ್ವಾಣಂ ಸಂಪ್ರಯಚ್ಛತಿ ॥ ೧೪೦ ॥**

**ಸಂಹದ್ಭಿರಪಿ ಕೌಟಿಲ್ಯಮಲಕೈಃ ಸುಖಮರ್ಪ್ಯತೇ ।**
**ದೋಷೋಽಪಿ ಗುಣವದ್ಭಾತಿ ಭೂರಿಸೌಂದರ್ಯಮಾಶ್ರಿತಃ ॥ ೧೪೧ ॥**

---

೧೩೭-೧೩೮. ಮನ್ಮಥನೆಂಬ ಅಶೋಕವೃಕ್ಷದಿಂದ ಹೊರಟ ಮೊಗ್ಗಿನಂತಿರುವಳು. ಶಿವನು ತನ್ನ ನೇತ್ರಾಗ್ನಿಯಿಂದ ಹೃದಯದಲ್ಲಿ ಮಲಗಿರುವ ಮನ್ಮಥನನ್ನು ಸುಟ್ಟಿರುವಾಗ, ಅಂತಹ ಮನ್ಮಥನು ತನ್ನ ಹೃದಯದಲ್ಲಿದ್ದುದರಿಂದ ಮಾದರಿಯ ಪದಾರ್ಥವನ್ನು ನೋಡದೆ ಬ್ರಹ್ಮನು ಹೇಗೆತಾನೇ ಆಕೆಯನ್ನು ಸೃಷ್ಟಿಸಿದನು? ತನ್ನ ಬುದ್ಧಿಯಿಂದಲೇ ಊಹಿಸಿ ಕಲ್ಪಿಸಿಕೊಂಡು ಸೃಷ್ಟಿಸಿದ್ದರೆ ಆ ನೈಪುಣ್ಯವು ಅತ್ಯುತ್ತಮವಾದುದೇ.

೧೩೯. ಕಣ್ಣಿಗೆ ಸುಲಭವಾಗಿ ಕಾಣುತ್ತಿರುವ ಈ ಕುಚಾಗ್ರಗಳನ್ನು ಮೇಲಕ್ಕೆ ಎದ್ದಿರುವ ತುದಿಯುಳ್ಳಂತೆ ಸೃಷ್ಟಿಸಿದ್ದಾನೆ. ಇಂತಹ ಕುಚಗಳು ಯಾವನ ಮನಸ್ಸಿನಲ್ಲಿ ತಾನೇ ಆಶ್ಚರ್ಯವನ್ನು ಉಂಟುಮಾಡುವುದಿಲ್ಲ?

೧೪೦. ಈ ತುಟಿಯು ತನ್ನ ಕೆಂಪು ಬಣ್ಣದಿಂದ ದೇಹವನ್ನು ತಿರಸ್ಕರಿಸಿದೆ. ನಿಶ್ಚಯವು. ಆದರೂ ನೋಡುತ್ತಿದ್ದರೆ ಸುಖವನ್ನು ಕೊಡುತ್ತದೆ.

೧೪೧. ಮುಂಗುರುಳುಗಳೆಲ್ಲವೂ ಕೂಡಿಕೊಂಡು ಮನಸ್ಸಿಗೆ ವಕ್ರತೆಯನ್ನು ಉಂಟುಮಾಡುತ್ತದೆ. ಅವು ವಕ್ರವಾಗಿವೆ. ಆ ವಕ್ರತೆ ಎಂಬ ದೋಷವೂ ಕೂಡ ಬಹು ಸೌಂದರ್ಯವನ್ನು ಹೊಂದಿರುವುದರಿಂದ ಗುಣವಾಗಿಯೇ ಕಾಣುತ್ತದೆ.

**ನೇತ್ರಯೋರ್ಭೂಷಣೌ ಕಾಂತಾವಾಕರ್ಣಾಭ್ಯಾಶಮಾಗತೌ ।**
**ಕಾರಣಾಭಾವಚ್ಚೈತಸ್ಯಂ ನ ವದಿಷ್ಯಂತಿ ತದ್ವಿದಃ ॥ ೧೪೨ ॥**

**ಕರ್ಣಯೋರ್ಭೂಷಣೇ ನೇತ್ರೇ ನೇತ್ರಯೋಃ ಶ್ರವಣಾವಿಮೌ ।**
**ಕುಂಡಲಾಂಜನಯೋರಂತರ್ನಾವಕಾಶೋಽಸ್ತಿ ಕಶ್ಚನ ॥ ೧೪೩ ॥**

**ನ ತದ್ಯುಕ್ತಂ ಕಟಾಕ್ಷಾಣಾಂ ಯದ್ದ್ವಿಧಾಕಾರಣಂ ಹೃದಿ ।**
**ತವ ಸಂಬಂಧಿನೋ ಯೇಽತ್ರ ಕಥಂ ತೇ ದುಃಖಭಾಗಿನಃ ॥ ೧೪೪ ॥**

**ಸರ್ವಸುಂದರತಾಮೇತಿ ವಿಕಾರಃ ಪ್ರಾಕೃತೈರ್ಗುಣೈಃ ।**
**ವೃದ್ಧೇಕ್ಷಣಗತಾನಾಂ ತು ದೃಷ್ಟಮೇಷಾಂ ಬಲಾಬಲಂ ॥ ೧೪೫ ॥**

**ಧಾತ್ರಾ ಕೌಶಲ್ಯಸೀಮೇಯಂ ರೂಪೋತ್ಪತ್ತೌ ಸುದರ್ಶಿತಾ ।**
**ಕರೋತ್ಯೇಷಾ ಮನೋ ನೄಣಾಂ ಸಸ್ನೇಹಂ ಕೃತಿವಿಭ್ರಮೈಃ ॥ ೧೪೬ ॥**

---

೧೪೨. ಕಣ್ಣುಗಳಿಗೆ ಅಲಂಕಾರವಾದ ಕಡೆಗಣ್ಣುಗಳ (ತುದಿಯು) ಕಿವಿಗಳ ವರೆಗೂ ಬಂದಿದೆ. ಆ ರೂಪ ಸೌಭಾಗ್ಯವನ್ನು ಬಲ್ಲವರು ಅವಕ್ಕೆ ಕಾರಣವಿದೆಯೆಂದು ಹೇಳುತ್ತಾರೆ.

೧೪೩. ಕಿವಿಗಳಿಗೆ ಕಣ್ಣುಗಳು ಅಲಂಕಾರವು. ಕಣ್ಣುಗಳಿಗೆ ಕಿವಿಗಳು ಅಲಂಕಾರವು. ಅವುಗಳ ಅಲಂಕಾರವಾದ ಓಲೆ, ಕಣ್ಣುಕಪ್ಪುಗಳು ಅಲಂಕಾರವಾಗಿ ಬೇಕಿಲ್ಲ.

೧೪೪. ಕಟಾಕ್ಷಗಳಿಗೆ ಈ ಕಣ್ಣು ಕಿವಿಗಳನ್ನು ಸೇರಿಸುವುದು ಯುಕ್ತವಲ್ಲ. ಅವುಗಳ ಸಂಬಂಧಿಗಳು ದುಃಖವನ್ನು ಹೊಂದಿರುವುದು ಯೋಗ್ಯವಲ್ಲವಷ್ಟೆ?

೧೪೫. ಕೆಲವು ವಿಕಾರಗಳು ಪ್ರಕೃತಿ ಸಂಬಂಧವಾದ ಗುಣಗಳಿಂದ ಸರ್ವ ಸುಂದರವಾಗುತ್ತವೆ. ದೊಡ್ಡದಾಗಿರುವ ಕಣ್ಣುಗಳನ್ನು ಹೊಂದಿದ ಕುಂಡಲ ಅಂಜನ ಗಳ ಬಲಾಬಲವು ತಿಳಿಯಿತು.

೧೪೬. ಬ್ರಹ್ಮನಿಂದ ಈ ಕುಶಲತೆಯ ಸಾಮರ್ಥ್ಯವು ರೂಪಿನ ಉತ್ಪತ್ತಿಯಲ್ಲಿ ತೋರಿಸಲ್ಪಟ್ಟಿತು. ಈಕೆಯು ಮನುಷ್ಯರ ಮನಸ್ಸನ್ನು ತನ್ನ ಅಲಂಕಾರದ ವೈಖರಿ ತೆಳಿಂದ ಸ್ನೇಹವುಳ್ಳದ್ದನ್ನಾಗಿ ಮಾಡುತ್ತಾಳೆ.

ಏವಂ ವಿಮರ್ಶತಸ್ತಸ್ಯ ತದ್ರೂಪಾಪಹೃತತ್ವಿಷಃ ।
ನಿರಂತರೋದ್ಗತೈಶ್ಛನ್ನಮಭವತ್ಪುಲಕೈರ್ವಪುಃ ॥ ೧೪೭ ॥

ತಾಂ ವೀಕ್ಷ್ಯ ತಪ್ತಹೇಮಾಭಾಂ ಪದ್ಮಪತ್ರಾಯತೇಕ್ಷಣಾಂ ।
ದೇವಾನಾಮಥ ಯಕ್ಷಾಣಾಂ ಗಂಧರ್ವೋರಗರಕ್ಷಸಾಂ ॥ ೧೪೮ ॥

ನ ಕದಾಚಿನ್ಮಯಾ ದೃಷ್ಟಾ ಈದೃಶೀ ರೂಪಸಂಪದಾ ।
ತ್ರೈಲೋಕ್ಯಾಂತರ್ಗತಂ ಯದ್ಯದ್ವಸ್ತು ತತ್ತತ್ಪ್ರಧಾನತಃ ।
ಸಮಾದಾಯ ವಿಧಾತ್ರಾಸ್ಯಾಃ ಕೃತಾ ರೂಪಸ್ಯ ಸಂಸ್ಥಿತಿಃ ॥ ೧೪೯ ॥

॥ ಇಂದ್ರ ಉವಾಚ ॥

ಕಾಸಿ ಕಸ್ಯ ಕುತಶ್ಚ ತ್ವಮಾಗತಾ ಸುಭ್ರು ಕಥ್ಯತಾಂ ।
ಏಕಾಕಿನೀ ಕಿಮರ್ಥಂ ಹಿ ವೀಥೀಮಧ್ಯೇ ಚ ತಿಷ್ಠಸಿ ॥ ೧೫೦ ॥

ಯಾನ್ಯೇತಾನ್ಯಂಗಸಂಸ್ಥಾನಿ ಭೂಷಣಾನಿ ಬಿಭರ್ಷಿ ಚ ।
ನೈತಾನಿ ತವ ಭೂಷಾಯೈ ತ್ವಮೇತೇಷಾಂ ಹಿ ಭೂಷಣಂ ॥ ೧ ೧ ॥

---

೧೪೭. ಈ ರೀತಿ ಯೋಚಿಸುತ್ತಿರುವ, ಆಕೆಯ ರೂಪದಿಂದ ನಾಶವಾದ ತನ್ನ ತೇಜಸ್ಸುಳ್ಳ, ಈ ಇಂದ್ರನಿಗೆ ಶರೀರವು ಎಡೆಬಿಡದೆ ಉಂಟಾದ ಪುಲಕಗಳುಳ್ಳದ್ದಾಗಿ ಆಯಿತು.

೧೪೮. ಈ ರೀತಿ ಚಿನ್ನದ ಬಣ್ಣಕ್ಕಿರುವ ಕಮಲಾಕ್ಷಿಯನ್ನು ನೋಡಿ ಇಂದ್ರನು, ದೇವತೆಗಳು, ಯಕ್ಷರು, ಗಂಧರ್ವರು, ಉರಗರು, ರಾಕ್ಷಸರು ಇವರಾರಲ್ಲಿಯೂ ಈ ರೀತಿಯಾದ ಸೌಂದರ್ಯವುಳ್ಳವಳನ್ನು ಯಾವಾಗಲೂ ನೋಡಲೇ ಇಲ್ಲವೆಂದುಕೊಂಡನು.

೧೪೯. ಮೂರು ಲೋಕದಲ್ಲಿಯೂ ಇರುವ ಮುಖ್ಯ ಮುಖ್ಯವಾದ ವಸ್ತುಗಳನ್ನು ತಂದು ಬ್ರಹ್ಮನು ಈಕೆಯ ರೂಪವನ್ನು ಮಾಡಿದನು.

೧೫೦. ಇಂದ್ರನು ಹೇಳಿದನು:—ನೀನಾರು? ಯಾರ ಮಗಳು? ಎಲ್ಲಿಂದ ಬಂದೆ? ಹೇಳಮ್ಮ. ಒಬ್ಬಂಟಿಗಳಾಗಿ ನಡುಬೀದಿಯಲ್ಲಿ ನಿಂತಿರುವೆಯಲ್ಲ! ಏಕೆ ಹೇಳು.

೧೫೧. ನೀನು ನಿನ್ನ ಅವಯವಗಳಲ್ಲಿ ಈ ಒಡವೆಗಳನ್ನು ಅಲಂಕಾರಕ್ಕಾಗಿ ಇಟ್ಟಿಲ್ಲ. ಅದಕ್ಕೆ ನೀನು ಅಲಂಕಾರವಾಗಿದ್ದೀಯೆ.

ನ ದೇವೀ ನ ಚ ಗಂಧರ್ವೀ ನಾಸುರೀ ಪನ್ನಗೀ ನ ಚ ।
ಕಿಂನರೀ ದೃಷ್ಟಪೂರ್ವಾ ವಾ ಯಾದೃಶೀ ತ್ವಂ ಸುಲೋಚನೇ ॥ ೧೫೨ ॥

ಉಕ್ತಾ ಮಯಾಸಿ ಬಹುಶಃ ಕಸ್ಮಾದ್ದತ್ಸೇ ಹಿ ನೋತ್ತರಂ ।
ರೂಪಾನ್ವಿತಾ ತು ಸಾ ಕನ್ಯಾ ಶಕ್ರಂ ಪ್ರೋವಾಚ ವೇಪತೀ ॥ ೧೫೩ ॥

॥ ಕನ್ಯೋವಾಚ ॥

ಗೋಪಕನ್ಯಾ ತ್ವಹಂ ವೀರ ವಿಕ್ರೇತುಮಿಹ ಗೋರಸಂ ।
ನವನೀತಮಿದಂ ಶುದ್ಧಂ ದಧಿ ಚೇದಂ ವಿಮಂಡಕಂ ॥ ೧೫೪ ॥

ದಧ್ನಾ ಚೈವಾಥ ತಕ್ರೇಣ ದುಗ್ಧೇನಾಪಿ ಪರಂತಪ ।
ಅರ್ಥೀ ಯೇನಾಸಿ ತ್ವಂ ಬ್ರೂಹಿ ಪ್ರಗೃಹ್ಣೀಷ್ವ ಯಥೇಪ್ಸಿತಂ ॥ ೧೫೫ ॥

ಏವಮುಕ್ತಸ್ತದಾ ಶಕ್ರೋ ಗೃಹೀತ್ವಾ ತ್ವಾಂ ಕರೇ ದೃಢಂ ।
ಅನಯತ್ತಾಂ ವಿಶಾಲಾಕ್ಷೀಂ ಯತ್ರ ಬ್ರಹ್ಮಾ ವ್ಯವಸ್ಥಿತಃ ॥ ೧೫೬ ॥

---

೧೫೨. ದೇವತೆಗಳಲ್ಲಾಗಲಿ, ಗಂಧರ್ವರಲ್ಲಾಗಲಿ, ಅಸುರರಲ್ಲಾಗಲಿ, ಪನ್ನಗರಲ್ಲಾಗಲಿ ನಿನ್ನಂತಹ ಸುಂದರಿಯರನ್ನು ನೋಡಿಲ್ಲ.

೧೫೩. ನಾನು ಅನೇಕ ಬಾರಿ ಮಾತನಾಡಿಸಿದರೂ ಉತ್ತರವನ್ನೇ ಕೊಡುವುದಿಲ್ಲವಲ್ಲ! ಏಕೆ, ಎನ್ನಲು, ಆ ಸುಂದರಿಯು ನಡುಗುತ್ತ ಇಂದ್ರನನ್ನು ಕುರಿತು ಇಂತೆಂದಳು.

೧೫೪. ಕನ್ಯೆಯು ಹೇಳಿದಳು :—ಎಲೈ ವೀರನೇ, ನಾನು ಗೋಪಕನ್ಯೆಯು. ಹಾಲನ್ನು ಮಾರಲು ಇಲ್ಲಿ ಬಂದಿದ್ದೇನೆ. ಇಗೋ ನೋಡು. ಶುದ್ಧವಾದ ಬೆಣ್ಣೆಯಿದೆ. ಚೆನ್ನಾಗಿರುವ ಮೊಸರಿದೆ, ಕಡೆದ ಮಜ್ಜಿಗೆಯಿದೆ.

೧೫೫. ಮೊಸರು, ಮಜ್ಜಿಗೆ, ಹಾಲು, ಬೆಣ್ಣೆ ಇವುಗಳಲ್ಲಿ ನಿನಗೆ ಯಾವುದು ಬೇಕು? ಬೇಕಾದುದನ್ನು ತೆಗೆದುಕೋ.

೧೫೬. ಹೀಗೆ ಹೇಳುತ್ತಿರಲು, ಆಕೆಯನ್ನು ಇಂದ್ರನು ಗಟ್ಟಿಯಾಗಿ ಕೈ ಹಿಡಿದುಕೊಂಡು ಬ್ರಹ್ಮನಿರುವಲ್ಲಿಗೆ ಕರೆದುಕೊಂಡು ಹೋದನು.

ರುದಮಾನಾ ತು ಸಾ ದೇವೀ ಕ್ರೋಶಂತೀ ಪಿತೃಮಾತರೌ ।
ಹಾ ತಾತ ಮಾತರ್ಹಾ ಭ್ರಾತರ್ನಯತ್ಯೇಷ ನರೋ ಬಲಾತ್ ॥ ೧೫೭ ॥

ಯದಿ ತೇಽಸ್ತಿ ಮಯಾ ಕಾರ್ಯಂ ಪಿತರಂ ಮೇ ಪ್ರಯಾಚಯ ।
ಸ ತೇ ದಾಸ್ಯತಿ ಮಾಂ ನೂನಂ ಭವತಃ ಸತ್ಯಮುಚ್ಯತೇ ॥ ೧೫೮ ॥

ಕಾ ಹಿ ನಾಭಿಲಷೇತ್ಕನ್ಯಾ ಭರ್ತಾರಂ ಭಕ್ತಿವತ್ಸಲಂ ।
ನಾದೇಯಮಸ್ತಿ ತೇ ಕಿಂಚಿತ್ಪಿತಾ ಮೇ ಭಕ್ತವತ್ಸಲಃ ॥ ೧೫೯ ॥

ಪ್ರಸಾದಯೇ ತ್ವಾಂ ಶಿರಸಾ ಮಾಂ ಚ ತುಷ್ಟಃ ಪ್ರದಾಸ್ಯತಿ ।
ಪಿತುಶ್ಚಿತ್ತಮವಿಜ್ಞಾಯ ಯದಾತ್ಮಾನಂ ದದಾಮಿ ತೇ ॥ ೧೬೦ ॥

ಧರ್ಮೋ ಹಿ ವಿಪ್ರಣಶ್ಯೇತ ತೇನ ತ್ವಾಂ ನ ಪ್ರಸಾದಯೇ ।
ಭವಿಷ್ಯಾಮಿ ವಶೇ ತುಭ್ಯಂ ಯದಿ ತಾತಃ ಪ್ರದಾಸ್ಯತಿ ॥ ೧೬೧ ॥

---

೧೫೭. ಅಯ್ಯೋ ಅಪ್ಪ, ಅಯ್ಯೋ ಅಮ್ಮ, ಅಯ್ಯೋ ಅಣ್ಣ, ಈ ಮನುಷ್ಯನು ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಿದ್ದಾನೆ. ಎಂದು ಅಳುತ್ತಾ ಕೂಗಿಕೊಂಡಳು.

೧೫೮. ನನ್ನಿಂದ ನಿನಗೆ ಕೆಲಸವಿದ್ದರೆ ನನ್ನ ತಂದೆಯನ್ನು ಕೇಳು. ಅವನು ನನ್ನನ್ನು ನಿನಗೆ ಕೊಡುತ್ತಾನೆ. ನಿನ್ನೊಡನೆ ನಿಶ್ಚಯವನ್ನು ಹೇಳುತ್ತೇನೆ. (ನಿನಗೆ ಸತ್ಯವಾಗಿ ಹೇಳುತ್ತೇನೆ.)

೧೫೯. ಕನ್ಯೆಯಾದ ಯಾವಳು ತಾನೆ ಭಕ್ತಿಯಿಂದ ಕೂಡಿದ ಗಂಡನನ್ನು ಅಪೇಕ್ಷಿಸುವುದಿಲ್ಲ? ನಿನಗೆ ಕೊಡದಿರುವುದು ಯಾವುದೂ ಇಲ್ಲ. ನನ್ನ ತಂದೆಯು ಭಕ್ತವತ್ಸಲನು.

೧೬೦-೧೬೧. ನಿನಗೆ ನಮಸ್ಕರಿಸಿ ಕೇಳಿಕೊಳ್ಳುತ್ತೇನೆ. ತಂದೆಯನ್ನು ಕೇಳಿದರೆ ಅವನು ಸಂತೋಷದಿಂದ ನನ್ನನ್ನು ಕೊಡುತ್ತಾನೆ. ತಂದೆಯ ಮನಸ್ಸನ್ನು ತಿಳಿಯದ ನಾನೇ ನಿನ್ನ ವಶಳಾದರೆ ಧರ್ಮವು ನಾಶವಾಗುತ್ತದೆ. ಆಗ ನನ್ನಿ ಮೇಲೆ ನನಗೆ ಪ್ರೀತಿ ಹುಟ್ಟುವುದಿಲ್ಲ. ತಂದೆಯು ಕೊಟ್ಟರೆ ಆಗ ಸಂತೋಷದಿಂದ ನಿನ್ನ ಅಧೀನಳಾಗಿ ಇರುತ್ತೇನೆ.

**ಇತ್ಥಮಾಭಾಷ್ಯಮಾಣಸ್ತು ತಯಾ ಶಕ್ರೋನಯಚ್ಚ ತಾಂ ।**
**ಬ್ರಹ್ಮಣಃ ಪುರತಃ ಸ್ಥಾಪ್ಯ ಪ್ರಾಹಾಸ್ಯಾರ್ಥೇ ಮಯಾಬಲೇ ॥ ೧೬೨ ॥**

**ಆನೀತಾಸಿ ವಿಶಾಲಾಕ್ಷೀ ಮಾ ಶುಚೋ ವರವರ್ಣಿನಿ ।**
**ಗೋಪಕನ್ಯಾ ಚ ತಂ ದೃಷ್ಟ್ವಾ ಗೌರವರ್ಣಂ ಮಹಾದ್ಯುತಿಂ ॥ ೧೬೩ ॥**

**ಕಮಲಾಕ್ಷಂ ಸುಬಾಹ್ವಂಸಂ ಪುಂಡರೀಕನಿಭೇಕ್ಷಣಂ ।**
**ತಪ್ತಕಾಂಚನಸದ್ಭಿತ್ತಿಸದೃಶಂ ಪೀನವಕ್ಷಸಂ ॥ ೧೬೪ ॥**

**ಮತ್ತೇಭಹಸ್ತವೃತ್ತೋರುಂ ರಕ್ತೋತುಂಗನಖತ್ವಿಷಂ ।**
**ಪ್ರಾಪ್ತಂ ಸಾಮನ್ಯತಾತ್ಮಾನಂ ಮನ್ಮಥಸ್ಯೇಷುಗೋಚರೇ ॥ ೧೬೫ ॥**

**ತತ್ಪ್ರಾಪ್ತಿಹೇತುಕಧಿಯಾ ಗತಚಿತ್ತೇವ ಲಕ್ಷ್ಯತೇ ।**
**ಪ್ರಭುತ್ವಮಾತ್ಮನೋ ದಾನೇ ಗೋಪಕನ್ಯಾಪ್ಯಮನ್ಯತ ॥ ೧೬೬ ॥**

**ಯದ್ಯೇಷ ಮಾಂ ಸುರೂಪತ್ವಾದಿಚ್ಛತ್ಯಾದಾತುಮಾಗ್ರಹಾತ್ ।**
**ನಾಸ್ತಿ ಸೀಮಂತಿನೀ ಕಾಚಿನ್ಮಯಾ ಧನ್ಯತರಾ ಭುವಿ ॥ ೧೬೭ ॥**

---

೧೬೨. ಆಕೆಯು ಹೀಗೆ ಹೇಳುತ್ತಿದ್ದರೂ ಶಕ್ರನು ಆಕೆಯನ್ನು ಕರೆದುಕೊಂಡು ಹೋಗಿ ಬ್ರಹ್ಮನ ಮುಂದೆ ಆಕೆಯನ್ನು ಕೂರಿಸಿ ಎಲೈ ಅಬಲೆಯೇ, ಈತನಿಗೋಸ್ಕರ ನಾನು ನಿನ್ನನ್ನು ಕರೆತಂದೆನು. ಅಮ್ಮ, ದುಃಖಪಡಬೇಡ. ಎಂದನು.

೧೬೩-೧೬೫. ಚೆನ್ನಾಗಿರುವ ತೋಳೂ ಭುಜ ಶಿರಸ್ಸೂ ಉಳ್ಳ, ಪುಂಡರೀಕದಂತೆ ಕಣ್ಣುಗಳುಳ್ಳ, ಕಾದಿರುವ ಚಿನ್ನದ ಗೋಡೆಗಳಂತೆ ಕಾಂತಿಯುಳ್ಳ, ಅಗಲವಾದ ಎದೆಯುಳ್ಳ, ಆನೆಯ ಸೊಂಡಲಿನಂತೆ ಕ್ರಮದಿಂದ ದುಂಡಾಗಿರುವ ತೊಡೆಗಳುಳ್ಳ, ಕೆಂಪಗೆ ಮೇಲಕ್ಕೆ ಎದ್ದುಕೊಂಡಿರುವ ಉಗುರುಗಳ ಕಾಂತಿಯುಳ್ಳ, ಆತನನ್ನು ನೋಡಿ ಆ ಕನ್ನೆಯು ತಾನು ತನ್ನನ್ನು ಮನ್ಮಥನ ಬಾಣಕ್ಕೆ ಸಿಕ್ಕಿದವಳನ್ನಾಗಿ ತಿಳಿದುಕೊಂಡಳು.

೧೬೬. ಆ ಬ್ರಹ್ಮನನ್ನು ಹೊಂದಬೇಕೆಂಬ ಬುದ್ಧಿಯಿಂದ ದುಃಖವು ಹೋದಂತೆ ಕಾಣುತ್ತಾಳೆ. ಆಗ ತನ್ನನ್ನು ಆತನಿಗೆ ಕೊಡುವ ವಿಷಯದಲ್ಲಿ ಆ ಗೋಪಕನ್ಯೆಯು ಒಪ್ಪಿಕೊಂಡಳು.

೧೬೭. ನಾನು ರೂಪವತಿಯೆಂದು ನನ್ನನ್ನು ಬಲವಂತದಿಂದಲಾದರೂ ಈತನು ವರಿಯಾಗಲು ಇಷ್ಟಪಟ್ಟಲ್ಲಿ ಲೋಕದಲ್ಲಿ ನನಗಿಂತಲೂ ಧನ್ಯಳಾದ ಹೆಂಗಸು ಮತ್ತೊಬ್ಬಳಿಲ್ಲ.

**ಅನೇನಾಹಂ ಸಮಾನೀತಾ ಯಚ್ಚ ಕ್ಷುಗೋರ್ಽಚರಂ ಗತಾ ।**
**ಅಸ್ಯ ತ್ಯಾಗೇ ಭವೇನ್ಮೃತ್ಯುರತ್ಯಾಗೇ ಜೀವಿತಂ ಸುಖಂ ॥ ೧೬೮ ॥**

**ಭವೇಯಮದ್ಯ ಯೊನಾಚ್ಚ ವಿರೂಪಾ ದುಃಖದಾಯಿನೀ ।**
**ದೃಶ್ಯತೇ ಚಕ್ಷುಷಾನೇನ ಯಾಪಿ ಯೋಷಿತ್ಪ್ರಸಾದತಃ ॥ ೧೬೯ ॥**

**ಸಾಪಿ ಧನ್ಯಾ ನ ಸಂದೇಹಃ ಕಿಂ ಪುನರ್ಯಾ ಪರಿಷ್ವಜೇತ್ ।**
**ಜಗದ್ರೂಪಮಶೇಷಂ ಹಿ ಪೃಥಕ್ಸಂಚಾರಮಾಶ್ರಿತಂ ॥ ೧೭೦ ॥**

**ಲಾವಣ್ಯಂ ತದಿಹೈಕಸ್ಥಂ ದರ್ಶಿತಂ ವಿಶ್ವಯೋನಿನಾ ।**
**ಅಸ್ಯೋಪಮಾ ಸ್ಮರಃ ಸಾಧ್ವೀ ಮನ್ಮಥಸ್ಯ ಪ್ರಿಯೋಪಮಾ ॥ ೧೭೧ ॥**

**ತಿರಸ್ಕೃತಸ್ತು ಶೋಕೋಽಯಂ ಮಾತಾ ಪಿತಾ ನ ಕಾರಣಂ ।**
**ಯದಿ ಮಾಂ ನೈಷ ಚಾದತ್ತೇ ಸ್ವಲ್ಪಂ ಮಯಿ ನ ಭಾಷತೇ ॥ ೧೭೨ ॥**

---

೧೬೮. ಈ ಇಂದ್ರನು ನನ್ನನ್ನು ಕರೆತಂದನು. ಈತನನ್ನು ನಾನು ನೋಡಿದೆನು. ಇವನನ್ನು ಬಿಟ್ಟರೆ ನನಗೆ ಸಾವು ಖಂಡಿತ. ಸೇರಿಕೊಂಡರೆ ಜೀವಿತವು ಸುಖವನ್ನು ಹೊಂದುತ್ತದೆ.

೧೬೯-೧೭೦. ನಾನು ಈಗ ಹೊರಟುಹೋದರೆ ವಿರೂಪಳಾಗಿಯೂ ದುಃಖಿನಿಯೂ ಆಗುವೆನು. ಅವನ ಅನುಗ್ರಹದಿಂದ ಅವನನ್ನು ನೋಡುತ್ತಿರುವ ಹೆಂಗಸು ಕೂಡ ಧನ್ಯಳು ಎಂಬುದರಲ್ಲಿ ಸಂದೇಹವಿಲ್ಲ. ಅವನನ್ನು ಆಲಿಂಗಿಸಿಕೊಂಡವಳ ವಿಷಯವನ್ನು ಹೇಳಬೇಕೇನು? ಪ್ರಪಂಚದ ಎಲ್ಲಾ ಸುರೂಪಗಳೂ ಸೇರಿಕೊಂಡು ಸಂಚಾರಮಾಡುವುದಕ್ಕೆ ಇವನಲ್ಲಿ ಸೇರಿವೆ.

೧೭೧. ವಿಶ್ವಯೋನಿಯಾದ ಸ್ವಾಮಿಯು ಲಾವಣ್ಯವನ್ನೆಲ್ಲಾ ಒಂದೇ ಜಾಗದಲ್ಲಿಟ್ಟು ತೋರಿಸಿರುವನು. ಇವನು ಮನ್ಮಥನಂತೆಯೂ ರತಿಯಂತೆಯೂ ಇರುವನು.

೧೭೨-೧೭೩. ನನ್ನ ದುಃಖವು ಹೋಯಿತು. ತಾಯಿ ತಂದೆಗಳು ಈಗ ಕಾರಣರಲ್ಲ. ಈತನು ನನ್ನನ್ನು ಪರಿಗ್ರಹಿಸದಿದ್ದರೆ, ಅಥವಾ ನನ್ನನ್ನು ಸ್ವಲ್ಪವಾದರೂ ಮಾತನಾಡಿಸದಿದ್ದರೆ ಇವನನ್ನು ಸ್ಮರಿಸುತ್ತಲೇ ನನಗೆ ಪ್ರಾಣಹೋಗುವುದು. ಇಂತಹವನಲ್ಲಿ

**ಅಸ್ಯಾನುಸ್ಮರಣಾನ್ಮೃತ್ಯುರ್ನ ಭವಿಷ್ಯತಿ ಶಾಪಜಃ ।**
**ಅನಾಗಸಿ ಚ ಪತ್ನ್ಯಾಂ ತು ಕ್ಷಿಪ್ರಂ ಯಾತೇಯಮೀದೃಶೀ ॥ ೧೭೩ ॥**

**ಕುಚಯೋರ್ಮಣಿಶೋಭಾಯೈ ಶುದ್ಧಾಂಬುಜಸಮದ್ಯುತಿಃ ।**
**ಸುಖಮಸ್ಯ ಪ್ರಪಶ್ಯಂತ್ಯಾಂ ಮನೋ ಮೇ ಧ್ಯಾನತಾಂ ಗತಂ ॥ ೧೭೪ ॥**

**ಅಸ್ಯಾಂಗಸ್ಪರ್ಶಸಂಯೋಗಾನ್ನ ವಾಯೋ ಬಹು ಮನ್ಯಸೇ ।**
**ಸ್ಪೃಶನ್ನಟಸಿ ಯೇನ ತ್ವಂ ಶರೀರಂ ಪ್ರಾಣಿನಾಂ ವರಂ ॥ ೧೭೫ ॥**

**ಅಥ ವಾಸ್ಯ ನ ದೋಷೋಽಸ್ತಿ ಯದೃಚ್ಛಾಚಾರಕೋ ಹ್ಯಸಿ ।**
**ಮುಷಿತಃ ಸ್ಮರ ನೂನಂ ತ್ವಂ ಮಾಂ ರಕ್ಷ ಸ್ವಾಂ ಪ್ರಿಯಾಂ ರತಿಂ ॥ ೧೭೬ ॥**

**ತ್ವತ್ತೋಽಪಿ ದೃಶ್ಯತೇ ಯೇನ ರೂಪೇಣ ಮನ್ಮಥಾಧಿಕಃ ।**
**ಮಮಾನೇನ ಮನೋರತ್ನಂ ಸರ್ವಸ್ವಂ ಚ ಹೃತಂ ದೃಢಂ ॥ ೧೭೭ ॥**

---

ಶಾಪಕ್ಕೆ ಕಾರಣವಿರುವುದಿಲ್ಲ. ಹೆಂಡತಿಯು ತಪ್ಪಿಲ್ಲದಿದ್ದ ಪ್ರಾಣಬಿಟ್ಟರೆ ಅವನೂ ಜಾಗ್ರತೆಯಾಗಿ ಸಾಯುವನು. ಲೋಕದ ಸ್ಥಿತಿಯೇ ಹೀಗೆ.

೧೭೪. ಬೆಳ್ಳಗಿರುವ ಕಮಲ (ಪುಂಡರೀಕ) ದಂತಿರುವ ಇವನು ಕುಚಗಳಿಗೆ ಮಣಿಯ ಶೋಭೆಯನ್ನು ಕೊಡುವನು. ಇವನ ಮುಖವನ್ನು ನೋಡುತ್ತಿರಲು ನನ್ನ ಮನಸ್ಸು ಧ್ಯಾನಮಾಡುವಿಕೆಯನ್ನು ಹೊಂದಿರುತ್ತದೆ.

೧೭೫. ಎಲೈ ವಾಯುವೆ, ಈತನ ಅಂಗಸ್ಪರ್ಶದಿಂದ ಮಾತ್ರ ನೀನು ಬಹುಮಾನಕ್ಕೆ ಯೋಗ್ಯನಲ್ಲ. ಅವನನ್ನು ಮುಟ್ಟಿದ ಆ ನೀನು ಪ್ರಾಣಿಗಳ ಶರೀರವನ್ನು ಮುಟ್ಟುತ್ತ ಸುತ್ತಿದರೆ ಆಗ ಬಹುಮಾನಕ್ಕೆ ಯೋಗ್ಯನಾಗುತ್ತೀಯೆ. ಅದು ಶ್ರೇಷ್ಠವು.

೧೭೬. ಇರಲಿ ಎಲೈ ವಾಯುವೇ, ನಿನ್ನ ದೋಷವೇನೂ ಇಲ್ಲ. ಸಿಕ್ಕಿದ ಕಡೆ ಸುತ್ತುತ್ತೀಯೆ. ಎಲೈ ಸ್ಮರನೇ ನೀನು ಕೆಟ್ಟು ಹೋಗುತ್ತೀಯೆ. ನನ್ನನ್ನು ಕಾಪಾಡು ನಿನ್ನ ರತಿಯನ್ನೂ ಕಾಪಾಡಿಕೋ.

೧೭೭. ಎಲೈ ಮನ್ಮಥನೆ, ನಿನ್ನ ರೂಪಕ್ಕಿಂತಲೂ ಉತ್ಕೃಷ್ಟನಾಗಿ ಕಾಣುತ್ತಿದ್ದಾನೆ. ನನ್ನ ಮನೋರತ್ನವೂ ಸರ್ವಸ್ವವೂ ಅವನಿಂದ ಅಪಹರಿಸಲ್ಪಟ್ಟಿದೆ. ನಿಶ್ಚಯವು.

ಶೋಭಾ ಯಾ ದೃಶ್ಯತೇ ವಕ್ತ್ರೇ ಸಾ ಕುತಃ ಶಶಲಕ್ಷ್ಮಣಿ ।
ನೋಪಮಾ ಸಕಲಂಕಸ್ಯ ನಿಷ್ಕಲಂಕೇನ ದೃಶ್ಯತೇ ॥ ೧೭೮ ॥

ಸಮಾನಭಾವತಾಂ ಯಾತಿ ಪಂಕಜಂ ನಾಸ್ಯ ನೇತ್ರಯೋಃ ।
ನೋಪಮಾ ಜಲಶಂಕೇನ ಪ್ರಾಪ್ತಶ್ರವಣಶಂಖಯೋಃ ॥ ೧೭೯ ॥

ವಿದ್ರುಮೋಽಪ್ಯಧರಸ್ಯಾಸ್ಯ ಲಭತೇ ನೋಪಮಾಂ ಧ್ರುವಂ ।
ಆತ್ಮಸ್ಥಮಮೃತಂ ಹ್ಯೇಷ ಸ್ರವತೀವೇಷ್ಟಕಂ ಧೃವಂ ॥ ೧೮೦ ॥

ಯದಿ ಕಿಂಚಿಚ್ಛುಭಂ ಕರ್ಮ ಜನ್ಮಾಂತರಶತೈಃ ಕೃತಂ ।
ತತ್ಪ್ರಸಾದಾತ್ಸುಮಾನ್ಭರ್ತಾ ಭವತ್ವೇಷ ಮಮೇಪ್ಸಿತಃ ॥ ೧೮೧ ॥

ಏವಂ ಚಿಂತಾಪರಾಧೀನಾ ಯಾವತ್ಸಾ ಗೋಪಕನ್ಯಕಾ ।
ತಾವದ್ಬ್ರಹ್ಮಾ ಹರಿಂ ಪ್ರಾಹ ಯಜ್ಞಾರ್ಥಂ ಸತ್ವರಂ ವಚಃ ॥ ೧೮೨ ॥

---

೧೭೮. ಇವನ ಮುಖದಲ್ಲಿ ಕಾಣುವ ಶೋಭೆಯು ಚಂದ್ರನಲ್ಲಿ ಎಲ್ಲಿದೆ? ಕಳಂಕನಾಗಿರುವ ಅವನಿಗೂ ನಿಷ್ಕಳಂಕವಾದ ಇವನ ಮುಖಕ್ಕೂ ಉಪಮಾನವೆಲ್ಲಿ ಬಂದೀತು?

೧೭೯. ಕಮಲವು ಇವನ ಕಣ್ಣುಗಳಿಗೆ ಸಮವಾಗುವುದೇ ಇಲ್ಲ. ನೀರಿನಲ್ಲಿ ಹುಟ್ಟಿದ ಶಂಖವು ಇವನ ಕಿವಿಗಳಿಗೆ ಸಮವಾಗುವುದಿಲ್ಲ.

೧೮೦. ಹವಳವೂ ಕೂಡ ಇವನ ಕೆಳದುಟಿಗೆ ಉಪಮಾನವನ್ನು ಹೊಂದುವುದಿಲ್ಲ. ಇವನ ಅಧರವು ಇಷ್ಟವಾದ ಅಮೃತವನ್ನು ಸುರಿಸುವಂತಿದೆ.

೧೮೧. ನಾನು ಸಾವಿರಾರು ಜನ್ಮಗಳಿಂದ ಶುಭಕರ್ಮಗಳನ್ನು ಮಾಡಿದ್ದರೆ ಅವರ ಅನುಗ್ರಹದಿಂದ ಇವನು ನನಗೆ ಗಂಡನಾಗಲಿ.

೧೮೨. ಆ ಗೋಪಕನ್ಯೆಯು ಈ ರೀತಿ ಚಿಂತಿಸುತ್ತಿರಲು ಅಷ್ಟರೊಳಗೆ ಬ್ರಹ್ಮನು ಹರಿಯನ್ನು ಕುರಿತು ಯಜ್ಞಕ್ಕೋಸ್ಕರ ಅವಸರ ಪಡಿಸುತ್ತ ಇಂತೆಂದನು.

**ದೇವೀ ಚೈಷಾ ಮಹಾಭಾಗ ಗಾಯತ್ರೀ ನಾಮತಃ ಪ್ರಭೋ ।**
**ಏವಮುಕ್ತೇ ತದಾ ವಿಷ್ಣುರ್ಬ್ರಹ್ಮಾಣಂ ಪ್ರೋಕ್ತವಾನಿದಂ ॥ ೧೮೩ ॥**

**॥ ವಿಷ್ಣುರುವಾಚ ॥**

**ತದೇತಾಮುದ್ವಹಸ್ವಾದ್ಯ ಮಯಾ ದತ್ತಾಂ ತವ ಪ್ರಭೋ ।**
**ಗಾಂಧರ್ವೇಣ ವಿವಾಹೇನ ವಿಕಲ್ಪಂ ಮಾ ಕೃಥಾಶ್ಚಿರಂ ॥ ೧೮೪ ॥**

**ಅನುಗೃಹಾಣ ದೇವೇಶ ಅಸ್ಯಾಃ ಪಾಣಿಮನಾಕುಲಂ ।**
**ಗಾಂಧರ್ವೇಣ ವಿವಾಹೇನ ಉಪಯೇಮೇ ಪಿತಾಮಹಃ ॥ ೧೮೫ ॥**

**ತಾಮವಾಪ್ಯ ತದಾ ಬ್ರಹ್ಮಾ ಜಗಾದಾಧ್ವರ್ಯುಸತ್ತಮಂ ।**
**ಕೃತಾ ಪತ್ನೀ ಮಯಾ ಹ್ಯೇಷಾ ಸದನೇ ಮೇ ನಿವೇಶಯ ॥ ೧೮೬ ॥**

**ಮೃಗಶೃಂಗಧರಾ ಬಾಲಾ ಕ್ಷೌಮವಸ್ತ್ರಾವಗುಂಠಿತಾ ।**
**ಪತ್ನೀಶಾಲಾಂ ತದಾ ನೀತಾ ಋತ್ವಿಗ್ಭಿರ್ವೇದಪಾರಗೈಃ ॥ ೧೮೭ ॥**

---

೧೮೩. ಎಲೈ ಪ್ರಭುವೆ, ಈಕೆಯು ನನ್ನ ಹೆಂಡತಿಯು. ಇವಳ ಹೆಸರು ಗಾಯತ್ರಿಯೆಂದು. ಬ್ರಹ್ಮನು ಹೀಗೆನ್ನಲು ಆಗ ವಿಷ್ಣುವು ಬ್ರಹ್ಮನನ್ನು ಕುರಿತು ಇಂತೆಂದನು.

೧೮೪. ವಿಷ್ಣುವು ಹೇಳಿದನು :—ಎಲೈ ಬ್ರಹ್ಮನೇ, ಈಗ ನಾನು ಕೊಡುತ್ತೇನೆ ಈಕೆಯನ್ನು ಗಾಂಧರ್ವ ವಿವಾಹದಿಂದ ಮದುವೆಯಾಗು. ಸಂದೇಹವನ್ನು ಬಿಡು. ಸಾವಕಾಶ ಮಾಡಬೇಡ.

೧೮೫. ಎಲೈ ದೇವೇಶನಾದ ವಿಷ್ಣುವೇ ಅನುಗ್ರಹಿಸು. ಈಕೆಯ ಕೈಯನ್ನು ನನಗೆ ಕೊಡು ಎನ್ನಲು, ವಿಷ್ಣುವು ಹಾಗೇ ಮಾಡಿದನು. ಬ್ರಹ್ಮನು ಗಾಂಧರ್ವ ವಿವಾಹದಿಂದ ಅವಳನ್ನು ಮದುವೆಯಾದನು.

೧೮೬. ಬ್ರಹ್ಮನು ಆಕೆಯನ್ನು ಮದುವೆಯಾಗಿ ಅಧ್ವರ್ಯುವನ್ನು ಕುರಿತು ಈಕೆಯನ್ನು ಹೆಂಡತಿಯನ್ನಾಗಿ ಮಾಡಿಕೊಂಡಿದ್ದೇನೆ. ಈಕೆಯನ್ನು ಸದನದಲ್ಲಿರಿಸು.

೧೮೭. ಆಗ ಆಕೆಗೆ ಮೃಗವಕೊಂಬನ್ನು ಕಟ್ಟಿ, ರೇಷ್ಮೆಯ ವಸ್ತ್ರವನ್ನು ಮೇಲು ಹೊದ್ದಿಕೆಯನ್ನಾಗಿ ಹೊದ್ದಿಸಿ ವೇದಪಾರಗರಾದ ಋತ್ವಿಕ್ಕುಗಳು ಆಕೆಯನ್ನು ಪತ್ನೀ ಶಾಲೆಗೆ ಕರೆದುಕೊಂಡು ಹೋದರು.

**ಔದುಂಬರೇಣ ದಂಡೇನ ಪ್ರಾವೃತೋ ಮೃಗಚರ್ಮಣಾ ।**
**ಮಹಾಧ್ವರೇ ತದಾ ಬ್ರಹ್ಮಾ ಧಾಮ್ನಾಪಾರೇಣ ಶೋಭತೇ ॥ ೧೮೮ ॥**

**ಪ್ರಾರಬ್ಧಂ ಚ ತತೋ ಹೋತ್ರಂ ಬ್ರಾಹ್ಮಣೈರ್ವೇದಪಾರಗೈಃ ।**
**ಭೃಗುಣಾ ಸಹಿತೈಃ ಕರ್ಮ ವೇದೋಕ್ತಂ ತೈಃ ಕೃತಂ ತದಾ ॥ ೧೮೯ ॥**

**ತಥಾ ಯುಗಸಹಸ್ರಂ ತು ಸ ಯಜ್ಞಃ ಪುಷ್ಕರೇಽಭವತ್ ॥ ೧೯೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಬ್ರಹ್ಮಯಜ್ಞಗಾಯತ್ರೀ ಸಂಗ್ರಹಕಥನಂ ನಾಮ ಷೋಡಶೋಽಧ್ಯಾಯಃ**



---

೧೮೮. ಅತ್ತಿಯ ಕೋಲನ್ನು ಹಿಡಿದು ಕೃಷ್ಣಾಜನವನ್ನು ಹೊದ್ದುಕೊಂಡಿರುವ ಆ ಬ್ರಹ್ಮನು ಆ ಯಾಗದಲ್ಲಿ ಅಪಾರವಾದ ಕಾಂತಿಯಿಂದ ಶೋಭಿಸಿವನು.

೧೮೯-೧೯೦. ಆಗ ಭೃಗುವಿನೊಡನೆ ಕೂಡಿದ ವೈದಿಕ ಬ್ರಾಹ್ಮಣರು ಹೋತ್ರವನ್ನು ಪ್ರಾರಂಭಿಸಿದರು. ವೇದದಲ್ಲಿ ಹೇಳಿರುವಂತೆ ಮಾಡಿದರು. ಹೀಗೆ ನಡೆದ ಯಜ್ಞವು ಪುಷ್ಕರದಲ್ಲಿ ಸಾವಿರ ಯುಗಗಳವರೆಗೂ ನಡೆಯಿತು.

ಇಲ್ಲಿಗೆ ಶ್ರೀ ಪದ್ಮ ಮಹಾಪುರಾಣದ ಸೃಷ್ಟಿಖಂಡದಲ್ಲಿ ಬ್ರಹ್ಮಯಜ್ಞ ಗಾಯತ್ರಿಯ ಮದುವೆ ಎಂಬ ಹೆಸರುಳ್ಳ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸಪ್ತದಶೋಽಧ್ಯಾಯಃ

॥ ಭೀಷ್ಮ ಉವಾಚ ॥

ತಸ್ಮಿನ್ಯಜ್ಞೇ ಕಿಮಾಶ್ಚರ್ಯಂ ತದಾಸೀದ್ದ್ವಿಜಸತ್ತಮ ।
ಕಥಂ ರುದ್ರಃ ಸ್ಥಿತಸ್ತತ್ರ ವಿಷ್ಣುರ್ವಾಪಿ ಸುರೋತ್ತಮಃ ॥ ೧ ॥

ಗಾಯತ್ರ್ಯಾ ಕಿಂ ಕೃತಂ ತತ್ರ ಪತ್ನೀತ್ವೇ ಸ್ಥಿತಯಾ ತದಾ ।
ಆಭೀರೈಃ ಕಿಂ ತು ತತ್ವಜ್ಞೈಃ ಕೃತಂ ಜ್ಞಾತ್ವಾ ಪುನರ್ಮುನೇ ॥ ೨ ॥

ಏತತ್ಸರ್ವಂ ಸಮಾಚಕ್ಷ್ವ ಯಥಾ ಜ್ಞಾತಂ ತಥಾ ಕೃತಂ ।
ಆಭೀರೈರ್ಬ್ರಹ್ಮಣಾ ಚಾಪಿ ಏತನ್ಮೇ ಕೌತುಕಂ ಮಹತ್ ॥ ೩ ॥

---

## ಹದಿನೇಳನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು:— ಎಲೈ ಬ್ರಾಹ್ಮಣ ಶ್ರೇಷ್ಠನೆ, ಆ ಯಾಗದಲ್ಲಿ ಆಗ ಏನು ಆಶ್ಚರ್ಯ ನಡೆಯಿತು? ರುದ್ರನು ಏನು ಮಾಡುತ್ತಿದ್ದನು? ವಿಷ್ಣುವು ಏನು ಮಾಡುತ್ತಿದ್ದನು?

೨. ಆಗ ಹೆಂಡತಿಯಾದ ಗಾಯತ್ರಿಯು ಏನು ಮಾಡುತ್ತಿದ್ದಳು? ವಿಷಯಗಳನ್ನು ತಿಳಿದುಕೊಂಡ ಆ ಗೊಲ್ಲರು ಆ ಮೇಲೆ ಏನು ಮಾಡಿದರು?

೩. ನಿನಗೆ ತಿಳಿದಿರುವಂತೆ ಅಲ್ಲಿ ನಡೆದಂತೆ ಎಲ್ಲವನ್ನೂ ನನಗೆ ಹೇಳು. ಗೊಲ್ಲರು, ಬ್ರಹ್ಮನು, ಏನು ಮಾಡಿದರು? ನನಗೆ ಬಹು ಆಸೆಯಿದೆ ಹೇಳು.

॥ ಪುಲಸ್ತ್ಯ ಉವಾಚ ॥

ತಸ್ಮಿನ್ಯಜ್ಞೇ ಯದಾಶ್ಚರ್ಯಂ ವೃತ್ತಮಾಸೀನ್ನರಾಧಿಪ ।
ಕಥಯಿಷ್ಯಾಮಿ ತತ್ಸರ್ವಂ ಶೃಣುಷ್ವೈಕಮನಾ ನೃಪ ॥ ೪ ॥

ರುದ್ರಸ್ತು ಮಹದಾಶ್ಚರ್ಯಂ ಕೃತವಾನ್ಸ್ವೈ ಸದೋ ಗತಃ ।
ಜ್ವಾಲಾರೂಪಧರೋ ದೇವಃ ಸ್ಥಿತೋಽಸೌ ದ್ವಿಜಸಂನಿಧೌ ॥ ೫ ॥

ವಿಷ್ಣುನಾ ನ ಕೃತಂ ಕಿಂಚಿತ್ಪ್ರಾಧಾನ್ಯೇನ ಯತಃ ಸ್ಥಿತಃ ।
ನಾಮ ಶ್ರುತ್ವಾ ಚ ತೇ ಗೋಪಾ ಜ್ಞಾತ್ವಾ ಗೋಪಕುಮಾರಿಕಾಃ ॥ ೬ ॥

ಗೋಪ್ಯಶ್ಚ ತಾಸ್ತದಾ ಸರ್ವಾ ಆಗತಾ ಬ್ರಹ್ಮಣೋಽನ್ತಿಕಂ ।
ದೃಷ್ಟ್ವಾ ತಾಂ ಮೇಖಲಾಬದ್ಧಾಂ ಯಜ್ಞಶಾಲಾವ್ಯವಸ್ಥಿತಾಂ ॥ ೭ ॥

ಹಾ ಪುತ್ರೀತಿ ತದಾ ಮಾತಾ ಪಿತಾ ಹಾ ಪುತ್ರಿಕೇತಿ ಚ ।
ಸ್ವಸೇತಿ ಬಾಂಧವಾಃ ಸರ್ವೇ ಸಖ್ಯಃ ಸಖ್ಯೇತಿ ಹಾ ಸಖಿ ॥ ೮ ॥

---

೪. ಪುಲಸ್ತ್ಯನು ಹೇಳಿದನು:—ಆ ಯಜ್ಞದಲ್ಲಿ ಉಂಟಾದ ಆಶ್ಚರ್ಯವನ್ನು ಹೇಳುತ್ತೇನೆ. ಎಲೈ ದೊರೆಯೇ, ಒಂದೇ ಮನಸ್ಸಿನಿಂದ ಕೇಳು.

೫. ರುದ್ರನು ಅಲ್ಲಿ ಬಹು ಆಶ್ಚರ್ಯವನ್ನು ಮಾಡಿದನು, ಕೇಳು. ಅವನು ಸದಸ್ಸಿಗೆ ಹೋಗಿ ಅಲ್ಲಿದ್ದ ಬ್ರಾಹ್ಮಣರ ಹತ್ತಿರ ಜ್ವಾಲೆಯ ರೂಪದಿಂದ ನಿಂತನು.

೬. ವಿಷ್ಣುವು ಪ್ರಧಾನನಾಗಿದ್ದುದರಿಂದ ಏನನ್ನೂ ಮಾಡಲಿಲ್ಲ. ಇತ್ತ ಆ ಗೋಪರೂ, ಗೋಪಸ್ತ್ರೀಯರೂ ಈ ವಿಷಯವನ್ನು ತಿಳಿದು ಎಲ್ಲರೂ ಬ್ರಾಹ್ಮಣನ ಬಳಿಗೆ ಬಂದರು.

೭-೮. ಯಜ್ಞಶಾಲೆಯಲ್ಲಿ ಮೌಂಜಿಯನ್ನು ಕಟ್ಟಿಕೊಂಡಿರುವ ಆಕೆಯನ್ನು ನೋಡಿ, ತಾಯಿಯು ಅಯ್ಯೋ ಮಗಳೆ ಎಂದೂ, ತಂದೆಯು ಅಯ್ಯೋ ಪುತ್ರಿ ಎಂದೂ, ಬಂದುಗಳು ಅಯ್ಯೋ ತಂಗಿ ಎಂದೂ, ಸಖಿಯರು ಹಾ ಸಖಿ ಎಂದೂ ಕೂಗುತ್ತಾ ಬಂದರು.

**ಕೇನ ತ್ವಮಿಹ ಚಾನೀತಾ ಕೇನ ಕಸ್ಮಾತ್ತ್ವ ವೇಷ್ಟಿತಾ ।**
**ಮುಂಜಾಂ ತ್ರಿವೃತಾಂ ಕೃತ್ವಾ ತು ಕುತ್ರ ಮುಕ್ತ್ವಾ ತು ತಂ ಬಲಿಂ　॥ ೯ ॥**

**ಕೇನ ಚೇಯಂ ಜಟಾ ಪುತ್ರಿ ರಕ್ತಸೂತ್ರಾವಕಲ್ಪಿತಾ ।**
**ಏವಂವಿಧಾನಿ ವಾಕ್ಯಾನಿ ಶ್ರುತ್ವೋವಾಚ ಪುರಂದರಃ ॥**
**ಪ್ರತಿಷಿಧ್ಯ ತು ತಾನೇವಂ ಸರ್ವಾನೇವ ಪ್ರಸಾದಯನ್　॥ ೧೦ ॥**

**॥ ಇಂದ್ರ ಉವಾಚ ॥**

**ಇಹ ಚಾಸ್ಮಾಭಿರಾನೀತಾ ಪತ್ನ್ಯರ್ಥಂ ವಿನಿಯೋಜಿತಾ ।**
**ಬ್ರಹ್ಮಣಾ ನಂದಿತಾ ಬಾಲಾ ಪ್ರಲಾಪಂ ಮಾ ಕೃಥಾಸ್ತ್ವಿಹ　॥ ೧೧ ॥**

**ಪುಣ್ಯಾ ತ್ವೇಷಾ ಸುಭಾಗ್ಯಾ ಚ ಸರ್ವೇಷಾಂ ಕುಲನಂದಿನೀ ।**
**ಪುಣ್ಯಾ ಯದೇಷಾ ನ ಭವೇತ್ಕಥಮಾಗಚ್ಛತೇ ಸದಃ　॥ ೧೨ ॥**

---

೯. ಅಮ್ಮ ನಿನ್ನನ್ನು ಇಲ್ಲಿಗೆ ಯಾರು ತಂದರು? ನೊದೆಯನ್ನು ಮೂರಾಗಿ ಹೊಸೆದು ಯಾರು ಏತಕ್ಕೆ ಕಟ್ಟಿದರು? ಆ ಬಲಿ ಕೊಡುವ ಪ್ರಾಣಿಯನ್ನು ಬಿಟ್ಟು ನಿನಗೇಕೆ ಈ ಜಟೆಯನ್ನು ಕಲ್ಪಿಸಿದ್ದಾರೆ? ಅಲ್ಲದೆ ಈ ಕೆಂಪು ಹುರಿಯಿಂದಬೇಕೆ ಕಟ್ಟಿದ್ದಾರೆ?

೧೦. ಈ ರೀತಿಯಾದ ಮಾತುಗಳನ್ನು ಕೇಳಿ ಇಂದ್ರನು ಅವರೆಲ್ಲರನ್ನು ತಡೆದು ಸಮಾಧಾನ ಪಡಿಸುತ್ತಾ ಇಂತೆಂದನು.

೧೧. ಇಂದ್ರನು ಹೇಳಿದನು:—ಇಲ್ಲಿಗೆ ನಾವೇ ತಂದೆವು. ಬ್ರಹ್ಮನಿಗೆ ಹೆಂಡತಿಯನ್ನಾಗಿ ಉಪಯೋಗಿಸಿಕೊಂಡೆವು. ಬ್ರಹ್ಮನು ಆ ಹುಡುಗಿಯನ್ನು ಸಂತೋಷ ಪಡಿಸಿದನು. ಸುಮ್ಮನೆ ಬೊಗಳ ಬೇಡ.

೧೨. ಈಕೆಯು ಪುಣ್ಯವಂತೆಯು. ಭಾಗ್ಯವಂತೆಯು. ಎಲ್ಲರನ್ನೂ ಸಂತೋಷ ಪಡಿಸುವವಳು. ಈಕೆಯು ಪುಣ್ಯವತಿಯಾಗದಿದ್ದರೆ ಈ ಸದಸ್ಸಿಗೆ ಹೇಗೆ ಬಂದಳು?

ಏವಂ ಜ್ಞಾತ್ವಾ ಮಹಾಭಾಗ ನ ತ್ವಂ ಶೋಚಿತುಮರ್ಹಸಿ ।
ಗೋಪಾಂಸ್ತ್ವವಷ್ಟಭ್ಯ ತದಾ ಶಕ್ರವಾಕ್ಯಾದನಂತರಂ ॥ ೧೩ ॥

ಉವಾಚ ಸ್ನಿಗ್ಧಯಾ ವಾಚಾ ಪ್ರತಿನಂಧ್ಯ ಹರಿಃ ಪುನಃ ॥ ೧೪ ॥

॥ ವಿಷ್ಣುರುವಾಚ ॥

ಭೋ ಭೋ ಗೋಪ ಸದಾಚಾರ ನ ತ್ವಂ ಶೋಚಿತುಮರ್ಹಸಿ ।
ಕನ್ಯೈಷಾ ತೇ ಮಹಾಭಾಗಾ ಪ್ರಾಪ್ತಾ ದೇವಂ ವಿರಿಂಚಿನಂ ॥ ೧೫ ॥

ಯೋಗಿನೀ ಯೋಗಯುಕ್ತಾ ಯೇ ಬ್ರಾಹ್ಮಣಾ ವೇದಪಾರಗಾಃ ।
ನ ಲಭಂತೇ ಪ್ರಾರ್ಥಮಾನಾಸ್ತಾಂ ಗತಿಂ ದುಹಿತಾಗತಾ ॥ ೧೬ ॥

ಕರ್ಮವಂತಂ ಸದಾಚಾರಂ ಭವಂತಂ ಧರ್ಮವತ್ಸಲಂ ।
ಮಯಾ ಜ್ಞಾತ್ವಾ ತಥಾ ಕನ್ಯಾ ದತ್ತಾ ಚೈಷಾ ವಿರಿಂಚಿನೇ ॥ ೧೭ ॥

---

೧೩-೧೪. ಇದನ್ನು ತಿಳಿದ ಮೇಲೆ ನೀನು ದುಃಖಿಸಬಾರದು. ಇಂದ್ರನು ಈ ರೀತಿ ಹೇಳಿದ ಮೇಲೆ ಹರಿಯು ಗೋಪರನ್ನು ತಡೆದು ಒಳ್ಳೆಯ ಮಾತಿನಿಂದ ಇಂತೆಂದನು.

೧೫. ವಿಷ್ಣುವು ಹೇಳಿದನು:—ಎಲೈ ಸದಾಚಾರವುಳ್ಳ ಗೋಪನೆ, ನೀನು ದುಃಖಿಸುವುದು ಯೋಗ್ಯವಲ್ಲ. ನಿನ್ನ ಮಗಳು ಮಹಾಪುಣ್ಯವತಿಯು, ದೇವನಾದ ಬ್ರಹ್ಮನನ್ನು ಹೊಂದಿದಳು.

೧೬. ಯೋಗಿನಿಯರೂ, ಯೋಗಯುಕ್ತರೂ, ವೇದಪಾರಗರೂ ಆದ ಬ್ರಾಹ್ಮಣರು ಕೂಡ ನಿನ್ನ ಮಗಳು ಹೊಂದಿರುವ ಗತಿಯನ್ನು ಪ್ರಾರ್ಥಿಸಿಕೊಂಡರೂ. ಹೊಂದುವುದಿಲ್ಲ. ಅಂತಹ ಗತಿಯನ್ನು ನಿನ್ನ ಮಗಳು ಹೊಂದಿದ್ದಾಳೆ.

೧೭. ಕರ್ಮವಂತನೂ, ಸದಾಚಾರವುಳ್ಳವನೂ, ಧರ್ಮವತ್ಸಲನೂ ನೀನು ಆಗಿರುವುದನ್ನು ತಿಳಿದೇ ನಾನು ಬ್ರಹ್ಮನಿಗೆ ನಿನ್ನ ಮಗಳನ್ನು ಕೊಟ್ಟೆನು.

ಅನಯಾ ತಾರಿತಾ ದೇವ್ಯಾ ದಿವ್ಯಾ ಲೋಕಾ ಮಹೋದಯಾಃ ।
ಯುಷ್ಮಾಕಂ ಚ ಕುಲೇ ಚಾಪಿ ದೇವಕಾರ್ಯಾರ್ಥಸಿದ್ಧಯೇ ॥ ೧೮ ॥

ಅವತಾರಂ ಕರಿಷ್ಯೇಽಹಂ ಸಾ ಕ್ರೀಡಾ ತು ಭವಿಷ್ಯತಿ ।
ಯದಾ ನಂದಪ್ರಭೃತಯೋ ಹ್ಯವತಾರಂ ಧರಾತಲೇ ॥ ೧೯ ॥

ಕರಿಷ್ಯಂತಿ ತದಾ ಚಾಹಂ ವಸಿಷ್ಯೇ ತೇಷು ಮಧ್ಯತಃ ।
ಯುಷ್ಮಾಕಂ ಕನ್ಯಕಾಃ ಸರ್ವಾ ರಮಿಷ್ಯಂತೇ ಮಯಾ ಸಹ ॥ ೨೦ ॥

ತತ್ರ ದೋಷೋ ನ ಭವಿತಾ ನ ದ್ವೇಷೋ ನ ಚ ಮತ್ಸರಃ ।
ಕರಿಷ್ಯಂತಿ ತದಾ ಗೋಪಾ ಭಯಂ ಚ ನ ಮನುಷ್ಯಕಾಃ ॥ ೨೧ ॥

ನ ವಾಸಾಂ ಭವಿತಾ ದೋಷಃ ಕರ್ಮಣಾನೇನ ಕರ್ಹಿಚಿತ್ ।
ಶ್ರುತ್ವಾ ವಾಕ್ಯಂ ತದಾ ವಿಷ್ಣುಂ ಪ್ರಣಿಪತ್ಯಾಥ ಸಾದರಂ ॥ ೨೨ ॥

॥ ಗೋಪಾ ಊಚುಃ ॥

ಏವಮೇಷ ವರೋ ದೇಯೋ ಯೋ ದತ್ತೋ ಭವಿತಾ ಹಿ ಮೇ ।
ಅವತಾರಃ ಕುಲೇಽಸ್ಮಾಕಂ ಕರ್ತವ್ಯೋ ಧರ್ಮಸಾಧನಃ ॥ ೨೩ ॥

---

೧೮. ಈಕೆಯಿಂದ ನೀವು ಉದ್ಧರಿಸಲ್ಪಟ್ಟಿದ್ದೀರಿ, ನಿಮಗೆ ಉತ್ತಮವಾದ ಲೋಕಗಳು ಸಿಕ್ಕುತ್ತವೆ. ದೇವತೆಗಳ ಕಾರ್ಯಸಿದ್ಧಿಗೋಸ್ಕರ ನಿಮ್ಮ ಕುಲದಲ್ಲಿ ಅವತಾರ ಮಾಡುತ್ತೇನೆ. ಅದೂ ಒಂದು ಕ್ರೀಡೆಯಾಗುತ್ತದೆ.

೧೯-೨೦. ನಂದಪ್ರಭೃತಿಗಳು ಭೂಲೋಕದಲ್ಲಿ ಅವತಾರ ಮಾಡುವಾಗ ನಾನೂ ಅವತರಿಸಿ ಅವರ ಮಧ್ಯದಲ್ಲಿರುತ್ತೇನೆ. ಆಗ ನಿಮ್ಮ ಹೆಣ್ಣುಮಕ್ಕಳೆಲ್ಲರೂ ನನ್ನೊಡನೆ ಕ್ರೀಡಿಸುತ್ತಾರೆ.

೨೧. ಆಗ ಅದು ದೋಷವಾಗುವುದೂ ಇಲ್ಲ. ದ್ವೇಷವಾಗಲಿ ಮತ್ಸರವಾಗಲಿ ಇರುವುದಿಲ್ಲ. ಆಗ ಗೋಪರೂ ಜನಗಳೂ ಭಯವನ್ನು ಹೊಂದುವುದಿಲ್ಲ.

೨೨. ಈ ಕೆಲಸದಿಂದ ಈ ಹೆಂಗಸರಿಗೆ ದೋಷವು ಯಾವಾಗಲೂ ಬರುವುದೇ ಇಲ್ಲ. ಈ ಮಾತನ್ನು ಕೇಳಿ ಅವರು ವಿಷ್ಣುವಿಗೆ ನಮಸ್ಕರಿಸಿ ಇಂತೆಂದರು.

೨೩. ಗೋಪರು ಹೇಳಿದರು :—ನೀನು ನಮಗೆ ಕೊಟ್ಟ ವರವೇ ಯೋಗ್ಯವಾದುದು. ಅದು ಕೊಡತಕ್ಕದ್ದೇ. ನಮ್ಮ ಕುಲದಲ್ಲಿ ಅವತರಿಸಿ ಧರ್ಮವನ್ನು ರಕ್ಷಿಸಬೇಕು.

ಭವತೋ ದರ್ಶನಾದೇವ ಭವಾಮಃ ಸ್ವರ್ಗವಾಸಿನಃ
ಶುಭದಾ ಕನ್ಯಕಾ ಚೈಷಾ ತಾರಣೇ ನಃ ಕುಲೈಃ ಸಹ ॥ ೨೪ ॥

ಏವಂ ಭವತು ದೇವೇಶ ವರದಾನಂ ವಿಭೋಸ್ತ್ವ ।
ಅನುನೀತಾಸ್ತದಾ ಗೋಪಾಃ ಸ್ವಯಂ ದೇವೇನ ವಿಷ್ಣುನಾ ॥ ೨೫ ॥

ಬ್ರಹ್ಮಣಾಪ್ಯೇವಮೇವಂ ತು ವಾಮಹಸ್ತೇನ ಭಾಷಿತಂ ।
ತ್ರಪಾನ್ವಿತಾ ದರ್ಶನೇ ತು ವಧೂನಾಂ ವರವರ್ಣಿನೀ ॥ ೨೬ ॥

ಕೇನಾಹಂ ತು ಸಮಾಖ್ಯಾತಾ ಯೇನೇಮಂ ದೇಶಮಾಗತಾಃ ।
ದೃಷ್ಟ್ವಾ ತಾಂಶ್ಚ ತದಾ ಪ್ರಾಹ ಗಾಯತ್ರೀ ಗೋಪಕನ್ಯಕಾ ॥ ೨೭ ॥

ವಾಮಹಸ್ತೇನ ತಾಃ ಸರ್ವಾಃ ಪ್ರಣಿಪಾತಪುರಸ್ಸರಂ ॥ ೨೮ ॥

॥ ಗಾಯತ್ರ್ಯುವಾಚ ॥

ಅತ್ರ ಚಾಹಂ ಸ್ಥಿತಾ ಮಾತರ್ಬ್ರಹ್ಮಾಣಂ ಸಮುಪಾಗತಾ ॥
ಭರ್ತಾ ಲಬ್ಧೋ ಮಯಾ ದೇವಃ ಸರ್ವಸ್ಯಾದ್ಯೋ ಜಗತ್ಪತಿಃ ॥ ೨೯ ॥

---

೨೪. ಈ ಹುಡುಗಿಯು ಶುಭವನ್ನುಂಟುಮಾಡುತ್ತಾಳೆ. ನಮ್ಮಗಳನ್ನು ನಮ್ಮ ಕುಲರೊಂದಿಗೆ ಉದ್ಧಾರ ಮಾಡುತ್ತಾಳೆ.

೨೫. ಸ್ವಾಮಿ, ಹಾಗೆ ಆಗಲಿ. ನೀನು ಕೊಟ್ಟ ವರವು ಉತ್ತಮವಾದುದೇ ಆಗಿದೆ. ಹೀಗೆಂದು ವಿಷ್ಣುವಿನಿಂದ ಸಮಾಧಾನಪಡಿಸಲ್ಪಟ್ಟ ಆ ಗೋಪರು ಹೇಳಿದರು.

೨೬-೨೭. ಬ್ರಹ್ಮನೂ ಕೂಡ ಬಲಗೈಯ್ಯನ್ನಲ್ಲಾಡಿಸುತ್ತಾ ಹಾಗೆ ಹೌದೆಂದನು. ಆ ಗಾಯಿತ್ರಿಯು ಗೋಪಸ್ತ್ರೀಯರನ್ನು ನೋಡಲು ಲಜ್ಜಿತಳಾಗಿ ನಾನು ಇಲ್ಲಿಗೆ ಬಂದೆನೆಂದು ಅವರಿಗೆ ಯಾರು ಹೇಳಿದರು? ಇಲ್ಲಿಗೆ ಹೇಗೆ ಬಂದರು? ಎಂದಳು.

೨೮. ಆಗ ಗೋಪಕನ್ಯೆಯಾದ ಗಾಯಿತ್ರಿಯು ಅವರೆಲ್ಲರನ್ನು ನೋಡಿ ಬಲಗೈಯಿಂದ ಅಭಿನಂದಿಸುತ್ತಾ ಇಂತೆಂದಳು.

೨೯. ಗಾಯಿತ್ರಿಯು ಹೇಳಿದಳು:—ಅಮ್ಮಾ, ನಾನು ಇಲ್ಲಿದ್ದೇನೆ. ಬ್ರಹ್ಮನನ್ನು ಹೊಂದಿದ್ದೇನೆ. ಎಲ್ಲರಿಗೂ ಆದಿಪುರುಷನಾದ, ಜಗತ್ತಿಗೆ ಪತಿಯಾದ ಸ್ವಾಮಿಯು ಗಂಡನಾಗಿ ಸಿಕ್ಕಿದ್ದಾನೆ.

**ನಾಹಂ ಶೋಚ್ಯಾ ಭವತ್ಯಾ ತು ನ ಪಿತ್ರಾ ನ ಚ ಬಾಂಧವೈಃ ।**
**ಸಖೀಗಣಶ್ಚ ಮೇ ಯಾತು ಭಗಿನ್ಯಃ ಸಹ ಚಾರಕೈಃ　　　　॥ ೩೦ ॥**

**ಸರ್ವೇಷಾಂ ಕುಶಲಂ ವಾಚ್ಯಂ ಸ್ಥಿತಾಸ್ಮಿ ಸಹ ದೈವತೈಃ ।**
**ಗತೇಷು ತೇಷು ಸರ್ವೇಷು ಗಾಯತ್ರೀ ಸಾ ಸುಮಧ್ಯಮಾ　　　　॥ ೩೧ ॥**

**ಬ್ರಹ್ಮಣಾ ಸಹಿತಾ ರೇಜೇ ಯಜ್ಞವಾಟಗತಾ ಸತೀ ।**
**ಯಾಚಿತೋ ಬ್ರಾಹ್ಮಣೈರ್ಬ್ರಹ್ಮಾ ವರಾನ್ನೋ ದೇಹಿ ಚೇಪ್ಸಿತಾನ್ ॥ ೩೨ ॥**

**ಯಥೇಪ್ಸಿತಂ ವರಂ ತೇಷಾಂ ತದಾ ಬ್ರಹ್ಮಾ ಪ್ರದತ್ತವಾನ್ ।**
**ತಯಾಪ್ಯೇವಂ ತು ಗಾಯತ್ರ್ಯಾ ದತ್ತಂ ತಚ್ಚಾನುಮೋದಿತಂ　　　　॥ ೩೩ ॥**

**ಸಾ ತು ಯಜ್ಞಸ್ಥಿತಾ ಸಾಧ್ವೀ ದೇವಾನಾಂ ತು ಸಮೀಪಗಾ ।**
**ದಿವ್ಯಂ ವರ್ಷಶತಂ ಸಾಗ್ರಂ ಸ ಯಜ್ಞೋ ವವೃಧೇ ತದಾ　　　　॥ ೩೪ ॥**

---

೩೦. ನೀನಾಗಲಿ, ತಂದೆಯಾಗಲಿ, ಬಂಧುಗಳಾಗಲಿ, ಸಖಿಯರಾಗಲಿ, ಸೋದರಿಯರಾಗಲಿ, ಸೇವಕರಾಗಲಿ, ನನ್ನ ವಿಷಯದಲ್ಲಿ ಯಾರೂ ಯೋಚಿಸಬೇಕಾದ್ದಿಲ್ಲ. ಅವರೆಲ್ಲರೂ ಹೋಗಬಹುದು.

೩೧. ಎಲ್ಲರಿಗೂ ನಮ್ಮ ಕ್ಷೇಮ ಸಮಾಚಾರವನ್ನು ಹೇಳಿರಿ. ದೇವತೆಗಳೊಡನೆ ಇಲ್ಲಿದ್ದೇನೆ.

೩೨. ಆ ಗೋಪರೆಲ್ಲರೂ ಹೊರಟು ಹೋದನಂತರ ಆ ಉತ್ತಮಳಾದ ಗಾಯಿತ್ರಿಯು ಯಜ್ಞವಾಟದಲ್ಲಿ ಬ್ರಹ್ಮನೊಡನೆ ಇದ್ದುಕೊಂಡು ಶೋಭಿಸಿದಳು,

೩೩. ಬ್ರಾಹ್ಮಣರು ಬ್ರಹ್ಮನನ್ನು ನಮಗೆ ಇಷ್ಟವಾದ ವರವನ್ನು ಕೊಡೆಂದು ಕೇಳಲು, ಅದರಂತೆಯೇ ಅವನು ಅವರಿಗೆ ವರವನ್ನು ಕೊಟ್ಟನು. ಆ ಬ್ರಹ್ಮನು ಕೊಟ್ಟುದನ್ನು ಗಾಯಿತ್ರಿಯು ಒಪ್ಪಿಕೊಂಡಳು.

೩೪. ಆ ಗಾಯಿತ್ರೀ ದೇವಿಯು ದೇವತೆಗಳ ಸಮೀಪದಲ್ಲಿದ್ದು ಯಜ್ಞದಲ್ಲಿ ಭಾಗವನ್ನು ಹೊಂದಿರಲು, ದೇವತೆಗಳ ನೂರು ವರ್ಷಗಳವರೆಗೂ ಆ ಯಜ್ಞವು ನಡೆಯಿತು.

ಯಜ್ಞವಾಟಂ ಕಪರ್ದೀ ತು ಭಿಕ್ಷಾರ್ಥಂ ಸಮುಪಾಗತಃ ।
ಬೃಹತ್ಕಪಾಲಂ ಸಂಗೃಹ್ಯ ಪಂಚಮುಂಡೈರಲಂಕೃತಃ ॥ ೩೫ ॥

ಋತ್ವಿಗ್ಭಿಃಶ್ಚ ಸದಸ್ಯೈಶ್ಚ ಆರಾತ್ತಿಷ್ಠನ್ ಜುಗುಪ್ಸಿತಃ ।
ಕಥಂ ತ್ವಮಿಹ ಸಂಪ್ರಾಪ್ತೋ ನಿಂದಿತೋ ವೇದವಾದಿಭಿಃ ॥ ೩೬ ॥

ಏವಂ ಪ್ರೋತ್ಸಾರ್ಯಮಾಣೋಽಪಿ ನಿಂದ್ಯಮಾನಃ ಸ ತೈರ್ದ್ವಿಜೈಃ ।
ಉವಾಚ ತಾನ್ದ್ವಿಜಾನ್ಸರ್ವಾನ್ಸ್ಮಿತಂ ಕೃತ್ವಾ ಮಹೇಶ್ವರಃ ॥ ೩೭ ॥

॥ ಮಹೇಶ್ವರ ಉವಾಚ ॥

ಅತ್ರ ಪೈತಾಮಹೇ ಯಜ್ಞೇ ಸರ್ವೇಷಾಂ ತುಷ್ಟಿದಾಯಿನಿ ।
ಕಸ್ಮಿನ್ಪ್ರೋತ್ಸಾರ್ಯತೇ ಚಾನ್ಯ ಋತೇ ಮಾಂ ದ್ವಿಜಸತ್ತಮಾಃ ॥ ೩೮ ॥

ಉಕ್ತಃ ಸ ತೈಃ ಕಪರ್ದೀ ತು ಭುಕ್ತ್ವಾ ಚಾನ್ನಂ ತತೋ ವ್ರಜ ।
ಕಪರ್ದಿನಾ ಚ ತೇ ಉಕ್ತಾ ಭುಕ್ತ್ವಾ ಯಾಸ್ಯಾಮಿ ಭೋ ದ್ವಿಜಾಃ ॥ ೩೯ ॥

---

೩೫. ಆಗ ರುದ್ರನು ಬಂದು ದೊಡ್ಡ ಕಪಾಲವನ್ನು ತೆಗೆದುಕೊಂಡು ಐದು ತಲೆಗಳನ್ನು ಜೋಳಿಸಿಕೊಂಡು ಭಿಕ್ಷಾರ್ಥಿಯಾಗಿ ಆ ಯಜ್ಞಮಂಟಪಕ್ಕೆ ಬಂದನು.

೩೬. ಋತ್ವಿಕ್ಕುಗಳೂ ಸದಸ್ಯರೂ ಅಸಹ್ಯಪಟ್ಟು ದೂರದಲ್ಲಿ ನಿಂತುಕೊಂಡು, ವೇದವಾದಿಗಳಿಂದ ದೂಷಿಸಲ್ಪಟ್ಟ ನೀನು ಇಲ್ಲಿಗೇತಕ್ಕೆ ಬಂದೆ?

೩೭. ಆ ಬ್ರಾಹ್ಮಣರು ಆತನನ್ನು ಬೈಯುತ್ತಾ ಓಡಿಸುತ್ತಿದ್ದರೂ, ಮಹೇಶ್ವರನು ನಗುತ್ತ ಆ ಬ್ರಾಹ್ಮಣರನ್ನು ಕುರಿತು ಇಂತೆಂದನು.

೩೮. ಮಹೇಶ್ವರನು ಹೇಳಿದನು:— ಈ ಪಿತಾಮಹನು ಮಾಡುತ್ತಿರುವ ಯಜ್ಞದಲ್ಲಿ ಎಲ್ಲರೂ ತೃಪ್ತಿಪಡುತ್ತಿರುವಾಗ ನಾನು ಮಾಡಿದ ತಪ್ಪೇನು? ನೀವು ನನ್ನನ್ನು ಹೊರತಾಗಿ ಮತ್ತೊಬ್ಬರನ್ನು ಓಡಿಸುತ್ತಿಲ್ಲವಲ್ಲ?

೩೯. ಹಾಗಾದರೆ ಊಟಮಾಡಿಕೊಂಡು ಹೋಗು ಎಂದು ಬ್ರಾಹ್ಮಣರು ಹೇಳಲು ಆ ವೇಷಧಾರಿಯಾದ ಈಶ್ವರನು ಹಾಗೇ ಆಗಲೆಂದನು.

**ಏವಮುಕ್ತ್ವಾ ನಿಷಣ್ಣಃ ಸ ಕಪಾಲಂ ನ್ಯಸ್ಯ ಚಾಗ್ರತಃ ।**
**ತೇಷಾಂ ನಿರೀಕ್ಷ್ಯ ತತ್ಕರ್ಮ ಚಕ್ರೇ ಕೌಟಿಲ್ಯಮೀಶ್ವರಃ ॥ ೪೦ ॥**

**ಮುಕ್ತ್ವಾ ಕಪಾಲಂ ಭೂಮ್ಯಾಂ ತು ತಾನ್ದ್ವಿಜಾನವಲೋಕಯನ್ ।**
**ಉವಾಚ ಪುಷ್ಕರಂ ಯಾಮಿ ಸ್ನಾನಾರ್ಥಂ ದ್ವಿಜಸತ್ತಮಾಃ ॥ ೪೧ ॥**

**ತಥೇತಿ ಗಚ್ಛ ತೈರುಕ್ತಃ ಸ ಗತಃ ಪರಮೇಶ್ವರಃ ।**
**ವ್ಯವಸ್ಥಿತಃ ಕೌತುಕೇನ ಮೋಹ್ಯ ಸರ್ವಾನ್ದಿವೌಕಸಃ ॥ ೪೨ ॥**

**ಸ್ನಾನಾರ್ಥಂ ಪುಷ್ಕರೇ ಯಾತೇ ಕಪರ್ದಿನಿ ದ್ವಿಜಾತಯಃ ।**
**ಕಥಂ ಹೋಮೋಽತ್ರ ಕ್ರಿಯತೇ ಕಪಾಲೇ ಸದಸಿ ಸ್ಥಿತೇ ॥ ೪೩ ॥**

**ಕಪಾಲಾನ್ತಾನ್ಯಶೌಚಾನಿ ಪುರಾ ಪ್ರಾಹ ಪ್ರಜಾಪತಿಃ ।**
**ವಿಪ್ರೋಽಭ್ಯಧಾತ್ಸದಸ್ಯೇಕಃ ಕಪಾಲಮುತ್ಕ್ಷಿಪಾಮ್ಯಹಂ ॥ ೪೪ ॥**

---

೪೦. ಹೀಗೆಂದು ಆ ಕಪರ್ದಿಯು ಕಪಾಲವನ್ನು ಮುಂದೆ ಇಟ್ಟುಕೊಂಡು ಕುಳಿತುಕೊಂಡು ಆ ವೈದಿಕರ ಆ ಕರ್ಮವನ್ನು ನೋಡಿ ಒಂದು ವಕ್ರತೆಯನ್ನು ಮಾಡಿದನು.

೪೧. ಮುಂದಿಟ್ಟುಕೊಂಡಿದ್ದ ಕಪಾಲವನ್ನು ಅಲ್ಲಿಯೇ ಬಿಟ್ಟು ಆ ಬ್ರಾಹ್ಮಣರನ್ನು ನೋಡಿ ಎಲೈ ದ್ವಿಜರಿರಾ, ಸ್ನಾನಕ್ಕೋಸ್ಕರ ಪುಷ್ಕರಕ್ಕೆ ಹೋಗಿ ಬರುತ್ತೇನೆ ಎಂದನು.

೪೨. ಆ ಬ್ರಾಹ್ಮಣರು ಹಾಗೇ ಆಗಲೆನ್ನಲು ಆ ಪರಮೇಶ್ವರನು ಹೊರಟು ಹೋದನು. ಆದರೆ ಆಶ್ಚರ್ಯದಿಂದ ದೇವತೆಗಳೊಬ್ಬರಿಗೂ ಕಾಣದಂತೆ ನಿಂತು ಕೊಂಡನು.

೪೩. ಆ ಕಪರ್ದಿಯು ಸ್ನಾನಕ್ಕೆ ಪುಷ್ಕರಕ್ಕೆ ಹೋಗಲು, ಬ್ರಾಹ್ಮಣರು ಕಪಾಲವು ಈ ಸದಸ್ಸಿನಲ್ಲಿರುವಾಗ ಹೋಮವನ್ನು ಹೇಗೆ ಮಾಡೋಣ?

೪೪. ಕಪಾಲವಿರುವ ಜಾಗವು ಸುತ್ತಲೂ ಶುಚಿಯಿಲ್ಲವೆಂದು ಪ್ರಜಾಪತಿಯು ಹೇಳಿದ್ದಾನೆ ಎನ್ನಲು, ಅವರಲ್ಲಿ ಒಬ್ಬ ಬ್ರಾಹ್ಮಣನು ಆ ಕಪಾಲವನ್ನು ನಾನು ತೆಗೆದು ಹಾಕುತ್ತೇನೆ ಎಂದನು.

ತದುದ್ಧೃತಂ ಸದಸ್ಯೇನ ಪ್ರಕ್ಷಿಪ್ತಂ ಪಾಣಿನಾ ಸ್ವಯಂ ।
ತಾವದನ್ಯತ್ಸ್ಥಿತಂ ತತ್ರ ಪುನರೇವ ಸಮುದ್ಧೃತಂ ॥ ೪೫ ॥

ಏವಂ ದ್ವಿತೀಯಂ ತೃತೀಯಂ ವಿಂಶತಿಸ್ತ್ರಿಂಶತಿಸ್ತಥಾ ।
ಪಂಚಾಶಚ್ಚ ಶತಂ ಚೈವ ಸಹಸ್ರಂ ಶತಮೇವ ಚ ॥ ೪೬ ॥

ಏವಂ ನಾಂತಃ ಕಪಾಲಾನಾಂ ಪ್ರಾಪ್ಯತೇ ರಾಜಸತ್ತಮ ।
ನತ್ವಾ ಕಪರ್ದಿನಂ ದೇವಂ ಶರಣಂ ಸಮುಪಾಗತಾಃ ॥ ೪೭ ॥

ಪುಷ್ಕರಾರಣ್ಯಮಾಸಾದ್ಯ ಜ್ಞಾತ್ವೈವ ವೈದಿಕಂ ವಿಭುಂ ।
ತುಷ್ಟುವುಃ ಸಹಿತಾಃ ಸರ್ವೇ ತಾವತ್ತುಷ್ಟೋ ಹರಃ ಸ್ವಯಂ ॥ ೪೮ ॥

ತತಃ ಸ ದರ್ಶನಂ ಪ್ರಾದಾದ್ದ್ವಿಜಾನಾಂ ಭಕ್ತಿತಃ ಶಿವಃ ।
ಉವಾಚ ತಾಂಸ್ತದಾ ದೇವೋ ಭಕ್ತಿನಮ್ರಾನ್ದ್ವಿಜೋತ್ತಮಾನ್ ॥ ೪೯ ॥

॥ ಶಿವ ಉವಾಚ ॥

ಪುರೋಡಾಶಸ್ಯ ನಿಷ್ಪತ್ತಿಃ ಕಪಾಲಂ ನ ವಿನಾ ಭವೇತ್ ।
ಕುರುಧ್ವಂ ವಚನಂ ವಿಪ್ರಾ ಭಾಗಃ ಸ್ವಿಷ್ಟಕೃತೋ ಮಮ ॥ ೫೦ ॥

---

೪೫-೪೬. ಆ ಕಪಾಲವನ್ನು ತೆಗೆದು ಆ ಸದಸ್ಯನು ಎಸೆದು ಬಿಟ್ಟನು. ಅಷ್ಟರೊಳಗೆ ಅಲ್ಲಿ ಮತ್ತೊಂದು ಇದ್ದಿತು. ಮತ್ತೆಯೂ ಅದನ್ನು ಎಸೆದನು. ಹೀಗೆ ಎರಡು, ಮೂರು, ಇಪ್ಪತ್ತು, ಮೂವತ್ತು, ಐವತ್ತು, ನೂರು, ಸಾವಿರ, ಹತ್ತುಸಾವಿರ, ಹೀಗಾಗಿ ಆ ಕಪಾಲಗಳಿಗೆ ಪಾರವೇ ಇಲ್ಲದಂತಾಯಿತು.

೪೭-೪೮. ಆಗ ಪುಷ್ಕರವನ್ನು ಹೊಂದಿ ಆ ಈಶ್ವರನನ್ನು ನೋಡಿ ನಮಸ್ಕರಿಸಿ ಶರಣುಹೊಕ್ಕರು. ಅವನು ವೇದವನ್ನು ಬಲ್ಲ ಪ್ರಭುವೆಂದು ತಿಳಿದು ಎಲ್ಲರೂ ಸೇರಿ ಸ್ತೋತ್ರ ಮಾಡಿದರು. ಆಗ ಈಶ್ವರನು ತುಷ್ಟನಾದನು.

೪೯. ಆಗ ಆ ಕಪರ್ದಿಯು ಆ ಬ್ರಾಹ್ಮಣರ ಭಕ್ತಿಗೆ ಮೆಚ್ಚಿ ದರ್ಶನವನ್ನು ಕೊಟ್ಟು ಅವರನ್ನು ಕುರಿತು ಇಂತೆಂದನು.

೫೦. ಶಿವನು ಹೇಳಿದನು:—ಪುರೋಡಾಶವು ಕಪಾಲವಿಲ್ಲದಿದ್ದರೆ ಉಂಟಾಗುವುದಿಲ್ಲ. ನನ್ನ ಮಾತನ್ನು ಕೇಳಿ ಸ್ವಿಷ್ಟಕೃತವನ್ನು ನನಗೆ ಭಾಗವಾಗಿ ಕೊಡಿರಿ.

ಏವಂ ಕೃತೇ ಕೃತಂ ಸರ್ವಂ ಮದೀಯಂ ಶಾಸನಂ ಭವೇತ್ ।
ತಥೇತಿ ತೇ ದ್ವಿಜಾಃ ಶಂಭುಂ ಕುರ್ಮೋ ವೈ ತವ ಶಾಸನಂ ॥ ೫೧ ॥

ಕಪಾಲಪಾಣಿರ್ಭಗವಾನ್ಭಗವಂತಂ ಪಿತಾಮಹಂ ।
ವರಂ ವರಸ್ವ ಭೋ ಬ್ರಹ್ಮನ್ ಹೃದಿ ಯತ್ತೇ ಪ್ರಿಯಂ ಸ್ಥಿತಂ ।
ಸರ್ವಸ್ವಂ ತವ ದಾಸ್ಯಾಮಿ ಅದೇಯಂ ನಾಸ್ತಿ ಮೇ ಪ್ರಭೋ ॥ ೫೨ ॥

॥ ಬ್ರಹ್ಮೋವಾಚ ॥

ನ ತೇ ವರಂ ಗ್ರಹೀಷ್ಯಾಮಿ ದೀಕ್ಷಿತೋಽಹಂ ಸದಃಸ್ಥಿತಃ ।
ಸರ್ವಕಾಮಪ್ರದಶ್ಚಾಹಂ ಯೋ ಮಾಂ ಪ್ರಾರ್ಥಯತೇ ತ್ವಿಹ ॥ ೫೩ ॥

ಏವಂ ಬ್ರುವಂತಂ ವರದಂ ಕ್ರತೌ ತಸ್ಮಿನ್ಪಿತಾಮಹಂ ।
ತಥೇತಿ ಚೋಕ್ತ್ವಾ ಸ ರುದ್ರೋ ವರಂ ಚಾಸ್ಯ ತ್ವಗೃಹ್ಣತ ॥ ೫೪ ॥

ತತೋ ಮನ್ವಂತರೇ ಜಾತೇ ಪುನರೇವ ಪ್ರಭುಃ ಸ್ವಯಂ ।
ಬ್ರಹ್ಮೋತ್ತರಂ ಕ್ರತುಸ್ಥಾನಂ ಸ್ವಯಂ ದೇವೇನ ಶಂಭುನಾ ॥ ೫೫ ॥

---

೫೧. ನೀವು ಹಾಗೆ ಮಾಡಿದರೆ ನನ್ನ ಅಪ್ಪಣೆಯನ್ನು ನಡೆಸಿದಂತಾಗುತ್ತದೆ. ಎಂದನು. ಆಗ ಆ ಬ್ರಾಹ್ಮಣರು ಆ ರೀತಿಯಾಗಿಯೇ ಆಗಲಿ ನಿನ್ನ ಅಪ್ಪಣೆಯಂತೆ ನಡೆಯುತ್ತೇವೆ.

೫೨. ಆಗ ಕಪಾಲಿಯಾದ ಶಂಭುವು ಪೂಜ್ಯನಾದ ಪಿತಾಮಹನನ್ನು ಕುರಿತು ಎಲೈ ಬ್ರಾಹ್ಮಣನೇ, ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಅವೆಲ್ಲವನ್ನು ಕೊಡುತ್ತೇನೆ. ನಿನಗೆ ಕೊಡದಿರುವುದು ಯಾವುದು ನನ್ನಲ್ಲಿಲ್ಲ.

೫೩. ಬ್ರಹ್ಮನು ಹೇಳಿದನು:—ಎಲೈ ಶಂಭುವೇ, ನಿನ್ನಿಂದ ನಾನು ವರವನ್ನು ತೆಗೆದುಕೊಳ್ಳುವುದಿಲ್ಲ. ಸದಸ್ಸಿನಲ್ಲಿದ್ದೇನೆ. ಇಲ್ಲಿ ಯಾವನು ನನ್ನನ್ನು ಯಾಚಿಸುತ್ತಾನೆಯೋ ಅವನಿಗೆ ಎಲ್ಲವನ್ನು ಕೊಡತಕ್ಕವನು.

೫೪. ವರವನ್ನು ಕೊಡಲು ಸಿದ್ಧನಾಗಿ ಯಾಗದಲ್ಲಿ ಹೀಗೆ ಹೇಳುತ್ತಿರುವ ಆತನನ್ನು ಕುರಿತು ಹಾಗೇ ಆಗಲೆಂದು ಆ ರುದ್ರನು ಅವನಿಂದ ವರವನ್ನು ಪಡೆದನು.

೫೫-೫೭. ಅನಂತರ ಒಂದು ಮನ್ವಂತರದ ದಿವಸವು ಕಳೆಯಲು ಆ ಪ್ರಭುವು ಬ್ರಹ್ಮೋತ್ತರದಲ್ಲಿ ಯಾಗ ಮಾಡುತ್ತಿದ್ದ ಜಾಗಕ್ಕೆ ಹೋದನು. ಅಲ್ಲಿ ನಾಲ್ಕು ವೇದ

ಚತುರ್ಷ್ವಪಿ ಚ ವೇದೇಷು ಪರಿನಿಷ್ಠಾಂ ಗತಾ ಹಿ ಯೇ ।
ತಸ್ಮಿನ್ಕಾಲೇ ತದಾ ದೇವೋ ನಗರಸ್ಯಾವಲೋಕನೇ ॥ ೫೬ ॥

ಸಂಭಾಷಣೇ ದ್ವಿಜಾನಾಂ ಚ ಕೌತುಕೇನ ಸಮಾಗತಃ ।
ತೇನೈವೋನ್ಮತ್ತವೇಷೇಣ ಹುತಶೇಷೇ ಮಹೇಶ್ವರಃ ॥ ೫೭ ॥

ಪ್ರವಿಷ್ಟೋ ಬ್ರಹ್ಮಣಃ ಸದ್ಮ ದೃಷ್ಟೋ ದೇವೈರ್ದ್ವಿಜೋತ್ತಮೈಃ ।
ಪ್ರಹಸಂತಿ ಚ ಕೇಽಪ್ಯೇನಂ ಕೇಚಿನ್ನಿರ್ಭರ್ತ್ಸಯಂತಿ ಚ ॥ ೫೮ ॥

ಅಪರೇ ಪಾಂಸುಭಿಃ ಸಿಂಚಂತ್ಯುನ್ಮತ್ತಸ್ಯ ದ್ವಿಜಾಸ್ತಥಾ ।
ಲೋಷ್ಟೈಶ್ಚ ಲಗುಡೈಶ್ಚಾನ್ಯೇ ಶುಷ್ಮಿಣೋ ಬಲದರ್ಪಿತಾಃ ॥ ೫೯ ॥

ಪರಸ್ಪರಂ ಚಾವಹಾಸ್ಯೈಃ ಕುರ್ವಾಣಾ ಹಸ್ತಸಂವಿದಂ ।
ತತೋಽನ್ಯೇ ವಟವಸ್ತತ್ರ ಜಟಾಭಿರ್ಗೃಹ್ಯ ಚಾಂತಿಕಂ ॥ ೬೦ ॥

---

ಗಳಲ್ಲೂ ಚೆನ್ನಾಗಿ ಪರಿಚಿತರಾದ ಬ್ರಾಹ್ಮಣರು ಸದಸ್ಯರಾಗಿದ್ದುಕೊಂಡು ಯಾಗ ಮಾಡಿ ಸುತ್ತಿದ್ದರು. ಆಗ ಈ ಶಂಭುವು ಆ ಊರನ್ನು ನೋಡಬೇಕೆಂಬ ಇಚ್ಛೆಯಿಂದಲೂ, ಬ್ರಾಹ್ಮಣರೊಡನೆ ಮಾತನಾಡಬೇಕೆಂತಲೂ ಆಸೆಯಿಂದ ಹೋದನು.

೫೭. ಆಗ ಆ ಶಂಭುವು ಹುಚ್ಚನ ವೇಷದಿಂದ ಹೋಮವಾಗುತ್ತಿರುವಾಗ ಹೋದನು. ಅವನನ್ನು ದೇವತೆಗಳೂ ಬ್ರಾಹ್ಮಣರೂ ಕಂಡರು.

೫೮. ಕೆಲವರು ಅವನನ್ನು ಹಾಸ್ಯಮಾಡುತ್ತಿದ್ದರು. ಮತ್ತೆ ಕೆಲವರು ಹೆದರಿಸುತ್ತಿದ್ದರು. ಇನ್ನು ಕೆಲವರು ಅವನ ಮೇಲೆ ಧೂಳೆರಚುತ್ತಿದ್ದರು.

೫೯. ಕೆಲವರು ಮಣ್ಣುಹೆಂಟೆಯಿಂದಲೂ ಮತ್ತೆ ಕೆಲವರು ದೊಣ್ಣೆಗಳಿಂದಲೂ ಹೊಡೆಯುತ್ತಿದ್ದರು ಮತ್ತೆ ಕೆಲವರು ಹಾಸ್ಯಮಾಡುತ್ತಾ ಕೈ ತಟ್ಟುತ್ತಿದ್ದರು.

೬೦. ಆ ಮೇಲೆ ಕೆಲವರು ಹುಡುಗರು ಅವನ ಜಡೆಯನ್ನು ಹಿಡಿದೆಳೆದುಕೊಂಡು ಹತ್ತಿರದಲ್ಲಿ ಕುಳ್ಳಿರಿಸಿಕೊಂಡು ಈ ಆಟವನ್ನು ನಿನಗೆ ಯಾರು ಹೇಳಿಕೊಟ್ಟವರೆಂದು ಕೇಳುತ್ತಿದ್ದರು.

**ಪೃಚ್ಛಂತಿ ವ್ರತಚರ್ಯಾಂ ತಾಂ ಕೇನೈಷಾತಿಸಿದರ್ಶಿತಾ ।**
**ಅತ್ರಸ್ಥಾ ಯಾಃ ಸ್ತ್ರಿಯಃ ಸಂತಿ ತಾಸಾಮರ್ಥೇ ತ್ವಮಾಗತಃ ॥ ೬೧ ॥**

**ಕೇನೈಷಾ ದರ್ಶಿತಾ ಚರ್ಯಾ ಗುರುಣಾ ಪಾಪಕಾರಿಣಾ ।**
**ಯೇನ ಚೋನ್ಮತ್ತವದ್ವಾಕ್ಯಂ ವದನ್ಮಧ್ಯೇ ಪ್ರಧಾವಸಿ ॥ ೬೨ ॥**

**ಶಿಶ್ನೋ ಮೇ ಬ್ರಹ್ಮಣೋ ರೂಪಂ ಭಗಂ ಚಾಪಿ ಜನಾರ್ದನಃ ।**
**ಪುಷ್ಯಮಾಣಂ ತ್ವಹಂ ಬೀಜಂ ಲೋಕಃ ಕ್ಲಿಶ್ಯತಿ ಚಾನ್ಯಥಾ ॥ ೬೩ ॥**

**ಮಯಾಯಂ ಜನಿತಃ ಪುತ್ರೋ ಜಾತಶ್ಚಾನ್ನೇನ ಚಾಪ್ಯಹಂ ।**
**ಮಹಾದೇವಕೃತೇ ಸೃಷ್ಟಿಃ ಸೃಷ್ಟಾ ಭಾರ್ಯಾ ಹಿಮಾಲಯೇ ॥ ೬೪ ॥**

**ಉಮಾ ದತ್ತಾ ತು ರುದ್ರಸ್ಯ ಕಸ್ಯ ಸಾ ತನಯಾಭವತ್ ।**
**ಮೂಢಾ ಯೂಯಂ ನ ಜಾನೀಥ ಏವಂ ವದತ ನೋ ಭಯಂ ॥ ೬೫ ॥**

---

೬೧. ಇಲ್ಲಿರತಕ್ಕ ಹೆಂಗಸರಿಗೋಸ್ಕರ ಈ ವೇಷವನ್ನು ಹಾಕಿಕೊಂಡು ಬಂದಿದ್ದೀಯೆ.

೬೨. ಯಾವ ಪಾಪಿಯಾದ ಗುರುವು ಈ ಆಟವನ್ನು ಹೇಳಿಕೊಟ್ಟನೋ? ಹುಚ್ಚನಂತೆ ಹರಟುತ್ತಾ ಮಧ್ಯಕ್ಕೆ ಓಡಿಹೋಗುತ್ತಿದ್ದೀಯೆ.

೬೩. ನನ್ನ ತರುಡು ಬ್ರಹ್ಮನ ರೂಪವು. ಭಗವು ಜನಾರ್ದನನ ರೂಪವು. ನಾನು ಬೀಜವನ್ನು ಪೋಷಿಸುತ್ತೇನೆ. ಇಲ್ಲದಿದ್ದರೆ ಲೋಕವೇ ಕಷ್ಟಪಡುತ್ತದೆ.

೬೪. ನನಗೆ ಈ ಮಗನು ಹುಟ್ಟಿದನು. ನಾನು ಅನ್ನದಿಂದ ಹುಟ್ಟಿದೆನು. ಈ ಸೃಷ್ಟಿಯು ಮಹಾದೇವನಿಗೋಸ್ಕರವಾಗಿ ಆಗಿದೆ. ಹಿಮಾಲಯದಲ್ಲಿ ನನಗೆ ಹೆಂಡತಿಯು ಸೃಷ್ಟಿಸಲ್ಪಟ್ಟಿದ್ದಾಳೆ.

೬೫. ರುದ್ರನಿಗೆ ಉಮೆಯನ್ನು ಕೊಟ್ಟು ಮದುವೆಯಾಗಿದೆಯಲ್ಲ. ಅವಳು ಯಾರ ಮಗಳು? ನೀವು ಮೂಢರು. ನಿಮಗೆ ಗೊತ್ತಿಲ್ಲ. ಹೀಗೆಂದು ಹೇಳಿರಿ. ನನಗೆ ಭಯವಿಲ್ಲ.

ಬ್ರಹ್ಮಣಾ ನ ಕೃತಾ ಭಾರ್ಯಾ ದರ್ಶಿತಾ ನೈವ ವಿಷ್ಣುನಾ ।
ಗಿರೀಶೇನಾಪಿ ದೇವೇನ ಬ್ರಹ್ಮವಧ್ಯಾಕೃತೇನ ತು ॥ ೬೬ ॥

ಕಥಂ ವಿಡಂಬಸೇ ದೇವಂ ವಧ್ಯೋಽಸ್ಮಾಕಂ ತ್ವಮದ್ಯ ವೈ ।
ಏವಂ ತೈರ್ವಧ್ಯಮಾನಸ್ತು ಬ್ರಾಹ್ಮಣೈಸ್ತತ್ರ ಶಂಕರಃ ।
ಸ್ಮಿತಂ ಕೃತ್ವಾಬ್ರವೀತ್ಸರ್ವಾನ್ ಶಂಕರೋ ವಾಕ್ಯಮುತ್ತಮಂ ॥ ೬೭ ॥

॥ ಶಿವ ಉವಾಚ ॥

ಕಿಂ ಮಾಂ ನ ವಿತ್ಥ ಭೋ ವಿಪ್ರಾ ಉನ್ಮತ್ತಂ ನಷ್ಟಚೇತಸಂ ।
ಯೂಯಂ ಕಾರುಣಿಕಾಃ ಸರ್ವೇ ಮೈತ್ರಭಾವೈರ್ವ್ಯವಸ್ಥಿತಾಃ ॥ ೬೮ ॥

ವದಮಾನಮಿದಂ ಛದ್ಮ ಬ್ರಹ್ಮರೂಪಧರಂ ಹರಂ ॥ ೬೯ ॥

ಮಾಯಯಾ ತಸ್ಯ ದೇವಸ್ಯ ಮೋಹಿತಾಸ್ತೇ ದ್ವಿಜೋತ್ತಮಾಃ ।
ಕಪರ್ದಿನಂ ನಿಜಘ್ನುಸ್ತೇ ಪಾಣಿಪಾದೈಶ್ಚ ಮುಷ್ಟಿಭಿಃ ॥ ೭೦ ॥

---

೬೬. ಬ್ರಹ್ಮನು ಮಗಳನ್ನೇ ಮದುವೆಯಾಗಲಿಲ್ಲವೇ ? ವಿಷ್ಣುವು ತನ್ನ ಕಪಟತನವನ್ನು ಪ್ರಕಾಶಪಡಿಸಿಕೊಳ್ಳಲಿಲ್ಲವೇ ? ಈಶ್ವರನೂ ಕೂಡ ಬ್ರಹ್ಮನ ತಲೆಯನ್ನು ಕತ್ತರಿಸಲಿಲ್ಲವೇ ? ಎಂದನು.

೬೭. ಎಲೈ ಉನ್ಮತ್ತನೇ, ನೀನು ದೇವರನ್ನು ಬಯ್ಯುತ್ತೀಯಾ ? ನಿನ್ನನ್ನು ಕೊಲ್ಲತಕ್ಕದ್ದೇ ಸರಿ, ಎಂದು ಅಲ್ಲಿರುವ ಬ್ರಾಹ್ಮಣರು ಹಿಂಸಿಸುತ್ತಿರಲು, ಶಂಕರನು ನಕ್ಕು ಎಲ್ಲರನ್ನೂ ಕುರಿತು ಈರೀತಿ ಹೇಳಿದನು :

೬೮-೬೯. ಶಿವನು ಹೇಳಿದನು :—ಎಲೈ ಬ್ರಾಹ್ಮಣರಿರಾ, ನಾನು ಹುಚ್ಚನೆಂದೂ ಬುದ್ಧಿಸರಿಯಿಲ್ಲದವನೆಂದೂ ಗೊತ್ತಾಗಲಿಲ್ಲವೇ ? ನೀವೆಲ್ಲರೂ ಯಾವಾಗಲೂ ಕೃಪಾಶಾಲಿಗಳು. ಸ್ನೇಹದಿಂದಲೇ ಇರತಕ್ಕವರು. ಹೀಗೆಂದು ಆ ಈಶ್ವರನು ಕಪಟವನ್ನು ನಟಿಸಿ ಹೇಳುತ್ತಿದ್ದನು.

೭೦. ಆ ಸ್ವಾಮಿಯ ಮಾಯೆಯಿಂದ ಬುದ್ಧಿಗೆಟ್ಟ ಆ ಬ್ರಾಹ್ಮಣರು ಆತನನ್ನು ಕೈಗಳಿಂದ ಹೊಡೆದರು ; ಮುಷ್ಟಿಗಳಿಂದ ಗುದ್ದಿದರು ; ಕಾಲಿನಿಂದ ಒದ್ದರು.

**ದಂಡೈಶ್ಚಾಪಿ ಸುಕೀಲೈಸ್ತು ಉನ್ಮತ್ತಂ ವೇಷಧಾರಿಣಂ ।**
**ಪೀಡ್ಯಮಾನಸ್ತತಸ್ತೈಸ್ತು ದ್ವಿಜೈಃ ಕೋಪಸಮುಧಾಗಮತ್ ॥ ೨೦ ॥**

**ತತೋ ದೇವೇನ ತೇ ಶಪ್ತಾ ಯೂಯಂ ವೇದವಿವರ್ಜಿತಾಃ ।**
**ಊರ್ಧ್ವಜಟಾಃ ಕ್ರತುಭ್ರಷ್ಟಾಃ ಪರದಾರೋಪಸೇವಿನಃ ॥ ೨೧ ॥**

**ವೇಶ್ಯಾಯಾಂ ಚ ರತಾ ದ್ಯೂತೇ ಪಿತೃಮಾತೃವಿವರ್ಜಿತಾಃ ।**
**ನ ಪುತ್ರಃ ಪೈತೃಕಂ ವಿತ್ತಂ ವಿದ್ಯಾಂ ವಾ ವಿಗಮಿಷ್ಯತಿ ॥ ೨೩ ॥**

**ಸರ್ವೇऽಪಿ ಮೋಹಿತಾಃ ಸಂತು ಸರ್ವೇಂದ್ರಿಯವಿವರ್ಜಿತಾಃ ।**
**ರೌದ್ರಾಂ ಭಿಕ್ಷಾಮಟಿಷ್ಯಂತಿ ಪರಪಿಂಡೋಪಜೀವಿನಃ ॥ ೨೪ ॥**

**ಆಶಯಾ ವರ್ತಯಂತಶ್ಚ ನಿರ್ಮಮಾ ಧರ್ಮವರ್ಜಿತಾಃ ।**
**ಯೈಃ ಕೃತಾಪಿ ಕೃಪಾ ವಿಪ್ರೈರುನ್ಮತ್ತವಪುಷೋ ಭವೇತ್ ॥ ೨೫ ॥**

---

೨೦. ದೊಣ್ಣೆಗಳಿಂದಲೂ, ಸಲಾಕಿಗಳಿಂದಲೂ ಆ ಉನ್ಮತ್ತವೇಷಧಾರಿಯಾದ ಶಿವನನ್ನು ಹೊಡೆದರು. ಅವರಿಂದ ಹೀಗೆ ತೊಂದರೆಪಡಿಸಲ್ಪಟ್ಟ ಶಿವನಿಗೆ ಕೋಪ ಬಂದಿತು.

೨೧—೨೪. ಆಗ ಅವರಿಗೆ ಶಿವನು ಹೀಗೆ ಶಾಪವನ್ನು ಕೊಟ್ಟನು ನೀವು ವೇದಬಾಹ್ಯರಾಗಿರಿ. ಮೇಲುಮುಖವಾಗಿ ತಲೆಯನ್ನು ಕಟ್ಟಿಕೊಳ್ಳಿರಿ. ಯಾಗ ದಿಂದ ಭ್ರಷ್ಟರಾಗಿರಿ. ಇತರರ ಹೆಂಡಿರನ್ನು ಸೇವಿಸಿ. ಸೂಳೆಯಲ್ಲಿ ಆಸಕ್ತರಾಗಿರಿ. ಜೂಜಿನಲ್ಲಿ ಆಸಕ್ತಿ ಹೆಚ್ಚಿರಲಿ. ತಾಯಿತಂದೆಗಳು ಬಿಟ್ಟುಬಿಡಲಿ. ತಂದೆಯ ಹಣ ವನ್ನಾಗಲೀ, ವಿದ್ಯೆಯನ್ನಾಗಲಿ, ಆಸ್ತಿಯನ್ನಾಗಿ, ಹೊಂದಬೇಡಿ. ಎಲ್ಲರೂ ಮೂಢ ರಾಗಿಯೇ ಇರಿ. ಇಂದ್ರಿಯ ಪಾಟವವು ಇಲ್ಲದಿರಲಿ. ಕ್ರೂರವಾದ ಭಿಕ್ಷೆಯನ್ನು ಬೇಡಿರಿ. ಇತರರನ್ನು ಹಿಂಸಿಸಿಯೇ ಜೀವಿಸಿರಿ. ಆಶೆಯಿಂದಲೇ ಇರಿರಿ. ತನ್ನದು ಎಂಬ ವಾತ್ಸಲ್ಯವನ್ನು ಬಿಟ್ಟು ಧರ್ಮದಿಂದ ಬಾಹ್ಯರಾಗಿರಿ.

೨೫-೨೬. ನಿಮ್ಮಲ್ಲಿ ಯಾರು ಹುಚ್ಚನನ್ನು ನೋಡಿ ಕೃಪೆತೋರಿಸುತ್ತೀರೋ

ತೇಷಾಂ ಧನಂ ಚ ಪುತ್ರಾಶ್ಚ ದಾಸೀದಾಸಮಜಾವಿಕಂ ।
ಕುಲೋತ್ಪನ್ನಾಶ್ಚ ತೇ ಸರ್ವೇ ಸುಖಿನಶ್ಚ ಭವಿಷ್ಯಥ ॥ ೭೬ ॥

ಏವಂ ಶಾಪಂ ವರಂ ಚೈವ ದತ್ವಾಂತರ್ಹಿತ ಈಶ್ವರಃ ।
ತತೋ ದ್ವಿಜಾ ಗತೇ ದೇವೇ ಮತ್ವಾ ತಂ ಶಂಕರಂ ವಿಭುಂ ॥ ೭೭ ॥

ಅನ್ವೇಷಂತೋಽಪಿ ಯತ್ನೇನ ನ ಚಾಪಶ್ಯಂತ ತೇ ಯದಾ ।
ತದಾ ನಿಯಮಸಂಪನ್ನಾಃ ಪುಷ್ಕರಾರಣ್ಯಮಾಗತಾಃ ॥ ೭೮ ॥

ಸ್ನಾತ್ವಾ ಜ್ಯೇಷ್ಠಸರೋ ವಿಪ್ರಾ ಜಪಂತಃ ಶತರುದ್ರಿಯಂ ।
ಜಪ್ಯಾವಸಾನೇ ತಾನ್ರುದ್ರೋಽಶರೀರಿಣ್ಯಾ ಗಿರಾಬ್ರವೀತ್ ॥ ೭೯ ॥

॥ ಶಿವ ಉವಾಚ ॥

ಅನೃತಂ ನ ಮಯಾ ಚೋಕ್ತಂ ಸ್ವೈರೇಷ್ವಪಿ ಕುತಃ ಪುನಃ ।
ಆಗತಾನುಗ್ರಹಂ ನಾಮ ಭೂಯೋಽಪಿ ಕರವಾಣ್ಯಹಂ ॥ ೮೦ ॥

---

ಅವರು ಧನ, ಪುತ್ರರು, ದಾಸಿ, ದಾಸ, ಹಸು, ಕರು, ಆಡು, ಕುರಿ ಮುಂತಾದವು ಗಳೊಡನೆ ಅವರ ವಂಶದಲ್ಲಿ ಹುಟ್ಟಿದವರು ಎಲ್ಲರೂ ಸುಖವಾಗಿರಿ.

೭೭-೭೮. ಈರೀತಿ ಶಾಪವನ್ನೂ ವರವನ್ನೂ ಕೊಟ್ಟು ಆ ಈಶ್ವರನು ಮರೆಯಾದನು. ಇಂತು ಆ ಸ್ವಾಮಿಯು ಮಾಯವಾಗಲು, ಇವನು ಶಂಕರನೆಂದು ತಿಳಿದು ಅವನನ್ನು ಹುಡುಕಿದರು. ಎಷ್ಟು ಹುಡುಕಿದರೂ ಸಿಕ್ಕದಿರಲು ಆಗ ನಿಯಮದಿಂದಿದ್ದು ಪುಷ್ಕರಾರಣ್ಯಕ್ಕೆ ಹೋದರು.

೭೯. ಜ್ಯೇಷ್ಠಸರೋವರದಲ್ಲಿ ಸ್ನಾನಮಾಡಿ ಶತರುದ್ರವನ್ನು ಜಪಿಸುತ್ತಿರಲು ಜಪದ ಕೊನೆಯಲ್ಲಿ ಆ ರುದ್ರನು ಕಣ್ಣಿಗೆ ಕಾಣಿಸದೆ ಇಂತೆಂದನು.

೮೦. ಶಿವನು ಹೇಳಿದನು:—ಎಲೈ ಬ್ರಾಹ್ಮಣರಿರಾ, ನಾನು ಹಾಸ್ಯಕ್ಕಾದರೂ ಯಾವಾಗಲೂ ಸುಳ್ಳನ್ನು ಹೇಳಿದವನಲ್ಲ. ನೀವು ಬಂದಿದ್ದೀರಿ ಮತ್ತೆ ನಿಮಗೆ ಅನುಗ್ರಹವನ್ನು ಮಾಡುತ್ತೇನೆ.

ಶಾಂತಾ ದಾಂತಾ ದ್ವಿಜಾ ಯೇ ತು ಭಕ್ತಿಮಂತೋ ಮಯಿ ಸ್ಥಿರಾಃ ।
ನ ತೇಷಾಂ ಛಿದ್ಯತೇ ವೇದೋ ನ ಧನಂ ನಾಪಿ ಸಂತತಿಃ ॥ ೮೧ ॥

ಅಗ್ನಿಹೋತ್ರರತಾ ಯೇ ಚ ಭಕ್ತಿಮಂತೋ ಜನಾರ್ದನೇ ।
ಪೂಜಯಂತಿ ಚ ಬ್ರಹ್ಮಾಣಂ ತೇಜೋರಾಶಿಂ ದಿವಾಕರಂ ॥ ೮೨ ॥

ನಾಶುಭಂ ವಿದ್ಯತೇ ತೇಷಾಂ ಯೇಷಾಂ ಸಾಮ್ಯೇ ಸ್ಥಿತಾ ಮತಿಃ ।
ಏತಾವದುಕ್ತ್ವಾ ವಚನಂ ತೂಷ್ಣೀಂಭೂತಾ ತು ಸಾ ಗಿರಾ ॥ ೮೩ ॥

ಲಬ್ಧ್ವಾ ವರಂ ಸಪ್ರಸಾದಂ ದೇವದೇವಾನ್ಮಹೇಶ್ವರಾತ್ ।
ಆಜಗ್ಮುಃ ಸಹಿತಾಃ ಸರ್ವೇ ಯತ್ರ ದೇವಃ ಪಿತಾಮಹಃ ॥ ೮೪ ॥

ವಿರಿಂಚಿಸಹಿತಾ ಜಾಪ್ಯೈಸ್ತೋಷಯಂತೋಽಗ್ರತಃ ಸ್ಥಿತಾಃ ।
ತುಷ್ಯಂಸ್ತಾನಬ್ರವೀದ್ಬ್ರಹ್ಮಾ ಮತ್ತೋಽಪಿ ವ್ರಿಯತಾಂ ವರಂಃ ॥ ೮೫ ॥

---

೮೧. ಶಾಂತರಾಗಿಯೂ ದಾಂತರಾಗಿಯೂ ಇದ್ದು ನನ್ನಲ್ಲಿ ಯಾರು ಭಕ್ತಿಯನ್ನು ಇಟ್ಟಿರುವರೋ ಅವರಿಗೆ ವೇದವಾಗಲಿ ಧನವಾಗಲಿ ಸಂತತಿಯಾಗಲಿ ನಾಶ ಹೊಂದುವುದಿಲ್ಲ.

೮೨. ಅಗ್ನಿಹೋತ್ರವನ್ನು ಮಾಡುವವರಿಗೂ, ಜನಾರ್ದನನಲ್ಲಿ ಭಕ್ತಿ ಇಟ್ಟಿರುವವರಿಗೂ, ಬ್ರಹ್ಮನನ್ನು ಪೂಜಿಸುವವರಾಗಲಿ ಸೂರ್ಯನನ್ನು ನಮಸ್ಕರಿಸುವವರಿಗಾಗಲಿ ಯಾರು ಸಮತಾಬುದ್ಧಿಯುಳ್ಳವರೋ ಅವರಿಗಾಗಲಿ ಕೆಟ್ಟದ್ದು ಉಂಟಾಗುವುದಿಲ್ಲ.

೮೩-೮೪. ಇಷ್ಟು ಮಾತನಾಡಿ ಆ ಅಶರೀರವಾಣಿಯು ಸುಮ್ಮನಾಯಿತು. ಈರೀತಿ ದೇವದೇವನಾದ ಮಹೇಶ್ವರನಿಂದ ಅನುಗ್ರಹಪೂರ್ವಕವಾದ ವರವನ್ನು ಪಡೆದು ಬ್ರಹ್ಮನಿದ್ದ ಜಾಗಕ್ಕೆ ಅವರೆಲ್ಲರೂ ಬಂದರು.

೮೫. ಎಲ್ಲರೂ ಕೂಡ ಸ್ತೋತ್ರಗಳಿಂದ ಬ್ರಹ್ಮನನ್ನು ಸ್ತುತಿಸುತ್ತ ನಿಂತಿರಲು ಬ್ರಹ್ಮನು ಸಂತೋಷಗೊಂಡು ಅವರನ್ನು ಕುರಿತು ವರವನ್ನು ಕೇಳಿಕೊಳ್ಳಿರಿ ಎಂದನು.

ಬ್ರಹ್ಮಣೋಽಪ್ಯಥ ವಾಕ್ಯೇನ ತುಷ್ಟಾಸ್ತೇ ತು ದ್ವಿಜೋತ್ತಮಾಃ ।
ಕೋ ವರೋ ಯಾಚ್ಯತಾಂ ವಿಪ್ರಾಃ ಪರಿತುಷ್ಟೇ ಪಿತಾಮಹೇ ॥ ೮೬ ॥

ಏಕೇ ತತ್ರಾಬ್ರುವನ್ವಿಪ್ರಾ ವೇದಾಸ್ತೈ ವ್ರಣವಾಮಹೈ ।
ನೇತಿ ಚಾನ್ಯೇ ಧನಂ ಚಾನ್ಯೇ ವ್ರಿಯತಾಮವಿಶಂಕಿತೈಃ ॥ ೮೭ ॥

ಕಿಮಸ್ಮಾಕಂ ಧನೇನೇಹ ಕಾರ್ಯಂ ತುಷ್ಟೇ ಪಿತಾಮಹೇ ।
ಅಗ್ನಿಹೋತ್ರಾಶ್ಚ ವೇದಾಶ್ಚ ಶಾಸ್ತ್ರಾಣಿ ವಿವಿಧಾನಿ ಚ ॥ ೮೮ ॥

ಸಾಂತಾನಿಕಾಶ್ಚ ಯೇ ಲೋಕಾ ವರದಾನಾದ್ಭವಂತು ನಃ ।
ಏವಂ ಪ್ರಜಲ್ಪತಾಂ ತತ್ರ ವಿಪ್ರಾಣಾಂ ಕೋಪಮಾವಿಶತ್ ॥ ೮೯ ॥

ಕೇ ಯೂಯಮತ್ರ ಪ್ರವರಾ ವಯಂ ಶ್ರೇಷ್ಠಾಸ್ತಥಾಪರೇ ।
ನೇತಿ ನೇತಿ ತಥಾ ವಿಪ್ರಾ ದ್ವಿಜಾಂಸ್ತಾಂಸ್ತತ್ರ ಸಂಸ್ಥಿತಾನ್ ॥ ೯೦ ॥

---

೮೬. ಬ್ರಹ್ಮನ ವಾಕ್ಯದಿಂದಲೇ ಆ ಬ್ರಾಹ್ಮಣರು ಸಂತೋಷಗೊಂಡು ಒಬ್ಬರಿಗೊಬ್ಬರು ಎಲೈ ಬ್ರಾಹ್ಮಣರಿರಾ, ಬ್ರಹ್ಮನು ಸಂತೋಷಗೊಂಡಿರಲು ಯಾವ ವರವನ್ನು ಕೇಳೋಣ ಎಂದು ಮಾತನಾಡಿಕೊಳ್ಳುತ್ತಿದ್ದರು.

೮೭. ಆ ಬ್ರಾಹ್ಮಣರಲ್ಲಿ ಕೆಲವರು ವೇದಗಳನ್ನು ಕೇಳಿಕೊಳ್ಳುತ್ತೇವೆ ಎಂದರು ಮತ್ತೆ ಕೆಲವರು ಅದು ಬೇಡ, ಧನವನ್ನು ಬೇಕಾದಷ್ಟು ಕೇಳೋಣವೆಂದರು.

೮೮-೮೯. ನಮಗೆ ಹಣದಿಂದೇನಾಗಬೇಕು? ಬ್ರಹ್ಮನು ಸಂತೋಷಗೊಂಡಿರಲು, ಅಗ್ನಿಹೋತ್ರಗಳು, ವೇದಗಳು, ಬಗೆಬಗೆಯ ಶಾಸ್ತ್ರಗಳು, ಸಂತಾನಗಳು, ಇವುಗಳು ನಿನ್ನ ವರದಾನದಿಂವಾಗಲಿ ಎಂದು ಕೇಳೋಣ ಎಂದು ಕೆಲವರೆನ್ನುತ್ತಿದ್ದರು. ಹೀಗೆ ಹರಟುತ್ತಿರಲು, ಒಬ್ಬರಿಗೊಬ್ಬರಿಗೆ ಸರಿಬರವೆ ಅವರಿಗೆಲ್ಲಾ ಕೋಪ ಬಂದಿತು.

೯೦. ಇದರಲ್ಲಿ ನೀವು ಯಾರು ದೊಡ್ಡವರು? ನಾವು ಶ್ರೇಷ್ಠರು. ಇಲ್ಲ, ಇಲ್ಲ ನಾವು ದೊಡ್ಡವರು ಎಂಬುದಾಗಿ ಹೇಳಿಕೊಳ್ಳುತ್ತಿರುವ ಅವರನ್ನು ಕುರಿತು ಬ್ರಹ್ಮನು ಇಂತೆಂದನು.

ಬ್ರಹ್ಮೋವಾಚ ಚ ತಾನ್ಸರ್ವಾನ್ವಿಪ್ರಾನ್ಕ್ರೋಧಸಮನ್ವಿತಾನ್ ।
ಯಸ್ಮಾದ್ಯೂಯಂ ತ್ರಿಭಿರ್ಭಾಗೈಃ ಸಭಾಯಾಂ ಬಾಹ್ಯತಃ ಸ್ಥಿತಾಃ ॥ ೯೧ ॥

ತಸ್ಮಾದಾಮೂಲಿಕೋ ಹ್ಯೇಕೋ ಗುಲ್ಮೋ ಭವತು ವೋ ದ್ವಿಜಾಃ ।
ಉದಾಸೀನಾಃ ಸ್ಥಿತಾ ಯೇ ತು ಉದಾಸೀನಾ ಭವಂತು ತೇ ॥ ೯೨ ॥

ಸಾಯುಧಾ ಬದ್ಧನಿಸ್ತ್ರಿಂಶಾ ಯೋದ್ಧುಕಾಮಾ ವ್ಯವಸ್ಥಿತಾಃ ।
ಕೌಶಿಕೀತಿ ಗಣೋ ನಾಮ ತೃತೀಯೋ ಭವತು ದ್ವಿಜಾಃ ॥ ೯೩ ॥

ತ್ರಿಧಾ ಬದ್ಧಮಿದಂ ಸ್ಥಾನಂ ಸರ್ವಂ ಯುಷ್ಮದ್ಭವಿಷ್ಯತಿ ।
ಬಾಹ್ಯತೋ ಲೋಕವಾದೇನ ಉಚ್ಯಮಾನಾಃ ಪ್ರಜಾಸ್ತ್ರಿಧಾ ॥ ೯೪ ॥

ಅವಿಕ್ರೇಯಂ ನಾಸ್ತಿ ವೋಽತ್ರ ಸರ್ವಸ್ವಂ ವಃ ಪ್ರಣಶ್ಯತಿ ।
ತೃಣಾನಿ ಭೂಮಿರುದಕಂ ತಥಾ ವೈ ದಾರುಸಂಚಯಃ ॥ ೯೫ ॥

ಪ್ರತಿಗ್ರಹೇ ಚಾನುವೃತ್ತಿಃ ಕುಪಿತಾಶ್ಚ ಪರಸ್ಪರಂ ।
ಅಭಿಪ್ರಪನ್ನವಿಪ್ರಾಣಾಂ ಕ್ಷಮಾ ವೈ ನಾತ್ರ ಕಾಚನ ॥ ೯೬ ॥

---

೯೧-೯೩. ನೀವುಗಳು ಸಭೆಯಲ್ಲಿ ಮೂರು ಪಂಗಡವಾಗಿಬಿಟ್ಟು ನಿಂತಿದ್ದೀರಿ. ಹೊರಗೆ ನಿಂತಿರುವ ನಿಮಗೆ ಗುಲ್ಮವು ಮೂಲದಿಂದ ಹಿಡಿದು ಒಂದೇ ಆಗಿರಲಿ. ಯಾರು ಉದಾಸೀನರಾಗಿದ್ದೀರೋ ಅವರೆಲ್ಲರೂ ಉದಾಸೀನರಾಗಿಯೇ ಇರಿ. ಆಯುಧ ವನ್ನು ಹಿಡಿದು ಕತ್ತಿಯನ್ನು ತೆಗೆದುಕೊಂಡು ಯುದ್ಧಕ್ಕೆ ನಿಂತಿರುವವರು ಕೌಶಿಕ ವೆಂಬ ಗಣಗಳಾಗಿ ಮೂರನೆಯ ಪಂಗಡವಾಗಲಿ.

೯೪. ಈ ಜಾಗವು, ಹೊರಗಿನವರು ಇಲ್ಲಿ ನಿಮ್ಮ ಜಾಗವು ಮೂರು ಮೂರು ಎಂದು ಹೇಳುವಂತೆ ಮೂರುಭಾಗವಾಗಿರಲಿ.

೯೫-೯೬. ನೀವು ಎಲ್ಲವನ್ನೂ ಮಾರಬಹುದು. ಹುಲ್ಲು, ಭೂಮಿ, ನೀರು, ಸೌದೆ ಎಲ್ಲವೂ ನಾಶವಾಗುತ್ತದೆ. ದಾನ ತೆಗೆದುಕೊಳ್ಳುವುದರಲ್ಲಿ ಆಸಕ್ತರಾಗಿರಿ. ಒಬ್ಬರಿಗೊಬ್ಬರಿಗೆ ಜಗಳವಾಡುತ್ತಿರಿ. ಯೋಗ್ಯರಾದ ಬ್ರಾಹ್ಮಣರಲ್ಲಿ ನಿಮಗಾಗಲಿ, ಅವರಿಗೆ ನಿಮ್ಮಲ್ಲಾಗಲಿ ಕ್ಷಮೆ ಇಲ್ಲದಿರಲಿ.

ಕೇವಲಂ ಪ್ರವ್ಯರುಚಯೋ ಲೋಭೋಪಹತಚೇತಸಃ ।
ಏವಂವಿಧಾ ರುದ್ರಶಾಪಾದ್ಭವಿತಾರೋ ನ ಸಂಶಯಃ ॥ ೯೭ ॥

ಯುಷ್ಮಾಕಂ ತು ಇದಂ ಸ್ಥಾನಂ ವಿಷ್ಣುಃ ಪಾಲಯಿತಾ ಧ್ರುವಂ ।
ಮಯಾ ದತ್ತಂ ಚಿರಸ್ಥಾಯಿ ಅಭಂಗಂ ಚ ಭವಿಷ್ಯತಿ ॥ ೯೮ ॥

ಏವಮುಕ್ತ್ವಾ ತದಾ ಬ್ರಹ್ಮಾ ಸಮಾಪ್ತಿಂ ತಾಮನ್ವೈಕ್ಷತ ।
ಬ್ರಹ್ಮಣಾ ಸಹಿತಾಸ್ತೇ ತು ಯಜ್ಞಾರ್ಥೇ ವಿಬುಧೈಃ ಸಹ ॥ ೯೯ ॥

ಅತಿಥಿಂ ಭೋಜಯಾನಾಸ್ತೇ ವೇದಶಾಸ್ತ್ರರತಾಶ್ಚ ಯೇ
ಏತಚ್ಚ ಪರಮಂ ಕ್ಷೇತ್ರಂ ಪುಷ್ಕರಂ ನಾಮ ಸಂಜ್ಞಿತಂ ॥ ೧೦೦ ॥

ತತ್ರಸ್ಥಾ ಯೇ ದ್ವಿಜಾಃ ಸಂತೋ ವಸಂತಿ ಕ್ಷೇತ್ರವಾಸಿನಃ ।
ನ ತೇಷಾಂ ದುರ್ಲಭಂ ಕಿಂಚಿದ್ಬ್ರಹ್ಮಲೋಕೇ ಭವಿಷ್ಯತಿ ॥ ೧೦೧ ॥

ಕೋಕಾಮುಖೇ ಕುರುಕ್ಷೇತ್ರೇ ನೈಮಿಷೇ ಋಷಿಸಂಗಮೇ ।
ವಾರಾಣಸ್ಯಾಂ ಪ್ರಭಾಸೇ ಚ ತಥಾ ಬದರಿಕಾಶ್ರಮೇ ॥ ೧೦೨ ॥

---

೯೭. ನೀವು ಹಣದಲ್ಲಿ ಮಾತ್ರ ಆಸಕ್ತಿಯುಳ್ಳವರಾಗಿ ಕೃಪಣತೆಯಿಂದ ಬುದ್ಧಿ ಕೆಟ್ಟುಹೋದವರಾಗಿ ರುದ್ರಶಾಪದಿಂದಾಗುತ್ತೀರಿ, ಸಂಶಯವಿಲ್ಲ.

೯೮. ನಿಮ್ಮ ಈ ಜಾಗವನ್ನು ವಿಷ್ಣುವು ಯಾವಾಗಲೂ ಕಾಯುತ್ತಿರಲಿ. ನಾನು ಕೊಟ್ಟ ಈ ಶಾಪವು ಬಹುದಿನಗಳಿರಲಿ, ಸ್ವಲ್ಪವೂ ವ್ಯತ್ಯಾಸವಾಗಬೇಡ.

೯೯-೧೦೦. ಬ್ರಹ್ಮನು ಹೀಗೆಂದು ಹೇಳಿ ಸುಮ್ಮನಾದನು. ಮತ್ತು ತನ್ನ ಆಪ್ತರನ್ನು (ಸಭಿಕರನ್ನು) ನೋಡಿದನು. ಅವರೆಲ್ಲರೂ ಬ್ರಹ್ಮನೊಡನೆಯೂ ದೇವತೆಗಳೊಡನೆಯೂ ಅತಿಥಿಗಳಿಗೆ ಭೋಜನಮಾಡಿಸಿದರು. ಇದು ಇಂತಹ ಪವಿತ್ರವಾದ ಪುಷ್ಕರವೆಂಬ ಕ್ಷೇತ್ರವು.

೧೦೧. ಆ ಕ್ಷೇತ್ರದಲ್ಲಿ ಯಾವ ಬ್ರಾಹ್ಮಣರು ವಾಸಮಾಡಿಕೊಂಡಿರುತ್ತಾರೋ ಅವರಿಗೆ ಬ್ರಹ್ಮಲೋಕದಲ್ಲಿ ಯಾವುದೂ ದುರ್ಲಭವಲ್ಲ.

೧೦೨—೧೦೪. ಕೋಕಾಮುಖ, ಕುರುಕ್ಷೇತ್ರ, ನೈಮಿಷ, ಋಷಿಸಂಗಮ, ವಾರಾಣಸೀ, ಪ್ರಭಾಸ, ಬದರಿಕಾಶ್ರಮ, ಗಂಗಾದ್ವಾರ, ಪ್ರಯಾಗ, ಸಂಗಾಸಾಗರ

ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ।
ರುದ್ರಕೋಟ್ಯಾಂ ವಿರೂಪಾಕ್ಷೇ ಮಿತ್ರಸ್ಯಾಪಿ ತಥಾ ವನೇ ॥ ೧೦೩ ॥

ತೀರ್ಥೇಷ್ವೇತೇಷು ಸಿದ್ಧಿರ್ಯಾ ಕ್ಷೇತ್ರೇಷು ದ್ವಾದಶಾಬ್ದಿಕಾ ।
ಪ್ರಾಪ್ಯತೇ ಮಾನವೈರ್ಲೋಕೇ ಷಣ್ಮಾಸಾದ್ರಾಜಸತ್ತಮ ॥ ೧೦೪ ॥

ಪುಷ್ಕರೇ ನ ಚ ಸಂದೇಹೋ ಬ್ರಹ್ಮಚರ್ಯಮನಾ ಯದಿ ।
ತೀರ್ಥಾನಾಂ ಪರಮಂ ತೀರ್ಥಂ ಕ್ಷೇತ್ರಾಣಾಮಪಿ ಚೋತ್ತಮಂ ॥ ೧೦೫ ॥

ಸದಾ ತು ಪೂಜಿತಂ ವಿಪ್ರೈರ್ಭಕ್ತಿಮದ್ಭಿಃ ಪಿತಾಮಹೇ ।
ಅತಃ ಪರಂ ಪ್ರವಕ್ಷ್ಯಾಮಿ ಸಾವಿತ್ರ್ಯಾ ಸಹ ಬ್ರಹ್ಮಣಃ ॥ ೧೦೬ ॥

ವಾದೋ ಯಥಾನುಭೂತಸ್ತು ಪರಿಹಾಸಕೃತೋ ಮಹಾನ್ ।
ಸಾವಿತ್ರೀಗಮನೇ ಸರ್ವಾ ಆಯಾತಾ ದೇವಯೋಷಿತಃ ॥ ೧೦೭ ॥

ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ವಿಷ್ಣುಪತ್ನೀ ಯಶಸ್ವಿನೀ ।
ಆಮಂತ್ರಿತಾ ತದಾ ಲಕ್ಷ್ಮೀಸ್ತತ್ರಾಯಾತಾ ತ್ವರಾನ್ವಿತಾ ॥ ೧೦೮ ॥

---

ಸಂಗಮ, ರುದ್ರಕೋಟಿ, ವಿರೂಪಾಕ್ಷ, ಈ ತೀರ್ಥಗಳಲ್ಲಿ ಹನ್ನೆರಡು ವರ್ಷಗಳವರೆಗಿದ್ದು ಯಾವ ಸಿದ್ಧಿಯನ್ನು ಹೊಂದುತ್ತೇವೆಯೋ ಆ ಸಿದ್ಧಿಯನ್ನು ಈ ಪುಷ್ಕರದಲ್ಲಿ ಮನುಷ್ಯರು ಆರು ತಿಂಗಳಿನಲ್ಲಿ ಹೊಂದಬಹುದು. ಆದರೆ ಅವನು ಬ್ರಹ್ಮಚರ್ಯದಿಂದ ಕೂಡಿದ ಮನಸ್ಸುಳ್ಳವನಾಗಿರಬೇಕು.

೧೦೫. ಈ ಪುಷ್ಕರವು ತೀರ್ಥಗಳೊಳಗೆ ಉತ್ತಮ ತೀರ್ಥವು, ಕ್ಷೇತ್ರಗಳೊಳಗೆ ಉತ್ತಮ ಕ್ಷೇತ್ರವು. ಭಕ್ತಿಯಿಂದ ಇಲ್ಲಿ ಬ್ರಹ್ಮನನ್ನು ಪೂಜಿಸಿದವರಿಗೆ ಎಲ್ಲ ಸಿದ್ಧಿಯೂ ಉಂಟಾಗುತ್ತದೆ.

೧೦೬-೧೦೭. ಇನ್ನು ಮೇಲೆ ಸಾವಿತ್ರಿಯೊಡನೆ ಬ್ರಹ್ಮನಿಗೆ ಪರಿಹಾಸರೂಪವಾದ ವಾದವು ಹೇಗಾಯಿತೆಂಬುದನ್ನು ಹೇಳುತ್ತೇನೆ. ಸಾವಿತ್ರಿಯ ಜೊತೆಯಲ್ಲಿ ದೇವತೆಗಳ ಹೆಂಗಸರೆಲ್ಲರೂ ಆ ಯಜ್ಞಕ್ಕೆ ಬಂದರು.

೧೦೮-೧೦೯. ಭೃಗುಋಷಿಗೆ ಖ್ಯಾತಿಯಲ್ಲಿ ಹುಟ್ಟಿದ ವಿಷ್ಣುವಿನ ಹೆಂಡತಿಯಾದ ಲಕ್ಷ್ಮಿಯನ್ನು ಕರೆಯಲು, ಅವಳು ಅವಸರದಿಂದ ಬಂದಳು. ಯೋಗ

ಮದಿರಾ ಚ ಮಹಾಭಾಗಾ ಯೋಗನಿದ್ರಾವಿಭೂತಿದಾ ।
ಶ್ರೀಃ ಕಮಲಾಲಯಾ ಭೂತಿಃ ಕಾಂತಿಃ ಶ್ರದ್ಧಾ ಮನಸ್ವಿನೀ ॥ ೧೦೯ ॥

ತುಷ್ಟಿಪುಷ್ಟಿಪ್ರದಾ ಯಾ ತು ದೇವ್ಯ ಏತಾಃ ಸಮಾಗತಾಃ ।
ಸತೀ ಯಾ ದಕ್ಷತನಯಾ ಉಮೇತಿ ಪಾರ್ವತೀ ಮತಾ ॥ ೧೧೦ ॥

ತ್ರೈಲೋಕ್ಯಸುಂದರೀ ದೇವೀ ಸ್ತ್ರೀಣಾಂ ಸೌಭಾಗ್ಯದಾಯಿಕಾ ।
ಜಯಾ ಚ ವಿಜಯಾ ಚೈವ ಮಧುಚ್ಛಂದಾಮರಾವತೀ ॥ ೧೧೧ ॥

ಸುಪ್ರಿಯಾ ಜನಕಾಂತಾ ಚ ಸಾವಿತ್ರ್ಯಾ ಮಂದಿರೇ ಶುಭೇ ।
ಗೌರ್ಯಾ ಸಹ ಸಮಾಯಾತಾಃ ಸುವೇಷಾಭರಣಾನ್ವಿತಾಃ ॥ ೧೧೨ ॥

ಪುಲೋಮದುಹಿತಾ ಚೈವ ಶಕ್ರಾಣೀ ಚ ಮಹಾಪ್ಸರಾಃ ।
ಸ್ವಧಾ ಸ್ವಾಹಾ ತಥಾಯಾತಾ ಧೂಮ್ರವರ್ಣಾ ವರಾನನಾ ॥ ೧೧೩ ॥

ದೇವೀ ತು ರಾಕ್ಷಸೀ ಚೈವ ಗೌರೀ ಚೈವ ಮಹಾಧನಾ ।
ಮನೋಜವಾ ವಾಯುಪತ್ನೀ ಋದ್ಧಿಶ್ಚ ಧನದಪ್ರಿಯಾ ॥ ೧೧೪ ॥

---

ನಿದ್ರೆಯನ್ನು ಕೊಡುವ ಮದಿರೆಯೂ, ಕಮಲದಲ್ಲಿ ವಾಸಮಾಡುವ ಶ್ರೀಯೂ, ಭೂತಿಯೂ, ಕಾಂತಿಶ್ರದ್ಧೆಯರೂ, ತುಷ್ಟಿಪುಷ್ಟಿಯನ್ನು ಕೊಡುವ ದೇವತೆಗಳೂ ಬಂದರು.

೧೧೦—೧೧೨. ದಕ್ಷನ ಮಗಳಾದ ಉಮಾ ಪಾರ್ವತೀ ಎಂದು ಹೆಸರು ಪಡೆದ, ಮೂರು ಲೋಕದಲ್ಲಿಯೂ ಸುಂದರಳಾದ, ಸ್ತ್ರೀಯರಿಗೆ ಸೌಭಾಗ್ಯವನ್ನು ಕೊಡುವ ಸತೀದೇವಿಯೂ ಬಂದಳು. ಜಯೆವಿಜಯೆಯರೂ, ಮಧುಚ್ಛಂದ, ಅಮರಾವತಿಯರೂ, ಸುಪ್ರಿಯೆ, ಜನಕಾಂತೆಯೂ, ಒಳ್ಳೆಯ ಆಭರಣಗಳನ್ನು ತೊಟ್ಟು, ಉಡುಗೆಯನ್ನುಟ್ಟುಕೊಂಡು ಗೌರಿಯೊಡನೆ ಸಾವಿತ್ರಿಯ ಮನೆಗೆ ಬಂದರು.

೧೧೩—೧೧೪. ಪುಲೋಮನ ಮಗಳಾದ ಸುಂದರಿಯಾದ ಶಚೀದೇವಿಯೂ, ಸ್ವಧಾಸ್ವಾಹೆಯರೂ, ಧೂಮ್ರವರ್ಣೆಯೂ, ಕುಬೇರನ ಹೆಂಡತಿಯಾದ ಗೌರಿಯೂ, ವಾಯುವಿನ ಹೆಂಡತಿಯಾದ ಮನೋಜವಳೂ, ಧನದನ ಹೆಂಡತಿಯಾದ ಋದ್ಧಿಯೂ

**ದೇವಕನ್ಯಾಸ್ತಥಾಯಾತಾ ದಾನವ್ಯೋ ದನುವಲ್ಲಭಾಃ ।**
**ಸಪ್ತರ್ಷೀಣಾಂ ಮಹಾಪತ್ನ್ಯ ಋಷೀಣಾಂ ಚ ತಥೈವ ಚ ॥ ೧೧೩ ॥**

**ಏವಂ ಭಗಿನ್ಯೋ ದುಹಿತಾ ವಿದ್ಯಾಧರೀಗಣಾಸ್ತಥಾ ।**
**ಪಿತೃಣಾಂ ರಕ್ಷಸಾಂ ಕನ್ಯಾಸ್ತಥಾನ್ಯಾ ಲೋಕಮಾತರಃ ॥ ೧೧೬ ॥**

**ವಧೂಭಿಶ್ಚ ಸ್ನುಷಾಭಿಶ್ಚ ಸಾವಿತ್ರೀ ಗಂತುಮಿಚ್ಛತಿ ।**
**ಅದಿತ್ಯಾದ್ಯಾಸ್ತಥಾ ಸರ್ವಾ ದಕ್ಷಕನ್ಯಾಃ ಸಮಾಗತಾಃ ॥ ೧೧೭ ॥**

**ತಾಭಿಃ ಪರಿವೃತಾ ಸಾಧ್ವೀ ಬ್ರಹ್ಮಾಣೀ ಕಮಲಾಲಯಾ ।**
**ಕಾಚಿನ್ಮೋದಕಮಾದಾಯ ಕಾಚಿಚ್ಛೂರ್ಪಂ ವರಾನನಾ ॥ ೧೧೮ ॥**

**ಫಲಪೂರಿತಮಾದಾಯ ಪ್ರಯಾತಾ ಬ್ರಹ್ಮಣೋಂತಿಕಂ ।**
**ಆಢಕ್ಯಃ ಶಣನಿಷ್ಪಾವರಾಜಮಾಷಾಂಸ್ತಥಾಪರಾ ॥ ೧೧೯ ॥**

**ದಾಡಿಮಾನಿ ವಿಚಿತ್ರಾಣಿ ಮಾತುಲಿಂಗಾನಿ ಶೋಭನಾಃ ।**
**ಕರೀರಾಣಿ ತಥಾ ಚಾನ್ಯಾ ಗೃಹೀತ್ವಾ ಕರಮರ್ದಕಾನ್ ॥ ೧೨೦ ॥**

---

ಮತ್ತು ದೇವಕನ್ಯೆಯರೂ, ದಾನವರ ಹೆಂಡಿರೂ, ಸಪ್ತರ್ಷಿಗಳ ಮತ್ತು ಋಷಿಗಳ ಹೆಂಡಿರೂ ಬಂದರು.

೧೧೬. ಹೀಗೆ ತಂಗಿಯರು, ಹೆಣ್ಣುಮಕ್ಕಳು, ವಿದ್ಯಾಧರಿಯರ ಗುಂಪು ಪಿತೃ ಕನ್ಯೆಯರು, ರಾಕ್ಷಸರ ಕನ್ಯೆಯರು, ಮತ್ತು ಲೋಕಮಾತೃಕೆಗಳು ಮತ್ತು ಹೊಸದಾಗಿ ಮದುವೆಯಾದವರು, ಸೊಸೆಯರು ಇವರೊಡನೆ ಸಾವಿತ್ರಿಯು ಹೋಗಲು ಇಚ್ಛಿಪಟ್ಟಳು.

೧೧೭. ಆದಿತ್ಯನ ಸ್ತ್ರೀಯರು, ಅಂತೆಯೇ ದಕ್ಷನ ಹೆಣ್ಣುಮಕ್ಕಳು, ಇವರೆಲ್ಲರೂ ಬಂದು ಸೇರಿದರು ಅವರೊಡನೆ ಕೂಡಿಕೊಂಡು ವಿಜೃಂಭಣೆಯಿಂದ ಆ ಬ್ರಹ್ಮನ ಹೆಂಡತಿಯಾದ ಸಾವಿತ್ರಿಯು ಹೊರಟಳು.

೧೧೮. ಒಬ್ಬಳು ಕಡುಬನ್ನು ಹಿಡಿದುಕೊಂಡಳು. ಮತ್ತೊಬ್ಬಳು ಹಣ್ಣಿನಿಂದ ತುಂಬಿದ ಮೊರವನ್ನು ತೆಗೆದುಕೊಂಡಳು.

೧೧೯-೧೨೦. ತೊಗರಿ, ಅವರೆ, ಉದ್ದು, ದಾಳಿಂಬೆ, ಮಾದಳದ ಹಣ್ಣು. ಬಿದಿರುಕಳಲೆ, ಮುಂತಾದ ಮಂಗಳಪದಾರ್ಥಗಳನ್ನು ಮೊರದಲ್ಲಿ ಹಿಡಿದಿದ್ದರು.

ಕೌಸುಂಭಕಂ ಜೀರಕಂ ಚ ಖರ್ಜೂರಂ ವಾ ಪರಾ ತಥಾ ।
ಉತ್ತಮಾನ್ಯಪರಾ ಗೃಹ್ಯ ನಾರಿಕೇರಾಣಿ ಸರ್ವಶಃ ॥ ೧೨೧ ॥

ದ್ರಾಕ್ಷಯಾ ಪೂರಿತಂ ಪಾತ್ರಂ ಶೃಂಗಾಟಕಂ ತಥಾಪರಾ ।
ಕರ್ಪೂರಾಣಿ ವಿಚಿತ್ರಾಣಿ ಜಂಬೂಕಾನಿ ಶುಭಾನಿ ಚ ॥ ೧೨೨ ॥

ಅಕ್ಷೋಟಾಮಲಕಾನ್ ಗೃಹ್ಯ ಜಂಬೀರಾಣಿ ತಥಾ ಪರಾ ।
ಬಿಲ್ವಾನಿ ಪರಿಪಕ್ವಾನಿ ಚಿಪಿಟಾನಿ ವರಾನನಾ ॥ ೧೨೩ ॥

ಅತುಲ್ಯಾನ್ನವಿಕಾರಾಣಿ ಬಹೂನಿ ವಿವಿಧಾನಿ ಚ ।
ಕಾರ್ಪಾಸತೂಲಿಕಾಶ್ಚಾನ್ಯಾ ವಸ್ತ್ರಂ ಕೌಸುಂಭಕಂ ತಥಾ ॥ ೧೨೪ ॥

ಏವಮಾದೀನಿ ಚಾನ್ಯಾನಿ ಗೃಹ್ಯ ಶೂರ್ಪೇ ವರಾನನಾಃ ।
ಸಾವಿತ್ರ್ಯಾ ಸಹಿತಾಃ ಸರ್ವಾಃ ಸಂಪ್ರಾಪ್ತಾಸ್ತಾಃ ಸದಃ ಶುಭಾಃ ॥ ೧೨೫ ॥

---

೧೨೧. ಕುಸುಮೆ, ಜೀರಿಗೆ, ಖರ್ಜೂರ, ಒಳ್ಳೊಳ್ಳೆಯ ತೆಂಗಿನಕಾಯಿಗಳನ್ನು ಮೊರಗಳಲ್ಲಿಟ್ಟು ಹಿಡಿದುಕೊಂಡಿದ್ದರು.

೧೨೨-೧೨೩. ದ್ರಾಕ್ಷೆಯಿಂದ ತುಂಬಿದ ಪಾತ್ರೆಗಳನ್ನು ಶುಂಠಿಯಿಂದ ತುಂಬಿದ ಪಾತ್ರೆಯನ್ನೂ, ಪಚ್ಚಕರ್ಪೂರದಿಂದ ತುಂಬಿದ ಪಾತ್ರೆಯನ್ನೂ, ನೇರಳೆಹಣ್ಣಿನ ಪಾತ್ರೆಯನ್ನೂ, ಆಲದ ಚಿಗುರುಹಣ್ಣುಗಳಿಂದ ಕೂಡಿದ ಪಾತ್ರೆಗಳನ್ನೂ, ನೆಲ್ಲಿಯ ಕಾಯಿಯಿಂದ ಕೂಡಿದ ಪಾತ್ರೆಯನ್ನೂ, ನಿಂಬೇಹಣ್ಣಿನ ಪಾತ್ರೆಯನ್ನೂ, ಬಿಲ್ವಪತ್ರೆ ಹಣ್ಣುಗಳ ಪಾತ್ರೆಯನ್ನೂ, ಅವಲಕ್ಕಿಯ ಪಾತ್ರೆಯನ್ನೂ, ಹೀಗೆ ಒಬ್ಬೊಬ್ಬರೂ ಒಂದೊಂದನ್ನು ಹಿಡಿದಿದ್ದರು.

೧೨೪. ಬಹು ರಸವತ್ತಾದ ಅನ್ನಗಳನ್ನು ನಾನಾಬಗೆಯಾಗಿ ಮಾಡಿಕೊಂಡು ಅವುಗಳನ್ನೂ, ಹತ್ತಿಯ ಬಟ್ಟೆಯ ಕುಪ್ಪುಸ, ಬಣ್ಣಹಾಕಿರುವ ವಸ್ತ್ರಗಳನ್ನೂ ಮೊರದಲ್ಲಿ ಹಾಕಿ ಹಿಡಿದಿದ್ದರು.

೧೨೫. ಇವೇ ಮೊದಲಾದವುಗಳನ್ನೆಲ್ಲಾ ಮೊರದಲ್ಲಿ ಹಾಕಿ ಮುತ್ತೈದೆಯರು ಹಿಡಿದುಕೊಂಡು ಆ ಸಾವಿತ್ರಿಯೊಡನೆ ಬಂದರು.

**ಸಾವಿತ್ರೀಮಾಗತಾಂ ದೃಷ್ಟ್ವಾ ಭೀತಸ್ತತ್ರ ಪುರಂದರಃ ।**
**ಅಧೋಮುಖಃ ಸ್ಥಿತೋ ಬ್ರಹ್ಮಾ ಕಿಮೇಷಾ ಮಾಂ ವದಿಷ್ಯತಿ ॥ ೧೨೬ ॥**

**ತ್ರಪಾನ್ವಿತೌ ವಿಷ್ಣುರುದ್ರೌ ಸರ್ವೇ ಚಾನ್ಯೇ ದ್ವಿಜಾತಯಃ ।**
**ಸಭಾಸದಸ್ತಥಾ ಭೀತಾಸ್ತಥಾ ಚಾನ್ಯೇ ದಿವೌಕಸಃ ॥ ೧೨೭ ॥**

**ಪುತ್ರಾಃ ಪೌತ್ರಾಃ ಪ್ರಪೌತ್ರಾಶ್ಚ ಮಾತುಲಾ ಭ್ರಾತರಸ್ತಥಾ ।**
**ಋಭವೋ ನಾಮ ಯೇ ದೇವಾ ದೇವಾನಾಮಪಿ ದೇವತಾಃ ॥ ೧೨೮ ॥**

**ವೈಲಕ್ಷ್ಯೇ ತು ಸ್ಥಿತಾಃ ಸರ್ವೇ ಸಾವಿತ್ರೀ ಕಿಂ ವದಿಷ್ಯತಿ ।**
**ಬ್ರಹ್ಮಪಾರ್ಶ್ವೇ ಸ್ಥಿತಾ ತತ್ರ ಕಿಂ ತು ವೈ ಗೋಪಕನ್ಯಕಾ ॥ ೧೨೯ ॥**

**ಮೌನೀಭೂತಾ ತು ಶೃಣ್ವಾನಾ ಸರ್ವೇಷಾಂ ವದತಾಂ ಗಿರಃ ।**
**ಅಧ್ವರ್ಯುಣಾ ಸಮಾಹೂತಾ ನಾಗತಾ ವರವರ್ಣಿನೀ ॥ ೧೩೦ ॥**

---

೧೨೬. ಸಾವಿತ್ರಿಯು ಬಂದುದನ್ನು ನೋಡಿ ಇಂದ್ರನು ಹೆದರಿದನು. ಬ್ರಹ್ಮನು, ಈಕೆಯು ಏನನ್ನುವಳೋ ಎಂದು ತಲೆಬಗ್ಗಿಸಿಕೊಂಡನು.

೧೨೭. ರುದ್ರನೂ, ವಿಷ್ಣುವೂ, ಎಲ್ಲಾ ಬ್ರಾಹ್ಮಣರೂ ನಾಚಿಕೆಗೊಂಡರು. ಸಭಾಸದರೂ, ಉಳಿದ ದೇವತೆಗಳೂ, ಹೆದರಿದರು.

೧೨೮. ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಸೋದರರು, ಸೋದರ ಮಾವಂದಿರು, ದೇವತೆಗಳಿಗೂ ದೇವತೆಗಳಾದ ಋಭುವೆಂಬ ದೇವತೆಗಳು ಇವರೆಲ್ಲರೂ ಸಾವಿತ್ರಿಯು ಏನನ್ನುವಳೋ ಎಂದು ಹೆದರಿಕೊಂಡಿದ್ದರು.

೧೨೯. ಆ ಗೋಪಕನ್ನಿಕೆಯಾದ ಗಾಯತ್ರಿಯು ಬ್ರಹ್ಮನ ಪಕ್ಕದಲ್ಲಿದ್ದು ಕೊಂಡು ಮಾತನಾಡದೆ ಎಲ್ಲರೂ ಹೇಳುತ್ತಿದ್ದ ಮಾತನ್ನು ಕೇಳುತ್ತಿದ್ದಳು.

೧೩೦—೧೩೨. ಅಧ್ವರ್ಯುವು ಹೋಗಿ ಕರೆದರೂ ಆ ಸಾವಿತ್ರಿಯು ಬರಲೇ ಇಲ್ಲ. ಅದಕ್ಕೋಸ್ಕರ ಇಂದ್ರನು ಬೇರೆ ಮತ್ತೊಬ್ಬ ಗೊಲ್ಲರ ಹುಡುಗಿಯನ್ನು

ಶಕ್ರೇಣಾನ್ಯಾ ತಥಾಭೀರಾಹೃತಾ ಸಾ ವಿಷ್ಣುನಾ ಸ್ವಯಂ ।
ಅನುಮೋದಿತಾ ಚ ರುದ್ರೇಣ ಪಿತ್ರಾ ದತ್ತಾ ಸ್ವಯಂ ತಥಾ ॥ ೧೩೧ ॥

ಕಥಂ ಸಾ ಭವಿತಾ ಯಜ್ಞೇ ಸಮಾಪ್ತಿಂ ವಾ ವ್ರಜೇತ್ಕಥಂ ।
ಏವಂ ಚಿಂತಯತಾಂ ತೇಷಾಂ ಪ್ರವಿಷ್ಟಾ ಕಮಲಾಲಯಾ ॥ ೧೩೨ ॥

ವೃತೋ ಬ್ರಹ್ಮಾ ಸದಸ್ಯೈಸ್ತು ಋತ್ವಿಗ್ಭಿರ್ದೈವತೈರಥ ।
ಹೂಯಂತೇ ಚಾಗ್ನಯಸ್ತತ್ರ ಬ್ರಾಹ್ಮಣೈರ್ವೇದಪಾರಗೈಃ ॥ ೧೩೩ ॥

ಪತ್ನೀಶಾಲಾಸ್ಥಿತಾ ಗೋಪೀ ಏಣಶೃಂಗಾ ಸಮೇಖಲಾ ।
ಕ್ಷೌಮವಸ್ತ್ರಪರೀಧಾನಾ ಧ್ಯಾಯಂತೀ ಪರಮಂ ಪದಂ ॥ ೧೩೪ ॥

ಪ್ರತಿವ್ರತಾ ಪತಿಪ್ರಾಣಾ ಪ್ರಾಧಾನ್ಯೇ ವಿನಿವೇಶಿತಾ ।
ರೂಪಾನ್ವಿತಾ ವಿಶಾಲಾಕ್ಷೀ ತೇಜಸಾ ಭಾಸ್ಕರೋಪಮಾ ॥ ೧೩೫ ॥

ದ್ಯೋತಯಂತೀ ಸದಸ್ತತ್ರ ಸೂರ್ಯಸ್ಯೇವ ಯಥಾ ಪ್ರಭಾ ।
ಜ್ವಲಮಾನಂ ತಥಾ ವಹ್ನಿಂ ಶ್ರಯಂತೇ ಋತ್ವಿಜಸ್ತಥಾ ॥ ೧೩೬ ॥

---

ತಂದನು. ವಿಷ್ಣುವು ಅದನ್ನು ಒಪ್ಪಿಕೊಂಡನು. ರುದ್ರನೂ ಒಪ್ಪಿದನು. ತಂದೆಯಾಗಿ ಅವನೇ ಮದುವೆಮಾಡಿದನು. ಅವಳು ಯಜ್ಞದಲ್ಲಿ ಯಾವ ಭಾಗವನ್ನು ವಹಿಸುವಳೋ? ಯಾಗವು ಹೇಗೆತಾನೇ ನಡೆಯುತ್ತದೆಯೋ, ಹೇಗೆತಾನೆ ಕೊನೆಗಾಣುತ್ತದೆಯೋ? ಎಂದು ಅವರೆಲ್ಲರೂ ಯೋಚಿಸುತ್ತಿರಲು, ಅಷ್ಟರೊಳಗೆ ಈ ಸಾವಿತ್ರಿಯೂ ಬಂದಳು.

೧೩೩. ಸದಸ್ಯರೂ, ಋತ್ವಿಕ್ಕುಗಳೂ, ದೇವತೆಗಳೂ ಬ್ರಹ್ಮನನ್ನು ವರಿಸಿದರು. ವೇದಪಾರಗರಾದ ಬ್ರಾಹ್ಮಣರು ಅಗ್ನಿಯಲ್ಲಿ ಹೋಮಮಾಡುತ್ತಿದ್ದರು.

೧೩೪-೧೩೫. ಆ ಗೋಪಿಯು ಹುಲ್ಲೆಯ ಕೊಂಬನ್ನು ಕಟ್ಟಿಕೊಂಡು, ಮೇಖಲೆಯನ್ನು ಧರಿಸಿ, ಅಗಸೆಬಟ್ಟೆಯನ್ನುಟ್ಟು, ಪರಮಪದವನ್ನು ಧ್ಯಾನಿಸುತ್ತಾ ಪತಿವ್ರತೆ ಪತಿಪ್ರಾಣೆಯಾಗಿ ಪ್ರಧಾನಸ್ಥಾನವನ್ನು ಹೊಂದಿ, ರೂಪಿನಿಂದಲೂ ತೇಜಸ್ಸಿನಿಂದಲೂ ಸೂರ್ಯನಂತಿದ್ದು ಸದಸ್ಸನ್ನು ಪ್ರಕಾಶಿಸುತ್ತ ಪತ್ನೀಶಾಲೆಯಲ್ಲಿದ್ದಳು.

೧೩೬-೧೩೭. ಆಗ ಉರಿಯುತ್ತಿರುವ ಅಗ್ನಿಯ ಬಳಿಯಲ್ಲಿ ಋತ್ವಿಕ್ಕುಗಳಿದ್ದರು. ಯಜ್ಞದಲ್ಲಿ ಪಾಲನ್ನು ಹೊಂದತಕ್ಕ ದೇವತೆಗಳು ಪಶುವಿನ ಭಾಗವನ್ನು

**ಪಶೂನಾಮಿವ ಗೃಹ್ಣಾನಾ ಭಾಗಂ ಸ್ವಸ್ವಚರೋರ್ಮುದಾ ।**
**ಯಜ್ಞಭಾಗಾರ್ಥಿನೋ ದೇವಾ ವಿಲಂಬಾದ್ಭ್ರುವಕ್ಲೇ ತದಾ ॥ ೧೩೭ ॥**

**ಕಾಲಹೀನಂ ನ ಕರ್ತವ್ಯಂ ಕೃತಂ ನ ಫಲದಂ ಯತಃ ।**
**ವೇದೇಷ್ವೇವಮಧಿಕಾರೋ ದೃಷ್ಟಃ ಸರ್ವೈರ್ಮನೀಷಿಭಿಃ ॥ ೧೩೮ ॥**

**ಪ್ರವರ್ಗ್ಯೇ ಕ್ರಿಯಮಾಣೇ ತು ಬ್ರಾಹ್ಮಣೈರ್ವೇದಪಾರಗೈಃ ।**
**ಕ್ಷೀರದ್ವಯೇನ ಸಂಯುಕ್ತಭೂತೇನಾಧ್ವರ್ಯುಣಾ ತಥಾ ॥ ೧೩೯ ॥**

**ಉಪಹೂತೇನಾಗತೇನ ಚಾಹೂತೇಷು ದ್ವಿಜನ್ಮಸು ।**
**ಕ್ರಿಯಮಾಣೇ ತಥಾ ಭಕ್ಷೇ ದೃಷ್ಟ್ವಾ ದೇವೀ ರುಷಾನ್ವಿತಾ ।**
**ಉವಾಚ ದೇವೀ ಬ್ರಹ್ಮಾಣಂ ಸದೋಮಧ್ಯೇ ತು ಮೌನಿನಂ ॥ ೧೪೦ ॥**

**॥ ಸಾವಿತ್ರ್ಯುವಾಚ ॥**

**ಕಿಮೇವಂ ಬುಧ್ಯತೇ ದೇವ ಕರ್ತುಮೇತದ್ವಿಚೇಷ್ಟಿತಂ ।**
**ಮಾಂ ಪರಿತ್ಯಜ್ಯ ಯತ್ಕಾಮಾತ್ಕೃತವಾನಸಿ ಕಿಲ್ಬಿಷಂ ॥ ೧೪೧ ॥**

---

ಹೊಂದುವ ಹಾಗೆ ತಮ್ಮ ತಮ್ಮ ಚರುವಿನ ಭಾಗವನ್ನು ತೆಗೆದುಕೊಳ್ಳಲು ಸಿದ್ಧರಾಗಿದ್ದು ಸಾವಕಾಶವಾಗಲು ಇಂತೆನ್ನುತ್ತಿದ್ದರು.

೧೩೮. ಕಾಲಾತೀತವಾಗಕೂಡದು. ಕಾಲಾತೀವಾದನಂತರ ಮಾಡಿಪುದು ಫಲವನ್ನು ಕೊಡುವುದಿಲ್ಲ. ವಿದ್ವಾಂಸರು ವೇದದಲ್ಲಿ ಹೀಗೆ ಹೇಳಿರುವುದೆಂದು ಹೇಳಿದ್ದಾರೆ.

೧೩೯. ವೇದಪಾರಗರಾದ ಬ್ರಾಹ್ಮಣರು ಪ್ರವರ್ಗ್ಯವನ್ನು ಮಾಡುತ್ತಿರಲು, ಅಧ್ವರ್ಯುವು ಎರಡು ಬಗೆಯ ಹಾಲುಗಳಿಂದ ಸೇರಿಸಿ ಮಾಡಿದ ಪದಾರ್ಥವನ್ನು ಹಿಡಿದು ಅಧ್ವರ್ಯುವು ಕೂಗಲು ಬ್ರಾಹ್ಮಣರು ಬಂದರು.

೧೪೦. ಭಕ್ಷ್ಯವನ್ನು ಅವರು ಮಾಡುತ್ತಿರಲು, ಅದನ್ನು ಸಾವಿತ್ರಿಯು ನೋಡಿ ಕೋಪಗೊಂಡು, ಸದಸ್ಸಿನ ಮಧ್ಯದಲ್ಲಿ ಮೌನದಿಂದಿರುವ ಬ್ರಹ್ಮನನ್ನು ಕುರಿತು ಇಂತೆಂದಳು.

೧೪೧. ಸಾವಿತ್ರಿಯು ಹೇಳಿದಳು :—ಎಲೈ ದೇವನೇ, ನಿನಗಿದೇನು ತಿಳುವಳಿಕೆ ಬಂದಿತು? ಇದೇನು ಮಾಡಲು ಹೊರಟಿದ್ದೀಯೆ? ಕಾಮನಿಗಧೀನನಾಗಿ ನನ್ನನ್ನು ಬಿಟ್ಟು ಇದೇನು ಈ ಪಾಪಕೆಲಸವನ್ನು ಮಾಡುತ್ತಿದ್ದೀಯೆ?

ನ ತುಲ್ಯಾ ಪಾದರಜಸಾ ಮಮೇಯಂ ಗೋಪಕನ್ಯಕಾ ।
ಯದ್ವದಂತಿ ಜನಾಃ ಸರ್ವೇ ಸಂಗತಾಃ ಸದಸಿ ಸ್ಥಿತಾಃ ॥ ೧೪೨ ॥

ಆಜ್ಞಾಮೈಶ್ವರ್ಯಭೂತಾನಾಂ ತತ್ಕುರಷ್ವ ಯದೀಚ್ಛಸಿ ।
ಭವತಾ ರೂಪಲೋಭೇನ ಕೃಕಂ ಲೋಕವಿಗರ್ಹಿತಂ ॥ ೧೪೩ ॥

ನ ಪುತ್ರೇಷು ಕೃತಾ ಲಜ್ಜಾ ಪೌತ್ರೇಷು ಚ ನ ತೇ ಪ್ರಭೋ ।
ಕಾಮಕಾರಕೃತಂ ಮನ್ಯೇ ಏತತ್ಕರ್ಮ ವಿಗರ್ಹಿತಂ ॥ ೧೪೪ ॥

ಪಿತಾಮಹೋಽಸಿ ದೇವಾನಾಮೃಷೀಣಾಂ ಪ್ರಪಿತಾಮಹಃ ।
ಕಥಂ ನ ತೇ ತ್ರಪಾ ಜಾತಾ ಆತ್ಮನಃ ಪಶ್ಯತಸ್ತನುಂ ॥ ೧೪೫ ॥

ಲೋಕಮಧ್ಯೇ ಕೃತಂ ಹಾಸ್ಯಮಹಂ ಚಾಪಿ ವಿಮಾನಿತಾ ।
ಯದ್ಯೇಷ ತೇ ಸ್ಥಿರೋ ಭಾವಸ್ತಿಷ್ಠ ದೇವ ನಮೋಽಸ್ತು ತೇ ॥ ೧೪೬ ॥

---

೧೪೨-೧೪೩. ಈ ಗೋಪಕನ್ನಿಕೆಯು ನನ್ನ ಪಾದಧೂಳಿಗೂ ಸಮವಲ್ಲವಲ್ಲ. ಈ ಸಭೆಯಲ್ಲಿ ಕೂಡಿರುವ ಜನರೆಲ್ಲ ಸೇರಿ ಹೇಗೆ ಹೇಳುತ್ತಾರೆಯೋ ಹಾಗೆ ಮಾಡು. ನಿನಗಿಷ್ಟವಿದ್ದರೆ ಶಕ್ತಿವಂತರ ಆಜ್ಞೆಯನ್ನು ಅನುಸರಿಸು. ನೀನು ರೂಪಿನ ಆಸೆಯಿಂದ ಜನನಿಂದ್ಯವಾದ ಕೆಲಸವನ್ನು ಮಾಡಿದೆ.

೧೪೪. ಮಕ್ಕಳಿದ್ದರೂ ನಿನಗೆ ನಾಚಿಕೆಯಿಲ್ಲ. ಮಮ್ಮಕ್ಕಳಿದ್ದರೂ ಕೂಡ ಇಲ್ಲವಲ್ಲ. ಕಾಮದಿಂದ ಮಾಡಿಕೊಂಡ ಈ ಕೆಲಸವು ನಿಂದ್ಯವಾದುದೆಂದು ಕಾಣುತ್ತದೆ.

೧೪೫. ದೇವತೆಗಳಿಗೆ ತಾತನಾಗಿದ್ದಿಯೆ. ಋಷಿಗಳಿಗೆ ಮುತ್ತಾತನಾಗಿದ್ದೀಯೆ. ಈರೀತಿಯಾದ ನೀನು ನಿನ್ನ ಮೈಯನ್ನು ನೋಡಿಕೊಳ್ಳುತ್ತಿದ್ದರೂ ಕೂಡ ನಾಚಿಕೆಯೇ ಉಂಟಾಗಲಿಲ್ಲವಲ್ಲ?

೧೪೬. ಜನಗಳ ಮಧ್ಯದಲ್ಲಿ ಹಾಸ್ಯಕ್ಕೆ ಗುರಿಯಾದೆ. ನನಗೂ ಅವಮಾನ ಮಾಡಿದೆ. ನಿನ್ನ ಈ ಬುದ್ಧಿಯೇ ಸ್ಥಿರವಾಗಿರುವ ಪಕ್ಷದಲ್ಲಿ ಹಾಗೆಯೇ ಇರು. ನಿನಗೆ ನಮಸ್ಕಾರವು.

**ಅಹಂ ಕಥಂ ಸಖೀನಾಂ ತು ದರ್ಶಯಿಷ್ಯಾಮಿ ವೈ ಮುಖಂ ।**
**ಭರ್ತ್ರಾ ಮೇ ವಿಧೃತಾ ಪತ್ನೀ ಕಥಮೇತದಹಂ ವದೇ ॥ ೧೪೭ ॥**

**॥ ಬ್ರಹ್ಮೋವಾಚ ॥**

**ಋತ್ವಿಗ್ಭಿಃ ಸಂಸ್ತುತಶ್ಚಾಹಂ ದೀಕ್ಷಾಕಾಲಾದನಂತರಂ ।**
**ಪತ್ನೀಂ ವಿನಾ ನ ಹೋಮೋಽತ್ರ ಶೀಘ್ರಂ ಪತ್ನೀಮಿಹಾನಯ ॥ ೧೪೮ ॥**

**ಶಕ್ರೇಣೈಷಾ ತ್ವಿಹಾನೀತಾ ದತ್ತಾ ಚೇಯಂ ತು ವಿಷ್ಣುನಾ ।**
**ಸಂಗೃಹೀತಾ ಮಯಾ ಸುಭ್ರೂಃ ಕ್ಷಮಸ್ವೇದಂ ಮಯಾ ಕೃತಂ ॥ ೧೪೯ ॥**

**ನ ಚಾಪರಾಧಂ ಭೂಯೋಽನ್ಯಂ ಕರಿಷ್ಯೇ ತವ ಸುವ್ರತೇ ।**
**ಪಾದಯೋಃ ಪತಿತಸ್ತೇಽಹಂ ಕ್ಷಮ ದೇವಿ ನಮೋಽಸ್ತು ತೇ ॥ ೧೫೦ ॥**

**॥ ಪುಲಸ್ತ್ಯ ಉವಾಚ ॥**

**ಏವಮುಕ್ತಾ ತದಾ ಕ್ರುದ್ಧಾ ಬ್ರಹ್ಮಾಣಂ ಶಪ್ತುಮುದ್ಯತಾ ।**
**ಯದಿ ಮೇಽಸ್ತಿ ತಪಸ್ತಪ್ತಂ ಗುರುವಸ್ತೋಷಿತಾ ಯದಿ ॥ ೧೫೧ ॥**

---

೧೪೭. ನಾನು ನನ್ನ ಸಖಿಯರಿಗೆ ಹೇಗೆ ಮುಖವನ್ನು ತೋರಿಸಲಿ? ನನ್ನ ಗಂಡನು ಬೇರೆ ಮದುವೆಯಾದನು ಎಂದು ಅವರಿಗೆ ಹೇಗೆ ಹೇಳಲಿ?

೧೪೮. ಬ್ರಹ್ಮನು ಹೇಳಿದನು:—ಋತ್ವಿಕ್ಕುಗಳು ದೀಕ್ಷೆಯ ಕಾಲವಾದ ಮೇಲೆ ನನ್ನನ್ನು ಕೂಗಿದರು. ಪತ್ನಿಯಿಲ್ಲದೆ ಹೋಮವು ನಡೆಯುವಂತಿಲ್ಲ. ಪತ್ನಿಯನ್ನು ಕರೆದುಕೊಂಡು ಬಾ ಎಂದರು.

೧೪೯. ಇಂದ್ರನು ಈಕೆಯನ್ನು ಕರೆತಂದನು. ವಿಷ್ಣುವು ಕೊಟ್ಟನು. ನಾನು ಪರಿಗ್ರಹಿಸಿದೆ. ಎಲೈ ಸುಭ್ರುವೇ, ನೀನು ಇದನ್ನು ಕ್ಷಮಿಸು.

೧೫೦. ಎಲೈ ಸುವ್ರತಳೇ, ಮತ್ತೆ ತಪ್ಪನ್ನು ಮಾಡುವುದಿಲ್ಲ. ನಿನ್ನ ಕಾಲಿಗೆ ಬೀಳುತ್ತೇನೆ. ನಿನಗೆ ನಮಸ್ಕಾರವು.

೧೫೧-೧೫೨. ಪುಲಸ್ತ್ಯನು ಹೇಳಿದನು:- ಹೀಗೆ ಹೇಳಲು ಸಾವಿತ್ರಿಯು ಕೋಪಗೊಂಡು ಆ ಬ್ರಹ್ಮನನ್ನು ಶಪಿಸಲು ಪ್ರಯತ್ನಪಟ್ಟು, ನಾನು ತಪಸ್ಸನ್ನು

ಸರ್ವೇ ಬ್ರಹ್ಮಸಮೂಹೇಷು ಸ್ಥಾನೇಷು ವಿವಿಧೇಷು ಚ ।
ನ ತು ತೇ ಬ್ರಾಹ್ಮಣಾಃ ಪೂಜಾಂ ಕರಿಷ್ಯಂತಿ ಕದಾಚನ ॥ ೧೫೨ ॥

ಋತೇ ತು ಕಾರ್ತಿಕೀಮೇಕಾಂ ಪೂಜಾಂ ಸಾಂವತ್ಸರೀಂ ತವ ।
ಕರಿಷ್ಯಂತಿ ದ್ವಿಜಾಃ ಸರ್ವೇ ಮರ್ತ್ಯಾ ನಾನ್ಯತ್ರ ಭೂತಲೇ ॥ ೧೫೩ ॥

ಏತದ್ಬ್ರಹ್ಮಾಣಮುಕ್ತ್ವಾಹ ಶತಕ್ರತುಮುಪಸ್ಥಿತಂ ॥ ೧೫೪ ॥

॥ ಸಾವಿತ್ರ್ಯುವಾಚ ॥

ಭೋ ಭೋಃ ಶಕ್ರ ತ್ವಯಾನೀತಾ ಆಭೀರೀ ಬ್ರಹ್ಮಣೋಂತಿಕಂ ।
ತಸ್ಮಾತ್ತ್ವೇ ಕ್ಷುದ್ರಕಂ ಕರ್ಮ ತಸ್ಮಾತ್ತ್ವಂ ಲಪ್ಸ್ಯಸೇ ಫಲಂ ॥ ೧೫೫ ॥

ಯದಾ ತ್ವಂ ಸಂಗ್ರಾಮಮುಖೇ ಸ್ಥಾತಾ ಶಕ್ರ ಭವಿಷ್ಯಸಿ ।
ತದಾ ತ್ವಂ ಶತ್ರುಭಿರ್ಬದ್ಧೋ ನೀತಃ ಪರಮಿಕಾಂ ದಶಾಂ ॥ ೧೫೬ ॥

---

ಮಾಡಿದ್ದರೆ, ಗುರುಗಳನ್ನು ಸಂತೋಷಪಡಿಸಿದ್ದರೆ, ಬ್ರಾಹ್ಮಣಸಮೂಹದಲ್ಲಿ ಎಲ್ಲ ಜಾಗಗಳಲ್ಲಿಯೂ, ನಾನಾಬಗೆಯಾದ ಸ್ಥಳಗಳಲ್ಲಿಯೂ ಬ್ರಾಹ್ಮಣರು ನಿನಗೆ ಯಾವಾಗಲೂ ಪೂಜೆಯನ್ನೇ ಮಾಡಬೇಡ.

೧೫೩-೧೫೪. ವರ್ಷಕ್ಕೊಂದು ಬಾರಿ ಮಾತ್ರ ಕಾರ್ತಿಕಮಾಸದಲ್ಲಿ ಬ್ರಾಹ್ಮಣರೂ ಮನುಜರೂ ಭೂಮಿಯಲ್ಲಿ ಪೂಜಿಸಲಿ. ಇನ್ನೆಲ್ಲಿಯೂ ಪೂಜೆಯು ಬೇಡ ಎಂದು ಬ್ರಹ್ಮನನ್ನು ಶಪಿಸಿ, ಹತ್ತಿರದಲ್ಲಿ ನಿಂತಿದ್ದ ಇಂದ್ರನನ್ನು ಕುರಿತು ಇಂತೆಂದಳು.

೧೫೫. ಸಾವಿತ್ರಿಯು ಹೇಳಿದಳು:—ಎಲೈ ಶಕ್ರನೇ, ನೀನು ಈ ಗೊಲ್ಲರ ಹುಡುಗಿಯನ್ನು ಬ್ರಹ್ಮನ ಬಳಿಗೆ ಕರೆದುತಂದೆ. ನೀನು ಈ ಅಲ್ಪವಾದ ಕೆಟ್ಟಕೆಲಸವನ್ನು ಮಾಡಿದುದರಿಂದ ಅದಕ್ಕೆ ಸರಿಯಾದ ಫಲವನ್ನು ಹೊಂದು.

೧೫೬-೧೫೭. ನೀನು ಯುದ್ಧಕ್ಕೆ ಎದುರಿಗೆ ನಿಂತಾಗ ನೀನು ಶತ್ರುಗಳಿಂದ ಕಟ್ಟಲ್ಪಟ್ಟ ದುರವಸ್ಥೆಯನ್ನು ಹೊಂದುತ್ತೀಯೆ. ಆಗ ಏನೂ ಇಲ್ಲದವನಾಗಿ ಬಲ

**ಅಕಿಂಚನೋ ನಷ್ಟಸತ್ತ್ವಃ ಶತ್ರೂಣಾಂ ನಗರೇ ಸ್ಥಿತಃ ।**
**ಪರಾಭವಂ ಮಹತ್ಪ್ರಾಪ್ಯ ಅಚಿರಾದೇವ ಮೋಕ್ಷ್ಯಸೇ ॥ ೧೫೭ ॥**

**ಶಕ್ರಂ ಶಪ್ತ್ವಾ ತದಾ ದೇವೀ ವಿಷ್ಣುಂ ವಾಕ್ಯಮಥಾಬ್ರವೀತ್ ।**
**ಭೃಗುವಾಕ್ಯೇನ ತೇ ಜನ್ಮ ಯದಾ ಮರ್ತ್ಯೇ ಭವಿಷ್ಯತಿ ॥ ೧೫೮ ॥**

**ಭಾರ್ಯಾವಿಯೋಗಜಂ ದುಃಖಂ ತದಾ ತ್ವಂ ತತ್ರ ಭೋಕ್ಷ್ಯಸೇ ।**
**ಹೃತಾ ಸಾ ಶತ್ರುಣಾ ಪತ್ನೀ ಪರೇ ಪಾರೇ ಮಹೋದಧೇಃ ॥ ೧೫೯ ॥**

**ನ ಚ ತ್ವಂ ಜ್ಞಾಸ್ಯಸೇ ನೀತಾಂ ಶೋಕೋಪಹತಚೇತನಃ ।**
**ಭ್ರಾತ್ರಾ ಸಹ ಪರಂ ಕಷ್ಟಮಾಪದಂ ಪ್ರಾಪ್ಯ ದುಃಖಿತಃ ॥ ೧೬೦ ॥**

**ಯದಾ ಯದುಕುಲೇ ಜಾತಃ ಕೃಷ್ಣಸಂಜ್ಞೋ ಭವಿಷ್ಯಸಿ ।**
**ಪಶೂನಾಂ ಪಾಲನಂ ಪ್ರಾಪ್ಯ ಚಿರಂ ಕಾಲಂ ಭ್ರಮಿಷ್ಯಸಿ ॥ ೧೬೧ ॥**

**ತಥಾಹ ರುದ್ರಂ ಕುಪಿತಾ ಯದಾ ದಾರುವನೇ ಸ್ಥಿತಃ ।**
**ತದಾ ತೇ ಋಷಯಃ ಕ್ರುದ್ಧಾಃ ಶಾಪಂ ದಾಸ್ಯಂತಿ ವೈ ಹರ ॥ ೧೬೨ ॥**

---

ಗುಂದಿ ಶತ್ರುಗಳ ನಗರದಲ್ಲಿರುತ್ತೀಯೆ. ಅಂತೂ ದೊಡ್ಡ ಅಪಜಯವನ್ನು ಹೊಂದಿ ಸ್ವಲ್ಪದಿನದಲ್ಲಿಯೇ ಬಿಡುಗಡೆಯನ್ನು ಹೊಂದುತ್ತೀಯೆ.

೧೫೮. ಇಂತು ಶಕ್ರನನ್ನು ಶಪಿಸಿ ವಿಷ್ಣುವನ್ನು ಕುರಿತು ಇಂತೆಂದಳು. ಭೃಗುವಿನ ಶಾಪದಿಂದ ನಿನ್ನ ಜನ್ಮವು ಭೂಲೋಕದಲ್ಲಿ ಉಂಟಾದಾಗ ಹೆಂಡತಿಯನ್ನು ಅಗಲಿದ ದುಃಖವನ್ನು ಅಲ್ಲಿ ನೀನು ಅನುಭವಿಸುತ್ತೀಯೆ.

೧೫೯-೧೬೦. ಕಳುವಾದ ಹೆಂಡತಿಯು ಸಮುದ್ರದ ಆಚೆ ಇದ್ದರೂ ನಿನಗೆ ಗೊತ್ತಾಗಬೇಡ. ಸೋದರನೊಡನೆ ಬಹು ಕಷ್ಟಗಳನ್ನು ಶೋಕದಿಂದ ಅನುಭವಿಸು.

೧೬೧. ಯದುಕುಲದಲ್ಲಿ ಹುಟ್ಟಿ, ಕೃಷ್ಣನೆಂಬ ಹೆಸರನ್ನು ಹೊಂದಿ, ಪಸುಗಳನ್ನು ಕಾಯುತ್ತಾ ಬಹುಕಾಲ ಸುತ್ತುತ್ತೀರು.

೧೬೨. ಬಳಿಕ ರುದ್ರನನ್ನು ಕುರಿತು ನೀನು ದಾರುವನದಲ್ಲಿದ್ದಾಗ ನಿನ್ನ ಮೇಲೆ ಋಷಿಗಳು ಕೋಪಗೊಂಡು ನಿನಗೆ ಶಾಪವನ್ನು ಕೊಡಲಿ.

ಭೋ ಭೋಃ ಕಾಪಾಲಿಕ ಕ್ಷುದ್ರ ಸ್ತ್ರಿಯೋಽಸ್ಮಾಕಂ ಜಿಹೀರ್ಷಸಿ ।
ತದೇತದ್ವರ್ಷಿತಂ ದೇವ ಭೂಮೌ ಲಿಂಗಂ ಪತಿಷ್ಯತಿ ॥ ೧೬೩ ॥

ವೀಹೀನಃ ಪೌರುಷೇಣ ತ್ವಂ ಮುನಿಶಾಪಾಚ್ಚ ಪೀಡಿತಃ ।
ಗಂಗಾತೀರೇ ಸ್ಥಿತಾ ಪತ್ನೀ ಸಾ ತ್ವಾಮಾಶ್ವಾಸಯಿಷ್ಯತಿ ॥ ೧೬೪ ॥

ಅಗ್ನೇ ತ್ವಂ ಸರ್ವಭಕ್ಷೋಽಸಿ ಪೂರ್ವಂ ಪುತ್ರೇಣ ಮೇ ಕೃತಃ ।
ಭೃಗುಣಾ ಧರ್ಮನಿತ್ಯೇನ ಕಥಂ ದಗ್ಧಂ ದಹಾಮ್ಯಹಂ ॥ ೧೬೫ ॥

ಜಾತವೇದೋಽಸಿ ರುದ್ರಸ್ತ್ವಾಂ ರೇತಸಾ ಪ್ಲಾವಯಿಷ್ಯತಿ ।
ಅಮೇಧ್ಯೇಷು ಚ ತೇ ಜಿಹ್ವಾ ಅಧಿಕಂ ಪ್ರಜ್ವಲಿಷ್ಯತಿ ॥ ೧೬೬ ॥

ಬ್ರಾಹ್ಮಣಾನೃತ್ವಿಜಃ ಸರ್ವಾನ್ಸಾವಿತ್ರೀ ವೈ ಶಶಾಪ ಹ ।
ಪ್ರತಿಗ್ರಹಾರ್ಥೇಽಗ್ನಿಹೋತ್ರೀ ವೃಥಾಟವ್ಯಾಶ್ರಯಾಃ ಸದಾ ॥ ೧೬೭ ॥

---

೧೬೩. ಎಲೈ ಕಪಾಲವನ್ನು ಹಿಡಿದಿರುವ ರುದ್ರನೇ, ಆಗ ನಮ್ಮ ಸ್ತ್ರೀಯರನ್ನು ಕದಿಯಲು ಪ್ರಯತ್ನಪಡುತ್ತೀಯೆ. ಆಗ ಉತ್ಥಾಪನೆಯಾಗಿರುವ ನಿನ್ನ ಶಿಶ್ನವು ಬಿದ್ದುಹೋಗುತ್ತದೆ.

೧೬೪. ನೀನು ಪುರುಷತನವಿಲ್ಲದೆ ಮುನಿಶಾಪದಿಂದ ಪೀಡಿತನೂ ಆಗಿರುವಾಗ ಗಂಗಾತೀರದಲ್ಲಿರುವ ನಿನ್ನ ಹೆಂಡತಿಯು ನಿನ್ನನ್ನು ಸಮಾಧಾನಪಡಿಸುತ್ತಾಳೆ.

೧೬೫. ಎಲೈ ಅಗ್ನಿಯೇ, ಧರ್ಮದಲ್ಲಿ ನಿರತನಾದ ನನ್ನ ಮಗನಾದ ಭೃಗುವು ನಿನಗೆ ಶಾಪವನ್ನು ಕೊಟ್ಟು ಸರ್ವಭಕ್ಷಕ (ಎಲ್ಲವನ್ನೂ ತಿನ್ನುವವನು ಅಥವಾ ದಹಿಸುವವನು) ನನ್ನಾಗಿ ಮಾಡಿದ್ದಾನೆ. ಮೊದಲೇ ನೊಂದಿರುವ ನಿನ್ನನ್ನು ಪುನಃ ನಾನು ಹೇಗೆ ನೋಯಿಸಲಿ ?

೧೬೬. ಎಲೈ ಅಗ್ನಿಯೇ, ನಿನ್ನಲ್ಲಿಯೇ ವೇದಗಳು ಹುಟ್ಟಿವೆ. ಆದರೂ ರುದ್ರನು ನಿನ್ನನ್ನು ತನ್ನ ತೇಜಸ್ಸಿನಿಂದ ನೆನಸಲಿ. ನಿನ್ನ ನಾಲಗೆಯು ಅಮೇಧ್ಯದ ಮೇಲೆಯೂ ಕೂಡ ಹೆಚ್ಚಾಗಿ ಪ್ರಜ್ವಲಿಸಲಿ.

೧೬೭. ಬಳಿಕ. ಬ್ರಾಹ್ಮಣರನ್ನೂ, ಋತ್ವಿಕ್ಕುಗಳನ್ನೂ ಸಾವಿತ್ರಿಯು ಶಪಿಸಿದಳು. ಎಲೈ ಬ್ರಾಹ್ಮಣರಿರಾ, ನೀವು ದಾನ ತೆಗೆದುಕೊಳ್ಳುವ ಆಸೆಯಿಂದ ಅಗ್ನಿಹೋತ್ರವನ್ನಿಟ್ಟುಕೊಳ್ಳಿ. ಕಾಡಿನಲ್ಲಿ ನಿಮ್ಮ ವಾಸವು ವ್ಯರ್ಥವಾಗಿರಲಿ.

**ಸದಾ ಕ್ಷೇತ್ರಾಣಿ ತೀರ್ಥಾನಿ ಲೋಭಾದೇವ ಭಜಿಷ್ಯಥ ।**
**ಪರಾನ್ನೇಷು ಸದಾ ತೃಪ್ತಾ ಅತೃಪ್ತಾಃ ಸ್ವಗೃಹೇಷು ಚ ॥ ೧೬೮ ॥**

**ಅಯಾಜ್ಯಯಾಜನಂ ಕೃತ್ವಾ ಕುತ್ಸಿತಸ್ಯ ಪ್ರತಿಗ್ರಹಂ ।**
**ವೃಥಾ ಧನಾರ್ಜನಂ ಕೃತ್ವಾ ವ್ಯಯಂ ಚೈವ ತಥಾ ವೃಥಾ ॥ ೧೬೯ ॥**

**ಮೃತಾನಾಮಂತೇ ಪ್ರೇತತ್ವಂ ಭವಿಷ್ಯತಿ ನ ಸಂಶಯಃ ।**
**ಏವಂ ಶಕ್ರಂ ತಥಾ ವಿಷ್ಣುಂ ರುದ್ರಂ ವೈ ಪಾವಕಂ ತಥಾ ॥ ೧೭೦ ॥**

**ಬ್ರಹ್ಮಾಣಂ ಬ್ರಾಹ್ಮಣಾಂಶ್ಚೈವ ಸರ್ವಾಂಸ್ತಾನಶಪದ್ರುಷಾ ।**
**ಶಾಪಂ ದತ್ವಾ ತಥಾ ತೇಷಾಂ ನಿಷ್ಕ್ರಾಂತಾ ಸದಸಸ್ತಥಾ ॥ ೧೭೧ ॥**

**ಜ್ಯೇಷ್ಠಂ ಪುಷ್ಕರಮಾಸಾದ್ಯ ತದಾ ಸಾ ಚ ಬಹಿಃ ಸ್ಥಿತಾ ।**
**ಲಕ್ಷ್ಮೀಂ ಪ್ರಾಹ ಸತೀಂ ತಾಂ ಚ ಇಂದ್ರಾಣೀಂ ಚ ವರಾನನಾಂ ॥ ೧೭೨ ॥**

---

೧೬೮. ಯಾವಾಗಲೂ ತೀರ್ಥಗಳನ್ನೂ, ಕ್ಷೇತ್ರಗಳನ್ನೂ ಲೋಭದಿಂದ ಸೇವಿಸಿರಿ. ಪರಾನ್ನದಿಂದ ತೃಪ್ತರಾಗುತ್ತಿರಿ. ತಮ್ಮ ತಮ್ಮ ಮನೆಯ ಅನ್ನದಿಂದ ತೃಪ್ತರಾಗದಿರಿ.

೧೬೯. ಅಯೋಗ್ಯರಿಗೆ ಯಾಗವನ್ನು ಮಾಡಿಸಿ. ಅಯುಕ್ತವಾದ ದಾನವನ್ನು ತೆಗೆದುಕೊಳ್ಳಿ. ಹಣಸಂಪಾದನೆಯನ್ನು ವ್ಯರ್ಥವಾಗಿ ಮಾಡಿ. ವ್ಯಯವನ್ನು ವ್ಯರ್ಥವಾಗಿ ಮಾಡಿ. ಸತ್ತಮೇಲೆ ನಿಮಗೆ ಪ್ರೇತತ್ವ ಬರಲಿ. ಸಂಶಯವಿಲ್ಲ.

೧೭೦. ಹೀಗೆ ಇಂದ್ರ, ವಿಷ್ಣು, ರುದ್ರ, ಅಗ್ನಿ, ಬ್ರಹ್ಮ, ಬ್ರಾಹ್ಮಣ ಇವರೆಲ್ಲರಿಗೂ ಕೋಪದಿಂದ ಶಾಪವನ್ನು ಕೊಟ್ಟಳು.

೧೭೧. ಅವರೆಲ್ಲರಿಗೂ ಶಾಪವನ್ನು ಕೊಟ್ಟು ಆ ಸಭಾಸ್ಥಾನದ ಹೊರಗೆ ಬಂದು ಜ್ಯೇಷ್ಠಪುಷ್ಕರಕ್ಕೆ ಹೋಗಿ ಹೊರಗೆ ನಿಂತಳು.

೧೭೨-೧೭೩. ಆಗ ಅಲ್ಲಿದ್ದ ಲಕ್ಷ್ಮಿ, ಸತಿ, ಶಚಿ ಮುಕ್ತ ಹೆಂಗಸರನ್ನು ಕುರಿತು

**ಯುವತೀಸ್ತಾ ಸ್ತಥೋವಾಚ ನಾಹಂ ಸ್ಥಾಸ್ಯಾಮಿ ಸಂಸದಿ ।**
**ತತ್ರ ಚಾಹಂ ಗಮಿಷ್ಯಾಮಿ ಯತ್ರ ಶ್ರೋಷ್ಯೇ ನ ವೈ ಧ್ವನಿಂ ॥ ೧೭೩ ॥**

**॥ ಪುಲಸ್ತ್ಯ ಉವಾಚ ॥**

**ತತಸ್ತಾಃ ಪ್ರಮದಾಃ ಸರ್ವಾಃ ಪ್ರಯಾತಾಃ ಸ್ವಂ ನಿಕೇತನಂ ।**
**ಸಾವಿತ್ರೀ ಚ ತದಾ ತಾಸಾಂ ಪುನಃ ಶಾಪಾಯ ಚೋದ್ಯತಾ ॥ ೧೭೪ ॥**

**ಯಸ್ಮಾನ್ಮಾಂ ತು ಪರಿತ್ಯಜ್ಯ ಗತಾಸ್ತಾ ದೇವಯೋಷಿತಃ ।**
**ತಾಸಾಮಪಿ ತಥಾ ಶಾಪಂ ಪ್ರದಾಸ್ಯೇ ಕುತ್ಸಿತಂ ಭೃಶಂ ॥ ೧೭೫ ॥**

**॥ ಸಾವಿತ್ರ್ಯುವಾಚ ॥**

**ನೈಕತ್ರ ವಾಸೋ ಲಕ್ಷ್ಮ್ಯಾಸ್ತು ಭವಿಷ್ಯತಿ ಕದಾಚನ ।**
**ಕ್ಷುದ್ರಾ ಸಾ ಚಲಚಿತ್ತಾ ಚ ಮೂರ್ಖೇಷು ಚ ವಸಿಷ್ಯತಿ ॥ ೧೭೬ ॥**

**ಮ್ಲೇಚ್ಛೇಷು ಪಾರ್ವತೀಯೇಷು ಕುತ್ಸಿತೇs ಕುತ್ಸಿತೇ ತಥಾ ।**
**ಮೂರ್ಖೇಷು ಚಾವಲಿಪ್ತೇಷು ಅಭಿಶಪ್ತೇ ದುರಾತ್ಮನಿ ॥ ೧೭೭ ॥**

---

ನಾನು ಸದಸ್ಸಿನಲ್ಲಿ ಕೂತುಕೊಳ್ಳುವುದಿಲ್ಲ. ಎಲ್ಲಿ ಯಾಗದ ಧ್ವನಿ ಕೇಳಿಬರುವುದಿಲ್ಲವೋ ಅಲ್ಲಿಗೆ ಹೋಗುತ್ತೇನೆ.

೧೭೪. ಪುಲಸ್ತ್ಯನು ಹೇಳಿದನು :—ಅನಂತರ ಅವಳ ಜೊತೆಯಲ್ಲಿ ಬಂದಿದ್ದ ಹೆಂಗಸರೆಲ್ಲರೂ ಅವರವರ ಮನೆಗೆ ಹೊರಟುಹೋಗಲು, ಸಾವಿತ್ರಿಯು ಕೋಪಗೊಂಡು ಅವರಿಗೆ ಶಾಪಕೊಡಲೆತ್ನಿಸಿದಳು.

೧೭೫. ನನ್ನನ್ನು ಆ ದೇವತೆಗಳ ಸ್ತ್ರೀಯರು ಬಿಟ್ಟುಹೋದುದರಿಂದ ಅವರಿಗೆ ಬಹುವಾಗಿ ಅಯೋಗ್ಯವಾದ (ಕೆಟ್ಟ) ಶಾಪವನ್ನು ಕೊಡುತ್ತೇನೆಂದು ಯೋಚಿಸಿ,

೧೭೬. ಸಾವಿತ್ರಿಯು ಹೇಳಿದಳು :—ಲಕ್ಷ್ಮಿಗೆ ಒಂದೇ ಜಾಗದಲ್ಲಿ ವಾಸವಿಲ್ಲದಿರಲಿ. ಕ್ಷುದ್ರಳಾಗಿಯೂ, ಚಂಚಲಮನಸ್ಸುಳ್ಳವಳಾಗಿಯೂ ಮೂರ್ಖರಲ್ಲಿ ವಾಸಮಾಡಲಿ.

೧೭೭. ಮ್ಲೇಚ್ಛರಲ್ಲಿಯೂ, ಪರ್ವತಪ್ರದೇಶದಲ್ಲಿರುವ ಅಯೋಗ್ಯರಲ್ಲಿಯೂ, ಮೂರ್ಖರಲ್ಲಿಯೂ, ಗರ್ವಿಷ್ಠರಲ್ಲಿಯೂ, ಅಪವಾದ ಹೊಂದಿದವರಲ್ಲಿಯೂ, ದುಷ್ಟರಲ್ಲಿಯೂ, ಈ ರೀತಿಯಾದ ಮನುಷ್ಯರಲ್ಲಿ ನೀನು ವಾಸಮಾಡು.

ಏವಂವಿಧೇ ನರೇ ತುಭ್ಯಂ ವಸತಿಃ ಶಾಪಕಾರಿತಾ ।
ಶಾಪಂ ದತ್ವಾ ತತಸ್ತಸ್ಯೈ ಇಂದ್ರಾಣೀಮುಶಪತ್ತದಾ ॥ ೧೭೮ ॥

ಬ್ರಹ್ಮಹತ್ಯಾಗತೇ ಚೇಂದ್ರೇ ಪತ್ಯೌ ತೇ ದುಃಖಕಾರಿಣಿ ।
ನಹುಷಾಪಹೃತೇ ರಾಜ್ಯೇ ದೃಷ್ಟ್ವಾ ತಾಂ ಯಾಚಯಿಷ್ಯತಿ ॥ ೧೭೯ ॥

ಅಹಮಿಂದ್ರಃ ಕಥಂ ಚೈಷಾ ನೋಪಸ್ಥಾಸ್ಯತಿ ಬಾಲಿಶಾ ।
ಸರ್ವಾನ್ದೇವಾನ್ ಹನಿಷ್ಯಾಮಿ ನ ಲಪ್ಸ್ಯೇಽಹಂ ಶಚೀಂ ಯದಿ ॥ ೧೮೦ ॥

ನಷ್ಟಾ ತ್ವಂ ಚ ಸದಾ ತ್ರಸ್ತಾ ವಾಕ್ಪತೇರ್ದುಃಖಿತಾ ಗೃಹೇ ।
ವಸಿಷ್ಯಸೇ ದುರಾಚಾರೇ ಶಾಪೇನ ಮಮ ಗರ್ವಿತೇ ॥ ೧೮೧ ॥

ದೇವಭಾರ್ಯಾಸು ಸರ್ವಾಸು ತದಾ ಶಾಪಮುಯುಚ್ಛತ ।
ನ ಚಾಪತ್ಯಕೃತಾಂ ಪ್ರೀತಿಂ ಸರ್ವಾ ಹ್ಯೇವ ಲಭಿಷ್ಯಥ ॥ ೧೮೨ ॥

ದಹ್ಯಮಾನಾ ದಿವಾ ರಾತ್ರೌ ವಂಧ್ಯಾಶಬ್ದೇನ ದೂಷಿತಾಃ ।
ಗೌರ್ಯಪ್ಯೇವಂ ತದಾ ಶಪ್ತಾ ಸಾವಿತ್ರ್ಯಾ ವರವರ್ಣಿನೀ ॥ ೧೮೩ ॥

---

೧೭೮—೧೮೧. ಆ ಲಕ್ಷ್ಮಿಗೆ ಹೀಗೆ ಶಾಪಕೊಟ್ಟು, ಅನಂತರ ಇಂದ್ರನ ಹೆಂಡತಿಗೆ ಶಾಪಕೊಟ್ಟಳು. ಇಂದ್ರನು ಬ್ರಹ್ಮಹತ್ಯೆ ಮಾಡಿ ದುಃಖಭಾಗಿಯಾಗಿರಲು, ನಹುಷನಿಗೆ ಇಂದ್ರಪದವಿ ಪ್ರಾಪ್ತವಾಗಿ ಆಗ ಇಂದ್ರನಾದ ನಹುಷನು ನಿನ್ನನ್ನು ನೋಡಿ—ನಾನು ಇಂದ್ರನು, ಈ ಇಂದ್ರಾಣಿಯು ನನ್ನನ್ನೇಕೆ ಸೇವಿಸುವುದಿಲ್ಲ? ಎಂದು ಕೇಳುತ್ತಾ, ಅವಳು ನನ್ನನ್ನು ಹೊಂದದಿದ್ದರೆ, ಎಲ್ಲ ದೇವತೆಗಳನ್ನೂ ಕೊಲ್ಲುತ್ತೇನೆಂದು ಗರ್ಜಿಸಲಿ. ಆಗ ನೀನು ಕಣ್ಣಿಗೆ ಕಾಣದಂತೆ ಹೆದರಿಕೊಂಡು ಬೃಹಸ್ಪತಿಯ ಮನೆಯಲ್ಲಿರು. ಅಲ್ಲಿ ದುಃಖವನ್ನು ಹೊಂದುತ್ತಾ ಕಾಲವನ್ನು ಕಳೆ. ಇದೇ ನನ್ನ ಶಾಪ.

೧೮೨. ಅನಂತರ ದೇವತೆಗಳ ಹೆಂಡತಿಗೂ ಕೂಡ, ನೀವು ಮಕ್ಕಳ ಪ್ರೀತಿಯನ್ನು ಹೊಂದದರೆ (ಮಕ್ಕಳನ್ನು ಪಡೆಯದೆ) ಹಗಲೂ ರಾತ್ರಿಯೂ ಬಂಜೆ ಎಂಬ ಕೆಟ್ಟಪದದಿಂದ ದುಃಖಿಸುತ್ತಿರಿ ಎಂದು ಶಾಪವನ್ನಿತ್ತಳು

೧೮೩. ಗೌರಿಗೂ ಕೂಡ ಇದೇ ರೀತಿಯಾಗಿ ಶಾಪವನ್ನು ಕೊಟ್ಟಳು. ಆ ಮೇಲೂ ಕೂಡ ಅಳುತ್ತಲೇ ಇರಲು, ವಿಷ್ಣುವು ಸಮಾಧಾನಮಾಡಿದನು.

ರುದಮಾನಾ ಚ ಸಾ ದೃಷ್ಟ್ವಾ ವಿಷ್ಣುನಾ ಚ ಪ್ರಸಾದಿತಾ ॥ ೧೮೪ ॥

॥ ವಿಷ್ಣುರುವಾಚ ॥

ಮಾ ರೋದೀಸ್ತ್ವಂ ವಿಶಾಲಾಕ್ಷಿ ಏಹ್ಯಾಗಚ್ಛ ಸದಃ ಶುಭೇ ।
ಪ್ರವಿಶ್ಯ ಚ ಸಭಾಂ ಧೇಹಿ ಮೇಖಲಾಂ ಕ್ಷೌಮವಾಸಸೀ ।
ಗೃಹಾಣ ದೀಕ್ಷಾಂ ಬ್ರಹ್ಮಾಣಿ ಪಾದೌ ಚ ಪ್ರಣಮಾಮಿ ತೇ ॥ ೧೮೫ ॥

ಪುಲಸ್ತ್ಯ ಉವಾಚ ॥

ಏವಮುಕ್ತಾಬ್ರವೀದ್ದೇವಂ ನಾಹಂ ಕುರ್ವೇ ವಚಸ್ತವ ।
ತತ್ರಾಹಂ ಚ ಗಮಿಷ್ಯಾಮಿ ಯತ್ರ ಶ್ರೋಷ್ಯೇ ನ ಚ ಧ್ವನಿಂ ॥ ೧೮೬ ॥

ಏತಾವದುಕ್ತ್ವಾ ಸಾರುಹ್ಯ ಉಚ್ಚೈಃ ಸ್ಥಾನೇ ಗಿರೌ ಸ್ಥಿತಾ ।
ವಿಷ್ಣುಸ್ತಸ್ಯಾಃ ಸ್ಥಿತೇ ಸ್ಥಿತ್ವಾ ಬಧ್ವಾ ಚ ಕರಸಂಪುಟಂ ।
ತುಷ್ಟಾವ ಪ್ರಣತೋ ಭೂತ್ವಾ ಭಕ್ತ್ಯಾ ಪರಮಯಾ ಸ್ಥಿತಃ ॥ ೧೮೭ ॥

॥ ವಿಷ್ಣುರುವಾಚ ॥

ಸರ್ವಗಾ ಸರ್ವಭೂತೇಷು ದ್ರಷ್ಟವ್ಯಾ ಸರ್ವತೋ ಭುವಿ ।

---

೧೮೪-೧೮೫. ವಿಷ್ಣುವು ಹೇಳಿದಳು:—ಎಲೈ ವಿಶಾಲವಾದ ಕಣ್ಣುಳ್ಳವಳೇ, ದುಃಖಿಸಬೇಡ, ಬಾ. ಸದಸ್ಸಿಗೆ ಬಾ. ಸಭೆಗೆ ಬಂದು ಮೌಂಜಿಯನ್ನು ಕಟ್ಟಿಕೋ. ದುಕೂಲಗಳನ್ನು ಧರಿಸು. ದೀಕ್ಷೆಯನ್ನು ಹೊಂದು. ನಿನ್ನ ಪಾದಗಳಿಗೆ ನಮಸ್ಕರಿಸುತ್ತೇನೆ.

೧೮೬. ಪುಲಸ್ತ್ಯನು ಹೇಳಿದನು:—ವಿಷ್ಣುವು ಹೀಗೆನ್ನಲು, ಎಲೈ ವಿಷ್ಣುವೇ, ನೀನು ಹೇಳಿದಂತೆ ನಡೆಯುವುದಿಲ್ಲ. ಈ ಧ್ವನಿಯೇ ಕಿವಿಗೆ ಬೀಳದಿರುವ ಸ್ಥಳಕ್ಕೆ ಹೋಗುತ್ತೇನೆ. ಎಂದು,

೧೮೭. ಆ ಸಾವಿತ್ರಿಯು ಇಷ್ಟನ್ನು ಹೇಳಿ ಬೆಟ್ಟವನ್ನು ಹತ್ತಿ ಎತ್ತರವಾದ ಸ್ಥಳದಲ್ಲಿ ನಿಂತಳು. ಅಲ್ಲಿ ವಿಷ್ಣುವೂ ಕೂಡ ಕೈಮುಗಿದುಕೊಂಡು ಬಹುವಾದ ಭಕ್ತಿಯಿಂದ ನಮ್ರನಾಗಿ ಸ್ತೋತ್ರಮಾಡಿದನು.

೧೮೮. ವಿಷ್ಣುವು ಹೇಳಿದನು:—ನೀನು ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದು

**ಸರ್ವಲೋಕೇಷು ಯತ್ಕಿಂಚಿದ್ದೃಶ್ಯಂ ತನ್ನ ವಿನಾ ತ್ವಯಾ ॥ ೧೮೮ ॥**

**ತಥಾಪಿ ಯೇಷು ಸ್ಥಾನೇಷು ದ್ರಷ್ಟವ್ಯಾಸಿ ತ್ವಮೀಪ್ಸುಭಿಃ ।**
**ಸ್ಮರ್ತವ್ಯಾ ಭೂತಿಕಾಮೈರ್ವಾ ತಾನಿ ವಕ್ಷ್ಯಾಮಿ ತತ್ತ್ವತಃ ॥ ೧೮೯ ॥**

**ಸಾವಿತ್ರೀ ಪುಷ್ಕರೇ ನಾಮ ತೀರ್ಥಾನಾಂ ಪ್ರವರೇ ಶುಭೇ ।**
**ವಾರಾಣಸ್ಯಾಂ ವಿಶಾಲಾಕ್ಷೀ ನೈಮಿಷೇ ಲಿಂಗಧಾರಿಣೀ ॥ ೧೯೦ ॥**

**ಪ್ರಯಾಗೇ ಲಲಿತಾ ದೇವೀ ಕಾಮುಕಾ ಗಂಧಮಾದನೇ ।**
**ಮಾನಸೇ ಕುಮುದಾ ನಾಮ ವಿಶ್ವಕಾಯಾ ತಥಾಂಬರೇ ॥ ೧೯೧ ॥**

**ಗೋಮಂತೇ ಗೋಮತೀ ನಾಮ ಮಂದರೇ ಕಾಮಚಾರಿಣೀ ।**
**ಮದೋತ್ಕಟಾ ಚೈತ್ರರಥೇ ಜಯಂತೀ ಹಸ್ತಿನಾಪುರೇ ॥ ೧೯೨ ॥**

**ಕಾನ್ಯಕುಬ್ಜೇ ತಥಾ ಗೌರೀ ರಂಭಾ ಮಲಯಪರ್ವತೇ ।**
**ಏಕಾಮ್ರಕೇ ಕೀರ್ತಿಮತೀ ವಿಶ್ವಾ ವಿಶ್ವೇಶ್ವರೀ ತಥಾ ॥ ೧೯೩ ॥**

**ಕರ್ಣಿಕೇ ಪುರುಹೂತೇತಿ ಕೇದಾರೇ ಮಾರ್ಗದಾಯಿನೀ ।**
**ನಂದಾ ಹಿಮವತಃ ಪೃಷ್ಠೇ ಗೋಕರ್ಣೇ ಭದ್ರಕಾಲಿಕಾ ॥ ೧೯೪ ॥**

---

ಕೊಂಡು ಎಲ್ಲ ಕಡೆಯಲ್ಲಿಯೂ ಕಾಣು. ಎಲ್ಲಾ ಲೋಕದಲ್ಲಿಯೂ ನೀನಿಲ್ಲದಿರುವ ಒಂದು ಪದಾರ್ಥವೂ ಇಲ್ಲದಿರಲಿ.

೧೮೯. ಆದರೂ ನಿನ್ನನ್ನು ನೋಡಬೇಕೆಂದಿರುವವರು ನಿನ್ನನ್ನು ಕಾಣ ಬಹುದಾದಂತಹ, ಐಶ್ವರ್ಯವನ್ನಪೇಕ್ಷಿಸುವವರು ಸ್ಮರಿಸುವಂತಹ, ಕೆಲವು ಸ್ಥಳಗಳನ್ನು ಹೇಳುತ್ತೇನೆ.

೧೯೦—೧೯೫. ಪುಷ್ಕರದಲ್ಲಿ ಸಾವಿತ್ರಿ, ವಾರಾಣಸಿಯಲ್ಲಿ ವಿಶಾಲಾಕ್ಷಿ. ನೈಮಿಷದಲ್ಲಿ ಲಿಂಗಧಾರಿಣಿ, ಪ್ರಯಾಗದಲ್ಲಿ ಲಲಿತೆ, ಗಂಧಮಾದನದಲ್ಲಿ ಕಾಮುಕೆ, ಮಾನಸದಲ್ಲಿ ಕುಮುದೆ, ಅಂಬರದಲ್ಲಿ (ಚಿದಂಬರದಲ್ಲಿ) ವಿಶ್ವಕಾಯೆ, ಗೋಮಂತದಲ್ಲಿ ಗೋಮತಿ, ಮಂದರದಲ್ಲಿ ಕಾಮಚಾರಿಣಿ, ಚೈತ್ರರಥದಲ್ಲಿ ಮದೋತ್ಕಟೆ, ಹಸ್ತಿನಾಪುರದಲ್ಲಿ ಜಯಂತಿ, ಕಾನ್ಯಕುಬ್ಜದಲ್ಲಿ ಗೌರೀ, ಮಲಯಪರ್ವತದಲ್ಲಿ ರಂಭೆ, ಏಕಾಮ್ರದಲ್ಲಿ ಕೀರ್ತಿಮತಿ, ವಿಶ್ವೇ, ವಿಶ್ವೇಶ್ವರೀ, ಕರ್ಣಿಕದಲ್ಲಿ ಪುರುಹೂತೆ, ಕೇದಾರದಲ್ಲಿ

ಸ್ಥಾನೇಶ್ವರೇ ಭವಾನೀ ತು ಬಿಲ್ವಕೇ ಬಿಲ್ವಪತ್ರಿಕಾ ।
ಶ್ರೀಶೈಲೇ ಮಾಧವೀ ದೇವೀ ಭದ್ರಾ ಭದ್ರೇಶ್ವರೇ ತಥಾ ॥ ೧೯೫ ॥

ಜಯಾ ವರಾಹಶ್ಶೈಲೇ ತು ಕಮಲಾ ಕಮಲಾಲಯೇ ।
ರುದ್ರಕೋಟ್ಯಾಂ ತು ರುದ್ರಾಣೀ ಕಾಲೀ ಕಾಲಂಜರೇ ತಥಾ ॥ ೧೯೬ ॥

ಮಹಾಲಿಂಗೇ ತು ಕಪಿಲಾ ಕರ್ಕೋಟೇ ಮುಕುಟೇಶ್ವರೀ ।
ಶಾಲಿಗ್ರಾಮೇ ಮಹಾದೇವೀ ಶಿವಲಿಂಗೇ ಜನಪ್ರಿಯಾ ॥ ೧೯೭ ॥

ನೀಲೋತ್ಪಲಾ ಮಾಯಾಪುರ್ಯಾಂ ಸಂನತಿರ್ಲಲಿತೇ ತಥಾ ।
ಉತ್ಪಲಾಕ್ಷೀ ಸಹಸ್ರಾಕ್ಷೇ ಹಿರಣ್ಯಾಕ್ಷೇ ಮಹೋತ್ಪಲಾ ॥ ೧೯೮ ॥

ಗಯಾಯಾಂ ಮಂಗಲಾ ನಾಮ ವಿಮಲಾ ಪುರುಷೋತ್ತಮೇ ।
ವಿಪಾಶಾಯಾಮಮೋಘಾಕ್ಷೀ ಪಾಟಲಾ ಪುಂಡ್ರವರ್ಧನೇ ॥ ೧೯೯ ॥

ನಾರಾಯಣೀ ಸುಪಾರ್ಶ್ವೇ ತು ತ್ರಿಕೂಟೇ ರುದ್ರಸುಂದರೀ ।
ವಿಪುಲೇ ವಿಪುಲಾ ನಾಮ ಕಲ್ಯಾಣೀ ಮಲಯಾಚಲೇ ॥ ೨೦೦ ॥

---

ಮಾರ್ಗದಾಯಿನಿ, ಹಿಮವತ್ಪೃಷ್ಠದಲ್ಲಿ ನಂದೆ, ಗೋಕರ್ಣದಲ್ಲಿ ಭದ್ರಕಾಳಿಕೆ, ಸ್ಥಾಣೇಶ್ವರದಲ್ಲಿ ಭವಾನೀ, ಬಿಲ್ವಕದಲ್ಲಿ ಬಿಲ್ವಪತ್ರಿಕೆ, ಶ್ರೀಶೈಲದಲ್ಲಿ ಮಾಧವೀ, ಭದ್ರೇ, ಭದ್ರೇಶ್ವರೀ ಎಂಬ ಹೆಸರುಗಳಿಂದ ಪೂಜಿತಳಾಗು.

೧೯೬—೧೯೮. ವರಾಹಶೈಲದಲ್ಲಿ ಕಮಲೆ, ಕಮಲಾಲಯೆ, ರುದ್ರಕೋಟಿಯಲ್ಲಿ ರುದ್ರಾಣೀ, ಕಾಳಂಜರದಲ್ಲಿ ಕಾಳಿ, ಮಹಾಲಿಂಗದಲ್ಲಿ ಕಪಿಲೆ, ಕರ್ಕೋಟದಲ್ಲಿ ಮುಕುಟೇಶ್ವರಿ, ಸಾಲಿಗ್ರಾಮದಲ್ಲಿ ಮಹಾದೇವೀ, ಶಿವಲಿಂಗದಲ್ಲಿ ಜನಪ್ರಿಯೆ, ಮಾಹಿಯಲ್ಲಿ ನೀಲೋತ್ಪಲೆ, ಸನ್ನತಿ, ಲಲಿತೆ, ಸಹಸ್ರಾಕ್ಷದಲ್ಲಿ ಉತ್ಪಲಾಕ್ಷಿ, ಹಿರಣ್ಯಾಕ್ಷದಲ್ಲಿ ಮಹೋತ್ಪಲೆ ಎಂಬ ಹೆಸರುಗಳಿಂದ ಪೂಜಿತಳಾಗು.

೧೯೯—೨೦೫. ಗಯೆಯಲ್ಲಿ ಮಂಗಳೆ, ಪುರುಷೋತ್ತಮದಲ್ಲಿ ವಿಪುಲೆ, ವಿಪಾಶೆಯಲ್ಲಿ ಅಮೋಘಾಕ್ಷಿ, ಪುಂಡ್ರವರ್ಧನದಲ್ಲಿ ಪಾಟಲೆ, ಸುಪಾರ್ಶ್ವದಲ್ಲಿ ನಾರಾಯಣಿ, ತ್ರಿಕೂಟದಲ್ಲಿ ರುದ್ರಸುಂದರಿ, ವಿಪುಲದಲ್ಲಿ ವಿಪುಲೆ, ಮಲಯಾಚಲದಲ್ಲಿ ಕಲ್ಯಾಣಿ, ಕೋಟಿತೀರ್ಥದಲ್ಲಿ ಕೋಟವೀ, ನಾಗಬಂಧನದಲ್ಲಿ ಸುಗಂಧೆ, ಕುಬ್ಜಾಮ್ರಕ

**ಕೋಟವೀ ಕೋಟತೀರ್ಥೇ ತು ಸುಗಂಧಾ ನಾಗಬಂಧನೇ ।**
**ಕುಬ್ಜಾಮ್ರಕೇ ತ್ರಿಸಂಧ್ಯಾ ತು ಗಂಗಾದ್ವಾರೇ ಹರಿಪ್ರಿಯಾ ॥ ೨೦೧ ॥**

**ಶಿವಚಕ್ರೇ ಶುಭಾ ಚಂಡಾ ನಂದಿನೀ ದೇವಿಕಾತಟೇ ।**
**ರುಕ್ಮಿಣೀ ದ್ವಾರವತ್ಯಾಂ ತು ರಾಧಾ ವೃಂದಾವನೇ ತಥಾ ॥ ೨೦೨ ॥**

**ದೇವಕೀ ಮಥುರಾಯಾಂ ತು ಪಾತಾಲೇ ಪರಮೇಶ್ವರೀ ।**
**ಚಿತ್ರಕೂಟೇ ತಥಾ ಸೀತಾ ವಿಂಧ್ಯೇ ವಿಂಧ್ಯನಿವಾಸಿನೀ ॥ ೨೦೩ ॥**

**ಸಹ್ಯಾದ್ರಾವೇಕವೀರಾ ತು ಹರಿಶ್ಚಂದ್ರೇ ತು ಚಂದ್ರಿಕಾ ।**
**ರಮಣಾ ರಾಮತೀರ್ಥೇ ತು ಯಮುನಾಯಾಂ ಮೃಗಾವತೀ ॥ ೨೦೪ ॥**

**ಕರವೀರೇ ಮಹಾಲಕ್ಷ್ಮೀರುಮಾದೇವೀ ವಿನಾಯಕೇ ।**
**ಅರೋಗಾ ವೈದ್ಯನಾಥೇ ತು ಮಹಾಕಾಲೇ ಮಹೇಶ್ವರೀ ॥ ೨೦೫ ॥**

**ಅಭಯಾ ಹ್ಯುಷ್ಣತೀರ್ಥೇ ಚ ಅಮೃತಾ ವಿಂಧ್ಯಕಂದರೇ ।**
**ಮಾಂಡವ್ಯೇ ಮಾಂಡವೀ ದೇವೀ ಸ್ವಾಹಾ ಮಾಹೇಶ್ವರೇ ಪುರೇ ॥ ೨೦೬ ॥**

**ವೇಗಲೇ ತು ಪ್ರಚಂಡಾ ತು ಚಂಡಿಕಾಮರಕಂಟಕೇ ।**
**ಸೋಮೇಶ್ವರೇ ವರಾರೋಹಾ ಪ್ರಭಾಸೇ ಪುಷ್ಕರಾವತೀ ॥ ೨೦೭ ॥**

---

ದಲ್ಲಿ ತ್ರಿಸಂಧ್ಯೆ, ಗಂಗಾದ್ವಾರದಲ್ಲಿ ಹರಿಪ್ರಿಯೆ, ಶಿವಚಕ್ರದಲ್ಲಿ ಶುಭೆ, ಚಂಡೆ, ದೇವಿಕಾತಟದಲ್ಲಿ ನಂದಿನಿ, ದ್ವಾರವತಿಯಲ್ಲಿ ರುಕ್ಮಿಣಿ, ವೃಂದಾವನದಲ್ಲಿ ರಾಧೆ, ಮಥುರೆಯಲ್ಲಿ ದೇವಕೀ, ಪಾತಾಳದಲ್ಲಿ ಪರಮೇಶ್ವರೀ, ಚಿತ್ರಕೂಟದಲ್ಲಿ ಸೀತೆ, ವಿಂಧ್ಯದಲ್ಲಿ ವಿಂಧ್ಯನಿವಾಸಿನಿ, ಸಹ್ಯಾದ್ರಿಯಲ್ಲಿ, ಏಕವೀರೆ, ಹರಿಶ್ಚಂದ್ರದಲ್ಲಿ ಚಂದ್ರಿಕೆ, ರಾಮತೀರ್ಥದಲ್ಲಿ ರಮಣಿ, ಯಮುನೆಯಲ್ಲಿ ಮೃಗಾವತೀ, ಕರವೀರದಲ್ಲಿ ಮಹಾಲಕ್ಷ್ಮಿ, ವಿನಾಯಕದಲ್ಲಿ ಉಮಾದೇವಿ, ವೈದ್ಯನಾಥದಲ್ಲಿ ಅರೋಗೆ, ಮಹಾಕಾಳದಲ್ಲಿ ಮಹೇಶ್ವರಿ ಎಂಬ ಹೆಸರುಗಳಿಂದ ಪೂಜಿತಳಾಗು.

೨೦೬—೨೧೦. ಉಷ್ಣತೀರ್ಥದಲ್ಲಿ ಅಭಯೆ, ವಿಂಧ್ಯಕಂದರದಲ್ಲಿ ಅಮೃತೆ, ಮಾಂಡವ್ಯದಲ್ಲಿ ಮಾಂಡವೀ, ಮಾಹೇಶ್ವರಪುರದಲ್ಲಿ ಸ್ವಾಹೇ, ವೇಗಳದಲ್ಲಿ ಪ್ರಚಂಡೆ, ಅಮರಕಂಟಕದಲ್ಲಿ ಚಂಡಿಕೆ, ಸೋಮೇಶ್ವರದಲ್ಲಿ ವರಾರೋಹೆ, ಪ್ರಭಾಸದಲ್ಲಿ

ದೇವಮಾತಾ ಸರಸ್ವತ್ಯಾಂ ಪಾರಾ ಪಾರತಟೇ ಶುಭಾ ।
ಮಹಾಲಯೇ ಮಹಾಪದ್ಮಾ ಪಯೋಷ್ಣ್ಯಾಂ ಪಿಂಗಲೇಶ್ವರೀ ॥ ೨೦೮ ॥

ಸಿಂಹಿಕಾ ಕೃತಶೌಚೇ ಚ ಕಾರ್ತಿಕೇಯೇ ತು ಶಾಂಕರೀ ।
ಉತ್ಪಲಾವರ್ತಕೇ ಲೋಲಾ ಸುಭದ್ರಾ ಸಿಂಧುಸಂಗಮೇ ॥ ೨೦೯ ॥

ಮಾತಾ ಸಿಂಧುವನೇ ಲಕ್ಷ್ಮೀರನಂತಾ ಭರತಾಶ್ರಮೇ ।
ಜಾಲಂಧರೇ ವಿಶ್ವಮುಖೀ ತಾರಾ ಕಿಷ್ಕಿಂಧಪರ್ವತೇ ॥ ೨೧೦ ॥

ದೇವದಾರುವನೇ ಪುಷ್ಟಿರ್ಮೇಧಾ ಕಾಶ್ಮೀರಮಂಡಲೇ ।
ಭೀಮಾದೇವೀ ಹಿಮಾದ್ರೌ ತು ತುಷ್ಟಿರ್ವಸ್ತ್ರೇಶ್ವರೇ ತಥಾ ॥ ೨೧೧ ॥

ಕಪಾಲಮೋಚನೇ ಶುದ್ಧಾ ಮಾತಾ ಕಾಯಾವರೋಹಣೇ ।
ಶಂಖೋದ್ಧಾರೇ ಧ್ವನಿರ್ನಾಮ ಧೃತಿಃ ಪಿಂಡಾರಕೇ ವನೇ ॥ ೨೧೨ ॥

ಕಾಲಾ ತು ಚಂದ್ರಭಾಗಾಯಾಮಚ್ಛೋದೇ ಸಿದ್ಧದಾಯಿನೀ ।
ವೇಣಾಯಾಮಮೃತಾದೇವೀ ಬದರ್ಯಾಮುರ್ವಶೀ ತಥಾ ॥ ೨೧೩ ॥

ಔಷಧೀ ಚೋತ್ತರಕುರೌ ಕುಶದ್ವೀಪೇ ಕುಶೋದಕಾ ।
ಮನ್ಮಥಾ ಹೇಮಕೂಟೇ ತು ಕುಮುದೇ ಸತ್ಯವಾದಿನೀ ॥ ೨೧೪ ॥

---

ಪುಷ್ಕರಾವತೀ, ಸರಸ್ವತಿಯಲ್ಲಿ ದೇವಮಾತೆ, ಪಾರಾತಟದಲ್ಲಿ ಪಾರೆ, ಮಹಾಲಯದಲ್ಲಿ ಮಹಾಪದ್ಮೆ, ಪಯೋಷ್ಣಿಯಲ್ಲಿ ಪಿಂಗಳೇಶ್ವರೀ, ಕೃತಶೌಚದಲ್ಲಿ ಸಿಂಹಿಕೆ, ಕಾರ್ತಿಕೇಯದಲ್ಲಿ ಶಾಂಕರಿ, ಉತ್ಪಲಾವರ್ತಕದಲ್ಲಿ ಲೋಲೆ, ಸಿಂಧುಸಂಗಮದಲ್ಲಿ ಸುಭದ್ರೆ, ಸಿಂಧುವನದಲ್ಲಿ ಲಕ್ಷ್ಮಿ, ಭರತಾಶ್ರಮದಲ್ಲಿ ಅನಂತೆ, ಜಾಲಂಧರದಲ್ಲಿ ವಿಶ್ವಮುಖಿ, ಕಿಷ್ಕಿಂಧಪರ್ವತದಲ್ಲಿ ತಾರೆ, ಎಂಬ ಹೆಸರಿನಿಂದ ಪೂಜಿತಳಾಗು.

೨೧೧--೨೧೬. ದೇವದಾರುವನದಲ್ಲಿ ಪುಷ್ಟಿ, ಕಾಶ್ಮೀರದಲ್ಲಿ ಮೇಧೆ, ಹಿಮಾದ್ರಿಯಲ್ಲಿ ಭೀಮಾ, ವಸ್ತ್ರೇಶ್ವರದಲ್ಲಿ ತುಷ್ಟಿ, ಕಪಾಲಮೋಚನದಲ್ಲಿ ಶುದ್ಧೆ, ಕಾಯಾವರೋಹಣದಲ್ಲಿ ಮಾತೆ, ಶಂಖೋದ್ಧಾರದಲ್ಲಿ ಧ್ವನಿ, ಪಿಂಡಾರಕವನದಲ್ಲಿ ಧೃತಿ, ಚಂದ್ರಭಾಗೆಯಲ್ಲಿ ಕಾಲಿ. ಅಚ್ಛೋದದಲ್ಲಿ ಸಿದ್ಧಿದಾಯಿನೀ, ವೇಣೆಯಲ್ಲಿ ಅಮೃತಾದೇವಿ, ಬದರಿಯಲ್ಲಿ ಊರ್ವಶಿ, ಉತ್ತರಕುರುವಿನಲ್ಲಿ ಔಷಧಿ, ಕುಶದ್ವೀಪದಲ್ಲಿ

ಅಶ್ವತ್ಥೇ ವಂದನೀಯಾ ತು ನಿಧಿರ್ವೈಶ್ರವಣಾಲಯೇ ।
ಗಾಯತ್ರೀ ವೇದವದನೇ ಸಾವಿತ್ರೀ ಬ್ರಹ್ಮಸಂನಿಧೌ ॥ ೨೧೫ ॥

ದೇವಲೋಕೇ ತಥೇಂದ್ರಾಣೀ ಬ್ರಹ್ಮಾಸ್ಯೇ ತು ಸರಸ್ವತೀ ।
ಸೂರ್ಯೇ ವಿಶ್ವಪ್ರಭಾ ನಾಮ ಮಾತೄಣಾಂ ವೈಷ್ಣವೀ ಮತಾ ॥ ೨೧೬ ॥

ಅರುಂಧತೀ ಸತೀನಾಂ ತು ರಾಮಾಸು ಚ ತಿಲೋತ್ತಮಾ ।
ಚಿತ್ತೇ ಬ್ರಹ್ಮಕಲಾ ನಾಮ ಶಕ್ತಿಃ ಸರ್ವಶರೀರಿಣಾಂ ॥ ೨೧೭ ॥

ಏತದ್ಭಕ್ತ್ಯಾ ಮಯಾ ಪ್ರೋಕ್ತಂ ನಾಮಾಷ್ಟಶತಮುತ್ತಮಂ ।
ಅಷ್ಟೋತ್ತರಂ ಚ ತೀರ್ಥಾನಾಂ ಶತಮೇತದುದಾಹೃತಂ ॥ ೨೧೮ ॥

ಯೋ ಜಪೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।
ಏಷು ತೀರ್ಥೇಷು ಯಃ ಕೃತ್ವಾ ಸ್ನಾತ್ವಾ ಪಶ್ಯೇನ್ನರೋ ಹಿ ಯಃ ॥ ೨೧೯ ॥

---

ಕುಶೋದಕೆ, ಹೇಮಕೂಟದಲ್ಲಿ ಮನ್ಮಥೆ, ಕುಮುದದಲ್ಲಿ ಸತ್ಯವಾದಿನಿ, ಅಶ್ವತ್ಥದಲ್ಲಿ ವಂದನೀಯೆ, ವೈಶ್ರವಣ (ಕುಬೇರ) ನ ಮನೆಯಲ್ಲಿ ನಿಧಿ, ವೇದದ ಆದಿಯಲ್ಲಿ ಗಾಯತ್ರೀ. ಬ್ರಹ್ಮನ ಸಮೀಪದಲ್ಲಿ ಸಾವಿತ್ರೀ, ದೇವಲೋಕದಲ್ಲಿ ಇಂದ್ರಾಣೀ, ಬ್ರಹ್ಮನ ಮುಖದಲ್ಲಿ ಸರಸ್ವತಿ, ಸೂರ್ಯನಲ್ಲಿ ವಿಶ್ವಪ್ರಭೆ. ಮಾತೃಗಳಲ್ಲಿ ವೈಷ್ಣವೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಪೂಜೆಯನ್ನು ಹೊಂದು.

೨೧೭. ಸತಿಯರಲ್ಲಿ ಅರುಂಧತಿ, ಹೆಂಗಸರಲ್ಲಿ, ತಿಲೋತ್ತಮೇ. ಚಿತ್ತದಲ್ಲಿ ಬ್ರಹ್ಮಕಲೆ, ಎಲ್ಲಾ ಪ್ರಾಣಿಗಳಲ್ಲಿಯೂ ಶಕ್ತಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಪೂಜೆಗೊಳ್ಳು.

೨೧೮. ಈ ನೂರೆಂಟು ಹೆಸರುಗಳನ್ನು ಭಕ್ತಿಯಿಂದ ನಾನು ಹೇಳಿದ್ದೇನೆ. ನೂರೆಂಟು ತೀರ್ಥಗಳ ಹೆಸರನ್ನೂ ಹೇಳಿದ್ದೇನೆ. ಇವನ್ನು ಭಕ್ತಿಯಿಂದ ಹೇಳಿದರೂ, ಕೇಳಿದರೂ ಪಾಪದಿಂದ ಮುಕ್ತರಾಗುತ್ತಾರೆ.

೨೧೯. ಈ ತೀರ್ಥಗಳಲ್ಲಿ ವಿಧಿವತ್ತಾಗಿ ಸ್ನಾನಮಾಡಿ ದೇವರ ದರ್ಶನ ಮಾಡಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಬ್ರಹ್ಮನ ಪುರದಲ್ಲಿ ಕಲ್ಪ ಪರ್ಯಂತ ವಾಸಿಸುತ್ತಾನೆ.

**ಶರ್ವಪಾಪವಿನಿರ್ಮುಕ್ತಃ ಕಲ್ಪಂ ಬ್ರಹ್ಮಪುರೇ ವಸೇತ್ ।**
**ನಾಮಾಷ್ಟಶತಕಂ ಯಸ್ತು ಶ್ರಾವಯೇದ್ಬ್ರಹ್ಮಸಂನಿಧೌ ॥ ೨೨೦ ॥**

**ಪೌರ್ಣಮಾಸ್ಯಾಮಮಾಯಾಂ ವಾ ಬಹುಪುತ್ರೋ ಭವೇನ್ನರಃ ।**
**ಗೋದಾನೇ ಶ್ರಾದ್ಧದಾನೇ ವಾ ಅಹನ್ಯಹನಿ ವಾ ಪುನಃ ॥ ೨೨೧ ॥**

**ದೇವಾರ್ಚನವಿಧೌ ಶೃಣ್ವನ್ಪರಬ್ರಹ್ಮಾಧಿಗಚ್ಛತಿ ।**
**ಏವಂ ಸ್ತುವಂತಂ ಸಾವಿತ್ರೀ ವಿಷ್ಣುಂ ಪ್ರೋವಾಚ ಸುವ್ರತಾ ॥ ೨೨೨ ॥**

**॥ ಸಾವಿತ್ರ್ಯುವಾಚ ॥**

**ಸಮ್ಯಕ್ಸ್ತುತಾ ತ್ವಯಾ ಪುತ್ರ ಅಜೇಯಸ್ತ್ವಂ ಭವಿಷ್ಯಸಿ ।**
**ಅವತಾರೇ ಸದಾ ವತ್ಸ ಪಿತೃಮಾತೃಷು ವಲ್ಲಭಃ ॥ ೨೨೩ ॥**

**ಇಹ ಚಾಗತ್ಯ ಯೋ ಮಾಂ ತು ಸ್ತವೇನಾನೇನ ಸಂಸ್ತುಯಾತ್ ।**
**ಸರ್ವದೋಷವಿನಿರ್ಮುಕ್ತಃ ಪರಂ ಸ್ಥಾನಂ ಗಮಿಷ್ಯತಿ ॥ ೨೨೪ ॥**

---

೨೨೦—೨೨೨. ಈ ನೂರೆಂಟು ನಾಮಗಳನ್ನು ಯಾರು ಬ್ರಹ್ಮನ ಸನ್ನಿಧಿಯಲ್ಲಿ ಹುಣ್ಣಿಮೆಯಲ್ಲಾಗಲಿ, ಅಮಾವಾಸ್ಯೆಯಲ್ಲಾಗಲಿ, ಶ್ರವಣಮಾಡಿಸಿದರೆ ಬಹು ಪುತ್ರರುಂಟಾಗುತ್ತಾರೆ. ಗೋದಾನಮಾಡುವಾಗ, ಶ್ರಾದ್ಧಮಾಡುವಾಗ ಅಥವಾ ಪ್ರತಿದಿನವೂ ದೇವರ ಪೂಜೆಯಲ್ಲಿ ಕೇಳುತ್ತಿದ್ದರೆ ಪರಬ್ರಹ್ಮನನ್ನೇ ಹೊಂದುತ್ತಾರೆ. ಈ ರೀತಿ ಸ್ತೋತ್ರಮಾಡುತ್ತಿರುವ ವಿಷ್ಣುವನ್ನು ಕುರಿತು ಸಾವಿತ್ರಿಯು ಇಂತೆಂದಳು.

೨೨೩. ಸಾವಿತ್ರಿಯು ಹೇಳಿದಳು :—ಎಲೈ ವತ್ಸನೇ, ನೀನು ನನ್ನನ್ನು ಚೆನ್ನಾಗಿ ಸ್ತುತಿಸಿದೆ. ಆದರಿಂದ ತುಷ್ಟಳಾದೆ. ನೀನು ಮಾಡತಕ್ಕ ಅವತಾರಗಳಲ್ಲಿ ತಾಯಿತಂದೆಗಳಲ್ಲಿ ಭಕ್ತಿಯಿಂದಿದ್ದು ಜಯಿಸಲಸಾಧ್ಯನಾಗಿರುತ್ತೀಯೆ.

೨೨೪. ಇಲ್ಲಿಗೆ ಬಂದು ಯಾವನು ಈ ಸ್ತೋತ್ರದಿಂದ ನನ್ನನ್ನು ಸ್ತುತಿಸುವನೋ ಅವನು ಸರ್ವ ದೋಷಗಳನ್ನು ಕಳೆದುಕೊಂಡು ವೈಕುಂಠವನ್ನು ಹೊಂದುತ್ತಾನೆ.

ಗಚ್ಛ ಯಜ್ಞಂ ವಿರಂಚಸ್ಯ ಸಮಾಪ್ತಿಂ ನಯ ಪುತ್ರಕ ।
ಕುರುಕ್ಷೇತ್ರೇ ಪ್ರಯಾಗೇ ತು ಭವಿಷ್ಯೇ ಚಾನ್ನದಾಯಿನೀ ।
ಸಮೀಪಗಾ ಸ್ಥಿತಾ ಭರ್ತುಃ ಕರಿಷ್ಯೇ ತವ ಭಾಷಿತಂ ॥ ೨೨೫ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ಗತೋ ವಿಷ್ಣುರ್ಬ್ರಹ್ಮಣಃ ಸದ ಉತ್ತಮಂ ।
ಗತಾಯಾಮಥ ಸಾವಿತ್ರ್ಯಾಂ ಗಾಯತ್ರೀ ವಾಕ್ಯಮಬ್ರವೀತ್ ॥ ೨೨೬ ॥

॥ ಗಾಯತ್ರ್ಯುವಾಚ ॥

ಶೃಣ್ವಂತು ಋಷಯೋ ವಾಕ್ಯಂ ಮದೀಯಂ ಭರ್ತೃಸಂನಿಧೌ ।
ಯದಹಂ ವಚ್ಮಿ ಸಂತುಷ್ಟಾ ವರದಾನಾಯ ಚೋದ್ಯತಾ ॥ ೨೨೭ ॥

ಪೂಜಯಿಷ್ಯತಿ ಬ್ರಹ್ಮಾಣಂ ನರೋ ಭಕ್ತಿಸಮನ್ವಿತಃ ।
ತಸ್ಯ ವಸ್ತ್ರಂ ಧನಂ ಧಾನ್ಯಂ ದಾರಾಃ ಪುತ್ರಾಃ ಸುಖಾನಿ ಚ ॥ ೨೨೮ ॥

---

೨೨೫. ಎಲೈ ಪುತ್ರನೇ, ಬ್ರಹ್ಮನ ಯಜ್ಞಕ್ಕೆ ಹೋಗು, ಅದನ್ನು ಪೂರ್ತಿಗೊಳಿಸು. ಕುರುಕ್ಷೇತ್ರ ಮತ್ತು ಪ್ರಯಾಗಗಳಲ್ಲಿ ಅನ್ನವನ್ನು ಕೊಡುವವಳಾಗುತ್ತೇನೆ. ಅಲ್ಲದೆ ನನ್ನ ಗಂಡನ ಸಮೀಪದಲ್ಲಿ ಇದ್ದುಕೊಂಡು ನಿನ್ನ ಮಾತಿನಂತೆ ನಡೆಯುತ್ತೇನೆ.

೨೨೬. ಪುಲಸ್ತ್ಯನು ಹೇಳಿದನು :—ಆಕೆಯು ಹೀಗೆನ್ನಲು, ವಿಷ್ಣುವು ಬ್ರಹ್ಮನ ಸದಸ್ಸಿಗೆ ಬಂದನು. ಸಾವಿತ್ರಿಯು ಹೋದನಂತರ ಇತ್ತ ಗಾಯತ್ರಿಯು ಇಂತೆಂದಳು.

೨೨೭ ಗಾಯತ್ರಿಯು ಹೇಳಿದಳು :—ಎಲೈ ಋಷಿಗಳಿರಾ, ಗಂಡನ ಸಮೀಪದಲ್ಲಿ ನನ್ನ ಮಾತನ್ನು ಕೇಳಿರಿ. ನಾನು ಸಂತೋಷಪಟ್ಟು ವರದಾನಮಾಡುವವಳಾಗಿ ಈ ಮಾತನ್ನು ಹೇಳುತ್ತೇನೆ.

೨೨೮-೨೨೯. ಯಾವ ಮನುಷ್ಯನು ಭಕ್ತಿಯಿಂದ ಕೂಡಿ ಬ್ರಹ್ಮನನ್ನು ಪೂಜಿಸುವನೋ ಅವನಿಗೆ ಬಟ್ಟೆ, ಧನ, ಧಾನ್ಯ, ಹೆಂಡಿರು, ಮಕ್ಕಳು, ಸೌಖ್ಯ ಇವೆಲ್ಲವೂ ಎಡಬಿಡದಂತೆ ಉಂಟಾಗಲಿ. ಮನೆಯಲ್ಲಿ ಮಕ್ಕಳು, ಮೊಮ್ಮಕ್ಕಳು

**ಅವಿಚ್ಛಿನ್ನಂ ತಥಾ ಸೌಖ್ಯಂ ಗೃಹೇ ವೈ ಪುತ್ರಪೌತ್ರಕಂ ।**
**ಭುಕ್ತ್ವಾ ಸ ಸುಚಿರಂ ಕಾಲಮಂತೇ ಮೋಕ್ಷಂ ಗಮಿಷ್ಯತಿ ॥ ೨೨೯ ॥**

**॥ ಪುಲಸ್ತ್ಯ ಉವಾಚ ॥**

**ಬ್ರಹ್ಮಾಣಂ ವಾ ಪ್ರತಿಷ್ಠಾಪ್ಯ ಸರ್ವಯತ್ನೈರ್ವಿಧಾನತಃ ।**
**ಯತ್ಪುಣ್ಯಫಲಮಾಪ್ನೋತಿ ತದೇಕಾಗ್ರಮನಾಃ ಶೃಣು ॥ ೨೩೦ ॥**

**ಸರ್ವಯಜ್ಞತಪೋದಾನತೀರ್ಥವೇದೇಷು ಯತ್ಫಲಂ ।**
**ತತ್ಫಲಂ ಕೋಟಿಗುಣಿತಂ ಲಭತೇ ತತ್ಪ್ರತಿಷ್ಠಯಾ ॥ ೨೩೧ ॥**

**ಪೌರ್ಣಮಾಸ್ಯುಪವಾಸಂ ತು ಕೃತ್ವಾ ಭಕ್ತ್ಯಾ ನರಾಧಿಪ ॥ ೨೩೨ ॥**

**ಅನೇನ ವಿಧಿನಾ ಯಸ್ತು ವಿರಿಂಚಿಂ ಪೂಜಯೇನ್ನೃಪ ।**
**ಪ್ರತಿಪದ್ಯಾಂ ಮಹಾಬಾಹೋ ಸ ಯಾತಿ ಬ್ರಹ್ಮಣಃ ಪದಂ ॥ ೨೩೩ ॥**

**ವಿರಿಂಚೇರ್ಯಃ ಸದೈವತಮೃತ್ವಿಗ್ಭಿಶ್ಚ ವಿಶೇಷತಃ ।**
**ಕಾರ್ತಿಕೇ ಮಾಸಿ ದೇವಸ್ಯ ರಥಯಾತ್ರಾ ಪ್ರಕೀರ್ತಿತಾ ॥ ೨೩೪ ॥**

---

ಬೇಕಾದಷ್ಟು ಉಂಟಾಗುತ್ತದೆ. ಈರೀತಿ ಬಹುಕಾಲ ಅನುಭವಿಸಿ ಕೊನೆಯಲ್ಲಿ ಮೋಕ್ಷವನ್ನು ಹೊಂದುತ್ತಾರೆ.

೨೩೦. ಪುಲಸ್ತ್ಯನು ಹೇಳಿದನು:—ಯಾವನು ಸರ್ವಪ್ರಯತ್ನದಿಂದಲೂ ವಿಧಿವತ್ತಾಗಿ ಬ್ರಹ್ಮನನ್ನು ಪ್ರತಿಷ್ಠೆಮಾಡಿದರೆ ಯಾವ ಪುಣ್ಯವನ್ನು ಹೊಂದುತ್ತಾನೆಯೋ ಅದನ್ನು ಮನಸ್ಸಿಟ್ಟು ಕೇಳು.

೨೩೧-೨೩೨. ಪೌರ್ಣಮಾಸಿಯ ದಿನ ಉಪವಾಸವಿದ್ದು ಭಕ್ತಿಯಿಂದ ಬ್ರಹ್ಮನನ್ನು ಪ್ರತಿಷ್ಠಿಸಿದರೆ ಎಲ್ಲಾ ಯಜ್ಞಮಾಡಿದ, ಎಲ್ಲಾ ತಪಸ್ಸುಮಾಡಿದ, ಎಲ್ಲಾ ತೀರ್ಥಗಳಲ್ಲೂ ಸ್ನಾನಮಾಡಿದ, ಎಲ್ಲಾ ವೇದಗಳನ್ನು ಓದಿದ ಫಲಕ್ಕೆ ಕೋಟಿಯಷ್ಟು ಫಲವನ್ನು ಹೊಂದುತ್ತಾನೆ.

೨೩೩. ಈ ವಿಧಿಯಿಂದ ವಿರಿಂಚಿಯನ್ನು ಪಾಡ್ಯದ ದಿನ ಪೂಜಿಸಿದರೆ ಅವನು ಬ್ರಹ್ಮಪದವನ್ನು ಹೊಂದುತ್ತಾನೆ.

೨೩೪. ವಿರಿಂಚಿಯನ್ನು ದೇವರನ್ನಾಗಿ ಮಾಡಿಕೊಂಡು, ಋತ್ವಿಕ್ಕುಗಳನ್ನು ಇಟ್ಟುಕೊಂಡು ಪೂಜೆಮಾಡಿ ಕಾರ್ತಿಕಮಾಸದಲ್ಲಿ ರಥೋತ್ಸವವನ್ನು ಮಾಡಬೇಕು.

ಯಾಂ ಕೃತ್ವಾ ಮಾನವಾ ಭಕ್ತ್ಯಾ ತೇ ಯಾಂತಿ ಬ್ರಹ್ಮಲೋಕತಾಂ ।
ಕಾರ್ತಿಕೇ ಮಾಸಿ ರಾಜೇಂದ್ರ ಪೌರ್ಣಮಾಸ್ಯಾಂ ಚತುರ್ಮುಖಂ ॥ ೨೩೫ ॥

ಮಾರ್ಗೇಣ ಬ್ರಹ್ಮಣಾ ಸಾರ್ಧಂ ಸಾವಿತ್ರ್ಯಾ ಚ ಪರಂತಪ ।
ಭ್ರಾಮಯೇನ್ನಗರಂ ಸರ್ವಂ ನಾನಾವಾದ್ಯೈಃ ಸಮನ್ವಿತಃ ॥ ೨೩೬ ॥

ಸ್ನಾಪಯೇದ್ಭ್ರಾಮಯಿತ್ವಾ ತು ಸಲೋಕಂ ನಗರಂ ನೃಪ ।
ಬ್ರಾಹ್ಮಣಾನ್ಭೋಜಯಿತ್ವಾಗ್ರೇ ಶಾಂಡಿಲೇಯಂ ಪ್ರಪೂಜ್ಯ ಚ ॥ ೨೩೭ ॥

ಆರೋಪಯೇದ್ರಥೇ ದೇವಂ ಪುಣ್ಯವಾದಿತ್ರನಿಃಸ್ವನೈಃ ।
ರಥಾಗ್ರೇ ಶಾಂಡಿಲೀಪುತ್ರಂ ಪೂಜಯಿತ್ವಾ ವಿಧಾನತಃ ॥ ೨೩೮ ॥

ಬ್ರಾಹ್ಮಣಾನ್ವಾಚಯಿತ್ವಾ ಚ ಕೃತ್ವಾ ಪುಣ್ಯಾಹಮಂಗಲಂ ।
ದೇವಮಾರೋಪಯಿತ್ವಾ ತು ರಥೇ ಕುರ್ಯಾತ್ಪ್ರಜಾಗರಂ ॥ ೨೩೯ ॥

ನಾನಾವಿಧೈಃ ಪ್ರೇಕ್ಷಣಕೈರ್ಬ್ರಹ್ಮಘೋಷೈಃ ಸುಪುಷ್ಕಲೈಃ ।
ಕೃತ್ವಾ ಪ್ರಜಾಗರಂ ತ್ವೇಕಂ ಪ್ರಭಾತೇ ಬ್ರಾಹ್ಮಣಾನ್ನೃಪ ॥ ೨೪೦ ॥

---

೨೩೫—೨೩೭. ಈ ರಥಯಾತ್ರೆಯನ್ನು ಮಾಡಿದವರು ಬ್ರಹ್ಮಲೋಕವನ್ನು ಹೊಂದುತ್ತಾರೆ. ಕಾರ್ತಿಕ ಪೌರ್ಣಮಾಸಿಯಲ್ಲಿ ಬ್ರಹ್ಮನನ್ನು ಸಾವಿತ್ರಿಯೊಡನೆ ವಾದ್ಯಗಳೊಡನೆ ಗ್ರಾಮವನ್ನು ಪ್ರದಕ್ಷಿಣಾಕಾರವಾಗಿ ರಥದಲ್ಲಿ ಸುತ್ತಿಸಬೇಕು. ಅನಂತರ ಸ್ನಾನಮಾಡಿಸಬೇಕು. ಮತ್ತು ಜನರೆಲ್ಲರೂ ಆಗ ಸ್ನಾನಮಾಡಬೇಕು. (ಇದು ತೀರ್ಥಸ್ನಾನ) ಅನಂತರ ಬ್ರಾಹ್ಮಣರಿಗೆ ಸಮಾರಾಧನೆಮಾಡಿ ಭೋಜಿಸಬೇಕು. ಇದಕ್ಕೆ ಮೊದಲು ಶಾಂಡಿಲೇಯನನ್ನು ಪೂಜಿಸಿ ವಾದ್ಯಗಳೊಡನೆ ರಥದಲ್ಲಿ ಹತ್ತಿಸ ಬೇಕು.

೨೩೮-೨೩೯. ರಥದ ತುದಿಯಲ್ಲಿ ಶಾಂಡಿಲಿಯನ್ನು ಪೂಜಿಸಬೇಕು. ಬ್ರಾಹ್ಮಣ ರೊಡನೆ ಪುಣ್ಯಾಹವನ್ನು ಮಾಡಬೇಕು. ಅನಂತರ ಬ್ರಹ್ಮನನ್ನು ರಥದಲ್ಲಿ ಕೂರಿಸಿ ಜಾಗರಣೆಮಾಡಬೇಕು.

೨೪೦-೨೪೧. ನಾನಾಬಗೆಯಾದ ಆಟಗಳಿಂದಲೂ, ಬಹುವಾದ ವೇದಘೋಷ ಗಳಿಂದಲೂ, ಜಾಗರಣೆಯನ್ನು ಮಾಡಿ ಬೆಳಿಗ್ಗೆ ಬ್ರಾಹ್ಮಣರನ್ನು ಭಕ್ಷ್ಯಭೋಜ್ಯ

ಭೋಜಯಿತ್ವಾ ಯಥಾಶಕ್ತಿ ಭಕ್ಷ್ಯೈರ್ಭೋಜ್ಯೈರನೇಕಶಃ ।
ಪೂಜಯಿತ್ವಾ ಜನಂ ಧೀರ ಮಂತ್ರೇಣ ವಿಧಿವನ್ನೃಪ ॥ ೨೪೧ ॥

ಆಜ್ಯೇನ ತು ಮಹಾಬಾಹೋ ಪಯಸಾ ಪಾಯಸೇನ ಚ ।
ಬ್ರಾಹ್ಮಣಾನ್ವಾಚಯಿತ್ವಾ ತು ಸ್ವಸ್ತ್ಯಾದಿ ವಿಧಿವನ್ನೃಪ ॥ ೨೪೨ ॥

ಕೃತ್ವಾ ಪುಣ್ಯಾಹಶಬ್ದಂ ಚ ತದ್ರಥಂ ಭ್ರಾಮಯೇತ್ಪುರೇ ।
ಚತುರ್ವೇದವಿದ್ಭಿರ್ವಿಪ್ರೈರ್ಭ್ರಾಮಯೇದ್ಬ್ರಹ್ಮಣೋ ರಥಂ ॥ ೨೪೩ ॥

ಬಹ್ವೃಚಾಥರ್ವಣೈರ್ವೀರ ಛಂದೋಗಾಧ್ವರ್ಯುಭಿಸ್ತಥಾ ।
ಭ್ರಾಮಯೇದ್ದೇವದೇವಸ್ಯ ಸುರಶ್ರೇಷ್ಠಸ್ಯ ತಂ ರಥಂ ॥ ೨೪೪ ॥

ಪ್ರದಕ್ಷಿಣಂ ಪುರಂ ಸರ್ವಂ ಮಾರ್ಗೇಣ ಸುಸಮೇನ ಚ ।
ನ ವೋಢವ್ಯೋ ರಥೋ ವೀರ ಶೂದ್ರೇಣ ಹಿತಮಿಚ್ಛತಾ ॥ ೨೪೫ ॥

---

ಗಳಿಂದ ಶಕ್ತ್ಯಾನುಸಾರ ಭೋಜನಮಾಡಿಸಬೇಕು. ಆಗ ಮಂತ್ರವತ್ತಾಗಿ ಆ ಜನರನ್ನು ಪೂಜಿಸಬೇಕು.

೨೪೨. ಎಲೈ ಮಹಾಬಾಹುವೇ, ತುಪ್ಪದಿಂದಲೂ, ಹಾಲಿನಿಂದಲೂ, ಪಾಯಸದಿಂದಲೂ ಬ್ರಾಹ್ಮಣರನ್ನು ತೃಪ್ತಿಪಡಿಸಿ, ಅನಂತರ ಅವರಿಂದ ಸ್ವಸ್ತಿವಾಚನವನ್ನು ಹೇಳಿಸಬೇಕು.

೨೪೩. ಚತುರ್ವೇದವನ್ನು ಬಲ್ಲ ಬ್ರಾಹ್ಮಣರಿಂದ ಪುಣ್ಯಾಹವನ್ನು ಹೇಳಿಸಿ ಆ ಬ್ರಹ್ಮನ ರಥವನ್ನು ಊರೊಳಗೆ ಸುತ್ತಿಸಬೇಕು.

೨೪೪. ಬಹ್ವೃಚಗಳಿಂದಲೂ, ಆಥರ್ವಣಿಕರಿಂದಲೂ, ಛಂದೋಗರಿಂದಲೂ, ಅಧ್ವರ್ಯುಗಳಿಂದಲೂ ಕೂಡಿಕೊಂಡು, ಆ ಸುರಶ್ರೇಷ್ಠನಾದ ಬ್ರಹ್ಮನ ರಥವನ್ನು ಸುತ್ತಿಸಬೇಕು.

೨೪೫. ಸುಗಮವಾದ ಸಮವಾದ ಮಾರ್ಗದಲ್ಲಿ ಪ್ರದಕ್ಷಿಣಾಕಾರವಾಗಿ ಸುತ್ತಿಸಬೇಕು. ಶ್ರೇಯಸ್ಸನ್ನು ಅಪೇಕ್ಷಿಸುವವನು ಶೂದ್ರನ ಕೈಯಲ್ಲಿ ಎಳೆಸಬಾರದು.

ನ ಚಾರೋಹೇದ್ರಥಂ ಪ್ರಾಜ್ಞೋ ಮುಕ್ತ್ವೈಕಂ ಭೋಜಕಂ ನೃಪ ।
ಬ್ರಹ್ಮಣೋ ದಕ್ಷಿಣೇ ಪಾರ್ಶ್ವೇ ಗಾಯತ್ರೀಂ ಸ್ಥಾಪಯೇದ್ರಥೇ ॥ ೨೪೬ ॥

ಭೋಜಕಂ ವಾಮಪಾರ್ಶ್ವೇ ತು ಪುರತಃ ಪಂಕಜಂ ನ್ಯಸೇತ್ ।
ಏವಂ ತೂರ್ಯನಿನಾದೈಸ್ತು ಶಂಖಶಬ್ದೈಸ್ತು ಪುಷ್ಕಲೈಃ ॥ ೨೪೭ ॥

ಭ್ರಾಮಯಿತ್ವಾ ರಥಂ ವೀರ ಪುರಂ ಸರ್ವಪ್ರದಕ್ಷಿಣಂ ।
ಸ್ವಸ್ಥಾನೇ ಸ್ಥಾಪಯೇದ್ದೇವಂ ದತ್ವಾ ನೀರಾಜನಂ ಬುಧಃ ॥ ೨೪೮ ॥

ಯ ಏವಂ ಕುರುತೇ ಯಾತ್ರಾಂ ಭಕ್ತ್ಯಾ ಯಶ್ಚಾಪಿ ಪಶ್ಯತಿ ।
ರಥಂ ವಾ ಕರ್ಷತೇ ಯಸ್ತು ಸ ಗಚ್ಛೇದ್ಬ್ರಹ್ಮಣಃ ಪದಂ ॥ ೨೪೯ ॥

ಕಾರ್ತಿಕೇ ಮಾಸ್ಯಮಾವಾಸ್ಯಾಂ ಯಶ್ಚ ದೀಪಪ್ರದೀಪನಂ ।
ಶಾಲಾಯಾಂ ಬ್ರಹ್ಮಣಃ ಕುರ್ಯಾತ್ಸ ಗಚ್ಛೇತ್ಪರಮಂ ಪದಂ ॥ ೨೫೦ ॥

ಸುಗಂಧಪುಷ್ಪಾನ್ನವಸ್ತ್ರೈರಾತ್ಮಾನಂ ಪೂಜಯೇತ್ತು ಯಃ ।
ತಸ್ಯಾಂ ಪ್ರತಿಪದಾಯಾಂ ತು ಸ ಗಚ್ಛೇದ್ಬ್ರಹ್ಮಣಃ ಪದಂ ॥ ೨೫೧ ॥

---

೨೪೬. ರಥವನ್ನು ಪ್ರಾಜ್ಞನಾದವನು ಹತ್ತಬಾರದು. ನಿವೇದನಮಾಡು ವವನು ಒಬ್ಬನು ಹತ್ತಬಹುದು. ಬ್ರಹ್ಮನ ಬಲಗಡೆಯಲ್ಲಿ ಗಾಯಿತ್ರಿಯನ್ನು ಕೂರಿಸಬೇಕು.

೨೪೭-೨೪೮. ಅರ್ಚಕನನ್ನು ಬ್ರಹ್ಮನ ಎಡಗಡೆ ಕೂರಿಸಬೇಕು. ಎದುರಿನಲ್ಲಿ ಕಮಲವನ್ನಿಡಬೇಕು. ಹೀಗೆ ವಾದ್ಯದ ಶಬ್ದಗಳಿಂದ ರಥವನ್ನು ಊರ ಸುತ್ತಲೂ ಪ್ರದಕ್ಷಿಣೆಮಾಡಿಸಿ ನಿಲ್ಲಿಸಿ, ಮಂಗಳಾರತಿಯನ್ನು ಎತ್ತಬೇಕು.

೨೪೯. ಈರೀತಿ ರಥೋತ್ಸವವನ್ನು ಮಾಡಿಸುವವನೂ, ಭಕ್ತಿಯಿಂದ ನೋಡು ವವನೂ, ರಥವನ್ನೆಳೆಯುವವನೂ ಬ್ರಹ್ಮನ ಸ್ಥಾನವನ್ನು ಹೊಂದುತ್ತಾರೆ.

೨೫೦. ಕಾರ್ತಿಕಮಾಸದ ಅಮಾವಾಸ್ಯೆಯಲ್ಲಿ ಯಾವನು ಬ್ರಹ್ಮಶಾಲೆಯಲ್ಲಿ ದೀಪವನ್ನು ಹಚ್ಚುತ್ತಾನೆಯೋ ಅವನು ಪರಮಪದವನ್ನು ಹೊಂದುತ್ತಾನೆ.

೨೫೧. ಗಂಧ, ಪೂ, ಅನ್ನ, ವಸ್ತ್ರಗಳಿಂದ ಬ್ರಹ್ಮನನ್ನು ಆ ಪ್ರತಿಪತ್ತಿನಲ್ಲಿ ಪೂಜಿಸುವವನು ಬ್ರಹ್ಮನ ಸ್ಥಾನವನ್ನು ಹೊಂದುತ್ತಾನೆ.

ಮಹಾಪುಣ್ಯಾ ತಿಥಿರಿಯಂ ಬಲಿರಾಜ್ಯಪ್ರವರ್ತಿನೀ ।
ಬ್ರಹ್ಮಣಸ್ತುಷ್ಟಯೇ ನಿತ್ಯಂ ಗಾಂಗೇಯ ಪರಿಕೀರ್ತಿತಾ ॥ ೨೫೨ ॥

ಬ್ರಹ್ಮಾಣಂ ಪೂಜಯೇದ್ಯೋಽಸ್ಯಾಮಾತ್ಮಾನಮಪಿ ಸಂಯುತಃ ।
ಸ ಯಾತಿ ಪರಮಂ ಸ್ಥಾನಂ ವಿಷ್ಣೋರಮಿತತೇಜಸಃ ॥ ೨೫೩ ॥

ಚೈತ್ರಮಾಸೇ ಮಹಾಬಾಹೋ ರಮ್ಯಾ ಪ್ರತಿಪದಧ್ವರಾ ।
ತಸ್ಯಾಂ ಯಃ ಶ್ವಪಚಂ ಸ್ಪೃಷ್ಟ್ವಾ ಸ್ನಾನಂ ಕುರ್ಯಾನ್ನರೋತ್ತಮಃ ॥ ೨೫೪ ॥

ನ ತಸ್ಯ ದುರಿತಂ ಕಿಂಚಿನ್ನಾಧಯೋ ವ್ಯಾಧಯೋ ನೃಪ ।
ಭವಂತಿ ಕುರುಶಾರ್ದೂಲ ತಸ್ಮಾತ್ಸ್ನಾನಂ ಸಮಾಚರೇತ್ ॥ ೨೫೫ ॥

ದಿವ್ಯಂ ನೀರಾಜನಂ ತದ್ಧಿ ಸರ್ವರೋಗವಿನಾಶನಂ ।
ಗೋಮಹಿಷ್ಯಾದಿ ಯತ್ಕಿಂಚಿತ್ತತ್ಸರ್ವಂ ಭೂಷಯೇನ್ನೃಪ ॥ ೨೫೬ ॥

ತೇನ ವಸ್ತ್ರಾದಿಭಿಃ ಸರ್ವೈಸ್ತೋರಣಂ ಬಾಹ್ಯತೋ ನ್ಯಸೇತ್ ।
ಬ್ರಾಹ್ಮಣಾನಾಂ ತಥಾ ಭೋಜ್ಯಂ ಕುರ್ಯಾತ್ಕುರುಕುಲೋದ್ವಹ ॥ ೨೫೭ ॥

---

೨೫೨. ಈ ತಿಥಿಯು ಮಹಾಪುಣ್ಯವನ್ನು ಕೊಡತಕ್ಕದ್ದು. ಬಲಿಗೆ ರಾಜ್ಯವನ್ನು ಕೊಟ್ಟದ್ದು. ನಿತ್ಯವೂ ಬ್ರಹ್ಮನಿಗೆ ಸಂತೋಷವಾಗುತ್ತದೆ.

೨೫೩. ಈ ತಿಥಿಯಲ್ಲಿ ಯಾವನು ಬ್ರಹ್ಮನನ್ನು ಪೂಜಿಸುವನೋ, ಗಾಯತ್ರಿಯನ್ನು ಪೂಜಿಸುತ್ತಾನೆಯೋ ಅವನು ವಿಷ್ಣುವಿನ ಪರಮಪದವನ್ನು ಸೇರುತ್ತಾನೆ.

೨೫೪-೨೫೫. ಎಲೈ ಮಹಾಬಾಹುವೇ, ಚೈತ್ರಮಾಸದ ಪ್ರತಿಪತ್ತು ಬಹು ಉತ್ತಮವಾದದು. ಆದಿನ ಯಾವನು ಹೊಲೆಯನನ್ನು ಮುಟ್ಟಿದ್ದರೂ ಸ್ನಾನ ಮಾಡಿದರೆ ಅವನಿಗೆ ಪಾಪದ ಲೇಶವೂ ಇರುವುದಿಲ್ಲ. ಮನೋವ್ಯಥೆ ರೋಗಗಳೂ ಇರುವುದಿಲ್ಲ. ಆದ್ದರಿಂದ ಆದಿನ ಸ್ನಾನವನ್ನು ಮಾಡಬೇಕು.

೨೫೬. ಆದಿನ ಮಾಡಿದ ಮಂಗಳಾರತಿಯು ದಿವ್ಯ ನಿರಾಜನವೆನಿಸುತ್ತದೆ. ಹಸು, ಎಮ್ಮೆ ಎಲ್ಲವನ್ನೂ ಆದಿನ ಅಲಂಕರಿಸಬೇಕು.

೨೫೭. ಆ ಮನುಷ್ಯನು ಬಟ್ಟೆ ಮೊದಲಾದವುಗಳಿಂದ ತೋರಣವನ್ನು ಹೊರಗೆ ಕಟ್ಟಬೇಕು. ಬ್ರಾಹ್ಮಣರಿಗೆ ಊಟಮಾಡಿಸಬೇಕು.

**ತಿಸ್ರೋ ಹ್ಯೇತಾಃ ಪುರಾ ಪ್ರೋಕ್ತಾಸ್ತಿಥಯಃ ಕುರುನಂದನ ।**
**ಕಾರ್ತಿಕೇsಶ್ವಯುಜೇ ಮಾಸಿ ಚೈತ್ರೇ ವಾಪಿ ತಥಾ ನೃಪ　　॥ ೨೫೮ ॥**

**ಸ್ನಾನಂ ದಾನಂ ಶತಗುಣಂ ಕಾರ್ತಿಕೇ ಯಾ ತಿಥಿರ್ನೃಪ ।**
**ಬಲಿರಾಜ್ಞಸ್ತು ಶುಭದಾ ಪಶೂನಾಂ ಶುಭದಾಯಿನೀ　　॥ ೨೫೯ ॥**

**॥ ಗಾಯತ್ರ್ಯುವಾಚ ॥**

**ಯದುಕ್ತಂ ತು ತಯಾ ವಾಕ್ಯಂ ಸಾವಿತ್ರ್ಯಾ ಕಮಲೋದ್ಭವ ।**
**ನ ತು ತದ್ಬ್ರಾಹ್ಮಣಾಃ ಪೂಜ್ಯಂ ಕರಿಷ್ಯಂತಿ ಕದಾಚನ　　॥ ೨೬೦ ॥**

**ಮದೀಯಂ ತು ವಚಃ ಶ್ರುತ್ವಾ ಯೇ ಕರಿಷ್ಯಂತಿ ಚಾರ್ಚನಂ ।**
**ಇಹ ಭುಕ್ತ್ವಾ ತು ಭೋಗಾಂಸ್ತೇ ಪರತ್ರ ಮೋಕ್ಷಭಾಗಿನಃ　　॥ ೨೬೧ ॥**

**ಏವಂ ಜ್ಞಾತ್ವಾ ವರಂ ಪುಂಸಾಂ ವರಂ ತುಷ್ಟಾ ಪ್ರಯಚ್ಛತಿ ।**
**ಶಕ್ರಾಹಂ ತೇ ವರಂ ದದ್ಮಿ ಸಂಗ್ರಾಮೇ ಶತ್ರುನಿಗ್ರಹೇ　　॥ ೨೬೨ ॥**

---

೨೫೮-೨೫೯. ಕಾರ್ತಿಕ, ಆಶ್ವಯುಜ, ಚೈತ್ರ ಈ ಮೂರು ರಾತ್ರಿಗಳು ಉತ್ತಮ ತಿಥಿಗಳು. ಇವುಗಳಲ್ಲಿ ಕಾರ್ತಿಕಮಾಸದಲ್ಲಿ ಸ್ನಾನದಾನಗಳು, ಉಳಿದವ ಕ್ಕಿಂತ ನೂರುಪಾಲು ಹೆಚ್ಚಿನವು. ಆಗ ಬಲಿರಾಜ್ಯವು ಒಳ್ಳೆಯದು. ಪಶುಗಳಿಗೆ ಶುಭವನ್ನು ಕೊಡುತ್ತದೆ.

೨೬೦. ಗಾಯತ್ರಿಯು ಹೇಳಿದಳು:—ಆ ಸಾವಿತ್ರಿಯು ಬ್ರಹ್ಮನಿಗೆ ಯಾವಾ ಗಲೂ ಪೂಜೆ ಬೇಡವೆಂದು ಹೇಳಿದಳು.

೨೬೧. ಆದರೆ ನನ್ನ ಮಾತಿನಂತೆ ಯಾರು ಪೂಜೆಯನ್ನು ಮಾಡುತ್ತಾರೋ ಅವರು ಈ ಲೋಕದಲ್ಲಿ ಭೋಗಗಳನ್ನು ಅನುಭವಿಸಿ ಪರಲೋಕದಲ್ಲಿಯೂ ಮೋಕ್ಷ ವನ್ನು ಹೊಂದುತ್ತಾರೆ.

೨೬೨-೨೬೩. ಈರೀತಿ ಸಂತೋಷಗೊಂಡು ಆ ಗಾಯತ್ರಿಯು ಜನರಿಗೆ ವರ ವನ್ನು ಕೊಟ್ಟಳು. ಅನಂತರ ಶಕ್ರನನ್ನು ಕುರಿತು ಎಲೈ ಶಕ್ರನೇ, ನಿನಗೆ ನಾನು ವರವನ್ನು ಕೊಡುತ್ತೇನೆ. ಶತ್ರುನಿಗ್ರಹಕರವಾದ ಯುದ್ಧದಲ್ಲಿ ಬ್ರಹ್ಮನು ಶತ್ರುಗಳ

**ತದಾ ಬ್ರಹ್ಮಾ ಮೋಚಯಿತಾ ಗತ್ವಾ ಶತ್ರುನಿವೇಶನಂ ।**
**ಸ್ವಪುರಂ ಲಪ್ಸ್ಯಸೇ ನಷ್ಟಂ ಶತ್ರುನಾಶಾತ್ಪರಾಂ ಮುದಂ ॥ ೨೬೩ ॥**

**ಅಕಂಟಕಂ ಮಹಸಾಮ್ರಾಜ್ಯಂ ತ್ರೈಲೋಕ್ಯಂ ತೇ ಭವಿಷ್ಯತಿ ।**
**ಮರ್ತ್ಯಲೋಕೇ ಯದಾ ವಿಷ್ಣೋ ಅವತಾರಂ ಕರಿಷ್ಯಸಿ ॥ ೨೬೪ ॥**

**ಭ್ರಾತ್ರಾ ಸಹ ಪರಂ ದುಃಖಂ ಸ್ವಭಾರ್ಯಾಹರಣಂ ಚ ತತ್ ।**
**ಹತ್ವಾ ಶತ್ರುಂ ಪುನರ್ಭಾರ್ಯಾಂ ಲಪ್ಸ್ಯಸೇ ಸುರಸಂನಿಧೌ ॥ ೨೬೫ ॥**

**ಗೃಹೀತ್ವಾ ತಾಂ ಪುನಾ ರಾಜ್ಯಂ ಕೃತ್ವಾ ಸ್ವರ್ಗಂ ಗಮಿಷ್ಯಸಿ ।**
**ಏಕಾದಶ ಸಹಸ್ರಾಣಿ ವರ್ಷಾಣಾಂ ಚ ಪುನರ್ದಿವಂ ॥ ೨೬೬ ॥**

**ಖ್ಯಾತಿಸ್ತೇ ವಿಪುಲಾ ಲೋಕೇ ಅನುರಾಗಂ ಜನೈಃ ಸಹ ।**
**ಸಂತಾನಕಾನಾಮೇತೇಷಾಂ ಲೋಕಾಃ ಸಂತಿ ಶುಭಾನ್ವಿತಾಃ ॥ ೨೬೭ ॥**

**ತ್ವಯಾ ತೇ ತಾರಿತಾ ದೇವ ರಾಮರೂಪೇಣ ಮಾನವಾಃ ।**
**ಗಾಯತ್ರೀ ತು ತದಾ ರುದ್ರಂ ವರದಾ ಪ್ರತ್ಯಭಾಷತ ॥ ೨೬೮ ॥**

---

ಮನೆಗೆ ಹೋಗಿ ನಿನ್ನನ್ನು ಬಿಡಿಸುತ್ತಾನೆ. ಅನಂತರ ಶತ್ರುನಿಗ್ರಹದಿಂದ ನಿನ್ನ ಪಟ್ಟಣವನ್ನು ಹೊಂದುತ್ತೀಯೆ. ಬಹು ಸಂತೋಷವನ್ನು ಹೊಂದುತ್ತೀಯೆ. ಅನಂತರ ಬಾಧೆಯಿಲ್ಲದಿರುವ ಮೂರುಲೋಕದ ಮಹಾಸಾಮ್ರಾಜ್ಯವೂ ನಿನಗೆ ಬರುತ್ತದೆ ಎಂದು ವರವಿತ್ತಳು.

೨೬೪—೨೬೬. ಎಲೈ ವಿಷ್ಣುವೇ, ಭೂಲೋಕದಲ್ಲಿ ನೀನು ಅವತರಿಸಿದಾಗ ಸೋದರನೊಡನೆ ಬಹು ದುಃಖವನ್ನೂ, ಹೆಂಡತಿಯ ವಿಯೋಗವನ್ನೂ ಹೊಂದುತ್ತೀಯಷ್ಟೆ. ಆಗ ಶತ್ರುವನ್ನು ಕೊಂದು ಮತ್ತೆ ದೇವತೆಗಳ ಎದುರಿಗೆ ಹೆಂಡತಿಯನ್ನು ಹೊಂದುತ್ತೀಯೆ. ಅವಳನ್ನು ಕರೆದುಕೊಂಡು ರಾಜ್ಯಕ್ಕೆ ಬಂದು ಹನ್ನೊಂದು ಸಾವಿರ ವರ್ಷಗಳವರೆಗೂ ರಾಜ್ಯವಾಳಿ ಮತ್ತೆ ಸ್ವರ್ಗವನ್ನು ಹೊಂದುತ್ತೀಯೆ.

೨೬೭. ನಿನಗೆ ಲೋಕದಲ್ಲಿ ಖ್ಯಾತಿಯೂ, ಜನಗಳೊಡನೆ ಅನುರಾಗವೂ ಉಂಟಾಗುತ್ತದೆ. ನಿನ್ನ ಮಕ್ಕಳಿಗೂ ಕೂಡ ಒಳ್ಳೆಯ ಲೋಕಗಳು ಸಿಕ್ಕುತ್ತವೆ.

೨೬೮. ರಾಮರೂಪನಾದ ನಿನ್ನಿಂದ ಮನುಷ್ಯರೆಲ್ಲರೂ ಒಳ್ಳೆಯ ಗತಿಯನ್ನು ಹೊಂದುತ್ತಾರೆ. ಅನಂತರ ಗಾಯತ್ರಿಯು ರುದ್ರನನ್ನು ಕುರಿತು ಇಂತೆಂದಳು.

**ಪತಿತೇ ತು ಚ ತೇ ಲಿಂಗೇ ಪೂಜಾಂ ಕುರ್ವಂತಿ ಮಾನವಾಃ ।**
**ತೇ ಪೂತಾಃ ಪುಣ್ಯಕರ್ಮಾಣಃ ಸ್ವರ್ಗಮೋಕ್ಷಸ್ಯ ಭಾಜನಾಃ ॥ ೨೬೯ ॥**

**ನ ತಾಂ ಗತಿಂ ಚಾಗ್ನಿಹೋತ್ರೇಣ ಕೃತೇನಾಪಿ ಪಾವಕೇ ।**
**ಯಾಂ ಗತಿಂ ಮನುಜಾ ಯಾಂತಿ ತವ ಲಿಂಗಪ್ರಪೂಜನಾತ್ ॥ ೨೭೦ ॥**

**ಗಂಗಾತೀರೇ ಸದಾ ಲಿಂಗಂ ಬಿಲ್ವಪತ್ರೇಣ ತೇ ಭವ ।**
**ಪೂಜಯಿಷ್ಯಂತಿ ಯೇ ಮರ್ತ್ಯಾ ಅಪವರ್ಗಸ್ಯ ಭಾಜನಾಃ ॥ ೨೭೧ ॥**

**ಪ್ರಾಪ್ಯ ವೈ ಶರ್ವಭಕ್ತಿತ್ವಂ ಭವೇಯುಃ ಪುಣ್ಯಭಾಗಿನಃ ।**
**ತ್ವಯಿ ಪ್ರೀತೇ ಸುರಾಃ ಸರ್ವೇ ಪ್ರೀತಾ ವೈ ನಾತ್ರ ಸಂಶಯಃ ॥ ೨೭೨ ॥**

**ತ್ವನ್ಮುಖೇನ ಹವಿರ್ದೇವೈಃ ಪೀತಂ ಪೀತೇ ತ್ವಯಿ ಧ್ರುವಂ ।**
**ಭುಜ್ಯತೇ ನಾತ್ರ ಸಂದೇಹೋ ವೇದೋಕ್ತಂ ವಚನಂ ಯಥಾ ॥ ೨೭೩ ॥**

---

೨೬೯. ನಿನ್ನ ಬಿದ್ದ ಲಿಂಗವನ್ನು ಯಾವ ಮನುಷ್ಯರು ಪೂಜಿಸುತ್ತಾರೆಯೋ ಅವರು ಪವಿತ್ರರಾಗಿ, ಪುಣ್ಯಕರ್ಮಿಯಾಗಿ ಸ್ವರ್ಗಮೋಕ್ಷಗಳನ್ನು ಹೊಂದುತ್ತಾರೆ.

೨೭೦. ನಿನ್ನ ಲಿಂಗವನ್ನು ಪೂಜಿಸುವುದರಿಂದ ಯಾವ ಗತಿಯು ಬರುತ್ತದೆಯೋ ಆ ಗತಿಯು ಅಗ್ನಿಹೋತ್ರದಿಂದಾಗಲಿ, ಯಾಗದಿಂದಾಗಲಿ ಬರುವುದಿಲ್ಲ.

೨೭೧-೨೭೨. ಎಲೈ ರುದ್ರನೇ, ಗಂಗಾತೀರದಲ್ಲಿ ಬಿಲ್ವಪತ್ರದಿಂದ ನಿನ್ನ ಲಿಂಗವನ್ನು ಪೂಜೆಮಾಡಿದವರಿಗೆ ಮೋಕ್ಷವು ಲಭಿಸುತ್ತದೆ. ಅವರು ಈಶ್ವರನಲ್ಲಿ ಭಕ್ತಿಯನ್ನು ಹೊಂದಿ ಪುಣ್ಯವಂತರಾಗುತ್ತಾರೆ. ನೀನು ಪ್ರೀತನಾದರೆ ದೇವತೆಗಳೆಲ್ಲರೂ ಪ್ರೀತರಾಗುತ್ತಾರೆ. ಸಂಶಯವಿಲ್ಲ.

೨೭೩. ಎಲೈ ವಹ್ನಿಯೇ, ನಿನ್ನ ಮುಖದಿಂದಲೇ ಹವಿಸ್ಸು ದೇವತೆಗಳಿಗೊದಗಲಿ. ನೀನು ಕುಡಿದರೆ ಸತ್ಯವಾಗಿಯೂ ಅವರು ಕುಡಿದಂತಾಗುತ್ತದೆ. ನೀನು ಊಟಮಾಡಿದರೆ ಅವರು ಊಟಮಾಡಿದಂತಾಗುತ್ತದೆ. ವೇದದಲ್ಲಿ ಹೇಳಿರುವುದು ಸುಳ್ಳಾಗುವುದಿಲ್ಲ. ಸಂದೇಹವಿಲ್ಲ.

**ಗಾಯತ್ರೀ ಬ್ರಾಹ್ಮಣಾಂಸ್ತಾಂಶ್ಚ ಸರ್ವಾನೇವಾಬ್ರವೀದಿದಂ ।**
**ಯುಷ್ಮಾಕಂ ಪ್ರೀಣನಂ ಕೃತ್ವಾ ಸರ್ವತೀರ್ಥೇಷು ಮಾನವಾಃ ॥ ೨೭೪ ॥**

**ಪೂತಾಃ ಸ್ವರ್ಗಂ ಗಮಿಷ್ಯಂತಿ ವೈರಾಜಾಖ್ಯಂ ನ ಸಂಶಯಃ ।**
**ಅನ್ನಪ್ರಕಾರಾನ್ವಿವಿಧಾನ್ದತ್ವಾ ದಾನಾನ್ಯನೇಕಶಃ ॥ ೨೭೫ ॥**

**ಶ್ರಾದ್ಧೇಷು ಪ್ರೀಣನಂ ಕೃತ್ವಾ ದೇವದೇವಾ ಭವಂತಿ ಯೇ ।**
**ಯೇ ಚೈವ ಬ್ರಾಹ್ಮಣಾಃ ಶ್ರೇಷ್ಠಾಸ್ತೇಷಾಮಾಸ್ಯೇ ದಿವೌಕಸಃ ॥ ೨೭೬ ॥**

**ಭುಂಜತೇ ಚ ಹವಿ ಕ್ಲೃಪ್ತಂ ಕವ್ಯಂ ಚೈವ ಪಿತಾಮಹಾಃ ।**
**ಯೂಯಂ ವೈ ತಾರಣೈರ್ಯುಕ್ತಾಸ್ತ್ರೈಲೋಕ್ಯೇಽಪಿ ನ ಸಂಶಯಃ ॥ ೨೭೭ ॥**

**ಪ್ರಾಣಾಯಾಮೇನ ಚೈಕೇನ ಸರ್ವೇ ಪೂತಾ ಭವಿಷ್ಯಥ ।**
**ವಿಶೇಷಾತ್ಪುಷ್ಕರೇ ಸ್ನಾತ್ವಾ ಮಾಂ ಜಪ್ತ್ವಾ ವೇದಮಾತರಂ ॥ ೨೭೮ ॥**

---

೨೭೪. ಅನಂತರ ಗಾಯತ್ರಿಯು ಅಲ್ಲಿರುವ ಬ್ರಾಹ್ಮಣರನ್ನೆಲ್ಲಾ ಉದ್ದೇಶಿಸಿ, ಮನುಷ್ಯರು ಯಾವ ತೀರ್ಥದಲ್ಲಿಯೇ ಆಗಲಿ ನಿಮಗೆ ತೃಪ್ತಿಯನ್ನುಂಟುಮಾಡಿದರೆ ಪವಿತ್ರರಾಗಿ ವೈರಾಜ್ಯವೆಂಬ ಸ್ವರ್ಗವನ್ನು ಹೊಂದುತ್ತಾರೆ ಸಂಶಯವಿಲ್ಲ.

೨೭೫. ನಾನಾಬಗೆಯ ಅನ್ನಗಳನ್ನು ಬ್ರಾಹ್ಮಣರಿಗೆ ಅನೇಕಬಾರಿ ದಾನಮಾಡಿ ದರೆ, ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ತೃಪ್ತಿಯನ್ನುಂಟುಮಾಡಿದರೆ ಅವರು ದೇವತೆಗಳಿಗೂ ದೇವತೆಗಳಾಗುತ್ತಾರೆ.

೨೭೬-೨೭೭. ಶ್ರೇಷ್ಠರಾದ ಬ್ರಾಹ್ಮಣರ ಬಾಯಿಂದ ದೇವತೆಗಳು ಹವಿಸ್ಸನ್ನೂ ಪಿತೃಗಳು ಕವ್ಯವನ್ನೂ ತಿನ್ನುತ್ತಾರೆ. ಸಂಶಯವಿಲ್ಲ. ನೀವು ಮೂರುಲೋಕಕ್ಕೂ ಪಾವನರಾಗಿ, ಉತ್ತಾರಕರಾಗಿ ಇರುತ್ತೀರಿ. ಸಂಶಯವಿಲ್ಲ.

೨೭೮. ಒಂದು ಪ್ರಾಣಾಯಾಮದಿಂದಲೇ ನೀವುಗಳು ಪವಿತ್ರರಾಗುತ್ತೀರಿ. ಪುಷ್ಕರದಲ್ಲಿ ಸ್ನಾನಮಾಡಿ, ವೇದಮಾತೆಯಾದ ನನ್ನನ್ನು ಜಪಿಸಿದರೆ, ದಾನ ತೆಗೆದು ಕೊಂಡ ದೋಷವನ್ನು ಹೊಂದುವುದಿಲ್ಲ.

ಪ್ರತಿಗ್ರಹಕೃತಾನ್ದೋಷಾನ್ನ ಪ್ರಾಪ್ಸ್ಯಥ ದ್ವಿಜೋತ್ತಮಾಃ ।
ಪುಷ್ಕರೇ ಚಾನ್ನದಾನೇನ ಪ್ರೀತಾಃ ಸ್ಯುಃ ಸರ್ವದೇವತಾಃ ॥ ೨೭೯ ॥

ಏಕಸ್ಮಿನ್ಭೋಜಿತೇ ವಿಪ್ರೇ ಕೋಟ್ಯಾಃ ಫಲಮವಾಪ್ಸ್ಯತೇ ।
ಬ್ರಹ್ಮಹತ್ಯಾದಿಪಾಪಾನಿ ದುಷ್ಕೃತಾನೀಹ ಯಾನಿ ಚ ॥ ೨೮೦ ॥

ತರಿಷ್ಯಂತಿ ನರಾಃ ಸರ್ವೇ ದತ್ವಾ ಯುಷ್ಮತ್ಕರೇ ಧನಂ ।
ಮದಿಯೇನ ತು ಜಾಪ್ಯೇನ ಪೂಜನೀಯೈಸ್ತ್ರಿಭಿಃ ಕೃತೈಃ ॥ ೨೮೧ ॥

ಬ್ರಹ್ಮಹತ್ಯಾಸಮಂ ಪಾಪಂ ತತ್ಕ್ಷಣಾದೇವ ನಶ್ಯತಿ ।
ದಶಭಿರ್ಜನ್ಮಜನಿತಂ ಶತೇನ ತು ಪುರಾಕೃತಂ ॥ ೨೮೨ ॥

ತ್ರಿಯುಗಂ ತು ಸಹಸ್ರೇಣ ಗಾಯತ್ರೀ ಹಂತಿ ಕಿಲ್ಬಿಷಂ ।
ಏವಂ ಜ್ಞಾತ್ವಾ ಸದಾ ಪೂತಾ ಜಾಪ್ಯೇ ತು ಮಮ ವೈ ಕೃತೇ ॥ ೨೮೩ ॥

---

೨೭೯-೨೮೦. ಪುಷ್ಕರದಲ್ಲಿ ಅನ್ನದಾನಮಾಡಿದರೆ ಎಲ್ಲ ದೇವತೆಗಳೂ ತೃಪ್ತರಾಗುತ್ತಾರೆ. ಒಬ್ಬನಿಗೆ ಭೋಜನಮಾಡಿಸಿದರೂ ಕೋಟಿಜನರನ್ನು ಭೋಜನ ಮಾಡಿಸಿದ ಫಲವು ಬರುತ್ತದೆ. ನಿಮ್ಮ ಕೈಯಲ್ಲಿ ಧನದಾನವನ್ನು ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳೂ ನಾಶವಾಗುತ್ತವೆ.

೨೮೧. ಪೂಜ್ಯವಾದ ನನ್ನ ಮಂತ್ರವನ್ನು ಮೂರುಬಾರಿ ಜಪಿಸಿದರೆ ಬ್ರಹ್ಮಹತ್ಯಾಸಮವಾದ ಪಾಪಗಳೆಲ್ಲವೂ ಒಡನೆಯೇ ನಾಶವಾಗುತ್ತವೆ.

೨೮೨. ಹತ್ತು ಆವರ್ತಿ ಜಪಿಸುವುದರಿಂದ ಆ ಜನ್ಮದಲ್ಲಿ ಮಾಡಿದ, ನೂರು ಸಾರಿ ಮಾಡಿದರೆ ಪೂರ್ವಜನ್ಮದ, ಸಾವಿರಬಾರಿ ಜಪಿಸಿದರೆ ಮೂರು ಯುಗದ ಪಾಪಗಳನ್ನು ಗಾಯತ್ರಿಯು ನಾಶಮಾಡುತ್ತದೆ.

೨೮೩. ಇದನ್ನು ತಿಳಿದು ಸದಾ ಪವಿತ್ರರಾಗಿ ನನ್ನ ಮಂತ್ರದ ಜಪದಲ್ಲಿ ನಿರತರಾಗಿರಿ. ಸಂದೇಹವಿಲ್ಲ. ಯೋಚಿಸಬೇಡಿ.

**ಭವಿಷ್ಯಧ್ವಂ ನ ಸಂದೇಹೋ ನಾತ್ರ ಕಾರ್ಯಾ ವಿಚಾರಣಾ ।**
**ಓಂಕಾರೇಣ ತ್ರಿಮಾತ್ರೇಣ ಅರ್ಧೇನ ಚ ವಿಶೇಷತಃ ॥ ೨೮೪ ॥**

**ಪೂಜ್ಯಾಃ ಸರ್ವೇ ನ ಸಂದೇಹೋ ಜಪ್ತ್ವಾ ಮಾಂ ಶಿರಸಾ ಸಹ ।**
**ಅಷ್ಟಾಕ್ಷರಾ ಸ್ಥಿತಾ ಚಾಹಂ ಜಗದ್ವ್ಯಾಪ್ತಂ ಮಯಾ ತ್ವಿದಂ ॥ ೨೮೫ ॥**

**ಮಾತಾಹಂ ಸರ್ವವೇದಾನಾಂ ಪದೈಃ ಸರ್ವೈರಲಂಕೃತಾ ।**
**ಜಪ್ತ್ವಾ ಮಾಂ ಪರಮಾಂ ಸಿದ್ಧಿಂ ಯಾಸ್ಯಂತಿ ದ್ವಿಜಸತ್ತಮಾಃ ॥ ೨೮೬ ॥**

**ಪ್ರಾಧಾನ್ಯಂ ಮಮ ಜಾಪ್ಯೇನ ಸರ್ವೇಷಾಂ ವೋ ಭವಿಷ್ಯತಿ ।**
**ಗಾಯತ್ರೀಸಾರಮಾತ್ರೋಽಪಿ ವರಂ ವಿಪ್ರಃ ಸುಯಂತ್ರಿತಃ ॥ ೨೮೭ ॥**

**ನಾಯಂತ್ರಿತಶ್ಚತುರ್ವೇದಃ ಸರ್ವಾಶೀ ಸರ್ವವಿಕ್ರಯೀ ।**
**ಯಸ್ಮಾದ್ವಿಪ್ರೇಷು ಸಾವಿತ್ರ್ಯಾ ಶಾಪೋ ದತ್ತಃ ಸದಸ್ಯಥ ॥ ೨೮೮ ॥**

**ಅತ್ರ ದತ್ತಂ ಹುತಂ ಚಾಪಿ ಸರ್ವಮಕ್ಷಯಕಾರಕಂ ।**
**ದತ್ತೋ ವರೋ ಮಯಾ ತೇನ ಯುಷ್ಮಾಕಂ ದ್ವಿಜಸತ್ತಮಾಃ ॥ ೨೮೯ ॥**

---

೨೮೪. ಓಂಕಾರವು ಮೂರು ಮಾತ್ರೆಯುಳ್ಳದ್ದು. ಮ್‌ಕಾರವು ಅರ್ಧ ಮಾತ್ರೆಯುಳ್ಳದ್ದು. ಈ ಮೂರುವರೆ ಮಾತ್ರೆಗಳಿಂದಲೂ, ಶಿರಸ್ಸಿನಿಂದಲೂ ಕೂಡಿದ ಗಾಯತ್ರಿಯನ್ನು ಜಪಿಸಿದರೆ ಪೂಜ್ಯರಾಗುತ್ತೀರಿ. ಸಂದೇಹವಿಲ್ಲ.

೨೮೫-೨೮೬. ನಾನು ಅಷ್ಟಾಕ್ಷರಳು ನನ್ನಿಂದಲೇ ಜಗತ್ತು ವ್ಯಾಪ್ತವಾಗಿದೆ. ನಾನೇ ಎಲ್ಲ ವೇದಗಳಿಗೂ ತಾಯಿ. ಎಲ್ಲಾ ಪದಗಳಲ್ಲಿಯೂ ನಾನಿದ್ದೇನೆ. ಎಲೈ ಬ್ರಾಹ್ಮಣರಿರಾ, ನನ್ನನ್ನು ಜಪಿಸಿದರೆ ಉತ್ತಮವಾದ ಸಿದ್ಧಿಯನ್ನು ಹೊಂದುತ್ತೀರಿ.

೨೮೭. ನನ್ನನ್ನು ಜಪಿಸುವುದರಿಂದ ನಿಮಗೆ ಪ್ರಧಾನತೆಯು ಬರುತ್ತದೆ. ಬ್ರಾಹ್ಮಣನು ಗಾಯತ್ರಿಯೊಂದನ್ನೇ ಹೊಂದಿದ್ದರೂ ನಿಯಮದಿಂದ ಜಪಿಸಿದರೆ ಅವನೇ ಶ್ರೇಷ್ಠನು.

೨೮೮-೨೮೯. ಚತುರ್ವೇದಗಳನ್ನು ಓದಿದ್ದರೂ ನಿಯಮದಿಂದಿರದೆ, ಎಲ್ಲವನ್ನೂ ತಿನ್ನುತ್ತಾ, ಎಲ್ಲವನ್ನೂ ಮಾರುವವನು ಯೋಗ್ಯನಲ್ಲ. ಸಾವಿತ್ರಿಯು ಕೊಟ್ಟ ಶಾಪದಿಂದ ಅವರು ಹಾಗಾಗುತ್ತಾರೆ. ಈ ಗಾಯತ್ರಿಯನ್ನು ಜಪಿಸುವ

**ಅಗ್ನಿಹೋತ್ರರತಾ ವಿಪ್ರಾಸ್ತ್ರಿಕಾಲಂ ಹೋಮದಾಯಿನಃ ।**
**ಸ್ವರ್ಗಂ ತೇ ತು ಗಮಿಷ್ಯಂತಿ ಏಕವಿಂಶತಿಭಿಃ ಕುಲೈಃ ॥ ೨೯೦ ॥**

**॥ ಪುಲಸ್ತ್ಯ ಉವಾಚ ॥**

**ಏವಂ ಶಕ್ರೇ ತು ವಿಷ್ಣೌ ತು ರುದ್ರೇ ವೈ ಪಾವಕೇ ತಥಾ ।**
**ಬ್ರಹ್ಮಣೋ ಬ್ರಾಹ್ಮಣಾನಾಂ ಚ ಗಾಯತ್ರೀ ವರಮುತ್ತಮಂ ॥ ೨೯೧ ॥**

**ತಸ್ಮಿನ್ವೈ ಪುಷ್ಕರೇ ದತ್ವಾ ಬ್ರಹ್ಮಣಃ ಪಾರ್ಶ್ವಮಾಗತಂ ।**
**ಚಾರಣೈಸ್ತು ತದಾಖ್ಯಾತಂ ಲಕ್ಷ್ಮ್ಯೈ ವೈ ಶಾಪಕಾರಣಂ ॥ ೨೯೨ ॥**

**ಯುವತೀನಾಂ ಚ ಸರ್ವಾಸಾಂ ಶಾಪಾನ್ ಜ್ಞಾತ್ವಾ ಪೃಥಕ್ಪೃಥಕ್ ।**
**ಲಕ್ಷ್ಮ್ಯೈಸ್ತು ವೈ ವರಂ ಪ್ರಾದಾದ್ಗಾಯತ್ರೀ ಬ್ರಹ್ಮಣಃ ಪ್ರಿಯಾ ॥ ೨೯೩ ॥**

**॥ ಗಾಯತ್ರ್ಯುವಾಚ ॥**

**ಅಕುತ್ಸಿತಾ ಸದಾ ಭೃತ್ಯೈರ್ನೈಕಾವಾಸೇನ ಶೋಭಿತಾ ।**

---

ಬ್ರಾಹ್ಮಣನಲ್ಲಿ ದಾನಮಾಡಿದುದೂ, ಹೋಮಮಾಡಿದುದೂ ಎಲ್ಲವೂ ಅಕ್ಷಯವನ್ನು ಉಂಟುಮಾಡುತ್ತದೆ. ಈ ರೀತಿಯಾದ ವರವನ್ನು ನಾನು ನಿಮಗೆ ಕೊಟ್ಟಿದ್ದೇನೆ.

೨೯೦. ಅಗ್ನಿಹೋತ್ರವನ್ನು ಮಾಡುವ ಮೂರು ಕಾಲಗಳಲ್ಲಿಯೂ ಹೋಮ ಮಾಡುವ ಬ್ರಾಹ್ಮಣರು ತಮ್ಮ ಇಪ್ಪತ್ತೊಂದು ಕುಲದೊಡನೆ ಸ್ವರ್ಗವನ್ನು ಹೊಂದು ತ್ತಾರೆ.

೨೯೧. ಪುಲಸ್ತ್ಯನು ಹೇಳಿದನು :—ಈರೀತಿ ಶಕ್ರ, ವಿಷ್ಣು, ರುದ್ರ, ಅಗ್ನಿ, ಬ್ರಹ್ಮ, ಬ್ರಾಹ್ಮಣರುಗಳಿಗೆ ಗಾಯತ್ರಿಯು ಆ ಪುಷ್ಕರದಲ್ಲಿ ವರವನ್ನು ಕೊಟ್ಟು ಬ್ರಹ್ಮನ ಬಳಿಗೆ ಬಂದಳು.

೨೯೨-೨೯೩. ಅನಂತರ ಲಕ್ಷ್ಮಿಗೆ ಶಾಪಕೊಟ್ಟಿರುವುದನ್ನು ಚಾರಣರು ಗಾಯತ್ರಿಗೆ ಹೇಳಲು, ಆಕೆಯು ಆ ಲಕ್ಷ್ಮಿಯ ಮತ್ತು ಹೆಂಗಸರ ಶಾಪವನ್ನು ತಿಳಿದು ಬ್ರಹ್ಮಪ್ರಿಯಳಾದ ಆಕೆಯು ಲಕ್ಷ್ಮಿಗೆ ವರವನ್ನು ಕೊಟ್ಟಳು.

೨೯೪. ಗಾಯತ್ರಿಯು ಹೇಳಿದಳು :—ಎಲೈ ಲಕ್ಷ್ಮಿಯೇ, ನೀನು ಯಾವಾ

ಶೋಭಿಷ್ಯಸಿ ನ ಸಂದೇಹಃ ಸರ್ವೇಭ್ಯಃ ಪ್ರೀತಿದಾಯಿನೀ ॥ ೨೯೪ ॥

ಯೇ ತ್ವಯಾ ವೀಕ್ಷಿತಾಃ ಪುತ್ರಿ ಸರ್ವೇ ತೇ ಪುಣ್ಯಭಾಜನಾಃ ।
ಪರಿತ್ಯಕ್ತಾಸ್ತ್ವಯಾ ಯೇ ತು ಸರ್ವೇ ತೇ ದುಃಖಭಾಜನಾಃ ॥ ೨೯೫ ॥

ತೇಷಾಂ ಜಾತಿಃ ಕುಲಂ ಶೀಲಂ ಧರ್ಮಶ್ಚೈವ ವರಾನನೇ ।
ಸಭಾಯಾಂ ತೇ ಚ ಶೋಭಂತೇ ಗಣ್ಯಂತೇ ತೇ ಚ ಪಾರ್ಥಿವಾಃ ॥ ೨೯೬ ॥

ಅರ್ಥಿತ್ವಂ ಚೈವ ತೇಷಾಂ ತು ಕುರ್ವಂತಿ ವೈ ದ್ವಿಜೋತ್ತಮಾಃ ।
ಸ್ವಾಜನ್ಯಂ ತೇಷು ಕುರ್ವಂತಿ ತ್ವಂ ನೋ ಭ್ರಾತಾ ಪಿತಾ ಗುರುಃ ॥ ೨೯೭ ॥

ಬಾಂಧವೋಽಸಿ ನ ಸಂದೇಹೋ ನ ಜೀವೇಽಹಂ ತ್ವಯಾ ವಿನಾ ।
ತ್ವಯಿ ದೃಷ್ಟೇ ಪ್ರಸನ್ನಾ ಮೇ ದೃಷ್ಟಿರ್ಭವತಿ ಶೋಭನಾ ॥ ೨೯೮ ॥

ಮನಃ ಪ್ರಸೀದತೇಽತ್ಯರ್ಥಂ ಸತ್ಯಂ ಸತ್ಯಂ ವದಾಮಿ ತೇ ।
ಏವಂವಿಧಾನಿ ವಾಕ್ಯಾನಿ ತ್ವದ್ದೃಷ್ಟ್ಯಾ ಯೇ ನಿರೀಕ್ಷಿತಾಃ ॥ ೨೯೯ ॥

---

ಗಲೂ ಆಳುಗಳಿಂದ ಸೇರಿಕೊಂಡು ತಿರಸ್ಕರಿಸದಂತೆ ಎಲ್ಲರಿಗೂ ಪ್ರೀತಿಯನ್ನುಂಟು ಮಾಡುತ್ತಾ ಶೋಭಿಸುತ್ತೀಯೆ.

೨೯೫. ನೀನು ನೋಡಿದವರೆಲ್ಲರೂ ಪುಣ್ಯಭಾಗಿಗಳಾಗಲಿ. ನೀನು ಬಿಟ್ಟವರೆಲ್ಲರೂ ದುಃಖಹೊಂದಲಿ.

೨೯೬. ನೀನು ಯಾರಲ್ಲಿದ್ದೀಯೋ ಅವರಿಗೆ ಜಾತಿ, ಕುಲ, ಶೀಲ, ಧರ್ಮ, ಒಂದೂ ಪ್ರಾಧಾನ್ಯವಲ್ಲ. ಅವರೆಲ್ಲರೂ ಉತ್ತಮರೇ. ಅವರು ಸಭೆಯಲ್ಲಿ ಶೋಭಿಸುತ್ತಾರೆ. ರಾಜರೂ ಅವರನ್ನು ಲೆಕ್ಕಿಸುತ್ತಾರೆ.

೨೯೭-೨೯೮. ಬ್ರಾಹ್ಮಣಶ್ರೇಷ್ಠರೂ ಕೂಡ ಅವರನ್ನೇ ಯಾಚಿಸುತ್ತಾರೆ, ಅವರನ್ನು ತಮ್ಮವರನ್ನಾಗಿ ಮಾಡಿಕೊಳ್ಳುತ್ತಾರೆ. ನೀವೇ ನಮ್ಮ ಸೋದರರು, ತಂದೆಯು, ಗುರುವು, ಬಂಧುವು, ಸಂದೇಹವಿಲ್ಲ. ನೀನಿಲ್ಲದಿದ್ದರೆ ನಾನು ಬದುಕುವುದೇ ಇಲ್ಲ. ನೀನು ನೋಡಿದರೆ ನನ್ನ ದೃಷ್ಟಿಗಳು ಚೆನ್ನಾಗಿರುತ್ತವೆ. ಮನಸ್ಸು ಚೆನ್ನಾಗಿ ಉಲ್ಲಾಸವಾಗಿರುತ್ತದೆ. ಸತ್ಯವಾಗಿಯೂ ಹೇಳುತ್ತೇನೆ.

೨೯೯. ನಿನ್ನ ದೃಷ್ಟಿಗೆ ಬಿದ್ದವರು ಇವೇ ಮುಂತಾದ ಮಾತುಗಳನ್ನು, ಜಗತ್ತಿಗೆ ಪ್ರೀತಿದಾಯಕವಾದ ಸಜ್ಜನರು ಕೇಳುತ್ತಾರೆ.

**ಸಜ್ಞಾನಾಸ್ತೇ ತು ಶ್ರೋಷ್ಯಂತಿ ಜಗತಾಂ ಪ್ರೀತಿದಾಯಕಾಃ ।**
**ಇಂದ್ರತ್ವಂ ನಹುಷಃ ಪ್ರಾಪ್ಯ ದೃಷ್ಟ್ವಾ ತ್ವಾಂ ಯಾಚಯಿಷ್ಯತಿ ॥ ೩೦೦ ॥**

**ತ್ವದ್ದೃಷ್ಟ್ಯಾ ತು ಪತಃ ಪಾಪೋ ಹ್ಯಗಸ್ತ್ಯವಚನಾದ್ದ್ರುತಂ ।**
**ಸರ್ಪತ್ವಂ ಸಮನುಪ್ರಾಪ್ಯ ಪ್ರಾರ್ಥಯಿಷ್ಯತಿ ತಂ ಮುನಿಂ ॥ ೩೦೧ ॥**

**ದರ್ಪೇಣಾಹಂ ವಿನಷ್ಟೋಽಸ್ಮಿ ಶರಣಂ ಮೇ ಮುನೇ ಭವ ।**
**ವಾಕ್ಯೇನಾನೇನ ಚಾಪ್ಯಾಸೌ ನೃಪಸ್ಯ ಭಗವಾನೃಷಿಃ ॥ ೩೦೨ ॥**

**ಕೃತ್ವಾ ಮನಸಿ ಕಾರುಣ್ಯಮಿದಂ ವಾಕ್ಯಂ ವದಿಷ್ಯತಿ ।**
**ಉತ್ಪತ್ಸ್ಯತಿ ಕುಲೇ ರಾಜಂಸ್ತ್ವದೀಯೇ ಕುಲನಂದನಃ ॥ ೩೦೩ ॥**

**ಸರ್ಪರೂಪಧರಂ ದೃಷ್ಟ್ವಾ ಸ ತೇ ಶಾಪಂ ಹಿ ಭೇತ್ಸ್ಯತಿ ।**
**ತದಾ ತ್ವಂ ಸರ್ಪತಾಂ ತ್ಯಕ್ತ್ವಾ ಪುನಃ ಸ್ವರ್ಗಂ ಗಮಿಷ್ಯಸಿ ॥ ೩೦೪ ॥**

**ಅಶ್ವಮೇಧಕೃತೇನ ತ್ವಂ ಭರ್ತ್ರಾ ಸಹ ಪುನರ್ದಿವಂ ।**
**ಪ್ರಾಪ್ಸ್ಯಸೇ ವರದಾನೇನ ಮದೀಯೇನ ಸುಲೋಚನೇ ॥ ೩೦೫ ॥**

---

೩೦೦-೩೦೧. ನಹುಷನು ಇಂದ್ರಪದವಿಯನ್ನು ಪೊಂದಿ ನಿನ್ನನ್ನು ನೋಡಿ ಬೇಕೆನ್ನುತ್ತಾನೆ. ನಿನ್ನ ದೃಷ್ಟಿ ಬಿದ್ದು ಅವನಿಗೆ ಕೇಡಾಗಿ ಅಗಸ್ತ್ಯರ ಮಾತಿನಿಂದ ಸರ್ಪವಾಗುತ್ತಾನೆ. ಅಂತೆಯೇ ಅಗಸ್ತ್ಯನನ್ನೇ ಕೇಳಿಕೊಳ್ಳುತ್ತಾನೆ. ದರ್ಪದಿಂದ ನಾನು ಹಾಳಾಗಿ ಹೋದೆ. ಎಲೈ ಋಷಿಯೇ, ನನ್ನನ್ನು ಕಾಪಾಡು ಎಂದು ಕೇಳಿ ಕೊಳ್ಳುತ್ತಾನೆ.

೩೦೨. ನಹುಷನ ಈ ಮಾತಿನಿಂದ ಆ ಅಗಸ್ತ್ಯಋಷಿಗೆ ಕೃಪೆಬಂದು ಈ ಮಾತನ್ನು ಹೇಳುತ್ತಾನೆ.

೩೦೩. ಎಲೈ ದೊರೆಯೇ, ನಿನ್ನ ವಂಶದಲ್ಲಿಯೇ ಒಬ್ಬ ಕುಲದೀಪಕನು ಹುಟ್ಟುತ್ತಾನೆ. ಸರ್ಪರೂಪವನ್ನು ಹೊಂದಿರುವ ನಿನ್ನನ್ನು ನೋಡಿ ಆತನು ಅದನ್ನು ಹೋಗಲಾಡಿಸುತ್ತಾನೆ.

೩೦೪-೩೦೫. ಆಗ ನೀನು ಸರ್ಪಸ್ವರೂಪವನ್ನು ಬಿಟ್ಟು ಸ್ವರ್ಗವನ್ನು ಹೊಂದು ತ್ತೀಯೆ. ಎಲೈ ಲಕ್ಷ್ಮಿಯೇ ಆಗ ನಿನ್ನ ಗಂಡನು ಅಶ್ವಮೇಧಯಾಗ ಮಾಡುತ್ತಾನೆ. ಅವನ ಜೊತೆಯಲ್ಲಿ ನನ್ನ ವರದಿಂದ ಮತ್ತೆ ಸ್ವರ್ಗಕ್ಕೆ ಹೋಗುತ್ತೀಯೆ.

॥ ಪುಲಸ್ತ್ಯ ಉವಾಚ ॥

ದೇವಪತ್ನ್ಯಸ್ತದಾ ಸರ್ವಾಸ್ತುಷ್ಟಯಾ ಪರಿಭಾಷಿತಾಃ ।
ಅಪತ್ಯೈರಪಿ ಹೀನಾಃ ಸ್ಯುರ್ನೈವ ದುಃಖಂ ಭವಿಷ್ಯತಿ ॥ ೩೦೬ ॥

ಗೌರೀ ತ್ವೇವಂ ತು ಗಾಯತ್ರ್ಯಾ ತದಾ ಸಾಪಿ ವಿಬೋಧಿತಾ ।
ಬೃಹತಾ ಪರಿತೋಷೇಣ ವರಾನ್ದತ್ವಾ ಮನಸ್ವಿನೀ ॥ ೩೦೭ ॥

ಸಮಾಪ್ತಿಂ ತಸ್ಯ ಯಜ್ಞಸ್ಯ ಕಾಂಕ್ಷಂತೀ ಬ್ರಹ್ಮಣಃ ಪ್ರಿಯಾ ।
ವರದಾಂ ತಾಂ ತಥಾ ದೃಷ್ಟ್ವಾ ಗಾಯತ್ರೀಂ ವೇದಮಾತರಂ ।
ಪ್ರಣಿಪತ್ಯ ತದಾ ರುದ್ರಃ ಸ್ತುತಿಮೇತಾಂ ಚಕಾರ ಹ ॥ ೩೦೮ ॥

॥ ರುದ್ರ ಉವಾಚ ॥

ನಮೋಽಸ್ತು ತೇ ವೇದಮಾತರಷ್ಟಾಕ್ಷರವಿಶೋಧಿತೇ ।
ಗಾಯತ್ರೀ ದುರ್ಗತರಣೀ ವಾಣೀ ಸಪ್ತವಿಧಾ ತಥಾ ॥ ೩೦೯ ॥

---

೩೦೬. ಪುಲಸ್ತ್ಯನು ಹೇಳಿದನು:—ದೇವತಾಸ್ತ್ರೀಯರನ್ನೂ ಕೂಡ, ಸಂತೋಷ ಪಟ್ಟ ಆ ಗಾಯತ್ರಿಯು, ನಿಮಗೆ ಮಕ್ಕಳಿಲ್ಲದೆ ಹೋದರೂ ದುಃಖಪ್ರಾಪ್ತವಾಗಬಾರದು ಎಂದಳು.

೩೦೭. ಗೌರಿಗೂ ಕೂಡ ಇದೇ ರೀತಿ ವರವನ್ನು ಕೊಟ್ಟು ಸಂತೋಷಪಡಿಸಿದಳು. ಈರೀತಿ ಆ ಗಾಯತ್ರಿಯು ಎಲ್ಲರಿಗೂ ಸಂತೋಷದಿಂದ ವರವನ್ನು ಕೊಟ್ಟು, ಬ್ರಹ್ಮನು ಮಾಡುತ್ತಿರುವ ಯಜ್ಞದ ಅವಭೃಥವನ್ನು ಎದುರು ನೋಡುತ್ತಿದ್ದಳು.

೩೦೮. ವೇದಮಾತೆಯಾದ ಗಾಯತ್ರಿಯು ಅಂತು ವರವನ್ನು ಕೊಡುತ್ತಿರುವುದನ್ನು ನೋಡಿ, ನಮಸ್ಕರಿಸಿ ಈರೀತಿ ಸ್ತುತಿಯನ್ನು ರುದ್ರನು ಮಾಡಿದನು.

೩೦೯-೩೧೦. ರುದ್ರನು ಹೇಳಿದನು :—ಎಲೈ ವೇದಮಾತೆಯಾದ ಗಾಯತ್ರಿಯೇ, ನಿನಗೆ ನಮಸ್ಕಾರವು. ಎಂಟು ಅಕ್ಷರಗಳಿಂದ ಸ್ತುತಿಸಲ್ಪಡುವವಳೇ, ನಿನಗೆ ನಮಸ್ಕಾರವು. ನೀನೇ ಕಷ್ಟಗಳನ್ನು ನಾಶಮಾಡತಕ್ಕವಳು. ನೀನೇ ಏಳು ವಿಧವಾದ ವಿದ್ಯೆಯು. ಎಲ್ಲಾ ಸ್ತುತಿಶಾಸ್ತ್ರಗಳೂ, ಗಾಥೆಯೂ, ನಿಯಮವೂ, ಎಲ್ಲಾ

**ಸರ್ವಾಣಿ ಸ್ತುತಿಶಾಸ್ತ್ರಾಣಿ ಗಾಥಾಶ್ಚ ನಿಯಮಾಸ್ತಥಾ ।**
**ಅಕ್ಷರಾಣಿ ಚ ಸರ್ವಾಣಿ ಲಕ್ಷಣಾನಿ ತಥೈವ ಚ　　॥ ೩೧೦ ॥**

**ಭಾಷ್ಯಾಣಿ ಸರ್ವಶಾಸ್ತ್ರಾಣಿ ತ್ವಂ ತು ದೇವಿ ನಮೋಽಸ್ತು ತೇ ।**
**ಶ್ವೇತಾ ತ್ವಂ ಶ್ವೇತರೂಪಾಸಿ ಶಶಾಂಕೇನ ಸಮಾನನಾ　　॥ ೩೧೧ ॥**

**ಬಿಭ್ರತೀ ವಿಪುಲೌ ಬಾಹೂ ಕದಲೀಗರ್ಭಕೋಮಲೌ ।**
**ಏಣಶೃಂಗಂ ಕರೇ ಗೃಹ್ಯ ಪಂಕಜಂ ಚ ಸುನಿರ್ಮಲಂ　　॥ ೩೧೨ ॥**

**ವಸಾನಾ ವಸನೇ ಕ್ಷೌಮೇ ರಕ್ತೇನೋತ್ತರವಾಸಸಾ ।**
**ಶಶಿರಶ್ಮಿಪ್ರಕಾಶೇನ ಹಾರೇಣೋರಸಿ ರಾಜತಾ　　॥ ೩೧೩ ॥**

**ದಿವ್ಯಕುಂಡಲಪೂರ್ಣಾಭ್ಯಾಂ ಸುಕರ್ಣಾಭ್ಯಾಂ ವಿರಾಜಿತಾ ।**
**ಚಂದ್ರಸಾಪತ್ನ್ಯಭೂತೇನ ಮುಖೇನ ತ್ವಂ ವಿರಾಜಸೇ　　॥ ೩೧೪ ॥**

**ಮುಕುಟೇನಾತಿಶುದ್ಧೇನ ಕೇಶಬಂಧೇನ ಶೋಭಿತಾ ।**
**ಭುಜಂಗಭೋಗಸದೃಶೌ ಭುಜೌ ತೇ ಭೂಷಣಂ ದಿವಃ　　॥ ೩೧೫ ॥**

---

ಅಕ್ಷರಗಳೂ, ಲಕ್ಷಣಗಳೂ ನೀನಾಗಿದ್ದೀಯೆ. ಭಾಷ್ಯಗಳೂ, ಸರ್ವಶಾಸ್ತ್ರಗಳೂ ನೀನಾಗಿದ್ದೀಯೆ. ಇಂತಹ ದೇವಿಯೇ, ನಿನಗೆ ನಮಸ್ಕಾರವು.

೩೧೧. ನೀನು ಬಿಳಿಯ ಬಣ್ಣವುಳ್ಳವಳಾಗಿದ್ದೀಯೆ. ಚಂದ್ರನಂತಿರುವ ಮುಖವನ್ನು ಹೊಂದಿದ್ದೀಯೆ. ಬಾಳೆಯ ಕಂಬದ ಒಳಗಿರುವಂತೆ ಬಣ್ಣವುಳ್ಳ, ಸೌಂದರ್ಯವುಳ್ಳ ಎರಡು ತೋಳುಗಳನ್ನು ಹೊಂದಿದ್ದೀಯೆ.

೩೧೨-೩೧೩. ಹುಲ್ಲೆಯ ಕೊಂಬನ್ನು ಕೈಲಿ ಹಿಡಿದು, ಕಮಲವನ್ನು ಕೈಲಿ ಹಿಡಿದಿದ್ದೀಯೆ. ದುಕೂಲವನ್ನುಟ್ಟು ಮೇಲೊಂದು ಕೆಂಪುಬಣ್ಣದ ಹಾರವನ್ನು ಕತ್ತಿಗೆ ಹಾಕಿಕೊಂಡಿದ್ದೀಯೆ. ಉತ್ತಮವಾದ ಓಲೆಗಳಿಂದ ಪ್ರಕಾಶಿಸುವ ಕಿವಿಗಳನ್ನು ಹೊಂದಿದ್ದೀಯೆ.

೩೧೪-೩೧೫. ಚಂದ್ರನಂತಿರುವ ಮುಖದಿಂದ ಪ್ರಕಾಶಿಸುತ್ತಿದ್ದೀಯೆ. ಶುದ್ಧವಾದ ಕಿರೀಟದಿಂದಲೂ, ಕೂವಲಿನ ಗಂಟಿನಿಂದಲೂ ಪ್ರಕಾಶಿಸುತ್ತಿದ್ದೀಯೆ. ಸರ್ಪದ ಶರೀರದಂತಿರುವ ನಿನ್ನ ತೋಳುಗಳು ಸ್ವರ್ಗಕ್ಕೆ ಅಲಂಕಾರವಾಗಿವೆ.

**ಸ್ತನೌ ತೇ ರುಚಿರೌ ದೇವಿ ವರ್ತುಲೌ ಸಮುಚೂಚುಕೌ ।**
**ಜಘನೇನಾತಿವಶುಭ್ರೇಣ ತ್ರಿವಲೀಭಂಗದರ್ಶಿನಾ ॥ ೩೧೬ ॥**

**ಸುಮಧ್ಯವರ್ತಿನೀ ನಾಭಿರ್ಗಂಭೀರಾ ಶುಭದರ್ಶಿನೀ ।**
**ವಿಸ್ತೀರ್ಣಜಘನಾ ದೇವೀ ಸುಶ್ರೋಣೀ ಚ ಸುಮಧ್ಯಮಾ ॥ ೩೧೭ ॥**

**ಸುಚಾರುಕೋರುಯುಗಲಾ ಸುಜಾನುಚರಣಾ ತಥಾ ।**
**ತ್ರೈಲೋಕ್ಯಧಾರಿಣೀ ಸಾ ತ್ವಂ ಭುವಿ ಸತ್ಯೋಪಯಾಚನಾ ॥ ೩೧೮ ॥**

**ಭವಿಷ್ಯಸಿ ಮಹಾಭಾಗೇ ವರದಾ ವರವರ್ಣಿನೀ ।**
**ಪುಷ್ಕರೇ ತು ಕೃತಾ ಯಾತ್ರಾ ದೃಷ್ಟ್ವಾ ತ್ವಾಂ ಸಂಭವಿಷ್ಯತಿ ॥ ೩೧೯ ॥**

**ಜ್ಯೇಷ್ಠಮಾಸೇ ಪೌರ್ಣಮಾಸ್ಯಾಮಗ್ರ್ಯಾಂ ಪೂಜಾಂ ಚ ಲಪ್ಸ್ಯಸೇ ।**
**ಯೇ ವಾ ತ್ವಾಂ ತ್ವತ್ಪ್ರಭಾವಜ್ಞಾಃ ಪೂಜಯಿಷ್ಯಂತಿ ಮಾನವಾಃ ॥ ೩೨೦ ॥**

---

೩೧೬-೩೧೭. ಎಲೈ ದೇವಿಯೇ, ನಿನ್ನ ಮೊಲೆಗಳು ದುಂಡಗೆ ಮನೋಹರವಾಗಿ ಸಮವಾದ ಮೊಲೆತೊಟ್ಟನ್ನು ಹೊಂದಿವೆ. ಜಘನಪ್ರದೇಶವು ಶುಭ್ರವಾಗಿ ತ್ರಿವಳಿಗಳ ಮಡಿಕೆಗಳಿಂದ ಕೂಡಿವೆ. ಹೊಕ್ಕಳು ಮಧ್ಯಭಾಗದಲ್ಲಿದ್ದುಕೊಂಡು ಆಳವಾಗಿ ಶುಭವನ್ನು ಸೂಚಿಸುತ್ತದೆ. ಜಘನವು ಅಗಲವಾಗಿವೆ. ಕುಂಡೆಗಳು ಚೆನ್ನಾಗಿವೆ. ಸೊಂಟವು ರಮ್ಯವಾಗಿದೆ.

೩೧೮-೩೧೯. ತೊಡೆಗಳೆರಡು ಮನೋಹರವಾಗಿವೆ. ಮಂಡಿಯೂ ಕಾಲುಗಳೂ ಸುಂದರವಾಗಿವೆ. ಇಂತಹ ನೀನು ಮೂರು ಲೋಕಗಳನ್ನು ಧರಿಸಿದ್ದೀಯೆ. ನೀನು ಸತ್ಯಕ್ಕೆ ಕಟ್ಟುಬಿದ್ದಿರುವವಳು. ಪುಷ್ಕರದಲ್ಲಿ ಯಾತ್ರೆಮಾಡಿದವರು ನಿನ್ನ ದರ್ಶನಮಾಡಿದರೆ ಅವರಿಗೆ ಯಾತ್ರೆಯ ಫಲವು ಬರುತ್ತದೆ.

೩೨೦. ಜ್ಯೇಷ್ಠಮಾಸದ ಹುಣ್ಣಿಮೆಯಲ್ಲಿ ಮುಖ್ಯವಾಗಿ ನಿನ್ನನ್ನು ಪೂಜಿಸಬೇಕು. ಯಾರು ನಿನ್ನ ಮಹಿಮೆಯನ್ನು ತಿಳಿದು ಪೂಜಿಸುವರೋ ಅವರಿಗೆ ಮಕ್ಕಳೂ ಹಣವೂ ಸಮೃದ್ಧಿಯಾಗಲಿ.

**ನ ತೇಷಾಂ ದುರ್ಲಭಂ ಕಿಂಚಿತ್ಪುತ್ರತೋ ಧನತೋಽಪಿ ವಾ ।**
**ಕಾಂತಾರೇಷ್ವೇವ ಮಗ್ನಾನಾಮಟವ್ಯಾಂ ಚ ಮಹಾರ್ಣವೇ ॥ ೩೨೧ ॥**

**ದಸ್ಯುಭಿರ್ವಾ ನಿರುದ್ಧಾನಾಂ ತ್ವಂ ಗತಿಃ ಪರಮಾ ನೃಣಾಂ ।**
**ತ್ವಂ ಸಿದ್ಧಿಃ ಶ್ರೀಃ ಪ್ರಿಯಾ ಕೀರ್ತಿಃ ಕ್ರಿಯಾ ಪ್ರೀತಿಃ ಕ್ಷಮಾ ತಥಾ ॥ ೩೨೨ ॥**

**ಸಂಧ್ಯಾ ರಾತ್ರಿಃ ಪ್ರಿಯಾ ನಿದ್ರಾ ಕಾಲರಾತ್ರಿಸ್ತ್ವಮೇವ ಚ ।**
**ಅಂಬಾ ಚ ಕಮಲಾ ಯಾ ವೈ ಬ್ರಹ್ಮಾಣೀ ಬ್ರಹ್ಮಚಾರಿಣೀ ॥ ೩೨೩ ॥**

**ಜನನೀ ಸರ್ವದೇವಾನಾಂ ಗಾಯತ್ರೀ ಪರಮಾಂಗನಾ ।**
**ಜಯಾ ಚ ವಿಜಯಾ ಚೈವ ಪುಷ್ಟಿಸ್ತ್ವಂ ವರವರ್ಣಿನೀ ॥ ೩೨೪ ॥**

**ಸಾವಿತ್ರ್ಯವರಜಾ ಚಾಸಿ ಸದಾ ಚೇಷ್ಟಾ ಪಿತಾಮಹೇ ।**
**ಬಹುರೂಪಾ ವಿಶ್ವರೂಪಾ ಸುನೇತ್ರಾ ಪದ್ಮಧಾರಿಣೀ ॥ ೩೨೫ ॥**

**ಸುರೂಪಾ ತ್ವಂ ವಿಶಾಲಾಕ್ಷೀ ಭಕ್ತಾನಾಂ ಪರಿರಕ್ಷಿಣೀ ।**
**ನಗರೇಷು ಚ ಮುಖ್ಯೇಷು ಆಶ್ರಮೇಷು ವರಾನನೇ ॥ ೩೨೬ ॥**

---

೩೨೧. ಕಾಡಿನಲ್ಲಿ ಸಿಕ್ಕಿಕೊಂಡಿರುವವರಿಗೂ ದುರ್ಗಗಳಲ್ಲಿ ಸಿಕ್ಕಿಕೊಂಡಿರುವವರಿಗೂ, ಸಮುದ್ರದಲ್ಲಿ ಪಾರಗಾಣದವರಿಗೂ, ಕಳ್ಳರಿಂದ ಬಂಧಿತರಾದವರಿಗೂ ನೀನೇ ಗತಿಯು.

೩೨೨-೩೨೩. ಸಿದ್ಧಿಯು, ಕಾಂತಿಯು, ಕೀರ್ತಿಯು, ಕ್ರಿಯೆಯು, ಪ್ರೀತಿಯು, ಕ್ಷಮೆಯು, ಸಂಧ್ಯೆಯು, ರಾತ್ರಿಯು ನಿದ್ರೆ, ಕಾಲರಾತ್ರಿಯೂ ನೀನೆ. ಅಂಬೆ, ಕಮಲೆ, ಬ್ರಹ್ಮಾಣಿ, ಬ್ರಹ್ಮಚಾರಿಣಿಯೂ ನೀನೇ.

೩೨೪-೩೨೫. ದೇವತೆಗಳಿಗೆಲ್ಲಾ ತಾಯಿಯು. ನೀನೇ ಗಾಯತ್ರಿಯು. ಉತ್ತಮವಾದ ಸ್ತ್ರೀಯು, ಜಯೆಯು, ವಿಜಯೆಯು, ಪುಷ್ಟಿಯೂ ಕೂಡ ನೀನೇ ಆಗಿದ್ದೀಯೆ. ಸಾವಿತ್ರಿಯ ತಂಗಿಯಾಗಿಯೂ ಯಾವಾಗಲೂ ಬ್ರಹ್ಮನಿಗೆ ಇಷ್ಟಳಾಗಿರುತ್ತೀಯೆ. ನೀನು ಬಹುರೂಪಳು, ವಿಶ್ವರೂಪಳು, ಸುನೇತ್ರೆಯು, ಪದ್ಮಹಸ್ತೆಯೂ ಆಗಿದ್ದೀಯೆ.

೩೨೬-೩೨೭. ನೀನು ಸುರೂಪಿಯು, ವಿಶಾಲಾಕ್ಷಿಯು, ಭಕ್ತರಿಗೆ ರಕ್ಷಕಳು.

**ವಾಸಸ್ತವ ಮಹಾದೇವಿ ವನೇಷೂಪವನೇಷು ಚ ।**
**ಬ್ರಹ್ಮಸ್ಥಾನೇಷು ಸರ್ವೇಷು ಬ್ರಹ್ಮಣೋ ವಾಮತಃ ಸ್ಥಿತಾ ॥ ೩೨೭ ॥**

**ದಕ್ಷಿಣೇನ ತು ಸಾವಿತ್ರೀ ಮಧ್ಯೇ ಬ್ರಹ್ಮಾ ಪಿತಾಮಹಃ ।**
**ಅಂತರ್ವೇದೀ ಚ ಯಜ್ಞಾನಾಮೃತ್ವಿಜಾನಾಂ ಚ ದಕ್ಷಿಣಾ ॥ ೩೨೮ ॥**

**ಸಿದ್ಧಿಸ್ತ್ವಂ ಹಿ ನೃಪಾಣಾಂ ಚ ವೇಲಾ ಸಾಗರಜಾ ಮತಾ ।**
**ಬ್ರಹ್ಮಚಾರಿಣ್ಯಥೋ ದೀಕ್ಷಾ ಶೋಭಾ ಶೋಭವತಾಂ ತಥಾ ॥ ೩೨೯ ॥**

**ಜ್ಯೋತಿಷಾಂ ಚ ಪ್ರಭಾ ದೇವೀ ಲಕ್ಷ್ಮೀರ್ನಾರಾಯಣೇ ಸ್ಥಿತಾ ।**
**ಕ್ಷಮಾಸಿ ತ್ವಂ ಮುನೀನಾಂ ಚ ನಕ್ಷತ್ರಾಣಾಂ ಚ ರೋಹಿಣೀ ॥ ೩೩೦ ॥**

**ರಾಜದ್ವಾರೇಷು ತೀರ್ಥೇಷು ನದೀನಾಂ ಸಂಗಮೇಷು ಚ ।**
**ಪೂರ್ಣಿಮಾ ಪೂರ್ಣಚಂದ್ರೇ ತು ಬುದ್ಧಿರ್ನೀತ್ಯಾಂ ಕ್ಷಮಾವೃತಿಃ ॥ ೩೩೧ ॥**

**ಉಮಾ ದೇವೀ ಚ ನಾರೀಣಾಂ ಶ್ರೂಯತೇ ವರವರ್ಣಿನೀ ।**
**ಇಂದ್ರಸ್ಯ ಚಾರುದೃಷ್ಟಿಸ್ತ್ವಂ ಸಹಸ್ರನಯನೋಪಗಾ ॥ ೩೩೨ ॥**

---

ಮುಖ್ಯಪಟ್ಟಣ, ಆಶ್ರಮ, ವನ, ಉಪವನಗಳಲ್ಲಿ ನಿನ್ನ ವಾಸವು. ಬ್ರಹ್ಮನಿರುವ ಸ್ಥಳದಲ್ಲೆಲ್ಲಾ ನೀನು ಬ್ರಹ್ಮನ ಎಡಭಾಗದಲ್ಲಿರುತ್ತೀಯೆ.

೩೨೮-೩೨೯. ಬಲಗಡೆಗೆ ಸಾವಿತ್ರಿ ಕುಳಿತಿರುತ್ತಾಳೆ. ಮಧ್ಯದಲ್ಲಿ ಪಿತಾಮಹನಾದ ಬ್ರಹ್ಮನಿರುವನು. ನೀನು ಯಜ್ಞಗಳಿಗೆ ಅಂತರ್ವೇದಿಯು. ಋತ್ವಿಕ್ಕುಗಳಿಗೆ ದಕ್ಷಿಣೆ, ರಾಜರಿಗೆ ಸಿದ್ಧಿ, ಸಾಗರಕ್ಕೆ ದಡ, ಬ್ರಹ್ಮಚಾರಿಗೆ ದೀಕ್ಷೆ, ಕಾಂತಿಯನ್ನು ಹೊಂದಿರುವವರಿಗೆ ಕಾಂತಿಯಾಗಿದ್ದೀಯೆ.

೩೩೦-೩೩೧. ನೀನು ಜ್ಯೋತಿಸ್ಸಿಗೆಲ್ಲಾ ಪ್ರಭೆಯು, ನಾರಾಯಣನಲ್ಲಿ ಲಕ್ಷ್ಮಿಯು, ಮುನಿಗಳಲ್ಲಿ ಕ್ಷಮೆಯು, ನಕ್ಷತ್ರಗಳಿಗೆ ರೋಹಿಣಿಯು, ರಾಜದ್ವಾರದಲ್ಲಿ, ತೀರ್ಥದಲ್ಲಿ, ನದಿಗಳ ಸಂಗಮದಲ್ಲಿ ಪುಣ್ಯರೂಪಿಣಿಯು. ಪೂರ್ಣಚಂದ್ರನಲ್ಲಿ ಹುಣ್ಣಿಮೆ, ನೀತಿಯಲ್ಲಿ ಬುದ್ಧಿ, ಕ್ಷಮೆಯಲ್ಲಿ ಆವರಣೆಯು ಈರೀತಿ ಇದ್ದೀಯೆ.

೩೩೨-೩೩೩. ಹೆಂಗಸರಲ್ಲಿ ಉಮಾದೇವಿಯು, ಇಂದ್ರನಿಗೆ ಸಾವಿರ ಕಣ್ಣಿ

**ಋಷೀಣಾಂ ಧರ್ಮಬುದ್ಧಿಸ್ತ್ವಂ ದೇವಾನಾಂ ಚ ಪರಾಯಣಾ ।**
**ಕರ್ಷಕಾಣಾಂ ಚ ಸೀತಾಸಿ ಭೂತಾನಾಂ ಧರಣೀ ತಥಾ　　॥ ೩೩೩ ॥**

**ನೃಣಾಂ ಬಂಧಂ ವಧಂ ಚೈವ ಪುತ್ರನಾಶಂ ಧನಕ್ಷಯಂ ।**
**ವ್ಯಾಧಿಂ ಮೃತ್ಯುಭಯಂ ಚೈವ ಪೂಜಿತಾ ನಾಶಯಿಷ್ಯಸಿ　　॥ ೩೩೪ ॥**

**ತಥಾ ತು ಕಾರ್ತಿಕೇ ಮಾಸಿ ಪೌರ್ಣಮಾಸ್ಯಾಂ ಸುಪೂಜಿತಾ ।**
**ಸರ್ವಕಾಮಪ್ರದಾ ದೇವಿ ಭವಿಷ್ಯಸಿ ವರಪ್ರದೇ　　॥ ೩೩೫ ॥**

**ಯಶ್ಚೇದಂ ಪಠತೇ ಸ್ತೋತ್ರಂ ಶೃಣುಯಾದ್ವಾಪಿ ಭಕ್ತಿತಃ ।**
**ಸರ್ವಾರ್ಥಸಿದ್ಧಿಂ ಲಭತೇ ನರೋ ನಾಸ್ತ್ಯತ್ರ ಸಂಶಯಃ　　॥ ೩೩೬ ॥**

**॥ ಗಾಯತ್ರ್ಯುವಾಚ ॥**

**ಭವಿಷ್ಯತ್ಯೇವಮೇವಂ ತು ಯತ್ತ್ವಯಾ ರುದ್ರ ಭಾಷಿತಂ ।**
**ವಿಷ್ಣುನಾ ಸಹಿತಃ ಸ್ಥಾನಂ ಸರ್ವಂ ಸಂಭಾವಯಿಷ್ಯಸಿ　　॥ ೩೩೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಸಾವಿತ್ರೀ-ಬ್ರಹ್ಮಗಾಯತ್ರೀ ವಿವಾದಶಾಪವರಪ್ರದಾನ ಕಥನಂ ನಾಮ ಸಪ್ತದಶೋಽಧ್ಯಾಯಃ**

---

ನೋಳಗಿನ ಒಳಕಣ್ಣು, ಋಷಿಗಳ ಧರ್ಮಬುದ್ಧಿಯು, ದೇವತೆಗಳಿಗೆ ಉತ್ತಮಳು, ಕೃಷಿಗಾರರಿಗೆ ನೇಗಿಲತುದಿ, ಪಂಚಭೂತಗಳಿಗೆ ಭೂಮಿಯೂ ಆಗಿದ್ದೀಯೆ.

೩೩೪. ಮನುಷ್ಯರಿಗೆ ಬಂಧ, ವಧ, ಪುತ್ರನಾಶ, ಧನನಾಶ, ರೋಗ, ಮೃತ್ಯು, ಭಯ ಇವು ನಿನ್ನನ್ನು ಪೂಜಿಸುವುದರಿಂದ ಹೋಗುತ್ತವೆ.

೩೩೫. ಕಾರ್ತಿಕಮಾಸದ ಹುಣ್ಣಿಮೆಯ ದಿನ ನಿನ್ನನ್ನು ಪೂಜಿಸಿದರೆ ಸಕಲೇಷ್ಟಗಳನ್ನು ಕೊಡುವವಳಾಗುತ್ತೀಯೆ.

೩೩೬. ಈ ಸ್ತೋತ್ರವನ್ನು ಓದುವವನೂ, ಭಕ್ತಿಯಿಂದ ಕೇಳುವವನೂ ಸಕಲ ಇಷ್ಟಗಳನ್ನೂ ಹೊಂದುತ್ತಾನೆ, ಸಂಶಯವಿಲ್ಲ.

೩೩೭. ಗಾಯತ್ರಿಯು ಹೇಳಿದಳು :—ಎಲೈ ರುದ್ರನೇ, ನೀನು ಹೇಳಿದಂತೆಯೇ ಎಲ್ಲವೂ ನಡೆಯಲಿ. ನೀನಿರುವ ಜಾಗದಲ್ಲೆಲ್ಲಾ ವಿಷ್ಣುವು ಇರಲಿ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸಾವಿತ್ರೀ ಬ್ರಹ್ಮಗಾಯತ್ರಿಯರ ಜಗಳ ಶಾಪವರಗಳ ದಾನಗಳ ಕಥನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಅಷ್ಟಾದಶೋಽಧ್ಯಾಯಃ

॥ ಭೀಷ್ಮ ಉವಾಚ ॥

ಅತ್ಯದ್ಭುತಮಿದಂ ಬ್ರಹ್ಮನ್ ಶ್ರುತವಾನಸ್ಮಿ ತತ್ತ್ವತಃ ।
ಅಭಿಷೇಕಂ ತುಗಾಯತ್ರ್ಯಾಃ ಸದೇ ತತ್ರ ತಥಾ ಕೃತಂ ॥ ೧ ॥

ವಿರೋಧಂ ಚೈವ ಸಾವಿತ್ರ್ಯಾ ಗಾಯತ್ರ್ಯಾ ಚ ಯಥಾ ಶ್ರುತಂ
ವಿಷ್ಣುನಾ ಚ ಯಥಾ ದೇವೀ ಸರ್ವಸ್ಥಾನೇಷು ಕೀರ್ತಿತಾ ॥ ೨ ॥

ಗಾಯತ್ರೀ ಚಾಪಿ ರುದ್ರೇಣ ಸಂಸ್ತುತಾ ವರವರ್ಣಿನೀ ।
ತುಚ್ಛ್ರುತ್ವಾ ಪೂತಮಾತ್ಮಾನಂ ವಿಸ್ತರೇಣ ಪಿತಾಮಹ ॥ ೩ ॥

ಪ್ರಹೃಷ್ಟಾನಿ ಚ ರೋಮಾಣಿ ಪ್ರಸನ್ನಂ ಚ ಮನೋ ಮಮ ।
ಶ್ರುತ್ವಾ ಮೇ ಪರಮಾ ಕೀರ್ತಿಃ ಕೌತೂಹಲಮತೀವ ಹಿ ॥ ೪ ॥

---

## ಹದಿನೆಂಟನೆಯ ಅಧ್ಯಾಯವು.

೧—೪. ಭೀಷ್ಮನು ಹೇಳಿದನು:—ಎಲೈ ಬ್ರಾಹ್ಮಣನೇ, ಬಹು ಅದ್ಭುತವಾದ ಇದನ್ನು ಕೇಳಿದೆನು. ಗಾಯಿತ್ರಿಗೆ ಅಭಿಷೇಕವನ್ನು ಸದಸ್ಸಿನಲ್ಲಿ ಮಾಡಿದುದು, ಅದಕ್ಕೆ ಸಾವಿತ್ರಿಯ ವಿರೋಧ, ಗಾಯತ್ರಿಯು ಅದಕ್ಕೆ ವಿರೋಧಿಸಿದುದು, ವಿಷ್ಣುವು ಸಾವಿತ್ರಿಯನ್ನು ಎಲ್ಲ ಜಾಗದಲ್ಲಿಯೂ ಇರುವಂತೆ ಹೇಳಿದುದು, ರುದ್ರನು ಗಾಯತ್ರಿಯನ್ನು ಎಲ್ಲಾ ಜಾಗದಲ್ಲಿಯೂ ಇರುವಂತೆ ಸ್ತೋತ್ರಮಾಡಿದುದು, ಅದೆಲ್ಲವನ್ನು ಕೇಳಿ ನನ್ನ ಆತ್ಮವು ಪವಿತ್ರವಾಯಿತು. ಇದನ್ನು ಕೇಳಿ ಬಹು ಸಂತೋಷವಾಯಿತು. ಕುತೂಹಲವೂ ಉಂಟಾಯಿತು.

ನಾರಾಯಣಸ್ತು ಭಗವಾನ್ಕೃತ್ವೈತಾಂ ಪರಮಾಂ ಚ ವೈ ।
ಬ್ರಹ್ಮಪತ್ನ್ಯಾಃ ಸ್ತುತಿಂ ಭಕ್ತ್ಯಾ ನ್ಯಸ್ಯ ತಾಂ ಪರ್ವತೋಪರಿ ॥ ೫ ॥

ಉವಾಚ ವಚನಂ ವಿಷ್ಣುರ್ಭಕ್ತಿತುಷ್ಟಿಪ್ರದಾಯಕಂ ।
ಶ್ರೀಮತೀ ಹ್ರೀಮತೀ ಚೈವ ಯಾ ಚ ದೇವೀಶ್ವರೀ ತಥಾ ॥ ೬ ॥

ಏತದೇವ ಶ್ರುತಂ ಬ್ರಹ್ಮಂಸ್ತವ ವಕ್ತ್ರಾದ್ವಿನಿಃಸೃತಂ ।
ಉತ್ತರಂ ತತ್ರ ಯದ್ಭೂತಂ ಯಚ್ಚ ತಸ್ಮಿನ್ಸ್ಥಲೇ ಕೃತಂ ॥ ೭ ॥

ಅನುಪೂರ್ವ್ಯಾ ತು ತತ್ಸರ್ವಂ ಭಗವಾನ್ವಕ್ತುಮರ್ಹಸಿ ।
ಶ್ರುತೇನ ಮೇ ದೇಹಶುದ್ಧಿರ್ಭವಿಷ್ಯತಿ ನ ಸಂಶಯಃ ॥ ೮ ॥

॥ ಪುಲಸ್ತ್ಯ ಉವಾಚ ॥

ಯಜತಃ ಪುಷ್ಕರೇ ತಸ್ಯ ದೇವಸ್ಯ ಪರಮೇಷ್ಠಿನಃ ।
ಶೃಣು ರಾಜನ್ಯಥಾವೃತ್ತಂ ಪೂರ್ವಮೇವ ಯಥಾ ಕೃತಂ ॥ ೯ ॥

---

೫. ಭಗವಂತನಾದ ನಾರಾಯಣನು ಈ ಸಾವಿತ್ರಿಯನ್ನು ಶ್ರೇಷ್ಠಳನ್ನಾಗಿ ಮಾಡಿ ಪರ್ವತದ ತುದಿಯಲ್ಲಿಟ್ಟು ಸ್ತುತಿಸಿ ಭಕ್ತರ ಇಷ್ಟವನ್ನು ಕೊಡತಕ್ಕ ಮಾತನ್ನು ಇಂತೆಂದನು.

೬. ಆಕೆಯು ಶ್ರೀಮಂತಳು, ಲಜ್ಜಾವಂತಳು, ದೇವೀಶ್ವರಿಯು, ಎಂಬಿಷ್ಟನ್ನೇ ನೀನು ಹೇಳಿದೆ.

೭-೮. ಮುಂದೆ ಏನಾಯಿತು? ಅಲ್ಲಿ ಏನುಮಾಡಿದಳು? ಅದೆಲ್ಲವನ್ನೂ ಕ್ರಮವಾಗಿ ನೀನು ಹೇಳಬೇಕು, ಅದನ್ನು ಕೇಳಿದರೆ ದೇಹವು ಶುದ್ಧಿಯಾಗುತ್ತದೆ ಸಂಶಯವಿಲ್ಲ.

೯. ಪುಲಸ್ತ್ಯನು ಹೇಳಿದನು:—ಪರಮೇಷ್ಠಿಯಾದ ಬ್ರಹ್ಮನು ಪುಷ್ಕರದಲ್ಲಿ ಯಾಗಮಾಡುತ್ತಿರಲು, ಅಲ್ಲಿ ಆಗ ಆದುದನ್ನೂ, ಹಿಂದೆ ನಡೆದುದನ್ನೂ ಕ್ರಮವಾಗಿ ಹೇಳುತ್ತೇನೆ, ಕೇಳು.

ಆದೌ ಕೃತಯುಗೇ ತಸ್ಮಿನ್ಯಜಮಾನೇ ಪಿತಾಮಹೇ ।
ಮರೀಚಿರಂಗಿರಾಶ್ಚೈವ ಪುಲಸ್ತ್ಯಃ ಪುಲಹಃ ಕ್ರತುಃ ॥ ೧೦ ॥

ದಕ್ಷಃ ಪ್ರಜಾಪತಿಶ್ಚೈವ ನಮಸ್ಕಾರಂ ಪ್ರಚಕ್ರಿರೇ ।
ವಿದ್ಯೋತಮಾನಾಃ ಪುರುಷಾಃ ಸರ್ವಾಭರಣಭೂಷಿತಾಃ ॥ ೧೧ ॥

ಉಪನೃತ್ಯಂತಿ ದೇವೇಶಂ ವಿಷ್ಣುಮಪ್ಸರಸಾಂ ಗಣಾಃ ।
ತತೋ ಗಂಧರ್ವತೂರ್ಯೇಷು ಪ್ರತಿನಂದ್ಯ ವಿಹಾಯಸಂ ॥ ೧೨ ॥

ಬಹುಭಿಃ ಸಹ ಗಂಧರ್ವೈಃ ಪ್ರಗಾಯತಿ ಚ ತುಂಬರುಃ ।
ಮಹಾಶ್ರುತಿಶ್ಚಿತ್ರಸೇನ ಊರ್ಣಾಯುರನಘಸ್ತಥಾ ॥ ೧೩ ॥

ಗೋಮಾಯುಃ ಸೂರ್ಯವರ್ಚಾಶ್ಚ ಸೋಮವರ್ಚಾಶ್ಚ ಕೌರವ ।
ಯುಗಪಚ್ಚ ತೃಣಾಯುಶ್ಚ ನಂದಿಶ್ಚಿತ್ರರಥಸ್ತಥಾ ॥ ೧೪ ॥

ತ್ರಯೋದಶಃ ಶಾಲಿಶಿರಾಃ ಪರ್ಜನ್ಯಶ್ಚ ಚತುರ್ದಶಃ ।
ಕಲಿಃ ಪಂಚದಶಶ್ಚಾತ್ರ ತಾರಕಶ್ಚಾತ್ರ ಷೋಡಶ ॥ ೧೫ ॥

---

೧೦. ಮೊದಲು ಕೃತಯುಗದ ಆದಿಯಲ್ಲಿ ಬ್ರಹ್ಮನು ಯಜ್ಞಮಾಡುತ್ತಿರಲು ಮರೀಚಿ, ಅಂಗೀರಸ್ಸು, ಪುಲಸ್ತ್ಯ, ಪುಲಹ, ಕ್ರತು, ದಕ್ಷಪ್ರಜಾಪತಿ ಇವರು ಆತನನ್ನು ನಮಸ್ಕರಿಸಿದರು.

೧೧. ಸುಂದರರಾದ, ಎಲ್ಲಾ ಆಭರಣಗಳನ್ನು ತೊಟ್ಟ ಅಪ್ಸರೋಗಣರು ದೇವದೇವನಾದ ವಿಷ್ಣುವಿನ ಸುತ್ತಲೂ ನರ್ತನ ಮಾಡುತ್ತಿದ್ದರು.

೧೨. ಅನಂತರ ಗಂಧರ್ವರು ವಾದ್ಯವನ್ನು ಬಾರಿಸುತ್ತಾ ಅಂತರಿಕ್ಷವನ್ನು ಮೊಳಗಿಸುತ್ತಿರಲು, ಕೆಲವುಜನ ಗಂಧರ್ವರೊಡನೆ ತುಂಬುರುವು ಗಾನಮಾಡುತ್ತಿದ್ದನು.

೧೩—೧೬. ತುಂಬುರು, ಮಹಾಶ್ರುತಿ, ಚಿತ್ರಸೇನ, ಊರ್ಣಾಯು, ಅನಘ, ಗೋಮಾಯು, ಸೂರ್ಯವರ್ಚ, ಸೋಮವರ್ಚ, ಯುಗಪತ್, ತೃಣಾಯು, ನಂದಿ, ಚಿತ್ರರಥ, ಶಾಲಿಶಿರ, ಪರ್ಜನ್ಯ, ಕಲಿ, ತಾರಕ, ಈ ಹದಿನಾರುಜನ ಗಂಧರ್ವರು ಮತ್ತು ಹಾಹಾ, ಹೂಹೂ, ಹಂಸ, ಮಹಾದ್ಯುತಿ, ಈ ನಾಲ್ಕುಜನ, ದೇವಗಂಧರ್ವರು,

**ಹಾಹಾ ಹೂಹೂಶ್ಚ ಗಂಧರ್ವೌ ಹಂಸಶ್ಚೈವ ಮಹಾದ್ಯುತಿಃ ।**
**ಇತ್ಯೇತೇ ದೇವಗಂಧರ್ವಾ ಉಪಗಾಯಂತಿ ತಂ ವಿಭುಂ ॥ ೧೬ ॥**

**ತಥೈವಾಪ್ಸರಸೋ ದಿವ್ಯಾ ಉಪನೃತ್ಯಂತಿ ತಂ ವಿಭುಂ ।**
**ಧಾತಾsರ್ಯಮಾ ಚ ಸವಿತಾ ವರುಣೋsಂಶೋ ಭಗಸ್ತಥಾ ॥ ೧೭ ॥**

**ಇಂದ್ರೋ ವಿವಸ್ವಾನ್ಪೂಷಾ ಚ ತ್ವಷ್ಟಾ ಪರ್ಜನ್ಯ ಏವ ಚ ।**
**ಇತ್ಯೇತೇ ದ್ವಾದಶಾದಿತ್ಯಾ ಜ್ವಲಂತೋ ದೀಪ್ತತೇಜಸಃ ॥ ೧೮ ॥**

**ಚಕ್ರುಸ್ತಸ್ಮಿನ್ಸುರೇಶಾಶ್ಚ ನಮಸ್ಕಾರಂ ಪಿತಾಮಹೇ ।**
**ಮೃಗವ್ಯಾಧಶ್ಚ ಶರ್ವಶ್ಚ ನಿರ್ಋತಿಶ್ಚ ಮಹಾಯಶಾಃ ॥ ೧೯ ॥**

**ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚಾಪರಾಜಿತಃ ।**
**ಭವೋ ವಿಶ್ವೇಶ್ವರಶ್ಚೈವ ಕಪರ್ದೀ ಚ ವಿಶಾಂ ಪತೇ ॥ ೨೦ ॥**

**ಸ್ಥಾಣುರ್ಭಗಶ್ಚ ಭಗವಾನ್ರುದ್ರಾಸ್ತತ್ರಾವತಸ್ಥಿರೇ ।**
**ಅಶ್ವಿನೌ ವಸವಶ್ಚಾಷ್ಟೌ ಮರುತಶ್ಚ ಮಹಾಬಲಾಃ ॥ ೨೧ ॥**

---

ಆ ಬ್ರಹ್ಮನನ್ನು ಹೊಗಳುತ್ತಾ ಗಾನಮಾಡುತ್ತಿದ್ದರು. ಅದೇರೀತಿ ದಿವ್ಯರಾದ ಆ ಅಪ್ಸರೋಗಣಗಳೂ ಆ ಸ್ವಾಮಿಯನ್ನು ಹೊಗಳುತ್ತಿದ್ದರು.

೧೭-೧೮. ಧಾತೃ, ಅರ್ಯಮ, ಸವಿತೃ, ವರುಣ, ಅಂಶ, ಭಗ, ಇಂದ್ರ, ವಿವಸ್ವಾನ್, ಪೂಷಾ, ತ್ವಷ್ಟೃ, ಪರ್ಜನ್ಯ ಈ ಹನ್ನೆರಡು ಜನ ಆದಿತ್ಯರೂ ಪ್ರಕಾಶಿಸುತ್ತ ಆ ಬ್ರಹ್ಮನನ್ನು ನಮಸ್ಕರಿಸಿದರು.

೧೯-೨೦. ಮೃಗವ್ಯಾಧ, ಶರ್ವ, ನಿರ್ಋತಿ, ಅಜ, ಏಕಪಾದ, ಅಹಿರ್ಬುಧ್ನ್ಯ, ಪಿನಾಕೀ, ಭವ, ವಿಶ್ವೇಶ್ವರ, ಕಪರ್ದೀ, ಸ್ಥಾಣು, ಭಗ, ಈ ಏಕಾದಶರುದ್ರರು. ಅಲ್ಲಿದ್ದರು.

೨೧. ಅಶ್ವಿನೀ ದೇವತೆಗಳು, ಅಷ್ಟವಸುಗಳು, ಮರುತ್ತುಗಳು, ವಿಶ್ವೇ ದೇವರು, ಸಾಧ್ಯರು ಇವರು ಕೈಮುಗಿದುಕೊಂಡಿದ್ದರು.

ವಿಶ್ವೇದೇವಾಶ್ಚ ಸಾಧ್ಯಾಶ್ಚ ತಸ್ಥೈಃ ಪ್ರಾಂಜಲಯಃ ಸ್ಥಿತಾಃ ।
ಶೇಷಜಾಸ್ತು ಮಹಾನಾಗಾ ವಾಸುಕಿಪ್ರಮುಖಾಃ ಸ್ಥಿತಾಃ ॥ ೨೨ ॥

ಕಶ್ಯಪಶ್ಚಾಪಕಂದಶ್ಚ ತಕ್ಷಕಶ್ಚ ಮಹಾಬಲಃ ।
ಅಧೃಷ್ಯಾಸ್ತೇಜಸಾ ದೀಪ್ತಾ ಮಹಾಕ್ರೋಧಾ ಮಹಾಬಲಾಃ ॥ ೨೩ ॥

ಏತೇ ನಾಗಾ ಮಹಾತ್ಮಾನಃ ಪ್ರಜಾನಾಂ ಪಾಲನೇ ಸ್ಥಿತಾಃ ।
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಗರುಡಶ್ಚ ಮಹಾಬಲಃ ॥ ೨೪ ॥

ವಾರುಣಿಶ್ಚಾರುಣಿಶ್ಚೈವ ವೈನತೇಯಾ ವ್ಯವಸ್ಥಿತಾಃ ।
ನಾರಾಯಣಶ್ಚ ಭಗವಾನ್ಸ್ವಯಮಾಗತ್ಯ ಲೋಕವಾನ್ ॥ ೨೫ ॥

ಪ್ರಾಹ ಲೋಕಗುರುಂ ಶ್ರೀಮಾನ್ಸಹ ಸರ್ವೈರ್ಮಹರ್ಷಿಭಿಃ ।
ತ್ವಯಾ ತತಮಿದಂ ಸರ್ವಂ ತ್ವಯಾ ಸೃಷ್ಟಂ ಜಗತ್ಪತೇ ॥ ೨೬ ॥

---

೨೨. ಶೇಷನ ವಂಶದ ಮಹಾನಾಗರು, ವಾಸುಕಿಯೇ ಮುಂತಾದವರೂ ಅಲ್ಲಿದ್ದರು.

೨೩. ಕಶ್ಯಪ, ಅಪಕಂದ, ತಕ್ಷಕ, ಇನ್ನೂ ಬಲಿಷ್ಠರು, ತೇಜೋವಂತರು, ಕೋಪವುಳ್ಳವರೂ ಆದ ಅನೇಕ ನಾಗಗಳು ಪ್ರಜೆಗಳನ್ನು ನೋಯಿಸದೆ, ಬ್ರಹ್ಮನ ಸೇವೆಯಲ್ಲಿದ್ದರು.

೨೪. ತಾರ್ಕ್ಷ್ಯ, ಅರಿಷ್ಟನೇಮಿ, ಗರುಡ, ವಾರುಣಿ, ಅರುಣಿ, ವೈನತೇಯ ಇವರು ಅಲ್ಲಿದ್ದರು.

೨೫. ಭಗವಂತನಾದ, ಲೋಕಗಳನ್ನು ತನ್ನಲ್ಲಿಯೇ ಉಳ್ಳ ನಾರಾಯಣನು ತಾನಾಗಿಯೇ ಮಹರ್ಷಿಗಳೊಡನೆ ಬಂದು ಲೋಕಗುರುವಾದ ಬ್ರಹ್ಮನಿಗೆ ಇಂತೆಂದನು.

೨೬. ಎಲೈ ಬ್ರಹ್ಮನೇ, ಈ ಲೋಕವೆಲ್ಲವೂ ನಿನ್ನಿಂದ ವ್ಯಾಪ್ತವಾಗಿದೆ. ನೀನೇ ಈ ಲೋಕವನ್ನು ಸೃಷ್ಟಿಸಿದೆ. ಆದ್ದರಿಂದ ನೀನೇ ಲೋಕೇಶ್ವರನಾಗಿದ್ದೀಯೆ. ನಿನಗೆ ನಮಸ್ಕಾರವು.

ತಸ್ಮಾಲ್ಲೋಕೇಶ್ವರಶ್ಚಾಸಿ ಪದ್ಮಯೋನೇ ನಮೋಽಸ್ತು ತೇ ।
ಯದತ್ರ ತೇ ಮಹತ್ಕಾರ್ಯಂ ಕರ್ತವ್ಯಂ ಚ ತದಾದಿಶ ॥ ೨೭ ॥

ಏವಮುಕ್ತ್ವಾ ಚ ಭಗವಾನ್ಸಾರ್ಧಂ ದೇವರ್ಷಿಭಿಃ ಸ್ವಯಂ ।
ನಮಸ್ಕೃತ್ವಾ ಸುರೇಶಾಯ ಬ್ರಹ್ಮಣೇಽವ್ಯಕ್ತಜನ್ಮನೇ ॥ ೨೮ ॥

ಸ ತು ತತ್ರ ಸ್ಥಿತೋ ಬ್ರಹ್ಮಾ ತೇಜಸಾ ಭಾಸಯನ್ದಿಶಃ ।
ಶ್ರೀವತ್ಸಲೋಮಸಂಛನ್ನೋ ಹೇಮಸೂತ್ರೇಣ ರಾಜತಾ ॥ ೨೯ ॥

ಸುರರ್ಷಿಪ್ರತಿಮಃ ಶ್ರೀಮಾನ್ಸ್ವಯಂಭೂರ್ಭೂತಭಾವನಃ ।
ಶುಚಿರೋಮಾ ಮಹಾವೃಕ್ಷಃ ಸರ್ವತೇಜೋಮಯಃ ಪ್ರಭುಃ ॥ ೩೦ ॥

ಯೋ ಗತಿಃ ಪುಣ್ಯಶೀಲಾನಾಮಗತಿಃ ಪಾಪಕಾರಿಣಾಂ ।
ಯೋಗಸಿದ್ಧಾ ಮಹಾತ್ಮಾನೋ ಯಂ ವಿದುರ್ಯೋಗಮುತ್ತಮಂ ॥ ೩೧ ॥

ಯಸ್ಯಾಷ್ಟಗುಣಮೈಶ್ವರ್ಯಂ ಯಮಾಹುರ್ದೇವಸತ್ತಮಂ ।
ಯಂ ಪ್ರಾಪ್ಯ ಶಾಶ್ವತಂ ವಿಪ್ರಾ ನಿಯತಾ ಮೋಕ್ಷಕಾಂಕ್ಷಿಣಃ ॥ ೩೨ ॥

---

೨೭-೨೮. ಎಲೈ ಬ್ರಹ್ಮನೇ, ನನ್ನಿಂದಾಗತಕ್ಕ ದೊಡ್ಡ ಕೆಲಸವೇನಿದೆ ಹೇಳು ಎಂದು ಕೇಳಿ, ಮಹರ್ಷಿಗಳೊಡನೆ ಆ ಪರಮ ಪುರುಷನಾದ ಬ್ರಹ್ಮನಿಗೆ ನಮಸ್ಕರಿಸಿದನು.

೨೯-೩೦. ವಿಷ್ಣುರೂಪನಾದ ಆ ಬ್ರಹ್ಮನಾದರೋ ತನ್ನ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತ ಇದ್ದನು. ಶ್ರೀವತ್ಸವೆಂಬ ಮಚ್ಚೆಯಲ್ಲಿರುವ ಕೂದಲುಗಳಿಂದ ಕೂಡಿದ್ದನು. ಚಿನ್ನದ ಜನಿವಾರವನ್ನು ಹಾಕಿಕೊಂಡಿದ್ದನು. ದೇವರ್ಷಿಗಳಿಗೆ ಸಮನು. ತಾನಾಗಿಯೇ ಹುಟ್ಟಿದವನು. ಕಳೆದುದು, ಈಗಿನದನ್ನು ಬಲ್ಲವನು. ಶುಚಿಯಾದ ರೋಮವುಳ್ಳವನು. ಮಹಾವೃಕ್ಷಸ್ವರೂಪನೂ, ತೇಜೋಮಯನೂ, ಆಗಿದ್ದನು.

೩೧-೩೨. ಆ ವಿಷ್ಣುವು ಪುಣ್ಯವಂತರಿಗೆ ಗತಿಯು. ಪಾಪಿಗಳಿಗೆ ಸಿಕ್ಕದವನು. ಯೋಗಸಿದ್ಧರು ಆ ವಿಷ್ಣುವನ್ನೇ ಯೋಗವೆಂದು ಹೇಳುತ್ತಾರೆ. ಅವನ ಐಶ್ವರ್ಯವು ಮಿಕ್ಕವರಿಗಿಂತಲೂ ಎಂಟರಷ್ಟು ಹೆಚ್ಚಿನದು. ಅವನೇ ದೇವಶ್ರೇಷ್ಠನು. ಆ ವಿಷ್ಣುವನ್ನು ಮೋಕ್ಷಕಾಮಿಗಳು ಹೊಂದಿ ಶಾಶ್ವತ ಮೋಕ್ಷವನ್ನು ಹೊಂದುತ್ತಾರೆ. ಯೋಗ

ಜನ್ಮತೋ ಮರಣಾಚ್ಚೈವ ಮುಚ್ಯಂತೇ ಯೋಗಭಾವಿತಾಃ ।
ಯದೇತತ್ತಪ ಇತ್ಯಾಹುಃ ಸರ್ವಾಶ್ರಮನಿವಾಸಿನಃ ॥ ೩೩ ॥

ಸೇವಂತೇ ನಿಯತಾಹಾರಾ ದುಶ್ಚರಂ ವ್ರತಮಾಸ್ಥಿತಾಃ ।
ಯೋಽನಂತ ಇತಿ ಲೋಕೇಽಸ್ಮಿನ್ಪಠ್ಯತೇ ಸರ್ವಯೋಗಿಭಿಃ ॥ ೩೪ ॥

ಸಹಸ್ರಮೂರ್ಧಾ ರಕ್ತಾಕ್ಷಃ ಶೇಷಾದಿಭಿರನುತ್ತಮೈಃ ।
ಯೋ ಯಜ್ಞ ಇತಿ ವಿಪ್ರೇಂದ್ರೈರಿಜ್ಯತೇ ಸ್ವರ್ಗಲಿಪ್ಸುಭಿಃ ॥ ೩೫ ॥

ನಾನಾಸ್ಥಾನಗತಿಃ ಶ್ರೀಮಾನೇಕಃ ಕವಿರನುತ್ತಮಃ ।
ಯಂ ದೇವಂ ವೇತ್ತಿ ವೇತ್ತಾರಂ ಯಜ್ಞಭಾಗಪ್ರದಾಯಿನಂ ॥ ೩೬ ॥

ವೃಷಾಗ್ನಿಚಂದ್ರಸೂರ್ಯಾಕ್ಷಂ ದೇವಮಾಕಾಶವಿಗ್ರಹಂ ।
ತಂ ಪ್ರಪದ್ಯಾಮಹೇ ಸರ್ವೇ ಭಗವಾನ್ ಶರಣಾರ್ಥಿನಃ ॥ ೩೭ ॥

---

ದಿಂದ ಅವನನ್ನು ನೋಡಿದರೆ ಹುಟ್ಟು ಸಾವುಗಳಿಂದ ಬಿಡುಗಡೆ ಹೊಂದುತ್ತಾರೆ. ಆಶ್ರಮವನ್ನು ಹೊಂದಿದವರೆಲ್ಲಾ ವಿಷ್ಣುವೇ ತಪಸ್ಸು ಎಂದೆನ್ನುತ್ತಾರೆ.

೩೪—೩೬. ಜನಗಳು ನಿಯಮಿತವಾದ ಆಹಾರವನ್ನು ತೆಗೆದುಕೊಂಡು, ಉಗ್ರವಾದ ತಪಸ್ಸುಮಾಡುತ್ತಾ, ಆ ವಿಷ್ಣುವನ್ನು ಸೇವಿಸುತ್ತಾರೆ. ಸರ್ವ ಯೋಗಿಗಳು, ಆ ವಿಷ್ಣುವನ್ನೇ ಅನಂತನೆಂದರೆ ನಾಶರಹಿತನು ಎಂದೆನ್ನುತ್ತಾರೆ. ಅವನು ಸಾವಿರ ತಲೆಯುಳ್ಳವನು. ಕೆಂಪಗಿರುವ ಕಣ್ಣುಳ್ಳವನು. ಉತ್ತಮರಾದ ಶೇಷಾದಿಗಳಿಂದಲೂ ಸ್ವರ್ಗಾಪೇಕ್ಷಿಗಳಾದ ಬ್ರಾಹ್ಮಣರಿಂದಲೂ ಆತನೇ ಯಜ್ಞವೆಂಬದಾಗಿ ಹೇಳಿಸಿಕೊಳ್ಳುತ್ತಾನೆ. ಅವನು ಒಬ್ಬನಾದರೂ ನಾನಾ ಸ್ಥಳಗಳಲ್ಲಿ ಇರುತ್ತಾನೆ. ಸಂಪತ್ತುಳ್ಳವನು. ನೋಡುವವರಲ್ಲಿ ಉತ್ತಮನು. ಆ ಸ್ವಾಮಿಯನ್ನು ಯಜ್ಞದಲ್ಲಿ ಭಾಗಕೊಡತಕ್ಕವನನ್ನಾಗಿ ಇತರರು ತಿಳಿಯುತ್ತಾರೆ.

೩೭. ಧರ್ಮ, ಅಗ್ನಿ, ಚಂದ್ರ, ಸೂರ್ಯರೇ ಕಣ್ಣಾಗಿ ಉಳ್ಳವನು. ಆಕಾಶವೇ ದೇಹವಾಗಿ ಉಳ್ಳವನು. ಅಂತಹ ಸ್ವಾಮಿಯಾದ ವಿಷ್ಣುವನ್ನು ಶರಣಾರ್ಥಿಗಳಾಗಿ ನಾವೆಲ್ಲರೂ ಹೊಂದುತ್ತೇವೆ.

ಶರಣ್ಯಂ ಶರಣಂ ದೇವಂ ಸರ್ವಭೂತಭವೋದ್ಭವಂ ।
ಋಷೀಣಾಂ ಚೈವ ಸ್ರಷ್ಟಾರಂ ಲೋಕಾನಾಂ ಚ ಸುರೇಶ್ವರಂ ॥ ೩೮ ॥

ಪ್ರಿಯಾರ್ಥೇ ಚೈವ ದೇವಾನಾಂ ಸರ್ವಸ್ಯ ಜಗತಃ ಸ್ಥಿತೌ ।
ಕವ್ಯಂ ಪಿತೃಣಾಂ ಸುಚಿರಂ ಸುರಾಣಾಂ ಹವ್ಯಮುತ್ತಮಂ ॥ ೩೯ ॥

ಯೇನ ಪ್ರವರ್ತಿತಂ ಸರ್ವಂ ತಂ ನತಾಃ ಸ್ಮಃ ಸುರೋತ್ತಮಂ ।
ತ್ರೇತಾಗ್ನಿನಾ ತು ಯಜತಾ ದೇವೇನ ಪರಮೇಷ್ಠಿನಾ ॥ ೪೦ ॥

ಯಥಾ ಸೃಷ್ಟಿಃ ಕೃತಾ ಪೂರ್ವಂ ಯಜ್ಞಸೃಷ್ಟಿಸ್ತಥಾ ಪುನಃ ।
ತಥಾ ಬಹ್ಮಾ ಹ್ಯನಂತೇನ ಲೋಕಾನಾಂ ಸ್ಥಿತಿಕಾರಿಣಾ ॥ ೪೧ ॥

ಅನ್ವಾಸ್ಯಮಾನೋ ಭಗವಾನ್ವೃದ್ಧೋಽಪ್ಯಥ ಚ ಬುದ್ಧಿಮಾನ್ ।
ಯಜ್ಞವಾಟಮಚಿಂತ್ಯಾತ್ಮಾ ದೇವಸ್ತತ್ರ ಪಿತಾಮಹಃ ॥ ೪೨ ॥

ಧನಾದ್ಯೈಃ ಋರ್ತ್ವಿಜೈಃ ಪೂರ್ಣೈಃ ಸರ್ವತಃ ಪರಿಪಾಲಿತಂ ।
ಗೃಹೀತಚಾಪೇನ ತದಾ ವಿಷ್ಣುನಾ ಪ್ರಭವಿಷ್ಣುನಾ ॥ ೪೩ ॥

---

೩೮. ರಕ್ಷಕನಾದ, ಎಲ್ಲಾ ಪ್ರಾಣಿಗಳಿಗೂ ಜನಕನಾದ, ಋಷಿಗಳಿಗೆ ಉತ್ಪಾದಕನಾದ, ಲೋಕಗಳಿಗೂ ಉತ್ಪಾದಕನಾದ ಸ್ವಾಮಿಯನ್ನು ಶರಣುಹೊಂದುತ್ತೇನೆ.

೩೯. ದೇವತೆಗಳ ಒಳ್ಳೆಯದಕ್ಕೂ, ಜಗತ್ತುಗಳ ಸ್ಥಿತಿಗೂ, ಪಿತೃಗಳಿಗೆ ಕವ್ಯವೂ, ದೇವತೆಗಳಿಗೆ ಹವ್ಯವೂ, ಸೃಷ್ಟಿಸಲ್ಪಟ್ಟು ಇದೆಯೋ ಅದರ ಸೃಷ್ಟಿಕರ್ತನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ.

೪೦—೪೨. ಸ್ವಾಮಿಯಾದ ಪರಮೇಷ್ಠಿಯು ತ್ರೇತಾಗ್ನಿಯಲ್ಲಿ ಹೋಮ ಮಾಡುತ್ತಿರುವಾಗ ಪ್ರಪಂಚದ ಸೃಷ್ಟಿಯನ್ನೂ, ಯಜ್ಞದ ಸೃಷ್ಟಿಯನ್ನೂ ಮಾಡಿದನು. ಅದೇರೀತಿ ಬ್ರಹ್ಮನು ವಿಷ್ಣುವನ್ನು ಸೃಷ್ಟಿಸಿ, ಲೋಕದ ಸ್ಥಿತಿಯನ್ನು ಉಂಟು ಮಾಡಿದನು. ಅಂತಹ ವಿಷ್ಣುವು ವೃದ್ಧನೂ, ಬುದ್ಧಿವಂತನೂ, ಆಗಿ ಬ್ರಹ್ಮನು ಯಜ್ಞವಾಟದಲ್ಲಿ ಕುಳಿತಿರಲು ಅವನನ್ನು ಅನುಸರಿಸಿ ಕುಳಿತನು.

೪೩-೪೪. ಆ ಯಜ್ಞದಲ್ಲಿ ಬ್ರಹ್ಮನು ಹಣ ಮುಂತಾದುವುಗಳಿಂದಲೂ, ಋತ್ವಿಕ್ಕುಗಳಿಂದಲೂ, ಪೂರ್ಣನಾಗಿ ಕಾಪಾಡಲ್ಪಟ್ಟಿದ್ದನು. ಮತ್ತು ಶಕ್ತನಾದ

**ದೈತ್ಯದಾನವರಾಜಾನೋ ರಾಕ್ಷಸಾನಾಂ ಗಣಾಃ ಸ್ಥಿತಾಃ ।**
**ಆತ್ಮಾನಮಾತ್ಮನಾ ಚೈವ ಚಿಂತಯಾಮಾಸ ತಂ ಕ್ರತುಂ ॥ ೪೪ ॥**

**ಚಿಂತಯಿತ್ವಾ ಯಥಾರ್ಥತ್ವಂ ಯಜ್ಞಂ ಯಜ್ಞಃ ಸನಾತನಃ ।**
**ವರಣಂ ತತ್ರ ಭಗವಾನ್ಕಾರಯಾಮಾಸ ಋತ್ವಿಜಾಂ ॥ ೪೫ ॥**

**ಭೃಗ್ವಾದ್ಯಾ ಋತ್ವಿಜಶ್ಚಾಪಿ ಯಜ್ಞಕರ್ಮವಿಶಾರದಾಃ ।**
**ಚಕ್ರುರ್ಬಹ್ವೃಚಮುಖ್ಯೈಶ್ಚ ಪ್ರೋಕ್ತಂ ಪುಣ್ಯಂ ಯದಕ್ಷರಂ ॥ ೪೬ ॥**

**ತುಷ್ಟುವುಸ್ತೇ ಮುನಿಶ್ರೇಷ್ಠಾ ವಿತತೇ ಯಜ್ಞಕರ್ಮಣಿ ।**
**ಯಜ್ಞವಿದ್ಯಾವೇದವಿದ್ಯಾಪದಕ್ರಮವಿದಾಂ ತಥಾ ॥ ೪೭ ॥**

**ಘೋಷೇಣ ಪರಮರ್ಷೀಣಾಂ ಸಭಾ ವೈ ಚಾತಿನಾದಿತಾ ।**
**ಯಜ್ಞಸಂಸ್ತವವಿದ್ಭಿಶ್ಚ ಶಿಕ್ಷಾವಿದ್ಭಿಸ್ತಥಾ ದ್ವಿಜೈಃ ॥ ೪೮ ॥**

---

ವಿಷ್ಣುವು ಬಿಲ್ಲನ್ನು ಹಿಡಿದು ಕಾದಿದ್ದನು. ದೈತ್ಯ ದಾನವ ರಾಜರು, ರಾಕ್ಷಸರೂ, ಅಲ್ಲಿದ್ದರು. ಆಗ ಬ್ರಹ್ಮನು ಆತ್ಮರೂಪವಾದ ಯಾಗವನ್ನು ಆತ್ಮದಿಂದಲೇ ಚಿಂತಿಸಿದನು.

೪೫. ಆ ಸನಾತನನಾದ ಬ್ರಹ್ಮನು ಯಥಾರ್ಥವಾಗಿ ಯಜ್ಞವನ್ನು ಯಜ್ಞದಿಂದಲೇ ಚಿಂತಿಸಿ (ತಾನು ಯಜ್ಞರೂಪನಾದುದರಿಂದ ತನ್ನನ್ನು ತನ್ನಿಂದ ಯಜ್ಞವನ್ನು ಯಜ್ಞದಿಂದ) ಋತ್ವಿಕ್ಕುಗಳನ್ನು ವರಣ (ಸ್ವೀಕರಿಸುವಿಕೆ) ವನ್ನು ಮಾಡಿದನು.

೪೬. ಭೃಗುವೇ ಮುಂತಾದ ಋತ್ವಿಕ್ಕುಗಳು ಯಜ್ಞಕರ್ಮದಲ್ಲಿ ವಿಶಾರದರು. ಬಹ್ವೃಚರಲ್ಲಿ ಮುಖ್ಯರಾದವರು ಹೇಳಿದ ಮಾತಿನಂತೆ ಮಾಡಿದರು (ನಡೆದರು).

೪೭. ಆ ದೊಡ್ಡ ಯಜ್ಞದಲ್ಲಿ ಬ್ರಹ್ಮನನ್ನು ಮುನಿಗಳು ಸ್ತುತಿಸಿದರು. ಯಾಜಕರು, ವೈದಿಕರು, ಪದ, ಕ್ರಮಗಳನ್ನು ಬಲ್ಲ ಋಷಿಗಳ ವೇದಘೋಷಗಳಿಂದ ಆ ಸಭೆಯು ಪ್ರತಿಧ್ವನಿಯಾಯಿತು.

೪೮—೫೧. ಯಾಜ್ಞಿಕರು, ಶಿಕ್ಷೆಯನ್ನು ಬಲ್ಲವರು, ಶಬ್ದಗಳ ಸ್ವರೂಪವನ್ನು ಬಲ್ಲ ಸರ್ವ ವಿದ್ಯಾವಿಶಾರದರು, ಮೀಮಾಂಸ ತರ್ಕಗಳನ್ನು ಬಲ್ಲವರು, ಲೋಕದ

**ಶಬ್ದನಿರ್ವಚನಾರ್ಥಜ್ಞೈಃ ಸರ್ವವಿದ್ಯಾವಿಶಾರದೈಃ ।**
**ಮೀಮಾಂಸಾಹೇತುವಾಕ್ಯಜ್ಞೈಃ ಸರ್ವವಿದ್ಯಾವಿಶಾರದೈಃ ॥ ೪೯ ॥**

**ಲೋಕಾಯತಿಕಮುಖ್ಯೈಶ್ಚ ಶುಶ್ರುವುಃ ಶಬ್ದಮೀರಿತಂ ।**
**ಇತಿಹಾಸಪುರಾಣಜ್ಞೈರ್ನೈಕವಿಜ್ಞಾನಮೌನಿನಃ ॥ ೫೦ ॥**

**ತತ್ರ ತತ್ರ ಚ ರಾಜೇಂದ್ರ ನಿಯತಾಃ ಸಂಶಿತವ್ರತಾಃ ।**
**ಜಪಹೋಮಪರಾನ್ಮುಖ್ಯಾನ್ದದೃಶುಸ್ತತ್ರ ವೈ ದ್ವಿಜಾನ್ ॥ ೫೧ ॥**

**ಯಜ್ಞಭೂಮೌ ಸ್ಥಿತಸ್ತಸ್ಯಾಂ ಬ್ರಹ್ಮಾ ಲೋಕಪಿತಾಮಹಃ ।**
**ಸುರಾಸುರಗುರುಃ ಶ್ರೀಮಾನ್ಸೇವ್ಯಮಾನಃ ಸುರಾಸುರೈಃ ॥ ೫೨ ॥**

**ಉಪಾಸತೇ ಚ ತತ್ರೈನಂ ಪ್ರಜಾನಾಂ ಪತಯಃ ಪ್ರಭುಂ ।**
**ದಕ್ಷೋ ವಸಿಷ್ಠಃ ಪುಲಹೋ ಮರೀಚಿಶ್ಚ ದ್ವಿಜೋತ್ತಮಃ ॥ ೫೩ ॥**

**ಅಂಗಿರಾ ಭೃಗುರತ್ರಿಶ್ಚ ಗೌತಮೋ ನಾರದಸ್ತಥಾ।**
**ವಿದ್ಯಮಾನಮಂತರಿಕ್ಷಂ ವಾಯುಸ್ತೇಜೋ ಜಲಂ ಮಹೀ ॥ ೫೪ ॥**

---

ಕಾರಣಗಳನ್ನೇ ಅನುಸರಿಸುವವರು, ಇತಿಹಾಸ ಪುರಾಣಗಳನ್ನು ಬಲ್ಲವರು, ಇವರು ಗಳು ಚರ್ಚಿಸುತ್ತಿರುವುದು ಸಭೆಯಲ್ಲಿ ಕೇಳಿಬರುತ್ತಿದ್ದಿತು. ಅನೇಕ ಶಿಲ್ಪಶಾಸ್ತ್ರವನ್ನು ಬಲ್ಲವರು, ಯಾವಾಗಲೂ ವ್ರತದಲ್ಲಿ ಆಸಕ್ತಯುಳ್ಳವರು, ಇವರ ಚರ್ಚೆಯ ಧ್ವನಿ ಗಳೂ ಕೇಳಿಬರುತ್ತಿದ್ದವು. ಜಪ, ಹೋಮಗಳಲ್ಲಿ ಆಸಕ್ತರಾದ ಆ ಬ್ರಾಹ್ಮಣರೂ ಪ್ರಕಾಶಿಸುತ್ತಿದ್ದರು.

೫೨. ಲೋಕಪಿತಾಮಹನಾದ ಬ್ರಹ್ಮನು ಆ ಯಜ್ಞಭೂಮಿಯಲ್ಲಿ ಕುಳಿತಿ ದ್ದನು. ಸುರಾಸುರ ಗುರುವಾದ ಆತನನ್ನು ಆ ಸುರಾಸುರರೂ ಪ್ರಜಾಪತಿಗಳೂ ಸೇವಿಸುತ್ತಿದ್ದರು.

೫೩–೫೪. ದಕ್ಷ, ವಸಿಷ್ಠ, ಪುಲಹ, ಮರೀಚಿ, ಅಂಗಿರಸ್ಸು, ಭೃಗು, ಅತ್ರಿ, ಗೌತಮ, ನಾರದ, ಆಕಾಶ, ವಾಯು, ತೇಜಸು, ನೀರು, ಭೂಮಿ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ವಿಕೃತಿ, ವಿಕಾರ, ಇನ್ನೂ ಅನೇಕ ಕರಣಗಳು ಆ ಸಭೆಯಲ್ಲಿದ್ದ ಬ್ರಹ್ಮನನ್ನು ಸೇವಿಸುತ್ತಿದ್ದುವು.

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಸ್ತಥೈವ ಚ ।
ವಿಕೃತಿಶ್ಚ ವಿಕಾರಶ್ಚ ಯಚ್ಚಾನ್ಯತ್ಕರಣಂ ಮಹತ್ ॥ ೫೫ ॥

ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಏವ ಚ ।
ಶಬ್ದಶ್ಛಂದೋ ನಿರುಕ್ತಂ ಚ ಕಲ್ಪಶಿಕ್ಷಾಸಮನ್ವಿತಾಃ ॥ ೫೬ ॥

ಆಯುರ್ವೇದಧನುರ್ವೇದೌ ಮೀಮಾಂಸಾ ಗಣಿತಂ ತಥಾ ।
ಹಸ್ತ್ಯಶ್ವಜ್ಞಾನಸಹಿತಾ ಇತಿಹಾಸಸಮನ್ವಿತಾಃ ॥ ೫೭ ॥

ಏತೈರಂಗೈರುಪಾಂಗೈಶ್ಚ ವೇದಾಃ ಸರ್ವೇ ವಿಭೂಷಿತಾಃ ।
ಉಪಾಸತೇ ಮಹಾತ್ಮಾನಂ ಸಹೋಂಕಾರಂ ಪಿತಾಮಹಂ ॥ ೫೮ ॥

ನಯಶ್ಚ ಕ್ರತವಶ್ಚೈವ ಸಂಕಲ್ಪಃ ಪ್ರಾಣ ಏವ ಚ ।
ಏತೇ ಚಾನ್ಯೇ ಚ ಬಹವಃ ಪಿತಾಮಹಮುಪಾಸತೇ ॥ ೫೯ ॥

ಅರ್ಥೋ ಧರ್ಮಶ್ಚ ಕಾಮಶ್ಚ ದ್ವೇಷೋ ಹರ್ಷಶ್ಚ ಸರ್ವಶಃ ।
ಶುಕ್ರೋ ಬೃಹಸ್ಪತಿಶ್ಚೈವ ಸಂವರ್ತೋ ಬುಧ ಏವ ಚ ॥ ೬೦ ॥

ಶನೈಶ್ಚರಶ್ಚ ರಾಹುಶ್ಚ ಗ್ರಹಾಃ ಸರ್ವೇ ತಥೈವ ಚ ।
ಮಾರುತೋ ವಿಶ್ವಕರ್ಮಾ ಚ ಪಿತರಶ್ಚಾಪಿ ಭಾರತ ॥ ೬೧ ॥

---

೫೫—೫೮. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳು, ಶಬ್ದ, ಛಂದಸ್ಸು, ನಿರುಕ್ತಿ, ಕಲ್ಪ, ಶಿಕ್ಷೆ, ಆಯುರ್ವೇದ, ಧನುರ್ವೇದ, ಮೀಮಾಂಸಾ, ಗಣಿತ, ಹಸ್ತಿಶಾಸ್ತ್ರ, ಅಶ್ವಶಾಸ್ತ್ರ, ಇತಿಹಾಸ ಇವುಗಳೆಲ್ಲವೂ ಅಂಗಗಳಿಂದ ಕೂಡಿಕೊಂಡು, ಓಂಕಾರವನ್ನು ಮುಂದುಮಾಡಿಕೊಂಡು ಬ್ರಹ್ಮನನ್ನು ಸೇವಿಸುತ್ತಿದ್ದವು.

೫೯—೬೧. ನಯ, ಕ್ರತು, ಸಂಕಲ್ಪ, ಪ್ರಾಣ, ಅರ್ಥ, ಧರ್ಮ, ಕಾಮ, ದ್ವೇಷ, ಹರ್ಷ, ಶುಕ್ರ, ಬೃಹಸ್ಪತಿ, ಸಂವರ್ತ, ಬುಧ, ಶನೈಶ್ಚರ, ರಾಹು ಮತ್ತು ಎಲ್ಲಾ ಗ್ರಹಗಳೂ, ಮಾರುತ, ವಿಶ್ವಕರ್ಮ, ಪಿತೃದೇವತೆಗಳೂ, ಇವರೆಲ್ಲರೂ ಅಲ್ಲಿದ್ದ ಬ್ರಹ್ಮನನ್ನು ಸೇವಿಸುತ್ತಿದ್ದರು.

ದಿವಾಕರಶ್ಚ ಸೋಮಶ್ಚ ಬ್ರಹ್ಮಾಣಂ ಪರ್ಯುಪಸ್ಥಿತಾಃ ।
ಗಾಯತ್ರೀ ದುರ್ಗತರಣೀ ವಾಣೀ ಸಪ್ತವಿಧಾ ತಥಾ ॥ ೬೨ ॥

ಸರ್ವಾಣಿ ಶ್ರುತಿಶಾಸ್ತ್ರಾಣಿ ಯಮಾಶ್ಚ ನಿಯಮಾಸ್ತಥಾ ।
ಅಕ್ಷರಾಣಿ ಚ ಸರ್ವಾಣಿ ಲಕ್ಷಣಾನಿ ತಥೈವ ಚ ॥ ೬೩ ॥

ಭಾಷ್ಯಾಣಿ ಸರ್ವಶಾಸ್ತ್ರಾಣಿ ದೇಹವಂತಿ ವಿಶಾಂ ಪತೇ ।
ಕ್ಷಣಾ ಲವಾ ಮುಹೂರ್ತಾಶ್ಚ ದಿನಂ ರಾತ್ರಿಸ್ತಥೈವ ಚ ॥ ೬೪ ॥

ಅರ್ಧಮಾಸಾಶ್ಚ ಮಾಸಾಶ್ಚ ಋತವಃ ಸರ್ವ ಏವ ಚ ।
ಉಪಾಸತೇ ಮಹಾತ್ಮಾನಂ ಬ್ರಹ್ಮಾಣಂ ದೈವತೈಃ ಸಹ ॥ ೬೫ ॥

ಅನ್ಯಾಶ್ಚ ದೇವ್ಯಃ ಪ್ರವರಾ ಹ್ರೀಃ ಕೀರ್ತಿರ್ದ್ಯುತಿರೇವ ಚ ।
ಪ್ರಭಾ ಧೃತಿಃ ಕ್ಷಮಾ ಭೂತಿರ್ನೀತಿರ್ವಿದ್ಯಾ ಮತಿಸ್ತಥಾ ॥ ೬೬ ॥

ಶ್ರುತಿಃ ಸ್ಮೃತಿಸ್ತಥಾ ಕಾಂತಿಃ ಶಾಂತಿಃ ಪುಷ್ಟಿಸ್ತಥಾ ಕ್ರಿಯಾ ।
ಸರ್ವಾಶ್ಚಾಪ್ಸರಸೋ ದಿವ್ಯಾ ನೃತ್ಯಗೀತವಿಶಾರದಾಃ ॥ ೬೭ ॥

ಉಪತಿಷ್ಠಂತಿ ಬ್ರಹ್ಮಾಣಂ ಸರ್ವಾಸ್ತಂ ದೇವಮಾತರಃ
ವಿಪ್ರಚಿತ್ತಿಃ ಶಿಬಿಃ ಶಂಕುರಯಃಶಂಕುಸ್ತಥೈವ ಚ ॥ ೬೮ ॥

---

೬೨—೬೫. ಸೂರ್ಯ, ಚಂದ್ರ, ಗಾಯತ್ರಿ, ಸಪ್ತವಿಧ ವಾಣಿಯರು, ಎಲ್ಲಾ ಶ್ರುತಿಶಾಸ್ತ್ರಗಳೂ, ಯಮ, ನಿಯಮ, ಅಕ್ಷರಗಳು, ಲಕ್ಷಣಗಳು, ಭಾಷ್ಯಗಳೂ, ಸರ್ವಶಾಸ್ತ್ರಗಳೂ, ಕ್ಷಣ, ಲವ, ಮುಹೂರ್ತ, ಹಗಲು, ರಾತ್ರಿ, ಪಕ್ಷ, ಮಾಸ, ಋತು, ಇವೆಲ್ಲವೂ ದೇಹವನ್ನೂ ಧರಿಸಿ ಮಹಾತ್ಮನಾದ ಬ್ರಹ್ಮನನ್ನು ದೇವತೆಗಳೊಡನೆ ಸೇವಿಸುತ್ತಿದ್ದವು.

೬೬-೬೭. ಹ್ರೀ, ಕೀರ್ತಿ, ದ್ಯುತಿ, ಪ್ರಭೆ, ಧೃತಿ, ಕ್ಷಮೆ, ಭೂತಿ, ನೀತಿ, ವಿದ್ಯೆ. ಮತಿ, ಶ್ರುತಿ, ಸ್ಮೃತಿ, ಕಾಂತಿ, ಶಾಂತಿ, ಪುಷ್ಟಿ, ಕ್ರಿಯೆ, ಅಪ್ಸರ ಸ್ತ್ರೀಯರು ಇವರೆಲ್ಲರೂ ದೇವಮಾತೃಗಳೊಡನೆ ಬ್ರಹ್ಮವನ್ನು ಸೇವಿಸುತ್ತಿದ್ದರು.

೬೮—೭೧. ವಿಪ್ರಚಿತ್ತಿ, ಶಿಬಿ, ಶಂಕು, ಅಯಶ್ಶಂಕು, ದೇಪವಾಕ್, ಕೇತುಮಾನ್, ಉಗ್ರ, ಸೋಗ್ರ, ವ್ಯಗ್ರ, ಪರಿಘ, ಪುಷ್ಕರ, ಶಾಂಬ, ಅಶ್ವಪತಿ, ಬಲಿಯು,

ದೇವವಾಕ್ಕೇತುಮಾನುಗ್ರಃ ಸೋಗ್ರೋ ವ್ಯಗ್ರೋ ಮಹಾಸುರಃ ।
ಪರಿಘಃ ಪುಷ್ಕರಶ್ಚೈವ ಶಾಂಬೋಽಶ್ವಪತಿರೇವ ಚ ॥ ೬೯ ॥

ಪ್ರಹ್ಲಾದೋ ಬಲಿನಾಂ ಕುಂಭಃ ಸಂಹ್ರಾದೋ ಗಗನಪ್ರಿಯಃ ।
ಅನುಹ್ರಾದೋ ವರಹರೋ ವರಾಹಶ್ಚ ಕುಶೋ ರಜಃ ॥ ೭೦ ॥

ಯೋನಿಭಕ್ಷೋ ವೃಷಪರ್ವಾ ಲಿಂಗಭಕ್ಷೋಽಥ ವೈ ಕುರುಃ ।
ವಿಪುರುಃ ಪ್ರಭವಶ್ಚೈವ ತಥೈವ ಚ ನಿರೂದರಃ ॥ ೭೦ ॥

ಏಕವಕ್ತ್ರೋ ಮಹಾವಕ್ತ್ರೋ ದ್ವಿವಕ್ತ್ರಃ ಕುಲಸಂಭವಃ ।
ಸುರಭಃ ಸಲಭಾಕ್ಷಶ್ಚ ಕ್ರಪಥಃ ಕ್ರಾಪಥ ಕ್ರಥಃ ॥ ೭೨ ॥

ಬೃಹತ್ಕೀರ್ತಿರ್ಮಹಾಜಿಹ್ವಃ ಶಂಕುಕರ್ಣೋ ಮಹಾದ್ಯುತಿಃ ।
ದೀರ್ಘಜಿಹ್ವೋಽರ್ಕನಯನೋ ಮೃದುಚಾಪೋ ಮೃದುಪ್ರಿಯಃ ॥ ೭೩ ॥

ವಾಯುರ್ಗರಿಷ್ಠೋ ನಮುಚಿಃ ಶಂಬರೋ ವಿಜ್ವರೋ ಮಹಾನ್ ।
ಚಂದ್ರಹಂತಾ ಕ್ರೋಧಹಂತಾ ಕ್ರೋಧವರ್ಧನ ಏವ ಚ ॥ ೭೪ ॥

ಕಾಲಕಃ ಕಾಲಕಕ್ಷಶ್ಚ ಕುಂಡದಃ ಸಮರಪ್ರಿಯಃ ।
ಗರಿಷ್ಠಶ್ಚ ವರಿಷ್ಠಶ್ಚ ಪ್ರಲಂಬೋ ನರಕಃ ಪೃಥುಃ ॥ ೭೫ ॥

ಇಂದ್ರತಾಪನವಾತಾಪೀ ಕೇತುಮಾನ್ಬಲದರ್ಪಿತಃ ।
ಅತಿಲೋಮಾ ವಿಲೋಮಾ ಚ ಬಾಷ್ಕಲಿಃ ಪ್ರಮದೋಽಮದಃ ॥ ೭೬ ॥

---

ಪ್ರಹ್ಲಾದ, ಕುಂಭ, ಸಂಹ್ರಾದ, ಗಗನಪ್ರಿಯ, ಅನುಹ್ರಾದ, ವರಹರ, ವರಾಹ, ಕುಜ, ರಜ, ಯೋನಿ, ಭಕ್ಷ, ವೃಷಪರ್ವ, ಲಿಂಗಭಕ್ಷ, ಕುರು, ವಿಪುರು, ಪ್ರಭವ, ನಿರೂದರ, ಈ ಮಹಾಸುರರೂ ಸೇವಿಸುತ್ತಿದ್ದರು.

೭೨—೭೮. ಏಕವಕ್ತ್ರ, ಮಹಾವಕ್ತ್ರ, ದ್ವಿವಕ್ತ್ರ, ಕುಲಸಂಭವ, ಸುರಭ, ಸಲಭಾಕ್ಷ, ಕ್ರಪಥ, ಕ್ರಾಪಥ, ಕ್ರಥ, ಬೃಹತ್ಕೀರ್ತಿ, ಮಹಾಜಿಹ್ವ, ಶಂಕುಕರ್ಣ, ಮಹಾದ್ಯುತಿ, ದೀರ್ಘಜಿಹ್ವ, ಅರ್ಕನಯನ, ಮೃದುಚಾಪ, ಮೃದುಪ್ರಿಯ, ವಾಯು, ಗರಿಷ್ಠ, ನಮುಚಿ, ಶಂಬರ, ವಿಜ್ವರ, ಚಂದ್ರಹಂತ, ಕ್ರೋಧವರ್ಧನ, ಕಾಲಕ, ಕಾಲಕಕ್ಷ, ಕುಂಡದ, ಗರಿಷ್ಠ, ಪರಿಷ್ಠ, ಪ್ರಲಂಬ, ನರಕ, ಪೃಥು, ಇಂದ್ರತಾಪನ,

ಸೃಗಾಲವದನಶ್ಚೈವ ಕೇಶೀ ಚ ಶರದಸ್ತಥಾ ।
ಏಕಾಕ್ಷಶ್ಚೈವ ರಾಹುಶ್ಚ ವೃತ್ರಃ ಕ್ರೋಧವಿಮೋಕ್ಷಣಃ ॥ ೭೭ ॥

ಏತೇ ಚಾನ್ಯೇ ಚ ಬಹವೋ ದಾನವಾ ಬಲದರ್ಪಿತಾಃ ।
ಬ್ರಹ್ಮಾಣಂ ಪರ್ಯುಪಾಸಂತ ವಾಕ್ಯಂ ಚೈವಮಥೋಚಿರೇ ॥ ೭೮ ॥

॥ ದಾನವಾ ಊಚುಃ ॥

ತ್ವಯಾ ಸೃಷ್ಟಾಃ ಸ್ಮ ಭಗವಂಸ್ತ್ರೈಲೋಕ್ಯಂ ಭವತಾ ಹಿ ನಃ ।
ದತ್ತಂ ಸುರವರಶ್ರೇಷ್ಠ ದೇವೇಭ್ಯಶ್ಚಾಧಿಕಾಃ ಕೃತಾಃ ॥ ೭೯ ॥

ಕಿಂ ಕುರ್ಮೋ ಭಗವಂಶ್ಚೇಹ ಯಜ್ಞೇ ತವ ಪಿತಾಮಹ ।
ಯದ್ಧಿತಂ ತಚ್ಚ ಕುರ್ಮೋ ವೈ ಸಮರ್ಥಾಃ ಕಾರ್ಯನಿರ್ಣಯೇ ॥ ೮೦ ॥

ಕಿಮೇಭಿಸ್ತೈರ್ವರಾಕೈಶ್ಚ ಅದಿತಿಗರ್ಭಸಂಭವೈಃ ।
ದೈವತೈರ್ನಿಹತೈಃ ಸರ್ವೈಃ ಪರಾಭೂತೈಶ್ಚ ಸರ್ವದಾ ॥ ೮೧ ॥

ಪಿತಾಮಹೋಽಪಿ ಸರ್ವೇಷಾಮಸ್ಮಾಕಂ ಸಹ ದೈವತೈಃ ।
ತವ ಯಜ್ಞಸಮಾಪ್ತೌ ತು ಪುನರಸ್ಮಾಸು ದೈವತೈಃ ॥ ೮೨ ॥

---

ವಾತಾಪಿ, ಕೇತುಮಂತ, ಅತಿಲೋಮ, ಏಕಾಕ್ಷ, ರಾಹು, ವೃತ್ರ, ಕ್ರೋಧವಿಮೋಕ್ಷಣ, ಇವರೇ ಮುಂತಾದ ಬಲಿಷ್ಠರಾದ ದಾನವರು, ಬ್ರಹ್ಮನನ್ನು ಸೇವಿಸುತ್ತಿದ್ದರು. ಮತ್ತು ಈ ಮಾತನ್ನು ಹೇಳಿದರು.

೭೯-೮೦. ದಾನವರು ಹೇಳಿದರು :—ಎಲೈ ಭಗವಂತನಾದ ಬ್ರಹ್ಮನೇ, ನೀನು ನಮ್ಮನ್ನು ಸೃಷ್ಟಿಸಿದೆ. ನಮಗೆ ಮೂರು ಲೋಕವನ್ನೂ ಕೊಟ್ಟೆ. ದೇವತೆಗಳಿಗಿಂತಲೂ ಹೆಚ್ಚಿನವರನ್ನಾಗಿ ಮಾಡಿದೆ. ಎಲೈ ಬ್ರಹ್ಮನೇ, ನಿನ್ನ ಯಜ್ಞದಲ್ಲಿ ನಾವು ಏನುಮಾಡಬೇಕು? ಕೆಲಸದಲ್ಲಿ ಸಮರ್ಥರಾಗಿದ್ದೇವೆ. ನಿನಗೆ ಏನು ಹಿತವೋ, ಅದೆಲ್ಲವನ್ನೂ ಮಾಡಿಕೊಡುತ್ತೇವೆ.

೮೧. ಉಪಯೋಗವಿಲ್ಲದ, ಅದಿತಿಯ ಮಕ್ಕಳಾದ, ಯಾವಾಗಲೂ ಸೋಲುತ್ತಿರುವ ಈ ದೇವತೆಗಳಿಂದೇನಾದೀತು?

೮೨-೮೩. ನಮಗೂ ದೇವತೆಗಳಿಗೂ ಕೂಡ ಪಿತಾಮಹನಾಗಿದ್ದೀಯೇ. ನಿನ್ನ ಯಜ್ಞವು ಪೂರ್ತಿಯಾಗುತ್ತಲೇ ನಮಗೆ ದೇವತೆಗಳೊಡನೆ ಸಂಪತ್ತನ್ನು ಕುರಿತು

ಶ್ರಿಯಂ ಪ್ರತಿ ವಿರೋಧಶ್ಚ ಭವಿಷ್ಯತಿ ನ ಸಂಶಯಃ ।
ಇದಾನೀ ಪ್ರೇಕ್ಷಣಂ ಕುರ್ಮಃ ಸಹಿತಾಃ ಸರ್ವದಾನವೈಃ ॥ ೭೩ ॥

॥ ಪುಲಸ್ತ್ಯ ಉವಾಚ ॥

ಸಗರ್ವಂ ಚ ವಚಸ್ತೇಷಾಂ ಶ್ರುತ್ವಾ ದೇವೋ ಜನಾರ್ದನಃ ।
ಶಕ್ರೇಣ ಸಹಿತಃ ಶಂಭುಮಿದಮಾಹ ಮಹಾಯಶಾಃ ॥ ೭೪ ॥

॥ ವಿಷ್ಣುರುವಾಚ ॥

ಯಜ್ಞೇ ಪೈತಾಮಹೇ ಯೇ ತು ಸಂಪ್ರಾಪ್ತಾ ದನುಪುಂಗವಾಃ ।
ಬ್ರಹ್ಮಣಾಽಮಂತ್ರಿತಾಶ್ಚೇಹ ವಿಘ್ನಾರ್ಥಂ ಚ ಯತಂತಿ ತೇ ॥ ೭೫ ॥

ಅಸ್ಮಾಭಿಶ್ಚ ಕ್ಷಮಾ ಕಾರ್ಯಾ ಯಾವದ್ಯಜ್ಞಃ ಸಮಾಪ್ಯತೇ ।
ಸಮಾಪ್ತೇ ತು ಕ್ರತಾವಸ್ಮಿನ್ಯುದ್ಧಂ ಕಾರ್ಯಂ ದಿವೌಕಸಾಂ ॥ ೭೬ ॥

ಯಥಾ ನಿರ್ದಾನವಾ ಭೂಮಿಸ್ತಥಾ ಕಾರ್ಯಂ ತ್ವಯಾ ವಿಭೋ ।
ಜಯಾರ್ಥಂ ಚೈವ ಶಕ್ರಸ್ಯ ಭವತಾ ಚ ಮಯಾ ಸಹ ॥ ೭೭ ॥

---

ಜಗಳ ಹುಟ್ಟುತ್ತದೆ. ನಾವು ನಮ್ಮ ದಾನವರೊಡನೆ ಈಗ ಸುಮ್ಮನೆ ನೋಡು ತ್ತಿರುತ್ತೇವೆ.

೭೪. ಪುಲಸ್ತ್ಯನು ಹೇಳಿದನು :—ಆ ರಾಕ್ಷಸರು ಗರ್ವದಿಂದ ಆಡಿದ ಮಾತನ್ನು ಜನಾರ್ದನನು ಕೇಳಿ, ಇಂದ್ರ ಮುಂತಾದವರನ್ನು ಜೊತೆಗೆ ಕರೆದುಕೊಂಡು ಅವರನ್ನು ಜೊತೆಯಲ್ಲಿಟ್ಟುಕೊಂಡು ಹೀಗೆ ಹೇಳಿದನು

೭೫. ವಿಷ್ಣುವು ಹೇಳಿದನು :—ಎಲೈ ಬ್ರಹ್ಮನೇ, ನಿನ್ನಿಂದ ಕರೆಸಲ್ಪಟ್ಟ ಈ ದನುಪುಂಗವರು ಈ ಯಜ್ಞದಲ್ಲಿ ವಿಘ್ನಮಾಡುವುದಕ್ಕೆ ಪ್ರಯತ್ನಿಸುತ್ತಾರೆ.

೭೬. ಯಜ್ಞವು ಮುಗಿಯುವವರೆಗೂ ನಾವು ಕ್ಷಮಾಶೀಲರಾಗಿರಬೇಕು. ಈ ಯಾಗವು ಮುಗಿದೊಡನೆಯೇ ದೇವತೆಗಳು ಯುದ್ಧಮಾಡಬೇಕು.

೭೭. ಎಲೈ ವಿಭುವಾದ ಬ್ರಹ್ಮನೇ, ಭೂಮಿಯಲ್ಲಿ ದಾನವರು ಇಲ್ಲದಿರು ವಂತೆಯೂ, ಇಂದ್ರನಿಗೆ ಜಯವಾಗುವಂತೆಯೂ ನೀನೂ ನಾನೂ ಪ್ರಯತ್ನಿಸಬೇಕು.

ದ್ವಿಜಾನಾಂ ಪರಿವೇಷ್ಟಾರೋ ಮರುತಃ ಪರಿಕಲ್ಪಿತಾಃ ।
ದಾನವಾನಾಂ ಧನಂ ಯಚ್ಚ ಗೃಹೀತ್ವಾ ತದ್ಯಜಾಮಹೇ ॥ ೮೮ ॥

ಅಧ್ವಾನಿಕೇಷು ವಿಪ್ರೇಷು ದುಃಖಿತೇಷು ಜನೇಷ್ವಿಹ ।
ವ್ಯಯಂ ತಸ್ಯ ಕರಿಷ್ಯಾಮೋ ದಾಸಭಾವೇ ನಿವೇಶಿತಾಃ
ವದಂತಮೇವಂ ವಿಷ್ಣುಂ ಚ ಬ್ರಹ್ಮಾ ವಚನಮಬ್ರವೀತ್ ॥ ೮೯ ॥

॥ ಬ್ರಹ್ಮೋವಾಚ ॥

ಏತೇ ದನುಸುತಾಃ ಕ್ರುದ್ಧಾ ಯುಷ್ಮಾಕಮಪಿ ನೇಪ್ಸಿತಾಃ ।
ಭವತಾ ಚ ಕ್ಷಮಾ ಕಾರ್ಯಾ ರುದ್ರೇಣ ಸಹ ದೈವತೈಃ ॥ ೯೦ ॥

ಕೃತೇ ಯುಗಾವಸಾನೇ ತು ಸಮಾಪ್ತೇ ತು ಕ್ರತೌ ಸತಿ ।
ಮಯಾ ಚ ಪ್ರೇಷಿತಾ ಯೂಯಮೇತೇ ಚ ದನುಪುಂಗವಾಃ ॥ ೯೧ ॥

ಸಂಧಿರ್ವಾ ವಿಗ್ರಹೋ ವಾಽಪಿ ಸರ್ವೈಃ ಕಾರ್ಯಸ್ತದೈವ ಹಿ ॥ ೯೨ ॥

---

೮೮. ಬ್ರಾಹ್ಮಣರಿಗೆ ಅನ್ನ ಹಾಕುವುದಕ್ಕೆ ದೇವತೆಗಳಿಗೆ ಗೊತ್ತುಮಾಡಿದ್ದೇನೆ. ದಾನವರಿಂದ ಹಣವನ್ನು ತೆಗೆದುಕೊಂಡು ಅದರಿಂದ ಯಾಗಮಾಡೋಣ.

೮೯. ಯಜ್ಞವನ್ನು ನೋಡಲು ಬಂದ ಬ್ರಾಹ್ಮಣರಲ್ಲಿಯೂ, ಬಡವರಾದ ದುಃಖಗೊಂಡವರಲ್ಲಿಯೂ ಆ ಹಣವನ್ನು ವ್ಯಯಮಾಡೋಣ. ನಮ್ಮನ್ನು ಕೆಲಸಕ್ಕೆ ನಿಯಮಿಸಿರುವರಷ್ಟೇ ? ಹೀಗೆ ವಿಷ್ಣುವು ಹೇಳುತ್ತಿರಲು ಬ್ರಹ್ಮನು ಇಂತೆಂದನು.

೯೦. ಬ್ರಹ್ಮನು ಹೇಳಿದನು :— ಈ ದಾನವರಿಗೂ ಕೋಪಬಂದಿದೆ. ನಿಮಗೂ ಅವರು ಬೇಕಾಗಿಲ್ಲ. ಆದರೆ ನೀನೂ, ರುದ್ರನೂ ದೇವತೆಗಳನ್ನೂ ಸ್ವಾಧೀನದಲ್ಲಿಟ್ಟು ಕೊಂಡು ಕ್ಷಮೆಯಿಂದಿರಿ.

೯೧-೯೨. ಕೃತಯುಗದ ಕೊನೆಯಲ್ಲಿ ಈ ಯಾಗವು ಪೂರ್ತಿಯಾದ ಮೇಲೆ ನಾನು ನಿಮ್ಮನ್ನೂ ದಾನವರನ್ನೂ ಕಳುಹಿಸಿಬಿಡುತ್ತೇನೆ. ಅನಂತರ ಸಂಧಿಯನ್ನಾಗಲಿ ಯುದ್ಧವನ್ನಾಗಲಿ ನೀವು ಮಾಡಬಹುದು. ಈಗ ಯುದ್ಧ ಬೇಡಿ.

॥ ಪುಲಸ್ತ್ಯ ಉವಾಚ ॥

ಪುನಸ್ತಾನ್ದಾನವಾನ್ಬ್ರಹ್ಮಾ ವಾಕ್ಯಮಾಹ ಸ್ವಯಂ ಪ್ರಭುಃ ।
ದಾನವಾ ನ ವಿರೋಧೋಽತ್ರ ಸಹ ದೇವೈಃ ಕಥಂಚನ ॥ ೯೩ ॥

ಮೈತ್ರಭಾವಸ್ಥಿತಾ ಯೂಯಮಸ್ಮತ್ಕಾರ್ಯಪರಾಯಣಾಃ ॥ ೯೪ ॥

॥ ದಾನವಾ ಊಚುಃ ॥

ಸರ್ವಮೇತತ್ಕರಿಷ್ಯಾಮಃ ಶಾಸನಂ ತೇ ಪಿತಾಮಹ ।
ಅಸ್ಮಾಕಮನುಜಾ ದೇವಾ ಭಯಂ ತೇಷಾಂ ನ ವಿದ್ಯತೇ ॥ ೯೫ ॥

ಪುಲಸ್ತ್ಯ ಉವಾಚ ॥

ಏತಚ್ಛ್ರುತ್ವಾ ತಥಾ ತೇಷಾಂ ಪರಿತುಷ್ಟಃ ಪಿತಾಮಹಃ ।
ಮುಹೂರ್ತಂ ತಿಷ್ಠತೋಽಪ್ಯೇಕಾ ಋಷಿಕೋಟಿರುಪಾಗತಾ ।
ಶ್ರುತ್ವಾ ಪೈತಾಮಹಂ ಯಜ್ಞಂ ತೇಷಾಂ ಪೂಜಾಂ ತು ಕೇಶವಃ ॥ ೯೬ ॥

ಆಸನಾನಿ ತದಾ ತೇಷಾಂ ದದೌ ದೇವಃ ಪಿನಾಕಧೃಕ್ ।
ವಸಿಷ್ಠೋಽಪ್ಯರ್ಘಮಾದಾಯ ಬ್ರಹ್ಮಣಾ ಪರಿಚೋದಿತಃ ॥ ೯೭ ॥

---

೯೩-೯೪. ಪುಲಸ್ತ್ಯನು ಹೇಳಿದನು:—ಆಗ ಬ್ರಹ್ಮನು, ದಾನವರನ್ನು ಕರೆಸಿ, ಎಲೈ ದಾನವರೇ, ನೀವು ದೇವತೆಗಳೊಡನೆ ಇಲ್ಲಿ ದ್ವೇಷದಿಂದಿರಕೂಡದು, ಸ್ನೇಹವಾಗಿದ್ದುಕೊಂಡು ನನ್ನ ಕೆಲಸದಲ್ಲಿ ಆಸಕ್ತಿಯನ್ನು ತೋರಿಸಿ.

೯೫. ದಾನವರು ಹೇಳಿದರು:—ಎಲೈ ಬ್ರಹ್ಮನೇ, ನಿನ್ನ ಅಪ್ಪಣೆಯಂತೆ ಎಲ್ಲವನ್ನೂ ಮಾಡುತ್ತೇವೆ. ದೇವತೆಗಳು ನಮಗೆ ತಮ್ಮಂದಿರು. ಅವರಿಗೆ ನಮ್ಮಿಂದ ಭಯವಿಲ್ಲ.

೯೬. ಪುಲಸ್ತ್ಯನು ಹೇಳಿದನು:—ದಾನವರ ಈ ಮಾತನ್ನು ಕೇಳಿ ಬ್ರಹ್ಮನಿಗೆ ಸಂತೋಷವಾಯಿತು. ಸ್ವಲ್ಪ ಹೊತ್ತಿರಲು ಬ್ರಹ್ಮನು ಯಜ್ಞಮಾಡುವುದನ್ನು ಕೇಳಿ ಕೋಟ್ಯಂತರ ಋಷಿಗಳು ಬಂದರು. ಕೇಶವನು ಅವರಿಗೆ ಪೂಜೆಯನ್ನು ಮಾಡಿದನು. ರುದ್ರನು ಅವರಿಗೆ ಆಸನಗಳನ್ನು ಕೊಟ್ಟನು.

೯೭-೯೮. ಬ್ರಹ್ಮನು ಹೇಳಲು ವಸಿಷ್ಠನು ಅರ್ಘವನ್ನೂ, ಗೋವನ್ನೂ

ಗಾಮರ್ಘ್ಯಂ ಚ ತತೋ ದತ್ವಾ ಪೃಷ್ಟ್ವಾ ಕುಶಲಮವ್ಯಯಂ ।
ನಿವೇಶಂ ಪುಷ್ಕರೇ ದತ್ವಾ ಸ್ಥೀಯತಾಮಿತಿ ಚಾಬ್ರವೀತ್ ॥ ೯೮ ॥

ತತಸ್ತೇ ಋಷಯಃ ಸರ್ವೇ ಜಟಾಜಿನಧರಾಸ್ತಥಾ ।
ಶೋಭಯಂತಃ ಸದಃ ಶ್ರೇಷ್ಠಂ ಗಂಗಾಮಿವ ದಿವೌಕಸಃ ॥ ೯೯ ॥

ಮುಂಡಾಃ ಕಾಷಾಯವಸನಾಃ ದೀರ್ಘಶ್ಮಶ್ರುಧರಾಃ ಪರೇ ।
ವಿರಲೈರ್ದಶನೈಃ ಕೇಚಿಚ್ಛಿಪಿಟಾಕ್ಷಾಸ್ತಥಾಽಪರೇ ॥ ೧೦೦ ॥

ದೀರ್ಘಕರ್ಣಾ ವಿಕರ್ಣಾಶ್ಚ ಕರ್ಣೈಶ್ಚ ತ್ರುಟಿತೈಸ್ತಥಾ ।
ದೀರ್ಘಫಾಲಾ ವಿಫಾಲಾಶ್ಚ ಸ್ನಾಯುಚರ್ಮಾವಗುಂಠಿತಾಃ ॥ ೧೦೧ ॥

ನಿರ್ಗತಂ ಚೋದರಂ ತೇಷಾಂ ಮುನೀನಾಂ ಭಾವಿತಾತ್ಮನಾಂ ।
ದೃಷ್ಟ್ವಾ ತೇ ಪುಷ್ಕರಂ ತೀರ್ಥಂ ದೀಪ್ಯಮಾನಂ ಸಮಂತತಃ ॥ ೧೦೨ ॥

ತೀರ್ಥಲೋಭಾನ್ನರವ್ಯಾಘ್ರ ತಸ್ಯ ತೀರೇ ವ್ಯವಸ್ಥಿತಾಃ ।
ವಾಲಖಿಲ್ಯಾ ಮಹಾತ್ಮಾನೋ ಅಶ್ಮಕುಟ್ಟಾಸ್ತಥಾ ಪರೇ ॥ ೧೦೩ ॥

---

ಕೊಟ್ಟು, ಕುಶಲಪ್ರಶ್ನೆಯನ್ನು ಕೇಳಿ, ಪುಷ್ಕರದಲ್ಲಿ ಇಳಿಯಲು ಸ್ಥಳಗಳನ್ನು ಕೊಟ್ಟು ಇಲ್ಲಿರಿ ಎಂದು ಹೇಳಿದನು.

೯೯. ಆಮೇಲೆ ಆ ಋಷಿಗಳು ಜಟೆ, ಅಜಿನಗಳನ್ನು ಧರಿಸಿ ಸದಸ್ಸಿಗೆ ಬಂದು ಗಂಗೆಯನ್ನು ದೇವತೆಗಳು ಪ್ರಕಾಶಿಸುವಂತೆ ಪ್ರಕಾಶಿಸಿದರು.

೧೦೦—೧೦೨. ಬೋಳರು, ಕಾವಿಶಾಟಿ ಧರಿಸಿದವರು, ಉದ್ದವಾಗಿ ಬೆಳೆಸಿದ ಗಡ್ಡ, ಮೀಸೆಗಳುಳ್ಳವರು, ಉದ್ದವಾದ ಕಿವಿಯುಳ್ಳವರು, ಕಿವಿಯೇ ಇಲ್ಲದವರು, ಹರಿದುಹೋದ ಕಿವಿಯವರು, ದೂರದೂರವಾಗಿರುವ ಹಲ್ಲುಗಳುಳ್ಳವರು, ಒಳಕ್ಕೆ ಹತ್ತಿಕೊಂಡು ಸಣ್ಣದಾದ ಕಣ್ಣುಳ್ಳವರು, ಉದ್ದವಾದ ಹಣೆಯುಳ್ಳವರು, ಹಣೆಯೇ ಇಲ್ಲದವರು, ನರಚರ್ಮಗಳಿಂದ ಹೊದ್ದಿಸಲ್ಪಟ್ಟವರಂತಿರುವವರು, ಹೊಟ್ಟೆ ಕಾಣದಂತೆ ಇರುವವರು, ಇಂತಹ ಮಹಾನುಭಾವರಾದ ಋಷಿಗಳು ಪ್ರಕಾಶವಾದ ಪುಷ್ಕರ ತೀರ್ಥವನ್ನು ನೋಡಿ ಅದು ತೀರ್ಥವೆಂಬ ಆಸೆಯಿಂದ ಆ ತೀರ್ಥದಲ್ಲಿ ನಿಂತರು.

೧೦೩-೧೦೮. ಮಹಾತ್ಮರಾದ ವಾಲಖಿಲ್ಯರು, ಅಶ್ಮಕುಟ್ಟರು, ದಂತೋಲೂಖಲಿಗಳು, ಸಂಪ್ರಾಖ್ಯಾನರು, ಸ್ಥಂಡಿಲಶಾಯಿಗಳು, ಅನೇಕ ನಿಯಮಗಳಿಂದ ಕೂಡಿ

ದಂತೋಲೂಖಲಿನಶ್ಚಾನ್ಯೇ ಸಂಪ್ರಖ್ಯಾನಾಸ್ತಥಾ ಪರೇ ।
ನಾನಾನಿಯಮಯುಕ್ತಾಶ್ಚ ತಥಾ ಸ್ಥಂಡಿಲಶಾಯಿನಃ ॥ ೧೦೪ ॥

ಸರ್ವೇ ತಸ್ಮಿನ್ಮುಖಂ ದೃಷ್ಟ್ವಾ ಸುರೂಪಾಸ್ತೇ ಕ್ಷಣಾದನು ।
ಕಿಮೇತದಿತಿ ಚಿಂತ್ಯಾಥ ನಿರೀಕ್ಷ್ಯ ಚ ಪರಸ್ಪರಂ ॥ ೧೦೫ ॥

ಅಸ್ಮಿಂಸ್ತೀರ್ಥೇ ದರ್ಶನೇನ ಮುಖಸ್ಯೇಹ ಸುರೂಪತಾ ।
ಮುಖದರ್ಶನ ಇತ್ಯೇವ ನಾಮ ಕೃತ್ವಾ ತು ತಾಪಸಾಃ ॥ ೧೦೬ ॥

ಸ್ನಾತಾ ನಿಯಮಯುಕ್ತಾಶ್ಚ ಪುರುಷಾಸ್ತೇ ತದಾಭವನ್ ।
ದೇವಪುತ್ರೋಪಮಾ ಜಾತಾ ಅನೌಪಮ್ಯಗುಣಾನ್ವಿತಾಃ ॥ ೧೦೭ ॥

ಶೋಭಮಾನಾಃ ಸುರಶ್ರೇಷ್ಠಂ ಸ್ಥಿತಾಃ ಸರ್ವೇ ವನೌಕಸಃ ।
ಯಜ್ಞೋಪವೀತಮಾತ್ರೇಣ ವ್ಯಭಜಂಸ್ತೀರ್ಥಮಂಜಸಾ ॥ ೧೦೮ ॥

ಜುಹ್ವತಶ್ಚಾಗ್ನಿಹೋತ್ರಾಣಿ ಚಕ್ರುಶ್ಚ ವಿವಿಧಾಃ ಕ್ರಿಯಾಃ ।
ಚಿಂತಯಂತೋ ಹಿ ರಾಜೇಂದ್ರ ತಪಸಾ ದಗ್ಧಕಿಲ್ಬಿಷಾಃ ॥ ೧೦೯ ॥

---

ದವರು, ಇವರೆಲ್ಲರೂ ಅಲ್ಲಿಗೆ ಬಂದು ಆ ಪುಷ್ಕರದ ಮುಖವನ್ನು ನೋಡಿದ ಕೂಡಲೇ ಕ್ಷಣಕಾಲದಲ್ಲಿಯೇ ಒಳ್ಳೆಯ ರೂಪವನ್ನು ಹೊಂದಿದರು.

೧೦೫-೧೦೬. ಇದೇನು ಹೀಗಾಯಿತೆಂದುಕೊಳ್ಳುತ್ತಾ ಒಬ್ಬರ ಮುಖವನ್ನು ಒಬ್ಬರು ನೋಡಿಕೊಳ್ಳುತ್ತಾ, ಈ ತೀರ್ಥವನ್ನು ದರ್ಶನಮಾಡಿದ ಮಾತ್ರದಿಂದಲೇ, ಸುಖಕಾರಣವಾದ ಸುರೂಪವು ಬಂದಿದುದರಿಂದ ಇದಕ್ಕೆ ಮುಖದರ್ಶನವೆಂದು ಹೆಸರಿಡಬೇಕೆಂದು ಹಾಗೆ ಮಾಡಿ ನಿಯಮದಿಂದ ಸ್ನಾನಮಾಡಿ ಸುಖಿಗಳಾದರು.

೧೦೭-೧೦೮. ಸ್ನಾನ ಮಾತ್ರದಿಂದ ದೇವತೆಗಳ ಮಕ್ಕಳಂತೆಯೂ, ಉತ್ತಮವಾದ ಗುಣವುಳ್ಳವರಾಗಿಯೂ ಆಗಿ ಪ್ರಕಾಶಿಸುತ್ತ ಯಜ್ಞೋಪವೀತದಿಂದ ತೀರ್ಥವನ್ನು ಭಾಗಮಾಡಿದರು.

೧೦೯-೧೧೦. ಅಲ್ಲಿ ಬ್ರಾಹ್ಮಣರು ಅಗ್ನಿಹೋತ್ರಗಳನ್ನು ಮಾಡಿದರು. ಅನೇಕ ಕ್ರಿಯೆಗಳನ್ನು ಮಾಡಿದರು. ಪರಬ್ರಹ್ಮನನ್ನು ಧ್ಯಾನಿಸಿದರು. ಪಾಪವನ್ನು ಕಳೆದು

ನ ಯಾಸ್ಯಾಮೋಽಪರಂ ತೀರ್ಥಂ ಶ್ರೇಷ್ಠಭಾವೇ ತ್ವಿದಂ ಸರಃ ।
ಶ್ರೇಷ್ಠಪುಷ್ಕರಮಿತ್ಯೇವ ನಾಮ ಚಕ್ರುರ್ದ್ವಿಜಾತಯಃ ॥ ೧೧೦ ॥

ತತ್ರ ಕುಬ್ಜಾನ್ಬಹೂನ್ ದೃಷ್ಟ್ವಾ ಸ್ಥಿತಾಂಸ್ತೀರ್ಥಸಮೀಪತಃ ।
ಬಭೂವುರ್ವಿಸ್ಮಿತಾಸ್ತತ್ರ ಜನಾ ಯೇ ಚ ಸಮಾಗತಾಃ ॥ ೧೧೧ ॥

ದತ್ವಾ ದಾನಂ ದ್ವಿಜಾತಿಭ್ಯೋ ಭಾಂಡಾನಿ ವಿವಿಧಾನಿ ಚ ।
ಶ್ರುತ್ವಾ ಸರಸ್ವತೀಂ ಪ್ರಾಚೀ ಸ್ನಾತುಕಾಮಾ ದ್ವಿಜಾ ಗತಾಃ ॥ ೧೧೨ ॥

ಸರಸ್ವತೀ ತೀರ್ಥವರಾ ನಾನಾದ್ವಿಜಗಣೈರ್ಯುತಾ ।
ಬದರೇಂಗುದಕಾಶ್ಮರ್ಯೈಃ ಪ್ಲಕ್ಷಾಶ್ವತ್ಥವಿಭೀತಕೈಃ ॥ ೧೧೩ ॥

ಪೌಲೋಮ್ಯೈಶ್ಚ ಪಲಾಶೈಶ್ಚ ಕರೀರೈಃ ಪೀಲುಭಿಸ್ತಥಾ ।
ಸರಸ್ವತೀತೀರರುಹೈರ್ಧನ್ವನೈಃ ಸ್ಯಂದನೈಸ್ತಥಾ ॥ ೧೧೪ ॥

---

ಕೊಂಡರು. ಬೇರೆ ತೀರ್ಥವು ನಮಗೆ ಬೇಕಿಲ್ಲ. ಈ ಸರೋವರವೇ ಶ್ರೇಷ್ಠವಾದುದು, ಎಂದು ಆದಕ್ಕೆ ಶ್ರೇಷ್ಠ ಪುಷ್ಕರವೆಂದು ಹೆಸರಿಟ್ಟರು.

೧೧೧. ಆ ತೀರ್ಥದ ಹತ್ತಿರ ಬಹುಜನ ಗುಜ್ಜಾರಿಗಳು ಕುಳಿತಿರುವುದನ್ನು ನೋಡಿ ಅಲ್ಲಿಗೆ ಬಂದವರೆಲ್ಲರೂ ಆಶ್ಚರ್ಯಪಟ್ಟರು.

೧೧೨. ಬ್ರಾಹ್ಮಣರಿಗೆ ದಾನವನ್ನೂ ನಾನಾಬಗೆಯಾದ ಪಾತ್ರೆಗಳನ್ನೂ ಕೊಟ್ಟರು. ಮತ್ತು ಅಲ್ಲಿ ಸರಸ್ವತೀ ನದಿಯು ಪೂರ್ವದಿಕ್ಕಿಗೆ ಹರಿಯುತ್ತಿರುವುದನ್ನು ನೋಡಿ ಸ್ನಾನಕ್ಕೋಸ್ಕರ ಅಲ್ಲಿಗೆ ಹೋದರು.

೧೧೩—೧೧೫. ತೀರ್ಥಗಳಲ್ಲಿ ಶ್ರೇಷ್ಠವಾದ ಸರಸ್ವತಿಯು ಅನೇಕ ಪಕ್ಷಿಗಳ ಗುಂಪಿನಿಂದ ಕೂಡಿಕೊಂಡಿದೆ. ಯಗಚಿ, ಇಂಗಳ, ಶಿವನೆಯ ಮರ, ಬಸುರಿ, ಅರಳಿ, ತಾರೆ, ರಕ್ತಚಂದನ, ಮುತ್ತಗ, ಬಿದಿರು, ತೂಪರಗಿಡ, ಸರಸ್ವತಿಯ ತೀರದಲ್ಲಿ ಬೆಳೆದಿರುವ ಚಂದನ, ಶ್ರೀಗಂಧ, ಬೇವು, ಬೇಲ, ಬಿಲ್ವಪತ್ರೇ, ಶೀಮಾವು, ಈ ವೃಕ್ಷ

ಪಾರಿಭದ್ರೈಃ ಕಪಿತ್ಥೈಶ್ಚ ಬಿಲ್ವೈಶ್ಚಾಮ್ರಾತಕೈಸ್ತಥಾ ।
ಅತಿಮುಕ್ತಕಖಂಡೈಶ್ಚ ಪಾರಿಜಾತೈಶ್ಚ ಶೋಭಿತಾ ॥ ೧೧೫ ॥

ಕದಲೀವನಭೂಯಿಷ್ಠಾ ಸರ್ವಸತ್ತ್ವಮನೋರಮಾ ।
ವಾಯ್ವಂಬುಫಲಪರ್ಣಾದ್ಯೈರ್ದಂತೋಲೂಖಲಿಕೈರಪಿ ॥ ೧೧೬ ॥

ತಥಾಶ್ಮಕುಟ್ಟಮುಖ್ಯೈಶ್ಚ ಮುನಿಭಿರ್ಬಹುಭಿರ್ವೃತಾ ।
ಸ್ವಾಧ್ಯಾಯಘೋಷಸಂಘುಷ್ಟಾ ಮೃಯಯೂಥಶತಾಕುಲಾ ॥ ೧೧೭ ॥

ಅಹಿಂಸ್ರೈರ್ಧರ್ಮಪರಮೈಸ್ತಥಾ ಚಾತೀವ ಶೋಭಿತಾ ।
ಸುಪ್ರಭಾ ಕಾಂಚನಾಖ್ಯಾ ಚ ಪ್ರಾಚೀ ನಂದಾ ವಿಶಾಲಿಕಾ ॥ ೧೧೮ ॥

ಸ್ರೋತೋಭಿಃ ಪಂಭಿಸ್ತತ್ರ ವರ್ತತೇ ಪುಷ್ಕರೇ ನದೀ ।
ಪಿತಾಮಹಸ್ಯ ಸದಸಿ ವರ್ತಮಾನೇ ಮಹೀತಲೇ ॥ ೧೧೯ ॥

ವಿತತೇ ಯಜ್ಞವಾಟೇ ತು ಸ್ವಾಗತೇಷು ದ್ವಿಜಾತಿಷು ।
ಪುಣ್ಯಾಹಘೋಷೈರ್ವಿವಿಧೈರ್ದೇವಾನಾಂ ನಿಯಮೈಸ್ತಥಾ ॥ ೧೨೦ ॥

---

ಗಳಿಂದ ಆ ನದಿಯು ಶೋಭಿತವಾಗಿದೆ. ಜಾತಿ, ಪಾರಿಜಾತಗಳಿಂದಲೂ ಶೋಭಿತ ವಾಗಿದೆ.

೧೧೬-೧೧೭. ಬಾಳೆಯ ವನವು ಬೇಕಾದಷ್ಟಿದೆ. ಎಲ್ಲಾ ಬಗೆಯ ಮೃಗ ಗಳಿಂದ ಕೂಡಿದೆ. ವಾಯು, ನೀರು, ಹಣ್ಣು, ಎಲೆ, ಇವನ್ನು ತಿಂದುಕೊಂಡಿರು ವವರೂ, ದಂತೋಲೂಖಲರೂ ಅಶ್ಮಕುಟ್ಟರೂ ಆದ ಋಷಿಗಳಿಂದ ಕೂಡಿಕೊಂಡಿದೆ. ವೇದದ ಘೋಷದಿಂದ ಕೂಡಿದೆ ಮೃಗಗಳ ಗುಂಪಿನಿಂದ ಆವೃತವಾಗಿದೆ.

೧೧೮. ಅಹಿಂಸಕರಾದ, ಧರ್ಮವನ್ನೇ ಆಚಾರವಾಗಿ ಉಳ್ಳವರಿಂದ ಶೋಭಿತ ವಾಗಿದೆ. ಸುಪ್ರಭೆ, ಕಾಂಚನೆ, ಪ್ರಾಚಿ, ನಂದಾ, ವಿಶಾಲಿಕಾ ಎಂಬ ಐದು ನದಿಗಳು ಆ ಪುಷ್ಕರದಲ್ಲಿ ಹರಿಯುತ್ತವೆ.

೧೧೯-೧೨೦. ಭೂಮಿಯಲ್ಲಿ ಬ್ರಹ್ಮನ ಯಜ್ಞದ ಸದಸ್ಸಿನಲ್ಲಿ ಯಜ್ಞದ ಬಾಗಿಲು ವಿಶಾಲವಾಗಿರುವಲ್ಲಿ ಬ್ರಾಹ್ಮಣರೆಲ್ಲರೂ ಬರುತ್ತಿರಲು ಪುಣ್ಯಾಹಶಬ್ದಗಳಿಂ ದಲೂ, ನಾನಾಬಗೆಯ ನಿಯಮಗಳಿಂದಲೂ ಅಲ್ಲಿರುವವರಿರುತ್ತಿದ್ದರು.

**ದೇವೇಷು ಚೈವ ವ್ಯಗ್ರೇಷು ತಸ್ಮಿನ್ಯಜ್ಞವಿಧೌ ತದಾ ।**
**ತತ್ರ ಚೈವ ಮಹಾರಾಜ ದೀಕ್ಷಿತೇ ಚ ಪಿತಾಮಹೇ　　॥ ೧೨೧ ॥**

**ಯಜತಸ್ತಸ್ಯ ಯಜ್ಞೇನ ಸರ್ವಕಾಮಸಮೃದ್ಧಿನಾ ।**
**ಮನಸಾ ಚಿಂತಿತಾ ಹ್ಯರ್ಥಾ ಧರ್ಮಾರ್ಥಕುಶಲಾಸ್ತಥಾ　　॥ ೧೨೨ ॥**

**ಉಪತಿಷ್ಠಂತಿ ರಾಜೇಂದ್ರ ದ್ವಿಜಾತೀಂಸ್ತತ್ರ ತತ್ರ ಹ ।**
**ಜಗುಶ್ಚ ದೇವಗಂಧರ್ವಾ ನನೃತುಶ್ಚಾಪ್ಸರೋಗಣಾಃ　　॥ ೧೨೩ ॥**

**ವಾದಿತ್ರಾಣಿ ತು ದಿವ್ಯಾನಿ ವಾದಯಾಮಾಸುರಂಜಸಾ ।**
**ತಸ್ಯ ಯಜ್ಞಸ್ಯ ಸಂಪತ್ತ್ಯಾ ತುತುಷುರ್ದೇವತಾ ಅಪಿ　　॥ ೧೨೪ ॥**

**ವಿಸ್ಮಯಂ ಪರಮಂ ಜಗ್ಮುಃ ಕಿಮು ಮಾನುಷಯೋನಯಃ ।**
**ವರ್ತಮಾನೇ ತಥಾ ಯಜ್ಞೇ ಪುಷ್ಕರಸ್ಥೇ ಪಿತಾಮಹೇ　　॥ ೧೨೫ ॥**

**ಅಬ್ರುವನ್ನೃಷಯೋ ಭೀಷ್ಮ ತದಾ ತುಷ್ಟಾಃ ಸರಸ್ವತೀಂ ।**
**ಸುಪ್ರಭಾಂ ನಾಮ ರಾಜೇಂದ್ರ ನಾಮ್ನಾ ಚೈವ ಸರಸ್ವತೀಂ　　॥ ೧೨೬ ॥**

---

೧೨೧-೧೨೨. ಆ ಯಜ್ಞದಲ್ಲಿ ಆಗ ದೇವತೆಗಳು ಎಲ್ಲವನ್ನೂ ಸರಿಯಾಗಿ ನೋಡಿಕೊಳ್ಳುತ್ತಿರಲು, ಬ್ರಹ್ಮನು ದೀಕ್ಷೆಯನ್ನು ಕೈಗೊಂಡು ಸರ್ವಕಾಮಗಳು ಸಮೃದ್ಧಿಯಾಗಿರುವ ಆ ಯಜ್ಞದಿಂದ ಯಾಗಮಾಡುತ್ತಿರಲು ಮನಸ್ಸಿನಲ್ಲಿ ಯೋಚಿಸಿದವೂ, ಧರ್ಮಾರ್ಥಗಳೂ ಒದಗುತ್ತಿರಲು, ಕ್ಷೇಮವು ಕೂಡ ಇರುತ್ತಿರಲು, ಎಲ್ಲಾ ಕಡೆಯಿಂದಲೂ ಬ್ರಾಹ್ಮಣರು ಅಲ್ಲಿಗೆ ಬಂದರು.

೧೨೩-೧೨೪. ದೇವತೆಗಳೂ ಗಂಧರ್ವರೂ ಹಾಡಿದರು. ಅಪ್ಸರಸ್ತ್ರೀಯರು ಕುಣಿದರು. ನಾನಾಬಗೆಯಾದ ವಾದ್ಯಗಳನ್ನೂ ಬಾರಿಸಿದರು. ಆ ಯಜ್ಞದ ಪರಿಪೂರ್ಣತೆಯಿಂದ ದೇವತೆಗಳು ಸಂತೋಷಗೊಂಡರು.

೧೨೫. ದೇವತೆಗಳೂ ಆಶ್ಚರ್ಯವನ್ನು ಹೊಂದಿರುವಾಗ ಮನುಷ್ಯರನ್ನು ಕೇಳಬೇಕಾದುದೇ ಇಲ್ಲ. ಪುಷ್ಕರದಲ್ಲಿ ಬ್ರಹ್ಮನ ಯಜ್ಞವು ಈರೀತಿ ನಡೆಯುತ್ತಿರಲು ಋಷಿಗಳು ಆಗ ಸಂತೋಷಗೊಂಡು ಸರಸ್ವತಿಯನ್ನು ಕುರಿತು ಇಂತೆಂದರು.

೧೨೬-೧೨೭. ಎಲೈ ಸುಪ್ರಭೆಯೇ, ನೀನು ವೇಗಯುಕ್ತಳಾಗಿ, ನಮಗೆ ಪ್ರೀತಿಯನ್ನುಂಟುಮಾಡುತ್ತ ಬ್ರಹ್ಮನನ್ನು ಗೌರವಿಸುತ್ತಿರುವುದರಿಂದ ನಿನಗೆ ಸರಸ್ವತಿ

**ತೇ ದೃಷ್ಟ್ವಾ ಮುನಯಃ ಪ್ರೀತಾ ವೇಗಯುಕ್ತಾಂ ಸರಸ್ವತೀಂ ।**
**ಪಿತಾಮಹಂ ಮಾನಯಂತೀಂ ಕ್ರತುಂ ತೇ ಬಹು ಮೇನಿರೇ ॥ ೧೨೭ ॥**

**ಏವಮೇವ ಸರಿಚ್ಛ್ರೇಷ್ಠಾ ಪುಷ್ಕರೇಷು ಸರಸ್ವತೀ ।**
**ಪಿತಾಮಹಾರ್ಥಂ ಸಂಭೂತಾ ತುಷ್ಟ್ಯರ್ಥಂ ಚ ಮನೀಷಿಣಾಂ ॥ ೧೨೮ ॥**

**ಪುಣ್ಯಸ್ಯ ಪುಣ್ಯತಾಂ ಕುರ್ವನ್ಪಂಚಸ್ರೋತಾಃ ಸರಸ್ವತೀ ।**
**ಯತ್ರ ತೇ ಮುನಯಃ ಶಾಂತಾ ನಾನಾಸ್ವಾಧ್ಯಾಯವಾದಿನಃ ॥ ೧೨೯ ॥**

**ತೇ ಸಮಾಗತ್ಯ ಋಷಯಃ ಸಸ್ಮರುರ್ವೈ ಸರಸ್ವತೀಂ ।**
**ಸಾಽನುಧ್ಯಾತಾ ಮಹಾರಾಜ ಋಷಿಭಿಃ ಸತ್ರಯಾಜಿಭಿಃ ॥ ೧೩೦ ॥**

**ಸಮಾಶ್ರಿತಾ ದಿಶಂ ಪೂರ್ವಾಂ ಭಕ್ತಿಪ್ರೀತಾ ಮಹಾನದೀ ।**
**ಪ್ರಾಚೀಪೂರ್ವಾ ಮಹಾನಾಮ್ನಾ ಮುನಿವಂದ್ಯಾ ಯಶಸ್ವಿನೀ ॥ ೧೩೧ ॥**

---

ಯೆಂದು ಹೆಸರಾಗಲಿ ಎಂದು ಹೇಳಿ ಆ ನದಿಯನ್ನೂ, ಆ ಯಾಗವನ್ನೂ, ಗೌರವಿಸಿದರು.

೧೨೮. ಈರೀತಿಯಾಗಿ ಬ್ರಹ್ಮನ ಸಂತೋಷಕ್ಕೂ ಋಷಿಗಳ ತೃಪ್ತಿಗೂ ಪುಷ್ಕರದಲ್ಲಿ ಶ್ರೇಷ್ಠವಾದ ಸರಸ್ವತಿಯು ಉಂಟಾಯಿತು.

೧೨೯. ಈರೀತಿಯಾಗಿ ಆ ಐದು ನದಿಗಳೂ ಕೂಡ ಪುಣ್ಯಕ್ಕೂ ಪುಣ್ಯವನ್ನುಂಟುಮಾಡುತ್ತ, ಬಂದಿತು. ಅಲ್ಲಿ ಮುನಿಗಳು ಶಾಂತರಾಗಿ ನಾನಾ ವೇದಗಳನ್ನು ಅಧ್ಯಯನಮಾಡುತ್ತ, ಅವರೆಲ್ಲರೂ ಬಂದು ಅಲ್ಲಿ ಸರಸ್ವತಿಯನ್ನು ಸ್ಮರಿಸಿದರು. (ಎಂದರೆ ಮೊದಲು ಋಷಿಗಳು ಆ ಐದು ನದಿಗಳನ್ನು ಪವಿತ್ರವನ್ನಾಗಿ ಮಾಡಿ ಅವುಗಳಲ್ಲೊಂದಕ್ಕೆ ಸರಸ್ವತಿಯೆಂದು ಹೆಸರಿಟ್ಟರು. ಯಾಗದಲ್ಲಿದ್ದ ಋಷಿಗಳು ಅನಂತರ ಬಂದು ಸರಸ್ವತಿಯನ್ನು ಸ್ಮರಿಸಿದರು.)

೧೩೦-೧೩೧. ಆಗ ಆ ಸತ್ರದಲ್ಲಿದ್ದವರು ಮತ್ತೆ ಧ್ಯಾನಮಾಡಿದರು. ಆಗ ಆ ನದಿಯು ಭಕ್ತಿಗೆ ಮೆಚ್ಚಿ, ಪೂರ್ವದಿಕ್ಕನ್ನು ಹೊಂದಿತು. ಪೂರ್ವದಿಕ್ಕಿಗೆ ಹೋದ ಮೇಲೆ ಮಹಾನದಿ ಎಂದು ಹೆಸರನ್ನು ಹೊಂದಿ, ಮುನಿವಂದ್ಯವಾಯಿತು. ಮತ್ತೊಂದು ಆಶ್ಚರ್ಯವನ್ನು ಹೇಳುತ್ತೇನೆ ಕೇಳು.

ಇದಮನ್ಯನ್ಮಹಾರಾಜ ಶೃಣ್ವಾಶ್ಚರ್ಯವರಂ ಭುವಿ ।
ಪುರಾ ಮಂಕಣಕೋ ವಿಪ್ರಃ ಕುಶಾಗ್ರೇಣೇತಿ ನಃ ಶ್ರುತಂ ॥ ೧೩೨ ॥

ಕ್ಷತಾತ್ಕಿಲ ಕರೇ ತಸ್ಯ ರಾಜನ್ ಶಾಕರಸೋಽಸ್ರವತ್ ।
ಸ ವೈ ಶಾಕರಸಂ ದೃಷ್ಟ್ವಾ ಹರ್ಷಾವಿಷ್ಟಃ ಪ್ರನೃತ್ತವಾನ್ ॥ ೧೩೩ ॥

ತತಸ್ತಸ್ಮಿನ್ಪ್ರನೃತ್ತೇ ತು ಸ್ಥಾವರಂ ಜಂಗಮಂ ಹಿ ಯತ್ ।
ಪ್ರನೃತ್ತಮಭವದ್ವೀರ ತೇಜಸಾ ತಸ್ಯ ಮೋಹಿತಂ ॥ ೧೩೪ ॥

ವಿಷ್ಣ್ವಾದಿಭಿಃ ಸುರೈಃ ರಾಜನ್ನೃಷಿಭಿಶ್ಚ ತಪೋಧನೈಃ ।
ವಿಜ್ಞಪ್ತಸ್ತೈಸ್ತತೋ ಬ್ರಹ್ಮಾ ನಾಯಂ ನೃತ್ಯೇತ್ತಥಾ ಕುರು ॥ ೧೩೫ ॥

ಆದಿಷ್ಟೋ ಬ್ರಹ್ಮಣಾ ರುದ್ರ ಋಷೇರರ್ಥೇ ನರಾಧಿಪ ।
ನಾಯಂ ನೃತ್ಯೇದ್ಯಥಾ ಭೀಮ ತಥಾ ತ್ವಂ ವಕ್ತುಮರ್ಹಸಿ ।
ಗತ್ವಾ ರುದ್ರೋ ಮುನಿಂ ದೃಷ್ಟ್ವಾ ಹರ್ಷಾವಿಷ್ಟಮುತೀವ ಹ ॥ ೧೩೬ ॥

॥ ರುದ್ರ ಉವಾಚ ॥

ಭೋ ಭೋ ವಿಪ್ರರ್ಷಭ ತ್ವಂ ಹಿ ನೃತ್ಯಸೇ ಕೇನ ಹೇತುನಾ ।
ನೃತ್ಯಮಾನೇನ ಭವತಾ ಜಗತ್ಸರ್ವಂ ಚ ನೃತ್ಯತಿ ॥ ೧೩೭ ॥

---

೧೩೨-೧೩೩. ಪೂರ್ವದಲ್ಲಿ ಮಂಕಣಕನೆಂಬ ಬ್ರಾಹ್ಮಣನಿದ್ದನು. ಅವನಿಗೆ ಒಂದುಸಾರಿ ದರ್ಭೆಯ ಮೊನೆಯು ಚುಚ್ಚಲು ಕೈಯಿನ ಆ ಗಾಯದಿಂದ ಶಾಕರಸವು ಸುರಿಯಿತು. ಅವನು ಅದನ್ನು ನೋಡಿ ಸಂತೋಷದಿಂದ ಕುಣಿದಾಡಿದನು.

೧೩೪. ಅವನು ಈರೀತಿ ಕುಣಿಯಲು ಅಲ್ಲಿದ್ದ ಸ್ಥಾವರಜಂಗಮಗಳು ಕೂಡ ಆತನ ತೇಜಸ್ಸಿನಿಂದ ಮೋಹಗೊಂಡು ಕುಣಿದುವು.

೧೩೫-೧೩೬. ಅನಂತರ ವಿಷ್ಣುವೂ ದೇವತೆಗಳೂ ಋಷಿಗಳೂ ಬ್ರಹ್ಮನಿಗೆ ಈ ವಿಷಯವನ್ನು ಹೇಳಿ ಅವನು ಕುಣಿಯದಂತೆ ಮಾಡೆಂದರು. ಆಗ ಬ್ರಹ್ಮನು ರುದ್ರನನ್ನು ಕರೆದು, ಅವನು ಕುಣಿಯದಂತೆ ಹೇಳೆಂದನು. ರುದ್ರನು ಬಹು ಹರ್ಷವನ್ನು ಹೊಂದಿ, ಕುಣಿಯುತ್ತಿರುವುದನ್ನು ನೋಡಿದನು.

೧೩೭-೧೩೮. ರುದ್ರನು ಹೇಳಿದನು :—ಎಲೈ ಬ್ರಾಹ್ಮಣಶ್ರೇಷ್ಠನೆ, ನೀನು ಕುಣಿಯಲು ಕಾರಣವೇನು ? ನೀನು ಕುಣಿಯುತ್ತಿದ್ದರೆ ಪ್ರಪಂಚವೆಲ್ಲವೂ ಕುಣಿಯು

ತೇನಾಯಂ ವಾರಿತಃ ಪ್ರಾಹ ನೃತ್ಯನ್ನೈ ಮುನಿಸತ್ತಮಃ ॥ ೧೩೮ ॥

॥ ಮುನಿರುವಾಚ ॥

ಕಿಂ ನ ಪಶ್ಯಸಿ ಮೇ ದೇವ ಕರಾಚ್ಛಾಕರಸೋಽಸ್ರವತ್ ।
ತಂ ತು ದೃಷ್ಟ್ವಾ ಪ್ರನೃತ್ಯೇ ವೈ ಹರ್ಷೇಣ ಮಹತಾನ್ವಿತಃ ।
ತಂ ಪ್ರಹಸ್ಯಾಬ್ರವೀದ್ದೇವೋ ಮುನಿಂ ರಾಗೇಣ ಮೋಹಿತಂ ॥ ೧೩೯ ॥

॥ ರುದ್ರ ಉವಾಚ ॥

ಅಹಂ ನ ವಿಸ್ಮಯಂ ವಿಪ್ರ ಗಚ್ಛಾಮೀತಿ ಪ್ರಪಶ್ಯ ಮಾಂ ॥ ೧೪೦ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತೋ ಮುನಿಶ್ರೇಷ್ಠೋ ಮಹಾದೇವೇನ ಕೌರವ ।
ಧ್ಯಾಯಮಾನಸ್ತದಾ ಕೋಽಯಂ ಪ್ರತಿಷಿದ್ಧೋಽಸ್ಮಿ ಯೇನ ಹ ॥ ೧೪೧ ॥

---

ತ್ತದೆ. ಸುಮ್ಮನಿರೆಂದನು. ಹೀಗೆ ಈ ರುದ್ರನಿಂದ ತಡೆಯಲ್ಪಟ್ಟ ಆ ಮುನಿಯು ಕುಣಿಯುತ್ತಲೇ ಇಂತೆಂದನು.

೧೩೯. ಮುನಿಯು ಹೇಳಿದನು :—ಇದೇನು ಸ್ವಾಮಿ, ನನ್ನ ಕೈಯಿಂದ ಶಾಕರಸವು ಸುರಿಯುತ್ತಿರುವುದು ಕಾಣುತ್ತಿಲ್ಲವೇ? ಅದನ್ನು ನೋಡಿ ಸಂತೋಷ ವುಂಟಾದುದರಿಂದ ಕುಣಿಯುತ್ತೇನೆ, ಎನ್ನಲು, ಅವನನ್ನು ನೋಡಿ ರುದ್ರನು ನಕ್ಕು ಸಂತೋಷದಿಂದ ಕೂಡಿರುವ ಋಷಿಗೆ ಇಂತೆಂದನು.

೧೪೦. ರುದ್ರನು ಹೇಳಿದನು :—ಎಲೈ ಬ್ರಾಹ್ಮಣನೇ, ನನಗೆ ಆಶ್ಚರ್ಯ ವಾಗುವುದಿಲ್ಲ. ನನ್ನನ್ನು ನೋಡು.

೧೪೧-೧೪೩. ಪುಲಸ್ತ್ಯನು ಹೇಳಿದನು :—ಎಲೈ ಭೀಷ್ಮನೇ, ಮಹಾದೇವನು ಹೀಗೆ ಹೇಳುತ್ತಲೂ ಇವನಾರು ? ನನ್ನನ್ನು ಹೀಗೆ ನಿಷೇಧಿಸಲು, ಕಾರಣವೇನು ? ಎಂದು ಯೋಚಿಸುವಷ್ಟರಲ್ಲಿ ಆ ಮಹಾದೇವನು ಬೆರಳಿನ ತುದಿಯಿಂದ ತನ್ನ

ಅಂಗುಲ್ಯಗ್ರೇಣ ರಾಜೇಂದ್ರ ಸ್ವಾಂಗುಷ್ಠಸ್ತಾಡಿತಸ್ತದಾ ।
ತತೋ ಭಸ್ಮ ಕ್ಷತಾದ್ರಾಜನ್ನಿರ್ಗತಂ ಹಿಮಪಾಂಡುರಂ ॥ ೧೪೨ ॥

ತದ್ದೃಷ್ಟ್ವಾ ವ್ರೀಡಿತಶ್ಚಾಸೌ ಸ ಮುನಿಃ ಪಾದಯೋರ್ಗತಃ ।
ನಾನ್ಯದ್ದೇವಾದಹಂ ಮನ್ಯೇ ರುದ್ರಾತ್ಪರತರಂ ಮಹತ್ ॥ ೧೪೩ ॥

ಚರಾಚರಸ್ಯ ಜಗತೋ ಗತಿಸ್ತ್ವಮಸಿ ಶೂಲಧೃಕ್ ।
ತ್ವಯಾ ಸೃಷ್ಟಮಿದಂ ಸರ್ವಂ ವದಂತೀಹ ಮನೀಷಿಣಃ ॥ ೧೪೪ ॥

ತ್ವಾಮೇವ ಸರ್ವಂ ವಿಶತಿ ಪುನರೇವ ಯುಗಕ್ಷಯೇ ।
ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ॥ ೧೪೫ ॥

ತ್ವಯಿ ಸರ್ವೇ ಪ್ರದೃಶ್ಯಂತೇ ಸುರಾ ಬ್ರಹ್ಮಾದಯೋಽಪಿ ಯೇ ।
ಸರ್ವಂ ತ್ವಮಸಿ ದೇವಾನಾಂ ಕರ್ತಾ ಕಾರಯಿತಾ ಚ ಯತ್ ॥ ೧೪೬ ॥

---

ಹೆಬ್ಬೆಟ್ಟನ್ನೊಡೆದನು. ಆಮೇಲೆ ಆ ಗಾಯದಿಂದ ಬೆಳ್ಳಗಿರುವ ಭಸ್ಮವು ಹೊರಗೆ ಹೊರಟಿತು.

೧೪೩. ಅದನ್ನು ನೋಡಿ ನಾಚಿಗೆಗೊಂಡು ಈತನು ರುದ್ರನಲ್ಲದೆ ಬೇರೆಯವನಲ್ಲ ಎಂದು ಆತನ ಕಾಲಿಗೆ ಬಿದ್ದನು.

೧೪೪. ಸ್ಥಾವರಜಂಗಮರೂಪವಾದ ಈ ಜಗತ್ತಿಗೆ ಎಲೈ ರುದ್ರನೇ, ನೀನೇ ಗತಿಯು. ನೀನೇ ಇದೆಲ್ಲವನ್ನೂ ಸೃಷ್ಟಿಮಾಡಿದ್ದೀಯೆ ಎಂದು ತಿಳಿದವರು ಹೇಳುತ್ತಾರೆ.

೧೪೫. ಯುಗಕ್ಷಯದಲ್ಲಿ ಪ್ರಪಂಚವೆಲ್ಲವೂ ನಿನ್ನನ್ನೇ ಹೊಂದುತ್ತವೆ. ದೇವತೆಗಳೂ ನಿನ್ನನ್ನು ತಿಳಿಯಲಾರರು. ನನ್ನಿಂದೆಲ್ಲಿ ಸಾಧ್ಯವಾದೀತು ?

೧೪೬. ಬ್ರಹ್ಮಾದಿ ದೇವತೆಗಳೆಲ್ಲರೂ ನಿನ್ನಲ್ಲೇ ಅಡಗಿದ್ದಾರೆ. ದೇವತೆಗಳಿಗೆ ಕೆಲಸವನ್ನು ಮಾಡತಕ್ಕವನೂ, ಮಾಡಿಸತಕ್ಕವನೂ, ಎಲ್ಲವೂ ನೀನೇ ಆಗಿದ್ದೀಯೆ.

ತ್ವತ್ಪ್ರಸಾದಾತ್ಸುರಾಃ ಸರ್ವೇ ಭವಂತೀಹಾಕುತೋಭಯಾಃ ।
ಏವಂ ಸ್ತುತ್ವಾ ಮಹಾದೇವಂ ಸ ತತ್ರ ಪ್ರಣತೋಽಬ್ರವೀತ್ ॥ ೧೪೭ ॥

ಭಗವಂಸ್ತ್ವತ್ಪ್ರಸಾದಾನ್ಮೇ ತಪೋ ನ ಕ್ಷರತೇ ತ್ವಿಹ ।
ತತೋ ದೇವಃ ಪ್ರೀತಮನಾಸ್ತಮೃಷಿಂ ಪುನರಬ್ರವೀತ್ ॥ ೧೪೮ ॥

॥ ರುದ್ರ ಉವಾಚ ॥

ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ಸಹಸ್ರಧಾ ।
ಪ್ರಾಚೀಮೇವೇಹ ವತ್ಸ್ಯಾಮಿ ತ್ವಯಾ ಸಾರ್ಧಮಹಂ ಸದಾ ॥ ೧೪೯ ॥

ಸರಸ್ವತೀ ಮಹಾಪುಣ್ಯಾ ಕ್ಷೇತ್ರೇ ಚಾಸ್ಮಿನ್ವಿಶೇಷತಃ ।
ನ ತಸ್ಯ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ ॥ ೧೫೦ ॥

ಸರಸ್ವತ್ಯುತ್ತರೇ ತೀರೇ ಯಸ್ತ್ಯಜೇದಾತ್ಮನಸ್ತನುಂ ।
ಪ್ರಾಚೀತೀರೇ ಜಾಪ್ಯಪರೋ ನ ಚೇಹ ಮ್ರಿಯತೇ ಪುನಃ ॥ ೧೫೧ ॥

---

೧೪೭. ನಿನ್ನ ಅನುಗ್ರಹದಿಂದಲೇ ದೇವತೆಗಳೆಲ್ಲರೂ ಯಾರಿಂದಲೂ ಹೆದರದೆ ಇದ್ದಾರೆ. ಹೀಗೆ ಮಹಾದೇವನನ್ನು ಸ್ತುತಿಸಿ ಆ ಋಷಿಯು ನಮಸ್ಕರಿಸಿ ಇಂತೆಂದನು.

೧೪೮. ಎಲೈ ಭಗವಂತನೇ, ನಿನ್ನ ಅನುಗ್ರಹದಿಂದಲೇ, ನನ್ನ ತಪಸ್ಸು ನಾಶವಾಗುತ್ತಿಲ್ಲ ಎನ್ನಲು, ರುದ್ರನು ತುಷ್ಟನಾಗಿ ಆ ಋಷಿಯನ್ನು ಕುರಿತು ಇಂತೆಂದನು.

೧೪೯. ರುದ್ರನು ಹೇಳಿದನು:—ಎಲೈ ವಿಪ್ರನೇ, ನಿನ್ನ ತಪಸ್ಸು ನನ್ನ ಪ್ರಸಾದದಿಂದ ಸಾವಿರ ಪಾಲಾಗಿ ವೃದ್ಧಿಸಲಿ. ನಾನು ನಿನ್ನೊಡನೆಯೇ ಈ ಪೂರ್ವ ದಿಕ್ಕಿನಲ್ಲಿ ವಾಸಿಸುತ್ತೇನೆ.

೧೫೦. ಸರಸ್ವತಿಯು ಮಹಾಪುಣ್ಯವಾದ ನದಿಯು. ಈ ಕ್ಷೇತ್ರದಲ್ಲಿ ಯಂತೂ ಇನ್ನೂ ಪುಣ್ಯವಾದುದು. ಇಲ್ಲಿ ವಾಸಿಸುವವನಿಗೆ ಇಹ, ಪರಗಳಲ್ಲಿ ದುರ್ಲಭವಾದುದೇ ಇಲ್ಲ.

೧೫೧. ಸರಸ್ವತಿಯ ಉತ್ತರತೀರ್ಥದಲ್ಲಿ ಮೃತನಾದವನೂ, ಪೂರ್ವತೀರ್ಥದಲ್ಲಿ ಜಪಮಾಡತಕ್ಕವನೂ ಪುನರ್ಜನ್ಮವನ್ನು ಹೊಂದುವುದಿಲ್ಲ.

ಆಪ್ಲುತೋ ವಾಜಿಮೇಧಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ।
ನಿಯಮೈಶ್ಚೋಪವಾಸೈಶ್ಚ ಕರ್ಷಯನ್ದೇಹಮಾತ್ಮನಃ ॥ ೧೫೨ ॥

ಜಲಾಹಾರೋ ವಾಯುಭಕ್ಷಃ ಪರ್ಣಾಹಾರಶ್ಚ ತಾಪಸಃ ।
ತಥಾ ಸ್ಥಂಡಿಲಶಾಯೀ ಚ ಯಮಾನ್ವೈ ನಿಯಮಾನ್ಪೃಥಕ್ ॥ ೧೫೩ ॥

ಯೇ ತತ್ರ ಕುರ್ವಂತಿ ದ್ವಿಜಾ ನಿಯಮಾಂಶ್ಚ ವ್ರತಾನಿ ಚ ।
ತೇ ಯಾಂತಿ ಶುದ್ಧದೇಹಾಶ್ಚ ಬ್ರಹ್ಮಣಃ ಪರಮಂ ಪದಂ ॥ ೧೫೪ ॥

ತಸ್ಮಿಂಸ್ತೀರ್ಥೇ ತು ಯೈರ್ದತ್ತಂ ತಿಲಮಾತ್ರಂ ತು ಕಾಂಚನಂ ।
ಮೇರುದಾನಸಮಂ ತತ್ಸ್ಯಾತ್ಪುರಾ ಪ್ರಾಹ ಪ್ರಜಾಪತಿಃ ॥ ೧೫೫ ॥

ತಸ್ಮಿಂಸ್ತೀರ್ಥೇ ತು ಯೇ ಶ್ರಾದ್ಧಂ ಕರಿಷ್ಯಂತೀಹ ಮಾನವಾಃ ।
ಏಕವಿಂಶತ್ಕುಲೋಪೇತಾಃ ಸ್ವರ್ಗಂ ಯಾಸ್ಯಂತಿ ತೇ ನರಾಃ ॥ ೧೫೬ ॥

ಪಿತೄಣಾಂ ವಲ್ಲಭಂ ತೀರ್ಥಂ ಪಿಂಡೇನೈಕೇನ ತರ್ಪಿತಾಃ ।
ಬ್ರಹ್ಮಲೋಕಂ ಗಮಿಷ್ಯಂತಿ ಪುಷ್ಕರೇಣೇಹ ತಾರಿತಾಃ ॥ ೧೫೭ ॥

---

೧೫೨. ಸ್ನಾನಮಾಡುತ್ತ ನಿಯಮದಿಂದಲೂ, ಉಪವಾಸಗಳಿಂದಲೂ ದೇಹವನ್ನು ಕ್ಷಯಿಸಿದರೆ ಅಶ್ವಮೇಧದ ಪೂರ್ತಿಯಾದ ಫಲವನ್ನು ಹೊಂದುತ್ತಾನೆ

೧೫೩-೧೫೪. ನೀರನ್ನೇ ಕುಡಿಯುವುದು, ವಾಯುವನ್ನೇ ಸೇವಿಸುತ್ತ ಇರುವುದು, ಎಲೆಯನ್ನೇ ತಿನ್ನುತ್ತ ಇರುವುದು, ವ್ರತದಿಂದ ಮಲಗಿರುವುದು, ವ್ರತಗಳನ್ನೂ, ನಿಯಮಗಳನ್ನೂ ಆಚರಿಸುವುದು, ಇಂತಹವನು ದೇಹವನ್ನು ಶುದ್ಧಿಮಾಡಿಕೊಂಡು ಬ್ರಹ್ಮನ ಸ್ಥಾನವನ್ನು ಹೊಂದುತ್ತಾನೆ.

೧೫೫. ಆ ತೀರ್ಥದಲ್ಲಿ ಯಾವನು ಎಳ್ಳಷ್ಟು ಚಿನ್ನವನ್ನು ದಾನಮಾಡಿದರೂ ಅವನಿಗೆ ಅದು ಮೇರುವನ್ನು ದಾನಮಾಡಿದ ಫಲವನ್ನು ಕೊಡುವುದೆಂದು ಬ್ರಹ್ಮನು ಪೂರ್ವದಲ್ಲಿ ಹೇಳಿದ್ದಾನೆ.

೧೫೬. ಈ ತೀರ್ಥದಲ್ಲಿ ಶ್ರಾದ್ಧಮಾಡಿದರೆ ಅವರು ತಮ್ಮ ಇಪ್ಪತ್ತೊಂದು ತಲೆಮಾರಿನ ಪಿತೃಗಳನ್ನು ಸೇರಿಸಿಕೊಂಡು ಸ್ವರ್ಗಕ್ಕೆ ಹೋಗುತ್ತಾರೆ.

೧೫೭. ಈ ತೀರ್ಥವು ಪಿತೃಗಳಿಗೆ ಪ್ರಿಯವಾದುದು. ಇಲ್ಲಿ ಒಂದು ಪಿಂಡವನ್ನು ಕೊಟ್ಟರೂ ಪುಷ್ಕರದಿಂದ ತೃಪ್ತರಾಗಿ ಬ್ರಹ್ಮಲೋಕವನ್ನು ಹೊಂದುತ್ತಾರೆ.

ಭೂಯಶ್ಚಾನ್ನಂ ನ ವಾಂಛಂತಿ ಮೋಕ್ಷಮಾರ್ಗಂ ವ್ರಜಂತಿ ತೇ ।
ಪ್ರಾಚೀನತ್ವಂ ಸರಸ್ವತ್ಯಾ ಯಥಾ ಭೂತಂ ಶೃಣುಷ್ವ ತತ್ ॥ ೧೫೮ ॥

ಸರಸ್ವತೀ ಪುರಾ ಪ್ರೋಕ್ತಾ ದೇವೈಃ ಸರ್ವೈಃ ಸವಾಸವೈಃ ।
ತಟಂ ತ್ವಯಾ ಪ್ರಯಾತವ್ಯಂ ಪ್ರತೀಚ್ಯಾಂ ಲವಣೋದಧೇಃ ॥ ೧೫೯ ॥

ವಾಡವಾಗ್ನಿಮಿಮಂ ನೀತ್ವಾ ಸಮುದ್ರೇ ನಿಕ್ಷಿಪಸ್ವ ಹ ।
ಏವಂ ಕೃತೇ ಸುರಾಃ ಸರ್ವೇ ಭವಂತಿ ಭಯವರ್ಜಿತಾಃ ॥ ೧೬೦ ॥

ಅನ್ಯಥಾ ಬಾಡವಾಗ್ನಿಸ್ತು ದಹತೇ ಸ್ವೇನ ತೇಜಸಾ ।
ತಸ್ಮಾದ್ರಕ್ಷಸ್ವ ವಿಬುಧಾನೇತಸ್ಮಾದತುಲಾದ್ಭಯಾತ್ ॥ ೧೬೧ ॥

ಮಾತೇವ ಭವ ಸುಶ್ರೋಣಿ ಸುರಾಣಾಮಭಯಪ್ರದಾ ।
ಏವಮುಕ್ತಾ ತು ಸಾ ದೇವೀ ವಿಷ್ಣುನಾ ಪ್ರಭವಿಷ್ಣುನಾ ॥ ೧೬೨ ॥

ಆಹ ನಾಹಂ ಸ್ವವೃತ್ತಾಽಸ್ಮಿ ಪಿತಾ ಮೇ ಪ್ರಿಯತಾಂ ವಿರಾಟ್ ।
ತಸ್ಯಾಜ್ಞಾಕಾರಿಣೀ ನಿತ್ಯಂ ಕುಮಾರೀಹ ಧೃತವ್ರತಾ ॥ ೧೬೩ ॥

---

೧೫೮. ಅವರು ಮೋಕ್ಷವನ್ನು ಹೊಂದುವರಲ್ಲದೆ ಮತ್ತೆ ಅನ್ನವನ್ನು ಅಪೇಕ್ಷಿಸುವುದಿಲ್ಲ. ಸರಸ್ವತಿಯು ಪೂರ್ವದಿಕ್ಕಿಗೆ ಹೇಗೆ ಬಂದಳೆಂಬುದನ್ನು ಕೇಳು.

೧೫೯-೧೬೦. ಎಲೈ ಸರಸ್ವತಿಯೇ, ಪಶ್ಚಿಮದಿಕ್ಕಿನಲ್ಲಿರುವ ಲವಣಸಮುದ್ರದ ದಡಕ್ಕೆ ಹೋಗಬೇಕು. ಈ ಬಾಡವಾಗ್ನಿಯನ್ನು ತೆಗೆದುಕೊಂಡು ಹೋಗಿ ಎಸೆದು ಬಿಡು. ಹೀಗೆ ಮಾಡಿದರೆ ದೇವತೆಗಳೆಲ್ಲರೂ ಸುಖವಾಗಿರುತ್ತಾರೆ. ಎಂದು ದೇವತೆಗಳೆಲ್ಲರೂ ಪೂರ್ವದಲ್ಲಿ ಆಕೆಗೆ ಹೇಳಿದರು.

೧೬೧. ಹಾಗಿಲ್ಲದಿದ್ದರೆ ಬಡಬಾಗ್ನಿಯು ತನ್ನ ಶಕ್ತಿಯಿಂದ ಎಲ್ಲರನ್ನೂ ಸುಟ್ಟು ಬಿಡುತ್ತದೆ. ಆದ್ದರಿಂದ ಈ ಹೆದರಿಕೆಯಿಂದ ದೇವತೆಗಳನ್ನು ರಕ್ಷಿಸು.

೧೬೨—೧೬೪. ಎಲೈ ಸುಶ್ರೋಣಿಯೇ, ದೇವತೆಗಳಿಗೆ ಅಭಯವನ್ನು ಕೊಟ್ಟು ತಾಯಿಯಂತೆ ಆಗು. ಈರೀತಿ ವಿಷ್ಣುವು ಹೇಳಲು, ಆಕೆಯು ನಾನು ಸ್ವತಂತ್ರಳಲ್ಲ. ನನ್ನ ತಂದೆಯನ್ನು ಕೇಳು, ನಾನು ಕುಮಾರಿಯು. ಯಾವಾಗಲೂ ಆತನ ಅಪ್ಪಣೆಯಂತೆ ನಡೆಯುತ್ತಾ ಕಟ್ಟನಿಂದಿದ್ದೇನೆ. ತಂದೆಯ ಅಪ್ಪಣೆಯಿಲ್ಲದೆ

**ಪಿತ್ರಾದೇಶಾದ್ವಿನಾ ನಾಹಂ ಪದಮೇಕಮಪಿ ಕ್ವಚಿತ್ ।**
**ಗಚ್ಛಾಮಿ ತಸ್ಮಾತ್ಕೋಽಪ್ಯನ್ಯ ಉಪಾಯಶ್ಚಿಂತ್ಯತಾಂ ಹರೇ ।**
**ತತ್ಸ್ವರೂಪಂ ವಿದಿತ್ವಾಽಹುಸ್ತೇ ಸಮೇತ್ಯ ಪಿತಾಮಹಂ ॥ ೧೬೪ ॥**

**॥ ದೇವಾ ಊಚುಃ ॥**

**ನಾನ್ಯೇನ ಶಕ್ಯತೇ ನೇತುಂ ವಾಡವೋಽಗ್ನಿಃ ಪಿತಾಮಹ ।**
**ಅದೃಷ್ಟದೋಷಾಂ ಮುಕ್ತ್ವೈಕಾಂ ಕುಮಾರೀಂ ತನಯಾಂ ತವ ॥ ೧೬೫ ॥**

**॥ ಪುಲಸ್ತ್ಯ ಉವಾಚ ॥**

**ಸರಸ್ವತೀಂ ಸಮಾನೀಯ ಕೃತ್ವಾಽಂಕೇ ವರವರ್ಣಿನೀಂ ।**
**ಶಿರಸ್ಯಾಘ್ರಾಯ ಸಸ್ನೇಹಮುಕ್ತ್ವಾ ದೇವೀ ಸರಸ್ವತೀ ॥ ೧೬೬ ॥**

**ಮಾಂ ಚ ದೇವಿ ಸುರಾಂಶ್ಚಾನ್ಯಾನ್ಸರ್ವಾನ್ಪಾಹಿ ಯಶಸ್ವಿನಿ ।**
**ನೀತ್ವಾ ವಿನಿಕ್ಷಿಪಸ್ವೈನಂ ವಾಡವಂ ಲವಣಾಂಭಸಿ ॥ ೧೬೭ ॥**

---

ಒಂದು ಹೆಜ್ಜೆಯನ್ನೂ ಎಲ್ಲೂ ಇಡುವುದಿಲ್ಲ. ಆದ್ದರಿಂದ ಎಲೈ ಹರಿಯೇ, ಬೇರೆ ಉಪಾಯವನ್ನು ಹುಡುಕು. ಆಗ ಆ ಸರಸ್ವತಿಯ ಸ್ಥಿತಿಯನ್ನು ತಿಳಿದು ಅವರೆಲ್ಲರೂ ಬ್ರಹ್ಮನ ಬಳಿಗೆ ಬಂದು ಇಂತೆಂದರು.

೧೬೫. ದೇವತೆಗಳು ಹೇಳಿದರು :—ಎಲೈ ಪಿತಾಮಹನೇ, ದೋಷರಹಿತಳಾದ ನಿನ್ನ ಮಗಳಾದ ಆ ಕುಮಾರಿ ಸರಸ್ವತಿಯು ಹೊರತಾಗಿ ಬಾಡಬಾಗ್ನಿಯನ್ನು ತೆಗೆದುಕೊಂಡು ಹೋಗುವುದಕ್ಕೆ ಮತ್ತಾರಿಗೂ ಸಾಧ್ಯವಿಲ್ಲ.

೧೬೬. ಪುಲಸ್ತ್ಯನು ಹೇಳಿದನು :—ಸರಸ್ವತಿಯನ್ನು ಕರೆದು ತೊಡೆಯ ಮೇಲೆ ಕೂರಿಸಿಕೊಂಡು ತಲೆಯನ್ನು ಮೂಸಿನೋಡಿ ಸ್ನೇಹದಿಂದ ಇಂತೆಂದನು.

೧೬೭. ಎಲೈ ದೇವಿಯೇ, ನನ್ನನ್ನೂ ಈ ದೇವತೆಗಳನ್ನೂ ಕಾಪಾಡು. ಆದ್ದರಿಂದ ಈ ಬಾಡಬಾಗ್ನಿಯನ್ನು ಕೊಂಡುಹೋಗಿ ಲವಣಸಮುದ್ರದಲ್ಲಿ ಬಿಸಾಟಿಬಿಡು.

**ಪಿತುರ್ವಾಕ್ಯಂ ಹಿ ತಚ್ಛ್ರುತ್ವಾ ವಿಯುಕ್ತಾ ಕುರರೀ ಯಥಾ ।**
**ಪಿತ್ರಾ ತಥೈವ ಸಾ ಕನ್ಯಾ ರುರೋದ ದೀನಮಾನಸಾ ॥ ೧೬೮ ॥**

**ಶೋಭತೇ ತನ್ಮುಖಂ ತಸ್ಯಾಃ ಶೋಕಬಾಷ್ಪಾವಿಲೇಕ್ಷಣಂ ।**
**ಸಿತಂ ವಿಕಸಿತಂ ಯದ್ವತ್ಪದ್ಮಂ ತೋಯಕಣೋಕ್ಷಿತಂ ॥ ೧೬೯ ॥**

**ತತ್ತಥಾವಿಧಮಾಲೋಕ್ಯ ಪಿತಾಮಹಪುರಃಸರಾಃ ।**
**ವಿಬುಧಾಃ ಶೋಕಭಾರಸ್ಯ ಸರ್ವೇ ವಶಮುಪಾಗತಾಃ ॥ ೧೭೦ ॥**

**ಸಂಸ್ತಭ್ಯ ಹೃದಯಂ ತಸ್ಯಾಃ ಶೋಕಸಂತಾಪತಾಪಿತಂ ।**
**ಪಿತಾಮಹಸ್ತಾಮುವಾಚ ಮಾ ರೋದೀರ್ನಾಸ್ತಿ ತೇ ಭಯಂ ॥ ೧೭೧ ॥**

**ಅನಲಂ ವಹ ದೇವಿ ತ್ವಂ ತವ ದೇವಾನುಭಾವತಃ ।**
**ನೀತ್ವಾ ಕ್ಷಾರೋದಮಧ್ಯೇ ತಂ ಕ್ಷಿಪಸ್ವ ಜ್ವಲನಂ ಸುತೇ ॥ ೧೭೨ ॥**

**ಏವಮುಕ್ತಾ ತು ಸಾ ಬಾಲಾ ಬಾಷ್ಪಾಕುಲಿತಲೋಚನಾ ।**
**ಪ್ರಣಮ್ಯ ಪದ್ಮಜನ್ಮಾನಂ ಗಚ್ಛಾಮ್ಯುಕ್ತವತೀ ತು ಸಾ ॥ ೧೭೩ ॥**

---

೧೬೮. ಪಿತೃವಿನ ಮಾತನ್ನು ಕೇಳಿ, ತಂದೆಯಿಂದ ಬಿಡಲ್ಪಟ್ಟ ಕುರರೀ ಎಂಬ ಹಕ್ಕಿಯಂತೆ ತಂದೆಯೊಡನೆ ಆ ಕನ್ಯೆಯು ದುಃಖಿಸಿದಳು.

೧೬೯. ಶೋಕದ ಕಣ್ಣೀರಿನಿಂದ ನಿನ್ನ ಮುಖವು ಬಹುವಾಗಿ ಶೋಭಿಸುತ್ತಿದೆ. ಬಿಳಿಯ, ಪದ್ಮಕ್ಕೆ (ಕನ್ನೇದಿಲೆಗೆ) ನೀರನ್ನು ಚುಮುಕಿಸಿದ್ದಂತೆ ಪ್ರಕಾಶಿಸುತ್ತದೆ.

೧೭೦. ಆಕೆಯ ಆ ದುಃಖವನ್ನು ನೋಡಿ, ಬ್ರಹ್ಮನೇ ಮುಂತಾದ ದೇವತೆಗಳು ಶೋಕಕ್ಕೆ ಅಧೀನರಾದರು.

೧೭೧. ಆಕೆಯ ದುಃಖವನ್ನು ಸಮಾಧಾನಪಡಿಸಿ, ಬ್ರಹ್ಮನು, ಅಮ್ಮ, ಅಳಬೇಡ. ನಿನಗೆ ಭಯವಿಲ್ಲ ಎಂದನು.

೧೭೨. ಎಲೈ ಮಗಳೇ, ದೇವತೆಗಳಿಗೋಸ್ಕರ ಈ ಬೆಂಕಿಯನ್ನು ಹೊತ್ತುಕೊಂಡು ಹೋಗಿ ಲವಣಸಮುದ್ರದ ಮಧ್ಯದಲ್ಲಿ ಹಾಕು.

೧೭೩. ಬ್ರಹ್ಮನು ಹೀಗೆನ್ನಲು, ಆಕೆಯು ಅಳುತ್ತ, ಬ್ರಹ್ಮನಿಗೆ ನಮಸ್ಕರಿಸಿ, ಹೋಗುತ್ತೇನೆಂದು ಹೇಳಿದಳು.

ಮಾ ಭೈರುಕ್ತಾ ಸುರೈಃ ಸರ್ವೈಃ ಪಿತ್ರಾ ಚಾಪಿ ತಥೈವ ಚ ।
ತ್ಯಕ್ತ್ವಾ ಭಯಂ ಹೃಷ್ಟಮನಾಃ ಪ್ರಯಾತುಂ ಸಮವಸ್ಥಿತಾ ॥ ೧೭೪ ॥

ತಸ್ಯಾಃ ಪ್ರಯಾಣಸಮಯೇ ಶಂಖದುಂದುಭಿನಿಃಸ್ವನೈಃ ।
ಮಂಗಲಾನಾಂ ಚ ನಿರ್ಘೋಷೈರ್ಜಗದಾಪೂರಿತಂ ಶುಭೈಃ ॥ ೧೭೫ ॥

ಸಿತಾಂಬರಧರಾ ಧನ್ಯಾ ಸಿತಚಂದನಮಂಡಿತಾ ।
ಹರಹಾಸಸಮಂ ಶುಭ್ರಾ ಸಿತಸ್ರಗ್ದಾಮಮಂಡಿತಾ ॥ ೧೭೬ ॥

ಶರದಂಬುದಸಚ್ಛಾಯತಾರಹಾರವಿಭೂಷಿತಾ ।
ಸಂಪೂರ್ಣಚಂದ್ರವದನಾ ಪದ್ಮಪತ್ರಾಯತೇಕ್ಷಣಾ ॥ ೧೭೭ ॥

ಶುಭಾಂ ಕೀರ್ತಿಂ ಮಹೇಂದ್ರಸ್ಯ ಪೂರಯಂತೀ ದಿಶೋ ದಶ ।
ಸ್ವತೇಜಸಾ ತದ್ಧೃದಯಾನ್ನಿಸ್ಸೃತಾ ಭಾಸತೀ ಜಗತ್ ॥ ೧೭೮ ॥

ಅನುವವ್ರಾಜ ತಾಂ ಗಂಗಾ ತಯೋಕ್ತಾ ವರವರ್ಣಿನೀ ।
ದ್ರಕ್ಷ್ಯಾಮಿ ತ್ವಾಂ ಪುನರಹಂ ಕುತ್ರ ಯಾತಾಸಿ ಮೇ ಸಖಿ ॥ ೧೭೯ ॥

---

೧೭೪. ಹೆದರಬೇಡವೆಂದು ದೇವತೆಗಳೂ ಬ್ರಹ್ಮನೂ ಹೇಳಲು, ಆಕೆಯು ಭಯವನ್ನು ಬಿಟ್ಟು ಸಂತೋಷದಿಂದ ಹೊರಡಲು ಸಿದ್ಧಳಾದಳು.

೧೭೫. ಅವಳ ಪ್ರಯಾಣ ಕಾಲದಲ್ಲಿ ಶಂಖ, ದುಂದುಭಿ, ಇನ್ನೂ ಅನೇಕ ಮಂಗಳವಾದ್ಯಗಳ ಧ್ವನಿಯು ಆಕಾಶವನ್ನು ತುಂಬಿತು.

೧೭೬—೧೭೮. ಬಿಳಿಯ ಬಟ್ಟೆಯನ್ನು ಉಟ್ಟು, ಬಿಳಿಯ ಗಂಧವನ್ನು ಪೂಸಿಕೊಂಡು, ತಾನು ಹರನ ಹಾಸದಂತೆ ಬೆಳ್ಳಗಿದ್ದು, ಬಿಳಿಯ ಹೂದಂಡೆಯನ್ನು ಧರಿಸಿ, ಶರತ್ಕಾಲದ ಬಿಳಿಯ ಮೇಘದಂತೆ ಬಣ್ಣವುಳ್ಳ, ಚಂಚಲವಾದ ಹಾರದಿಂದ ಅಲಂಕೃತಳಾಗಿ ಚಂದ್ರನಂತೆ ಮುಖವುಳ್ಳ, ಪದ್ಮದಂತೆ ಕಣ್ಣುಗಳುಳ್ಳ, ಆಕೆಯು ಮಹೇಂದ್ರನ ಶುಭವಾದ ಕೀರ್ತಿಯನ್ನು ಹತ್ತು ದಿಕ್ಕುಗಳಿಗೂ ತುಂಬುವಳಂತೆ ತನ್ನ ತೇಜಸ್ಸಿನಿಂದ ಜಗತ್ತನ್ನು ಬೆಳಗುತ್ತ ಬ್ರಹ್ಮನ ತೊಡೆಯ ಮೇಲಿನಿಂದ ಎದ್ದು ಹೊರಟಳು.

೧೭೯. ಗಂಗೆಯು ಆಕೆಯನ್ನು ಅನುಸರಿಸಿ ಹೊರಟಳು. ಆಗ ಸರಸ್ವತಿಯು ಎಲೈ ಸಖಿಯೇ, ನೀನು ಎಲ್ಲಿಗೆ ಹೋಗುತ್ತೀಯೆ? ನಿನ್ನನ್ನು ನಾನು ಮತ್ತೆ ಎಲ್ಲಿ ನೋಡಲಿ ಎಂದು ಹೇಳಿದಳು.

ಏವಮುಕ್ತ್ವಾ ತಯಾ ಗಂಗಾ ಪ್ರೋವಾಚ ಮಧುರಾಂ ಗಿರಂ ।
ಯದೈವ ಯಾಸ್ಯಸಿ ಪ್ರಾಚೀಂ ದಿಶಂ ಮಾಂ ಪಶ್ಯಸೇ ಶುಭೇ ॥ ೧೮೦ ॥

ವಿಬುಧೈಸ್ತ್ವಂ ಪರಿವೃತಾ ದರ್ಶನಂ ತತ್ರ ಸುವ್ರತೇ ।
ಉದಙ್ಮುಖೀ ತದಾ ಭೂತ್ವಾ ತ್ಯಜ ಶೋಕಂ ಶುಚಿಸ್ಮಿತೇ ॥ ೧೮೧ ॥

ಗಂಗಾ ಚೋದಙ್ಮುಖೀ ಪುಣ್ಯಾ ತ್ವಂ ತು ಪ್ರಾಚೀ ಸರಸ್ವತೀ ।
ತತ್ರ ಕ್ರತುಸಮಂ ಪುಣ್ಯಂ ಸ್ನಾನೇ ದಾನೇ ಚ ಸುವ್ರತೇ ॥ ೧೮೨ ॥

ಶ್ರಾದ್ಧದಾನೇ ತಥಾ ನಿತ್ಯಂ ಪಿತೄಣಾಂ ದತ್ತಮಕ್ಷಯಂ ।
ಯೇ ಕರಿಷ್ಯಂತಿ ಮನುಜಾ ವಿಮುಕ್ತಾಸ್ತೇ ಋಣೈಸ್ತ್ರಿಭಿಃ ॥ ೧೮೩ ॥

ಮೋಕ್ಷಮಾರ್ಗಂ ಗಮಿಷ್ಯಂತಿ ವಿಚಾರೋ ನಾತ್ರ ವಿದ್ಯತೇ ।
ತಾಮಾಪೃಚ್ಛ್ಯ ತತೋ ಗಂಗಾ ಪುನರ್ದರ್ಶನಮಸ್ತು ತೇ ॥ ೧೮೪ ॥

---

೧೮೦. ಸರಸ್ವತಿಯು ಹೀಗೆ ಹೇಳಲು ಗಂಗೆಯು ಒಳ್ಳೆಯ ಮಾತಿನಿಂದ ನೀನು ಪೂರ್ವದಿಕ್ಕಿಗೆ ಹೋದಾಗ ನನ್ನನ್ನು ನೋಡುತ್ತೀಯೆ ಎಂದಳು.

೧೮೧. ನಿನ್ನನ್ನು ಎಲ್ಲಿ ದೇವತೆಗಳು ಸುತ್ತುಗಟ್ಟುತ್ತಾರೆಯೋ ಅಲ್ಲಿ ನಿನ್ನ ದರ್ಶನವು. ಆಗ ಉತ್ತರದಿಕ್ಕಿಗೆ ತಿರುಗಿ ದುಃಖವನ್ನು ಬಿಡಮ್ಮ.

೧೮೨. ಗಂಗೆಯು ಉತ್ತರದಿಕ್ಕಿಗೆ ಹರಿಯುತ್ತಿದ್ದಾಗ ಪುಣ್ಯವತಿಯು. ಎಲೈ ಸರಸ್ವತಿಯೇ, ನೀನು ಪೂರ್ವದಿಕ್ಕಿಗೆ ಹರಿಯುವಾಗ ಪುಣ್ಯಪ್ರದಳು. ಅಲ್ಲಿ ಸ್ನಾನ ಮಾಡಿ ದಾನಮಾಡಿದರೆ ಯಾಗಮಾಡಿದ ಪುಣ್ಯವು ಬರುತ್ತದೆ.

೧೮೩. ಅಲ್ಲಿ ಶ್ರಾದ್ಧಮಾಡಿದರೆ ಮತ್ತು ಪಿತೃಗಳಿಗೆ ಏನನ್ನು ಕೊಟ್ಟರೂ ಅದು ಅಕ್ಷಯವು. ಯಾರು ಹಾಗೆ ಮಾಡುವರೋ ಅವರು ದೇವಋಣ, ಪಿತೃಋಣ, ಋಷಿಋಣಗಳಿಂದ ಮುಕ್ತರಾಗುತ್ತಾರೆ.

೧೮೪. ಅಂತವರು ಮೋಕ್ಷದ ದಾರಿಯನ್ನು ಹಿಡಿಯುತ್ತಾರೆ. ಇದರಲ್ಲಿ ಸಂಶಯವಿಲ್ಲ ಮತ್ತೆ ದರ್ಶನವಾಗಲಿ ಎಂದು ಹೇಳಿ ಹೊರಟಳು.

**ಗಚ್ಛ ಸ್ವಮಾಲಯಂ ಭದ್ರೇ ಸ್ಮರ್ತವ್ಯಾಽಹಂ ತ್ವಯಾಽನಘೇ ।**
**ಯಮುನಾಽಪಿ ತಥೈವಂ ಸಾ ಗಾಯತ್ರೀ ಚ ಮನೋರಮಾ ॥ ೧೮೫ ॥**

**ಸಾವಿತ್ರ್ಯಾ ಸಹಿತಾಃ ಸರ್ವಾಃ ಸಖ್ಯಃ ಸಂಪ್ರೇಷಿತಾಸ್ತದಾ ।**
**ತತೋ ವಿಸರ್ಜ್ಯ ತಾನ್ದೇವಾನ್ನದೀಭೂತಾ ಸರಸ್ವತೀ ॥ ೧೮೬ ॥**

**ಉತ್ತಂಕಸ್ಯಾಶ್ರಮಪದ ಉದ್ಭೂತಾ ಸಾ ಮನಸ್ವಿನೀ ।**
**ಅಧಸ್ತಾತ್ಪ್ಲಕ್ಷವೃಕ್ಷಸ್ಯ ಅವರುಹ್ಯ ಶತಪ್ರಭಂ ॥ ೧೮೭ ॥**

**ಅವತೀರ್ಣಾ ಮಹಾಭಾಗಾ ದೇವಾನಾಂ ಪಶ್ಯತಾಂ ತದಾ ।**
**ವಿಷ್ಣುರೂಪಸ್ತರುಃ ಸೋಽತ್ರ ಸರ್ವದೇವೈಃ ಸುವಂದಿತಃ ॥ ೧೮೮ ॥**

**ಸಂಸೇವ್ಯತೇ ದ್ವಿಜೈರ್ನಿತ್ಯಂ ಫಲಹೇತೋರ್ಮಹೋದಯಃ ।**
**ಅನೇಕಶಾಖಾವಿತತಶ್ಚತುರ್ಮುಖ ಇವಾಪರಃ ॥ ೧೮೯ ॥**

---

೧೮೫-೧೮೬. ಮಂಗಳಕರಳೇ, ನೀನು ನಿನ್ನ ಮನೆಗೆ ಹೋಗಮ್ಮ, ನನ್ನನ್ನು ಜ್ಞಾಪಿಸಿಕೊಳ್ಳುತ್ತಿರು ಎಂದು ಹೇಳಿದಳು. ಅದೇರೀತಿ ಯಮುನೆಯನ್ನೂ, ಗಾಯತ್ರಿಯನ್ನೂ, ಇನ್ನೂ ಅನೇಕ ಸಖಿಯರನ್ನೂ, ದೇವತೆಗಳನ್ನೂ ಕಳುಹಿಸಿ ಬಿಟ್ಟು ಸರಸ್ವತಿಯು ತಾನು ನದಿಯಾದಳು.

೧೮೭-೧೮೮. ಅನಂತರ ಆ ಸರಸ್ವತಿಯು ಉತ್ತಂಕನ ಆಶ್ರಮದಲ್ಲಿ ಒಂದು ಬಸುರಿಯ ಮರದ ಬುಡದಲ್ಲಿ ಹುಟ್ಟಿ, ಶತಪ್ರಭವೆಂಬ ಬೆಟ್ಟವನ್ನು ಇಳಿದಳು. ಆ ಬಸುರಿಯ ಮರವು ವಿಷ್ಣುರೂಪವಾದುದು. ಅದನ್ನು ಎಲ್ಲಾ ದೇವತೆಗಳೂ ವಂದಿಸಿದರು.

೧೮೯. ಹಣ್ಣಿಗೋಸ್ಕರ ಬಹುವಿಧವಾದ ಪಕ್ಷಿಗಳು ಅದನ್ನು ಸೇವಿಸುತ್ತವೆ ಮತ್ತು ಉತ್ಕೃಷ್ಟವಾದ ಫಲವನ್ನು ಹೊಂದಲು ಬ್ರಾಹ್ಮಣರು ಅದನ್ನು ಸೇವಿಸುತ್ತಾರೆ. ಅದು ಅನೇಕವಾದ ಕೊಂಬೆಗಳಿಂದ ವಿಸ್ತಾರವಾಗಿದೆ. ಅದನ್ನು ನೋಡಿದರೆ ನಾಲ್ಕು ಮುಖವುಳ್ಳ ಬ್ರಹ್ಮನಂತೆ ಕಾಣುತ್ತದೆ.

ತತ್ಕೋಟರಕುಟೀಕೋಟಿಪ್ರವಿಷ್ಟಾನಾಂ ದ್ವಿಜನ್ಮನಾ ।
ಶ್ರೂಯಂತೇ ವಿವಿಧಾರಾವಾಃ ಸುರಾಣಾಂ ರಕ್ತಚೇತಸಾಂ ॥ ೧೯೦ ॥

ವನಸ್ಪತಿರಪುಷ್ಪೋಽಪಿ ಪುಷ್ಪಿತಶ್ಚೋಪಲಕ್ಷ್ಯತೇ ।
ಜಾತೀಚಂಪಕವತ್ಪುಷ್ಪೈಃ ಶಾಖಾಲಗ್ನೈಃ ಶುಕೈಃ ಶುಭೈಃ ॥ ೧೯೧ ॥

ಕೇತಕೀವ ಬಲಾಕಾಭಿರಶೋಭತ ಸರಿದ್ವರಾ ।
ಕೋಕಿಲಾಭಿಃ ಸಮಾಲೇವ ಅಪುಷ್ಪೈಃ ಪುಷ್ಪಿತೇವ ಸಾ ॥ ೧೯೨ ॥

ಹರೇಣೇವ ಯಥಾ ಗಂಗಾ ಪ್ಲಕ್ಷೇಣೇವ ಹಿ ಸಾ ತಥಾ ।
ತತ್ರಸ್ಥಾ ಸಾ ತದಾ ದೇವಂ ಪ್ರೋವಾಚಾಥ ಜನಾರ್ದನಂ ॥ ೧೯೩ ॥

॥ ಸರಸ್ವತ್ಯುವಾಚ ॥

ಸಮರ್ಪಯಸ್ವ ತಂ ವಹ್ನಿಂ ದೇವಾದೇಶಂ ಕರೋಮ್ಯಹಂ ।
ಏವಮುಕ್ತೇನ ಸಾ ತೇನ ಪ್ರತ್ಯುಕ್ತಾ ವಿಷ್ಣುನಾ ತದಾ ॥ ೧೯೪ ॥

---

೧೯೦. ಅದರ ಪೊಟರೆಗಳಲ್ಲಿ ಹೊಕ್ಕಿರುವ ಪಕ್ಷಿಗಳ ನಾನಾಬಗೆಯ ಶಬ್ದಗಳು ಕೇಳಿಬರುತ್ತವೆ. ಅದರ ಪೊಟ್ಟರೆಯಲ್ಲಿಯೇ ಬ್ರಾಹ್ಮಣರು ಮನೆ ಮಾಡಿಕೊಂಡು ಸ್ವರ್ಗವನ್ನು ಸಾಧಿಸಲು ಇರುವರು. ಅವರ ನಾನಾಬಗೆಯ ಶಬ್ದಗಳು ಕೇಳಿಬರುತ್ತವೆ.

೧೯೧—೧೯೩. ಆ ಮರವು ಹೂ ಬಿಡದಿದ್ದರೂ ಹೂ ಬಿಟ್ಟಂತೆಯೇ ಕಾಣುತ್ತದೆ. ಜಾಜಿ, ಸಂಪಿಗೆಗಳಂತೆ ತನ್ನ ಕೊಂಬೆಯಲ್ಲಿ ಕುಳಿತಿರುವ ಗಿಳಿಗಳಿಂದಲೂ, ಹೂ ಬಿಟ್ಟಂತೆ ಕಾಣುತ್ತದೆ. ಆ ನದಿಯು ಅಲ್ಲಿರುವ ಮಾಘ ಪಕ್ಷಿಗಳಿಂದ ತಾಳೆಯ ಮರದಂತೆ ಶೋಭಿಸಿತು. ಕೋಗಿಲೆಗಳು ಮರದಲ್ಲಿ ಕುಳಿತಿದ್ದರೆ ಮಾಲೆಯನ್ನು ಹಾಕಿಕೊಂಡಂತೆ ಕಾಣುತ್ತಿತ್ತು. ಹೂ ಬಿಡದಿದ್ದರೂ ಹೂ ಬಿಟ್ಟಂತಿದ್ದಿತು. ಹರನಿಂದ ಗಂಗೆಯು ಶೋಭಿಸುವಂತೆ, ಆ ಬಸುರಿಯ ಮರದಿಂದ, ಆ ಸರಸ್ವತಿಯ ನದಿಯು ಪ್ರಕಾಶಿಸಿತು. ಅಲ್ಲಿದ್ದುಕೊಂಡು ಆ ಸರಸ್ವತಿಯು ಜನಾರ್ದನನನ್ನು ಕುರಿತು ಇಂತೆಂದಳು.

೧೯೪. ಸರಸ್ವತಿಯು ಹೇಳಿದಳು :—ಎಲೈ ವಿಷ್ಣುವೇ, ಆ ಬಾಡಬಾಗ್ನಿಯನ್ನು ಕೊಡು. ದೇವತೆಗಳ ಅಪ್ಪಣೆಯನ್ನು ನೆರವೇರಿಸುವೆನು ಎಂದಳು. ಆ ಮಾತನ್ನು ಕೇಳಿ ವಿಷ್ಣುವು ಇಂತೆಂದನು.

|| ವಿಷ್ಣುರುವಾಚ ||

ನ ತೇ ದಾಹಭಯಂ ತದ್ವತ್ತ್ವಯೇದಂ ವಹ್ನಿರಾಟ್ ಸ್ವಯಂ ।
ಪಶ್ಚಿಮಂ ಸಾಗರಂ ನೇತುಂ ವಾಡವಂ ಜ್ವಲನಂ ಶುಭೇ || ೧೯೫ ||

ಏವಂ ಕ್ರಮೇಣ ಗಚ್ಛಂತ್ಯಾ ತದಾಪಂ ಪ್ರಾಪ್ಸ್ಯಸೇ ಶುಭೇ || ೧೯೬ ||

|| ಪುಲಸ್ತ್ಯ ಉವಾಚ ||

ತತಸ್ತಂ ಶಾತಕೌಂಭಸ್ಥಂ ಕೃತ್ವಾऽಸೌ ವಡಬಾನಲಂ ।
ಸಮರ್ಪಯತ ಗೋವಿಂದಃ ಸರಸ್ವತ್ಯಾ ಮಹೋದರೇ || ೧೯೭ ||

ಸಾ ತಂ ಗೃಹೀತ್ವಾ ಸುಶ್ರೋಣೀ ಪ್ರತೀಚ್ಯಾಭಿಮುಖೀ ಯಯೌ ।
ಅಂತರ್ಧಾನೇನ ಸಂಪ್ರಾಪ್ತಾ ಪುಷ್ಕರಂ ಸಾ ಮಹಾನದೀ || ೧೯೮ ||

ಯೇಷು ತತ್ರ ಕೃತೋ ಹೋಮಃ ಕುಂಡೇಷ್ವಾಸೀದ್ವಿರಿಂಚಿನಾ ।
ತಾನಿ ಸರ್ವಾಣಿ ಸಂಪ್ಲಾವ್ಯ ತೋಯೇನಾಪ್ಯುದ್ಗತಾ ಹಿ ಸಾ || ೧೯೯ ||

---

೧೯೫-೧೯೬. ವಿಷ್ಣುವು ಹೇಳಿದನು :—ಇಗೋ ಇದೇ ಆ ಬಡಬಾಗ್ನಿಯು. ನಿನಗೆ ಇದು ಸುಡುತ್ತದೆ ಎಂಬ ಹೆದರಿಕೆ ಬೇಡವಮ್ಮ. ನೀನು ಇದನ್ನು ಪಶ್ಚಿಮ ಸಮುದ್ರಕ್ಕೆ ತೆಗೆದುಕೊಂಡು ಹೋಗು. ಹೀಗೆಯೇ ಹೋಗುತ್ತಿದ್ದರೆ ಆ ಪಶ್ಚಿಮ ಸಮುದ್ರವು ಸಿಕ್ಕುತ್ತದೆ.

೧೯೭. ಪುಲಸ್ತ್ಯನು ಹೇಳಿದನು :—ಅನಂತರ ವಿಷ್ಣುವು ಆ ಬಡಬಾನಲ ವನ್ನು ಚಿನ್ನದ ಬಿಂದಿಗೆಯಲ್ಲಿಟ್ಟು ಆ ಸರಸ್ವತಿಯ ಮಧ್ಯಭಾಗದಲ್ಲಿ ಇಟ್ಟನು.

೧೯೮. ಆ ಸರಸ್ವತಿಯು ಆ ಅಗ್ನಿಯನ್ನು ತೆಗೆದುಕೊಂಡು ಪಶ್ಚಿಮ ಮುಖ ವಾಗಿ ಹೊರಟು ಕಣ್ಣಿಗೆ ಕಾಣದಂತೆ ಪುಷ್ಕರವನ್ನು ಹೊಂದಿದಳು.

೧೯೯. ಬ್ರಹ್ಮನು ಹೋಮಮಾಡಿದ್ದ ಆ ಹಳ್ಳದಲ್ಲಿ ಮೇಲಕ್ಕೆದ್ದು ಆ ಯಜ್ಞದ ಜಾಗವನ್ನೆಲ್ಲಾ ನೆನೆಸಿದಳು ಮತ್ತು ತೊಳೆದಳು.

ತತ್ರ ಕ್ಷೇತ್ರೇ ಮಹಾಪುಣ್ಯಾ ಪುಷ್ಕರೇ ಸಾ ತಥೋತ್ಥಿತಾ ।
ತೇನ ತತ್ಪೂರಣಂ ಪ್ರೋಕ್ತಂ ವಾಯುನಾ ಜಗದಾಯುನಾ ॥ ೨೦೦ ॥

ಸಾಽಪಿ ತತ್ಕ್ಷೇತ್ರಮಾಸಾದ್ಯ ಪುಣ್ಯಂ ಪುಣ್ಯಾ ಮಹಾನದೀ ।
ಸರಸ್ವತೀ ಸ್ಥಿತಾ ದೇವೀ ಮರ್ತ್ಯಾನಾಂ ಪಾಪನಾಶಿನೀ ॥ ೨೦೧ ॥

ತತ್ರ ಯೇ ಶುಭಕರ್ಮಾಣಃ ಪುಷ್ಕರಸ್ಥಾಂ ಸರಸ್ವತೀಂ ।
ಪಶ್ಯಂತಿ ತೇ ನ ಪಶ್ಯಂತಿ ಅಧೋಗಾನಾಮಧೋಗತಿಂ ॥ ೨೦೨ ॥

ಯಃ ಪುನಸ್ತತ್ರ ಭಾವೇನ ನರಃ ಸ್ನಾನಂ ಸಮಾಚರೇತ್ ।
ಸ ಬ್ರಹ್ಮಲೋಕಮಾಸಾದ್ಯ ಬ್ರಹ್ಮಣಾ ಸಹ ಮೋದತೇ ॥ ೨೦೩ ॥

ಯಸ್ತು ದದ್ಯಾತ್ತತ್ರ ದಧಿ ಬ್ರಾಹ್ಮಣಾಯ ಮನೋರಮಂ ।
ಸೋಽಪ್ಯಗ್ನಿಲೋಕಮಾಸಾದ್ಯ ಭುಂಕ್ತೇ ಭೋಗಾನ್ಸುಶೋಭನಾನ್ ॥ ೨೦೪ ॥

ವರಂ ಪ್ರಾವರಣಂ ಯೋಽಪಿ ಭಕ್ತ್ಯಾ ದದ್ಯಾದ್ದ್ವಿಜಾತಯೇ ।
ಸೋಽಪಿ ತದ್ವಸ್ತ್ರದಾನಸ್ಯ ಫಲಂ ದಶಗುಣಂ ಲಭೇತ್ ॥ ೨೦೫ ॥

---

೨೦೦. ಆ ಪುಷ್ಕರಕ್ಷೇತ್ರದಲ್ಲಿ ಮಹಾಪುಣ್ಯವತಿಯಾದ ಈ ಸರಸ್ವತಿಯು ಎದ್ದಳು. ಅಲ್ಲಿ ತುಂಬಿದೆ ಎಂಬುದಾಗಿ ಜಗತ್ತಿಗೆ ಆಯುಸ್ಸಿನ ರೂಪವಾದ ವಾಯುವು ಹೇಳಿದನು.

೨೦೧-೨೦೨. ಪುಣ್ಯಪ್ರದಳಾದ ಆ ಸರಸ್ವತಿಯು ಆ ಪುಣ್ಯವಾದ ಪುಷ್ಕರವನ್ನು ಹೊಂದಿ ಪಾಪನಾಶಕಳಾದಳು. ಪುಣ್ಯಶಾಲಿಗಳು ಅಲ್ಲಿ ಸರಸ್ವತಿಯನ್ನು ನೋಡಿದರೆ ಪಾಪಿಗಳ ಸ್ಥಾನವನ್ನು (ನರಕವನ್ನು) ನೋಡುವುದಿಲ್ಲ.

೨೦೩. ಯಾವನ್ನು ಅಲ್ಲಿ ಶುದ್ಧವಾದ ಭಾವದಿಂದ ಸ್ನಾನಮಾಡುವನೋ ಅವನು ಬ್ರಹ್ಮಲೋಕವನ್ನು ಹೊಂದಿ ಬ್ರಹ್ಮನೊಡನೆ ಸುಖಿಸುತ್ತಾನೆ.

೨೦೪. ಅಲ್ಲಿ ಮೊಸರನ್ನು ದಾನಮಾಡಿದವನು ಅಗ್ನಿಲೋಕವನ್ನು ಹೊಂದಿ ಒಳ್ಳೆಯ ಭೋಗಗಳನ್ನು ಭೋಗಿಸುತ್ತಾನೆ.

೨೦೫. ಯಾವನು ಅಲ್ಲಿ ಒಳ್ಳೆಯ ಬಟ್ಟೆಗಳನ್ನು ಭಕ್ತಿಯಿಂದ ದಾನಮಾಡುತ್ತಾನೆಯೋ ಅವನು ಆ ವಸ್ತ್ರದಾನದ ಹತ್ತರಷ್ಟು ಫಲವನ್ನು ಹೊಂದುತ್ತಾನೆ.

ಜ್ಯೇಷ್ಠಕುಂಡೇ ನರಃ ಸ್ನಾತ್ವಾ ಯಃ ಸಂತರ್ಪಯತೇ ಪಿತೄನ್ ।
ಸ ತಾನುದ್ಧರತೇ ಸರ್ವಾನ್ನರಕಾದಪಿ ಶುದ್ಧಧೀಃ ॥ ೨೦೬ ॥

ಕ್ಷೇತ್ರೇ ಪೈತಾಮಹೇ ಪೂತಾಂ ಪುಣ್ಯಾಂ ಪ್ರಾಪ್ಯ ಸರಸ್ವತೀಂ ।
ನರಃ ಕಿಂ ಪ್ರಾರ್ಥಯೇದನ್ಯತ್ತೀರ್ಥಂ ಬ್ರಹ್ಮಸುತೋಽಬ್ರವೀತ್ ॥ ೨೦೭ ॥

ತಸ್ಮಾತ್ಸರ್ವೇಷು ತೀರ್ಥೇಷು ಸ್ನಾತಃ ಪ್ರಾಪ್ನೋತಿ ಯತ್ಫಲಂ ।
ತತ್ಸರ್ವಂ ಪ್ರಾಪ್ನುಯಾನ್ಮರ್ತ್ಯೋ ಜ್ಯೇಷ್ಠಕುಂಡೇ ಸಕೃತ್ಪ್ಲುತಃ ॥ ೨೦೮ ॥

ಕಿಮತ್ರ ಬಹುನೋಕ್ತೇನ ಕ್ಷೇತ್ರೇ ತೀರ್ಥೇ ಗತಾಸುನಾ ।
ಯೇನೈತತ್ತ್ರಿತಯಂ ಪ್ರಾಪ್ತಂ ಪ್ರಾಪ್ತಾ ತೇನ ಗತಿಃ ಪರಾ ॥ ೨೦೯ ॥

ಕಾಲೇ ಕ್ಷೇತ್ರೇ ತಥಾ ತೀರ್ಥೇ ಸ್ನಾತ್ವಾ ಹುತ್ವಾಽಪಿ ತತ್ರ ಯಃ ।
ಪ್ರಯಚ್ಛತಿ ದ್ವಿಜಾಯಾಥ ಸೋಽನಂತಂ ಸುಖಮಶ್ನುತೇ ॥ ೨೧೦ ॥

---

೨೦೬. ಜ್ಯೇಷ್ಠಕುಂಡದಲ್ಲಿ ಸ್ನಾನಮಾಡಿ ಪಿತೃಗಳನ್ನು ತೃಪ್ತಿಪಡಿಸಿದರೆ ಅವನು ಆ ಪಿತೃಗಳನ್ನು ನರಕದಿಂದ ಉದ್ಧಾರಮಾಡುತ್ತಾನೆ.

೨೦೭. ಈ ಪಿತಾಮಹನ ಕ್ಷೇತ್ರದಲ್ಲಿ ಸರಸ್ವತಿಯಲ್ಲಿ ಸ್ನಾನಮಾಡಿದರೆ, ಆತನು ಬೇರೆಯದನ್ನು ಕೇಳುವುದೇ ಇಲ್ಲ ಎಂದು ಬ್ರಹ್ಮನ ಮಗನಾದ ನಾರದನು ಹೇಳಿದ್ದಾನೆ.

೨೦೮. ಎಲ್ಲಾ ಕುಂಡಗಳಲ್ಲಿಯೂ ಸ್ನಾನಮಾಡಿದರೆ, ಮನುಷ್ಯನು ಯಾವ ಫಲವನ್ನು ಹೊಂದುವನೋ ಆ ಫಲವೆಲ್ಲವನ್ನೂ ಜ್ಯೇಷ್ಠ ಕುಂಡದಲ್ಲಿ ಸ್ನಾನ ಮಾಡುವುದರಿಂದಲೇ ಹೊಂದುತ್ತಾನೆ.

೨೦೯. ಯಾವನು ಇಲ್ಲಿ ತೀರ್ಥಕ್ಷೇತ್ರವನ್ನು ಹೊಂದಿ ಪ್ರಾಣವನ್ನು ಬಿಡುವನೋ, ಈ ಮೂರರಿಂದ ಅವನಿಗೆ ಉತ್ತಮವಾದ ಗತಿಯು ಬರುತ್ತದೆ.

೨೧೦. ಸರಿಯಾದ ಕಾಲದಲ್ಲಿ ಕ್ಷೇತ್ರಗಳಲ್ಲಿ ಸ್ನಾನಮಾಡಿ ಬ್ರಾಹ್ಮಣನಿಗೆ ದಾನಮಾಡಿದರೆ ಬಹು ಸುಖವನ್ನು ಹೊಂದುತ್ತಾನೆ.

**ಕಾರ್ತಿಕೇ ಮಾಸಿ ಶುಕ್ಲೇ ಚ ವೈಶಾಖೇ ಶಶಿಭೂಷಣೇ ।**
**ಚಂದ್ರಸೂರ್ಯೋಽಪರಾಗೇ ಚ ಕಾಲೇ ತು ಕುರುಜಾಂಗಲೇ ॥ ೨೧೧ ॥**

**ಕ್ಷೇತ್ರೇಷ್ವೇತೇಷು ತೀರ್ಥಾನಿ ಯಾನ್ಯುಕ್ತಾನಿ ಮುನೀಶ್ವರೈಃ ।**
**ತೇಷಾಂ ಪುಣ್ಯತಮಂ ತೀರ್ಥಮಿದಮಾಹ ಪಿತಾಮಹಃ ॥ ೨೧೨ ॥**

**ಕುಂಡೇ ತು ಮಧ್ಯಮೇ ಸ್ನಾತ್ವಾ ಕಾರ್ತಿಕ್ಯಾಂ ಯಃ ಪುಮಾನ್ದ್ವಿಜೇ ।**
**ಪ್ರಯಚ್ಛತೇ ಚಾಪಿ ದ್ರವ್ಯಂ ಸೋಽಶ್ವಮೇಧಮವಾಪ್ನುಯಾತ್ ॥ ೨೧೩ ॥**

**ಏವಂ ಕನೀಯಸ್ಯಪ್ಯೇವ ಕುಂಡೇ ಸ್ನಾತ್ವಾ ಸಮಾಧಿನಾ ।**
**ಯಃ ಪ್ರಯಚ್ಛತಿ ವಿಪ್ರಾಯ ಸುರೂಪಾಮಪಿ ಶಾಲಿಕಾಂ ॥ ೨೧೪ ॥**

**ಸ ಪ್ರಯಾತಿ ನರಃ ಕ್ಷಿಪ್ರಮಗ್ನಿಲೋಕಂ ಮನೋರಮಂ ।**
**ತ್ರಿಃಸಪ್ತಕುಲಸಂಯುಕ್ತೋ ಭುಂಕ್ತೇ ತತ್ರ ಮಹಾಫಲಂ ॥ ೨೧೫ ॥**

**ತಸ್ಮಾತ್ಸರ್ವಪ್ರಯತ್ನೇನ ಗಮನಾಯ ಮತಿಃ ಸ್ಥಿರಾ ।**
**ಪುರುಷೇಣ ತು ಕರ್ತವ್ಯಾ ಪುಷ್ಕರಾವಾಪ್ತಯೇ ಸದಾ ॥ ೨೧೬ ॥**

---

೨೧೧-೨೧೨. ಕಾರ್ತಿಕಮಾಸದ ವೈಶಾಖ ಶುದ್ಧ ಪೂರ್ಣಿಮೆ, ಸೂರ್ಯ, ಚಂದ್ರ, ಗ್ರಹಣಗಳು ಈ ಕಾಲದಲ್ಲಿ ಕುರುಜಾಂಗಲದಲ್ಲಿ ಎಷ್ಟು ತೀರ್ಥಗಳನ್ನು ಹೇಳಿದ್ದೇವೆಯೋ, ಮುನಿಗಳು ಹೇಳುತ್ತಾರೆಯೋ ಅವುಗಳಿಗೆಲ್ಲಾ ಇದೇ ಶ್ರೇಷ್ಠವೆಂದು ಬ್ರಹ್ಮನು ಹೇಳಿದ್ದಾನೆ.

೨೧೩. ಕಾರ್ತಿಕಮಾಸದಲ್ಲಿ ಮಧ್ಯಕುಂಡದಲ್ಲಿ ಸ್ನಾನಮಾಡಿ, ದಾನಮಾಡಿದರೆ ಅವನು ಅಶ್ವಮೇಧ ಫಲವನ್ನು ಹೊಂದುತ್ತಾನೆ.

೨೧೪-೨೧೫. ಈರೀತಿ ಕನೀಯ ಕುಂಡದಲ್ಲಿ ಏಕಾಗ್ರತೆಯಿಂದ ಸ್ನಾನಮಾಡಿ ಒಳ್ಳೆಯ ಅಕ್ಕಿಯನ್ನು ದಾನಮಾಡಿದರೆ ಅವನು ಶೀಘ್ರವಾಗಿ ಅಗ್ನಿಲೋಕವನ್ನು ಹೊಂದುತ್ತಾನೆ. ಮತ್ತು ಇಪ್ಪತ್ತೊಂದು ಕುಲಗಳೊಡನೆ ಫಲವನ್ನು ಅನುಭವಿಸುತ್ತಾರೆ.

೨೧೬. ಆದ್ದರಿಂದ ಪುಷ್ಕರಕ್ಕೆ ಹೋಗಲು ಮನುಷ್ಯನು ಸ್ಥಿರವಾದ ಬುದ್ಧಿಯನ್ನು ಹೊಂದಬೇಕು.

ಪುಷ್ಕರಾರಣ್ಯಮಾಸಾದ್ಯ ಪ್ರಾಚೀ ಯತ್ರ ಸರಸ್ವತೀ ।
ಮತಿಃ ಸ್ಮೃತಿಸ್ತಥಾ ಪ್ರಜ್ಞಾ ಮೇಧಾ ಬುದ್ಧಿರ್ಗಿರಾ ಶುಭಾ ॥ ೨೧೭ ॥

ಸರಸ್ವತ್ಯಾಃ ಸುಪರ್ಯಾಯಾಃ ಷಡೇತೇ ಸಂಪ್ರಕೀರ್ತಿತಾಃ ।
ತತಃ ಪ್ರಭೃತಿ ಯತ್ರಾಸೌ ಪ್ರಾಚೀಭೂತಾ ಸರಸ್ವತೀ ॥ ೨೧೮ ॥

ತತ್ರಸ್ಥಂ ತಜ್ಜಲಂ ಯೇಽಪಿ ಪಶ್ಯಂತಿ ತಟಸಂಸ್ಥಿತಾಃ ।
ತೇಽಪ್ಯಶ್ವಮೇಧಸ್ಯ ಫಲಂ ಲಭಂತೇ ನಾತ್ರ ಸಂಶಯಃ ॥ ೨೧೯ ॥

ಯೋಽವತೀರ್ಯ ಪುನಸ್ತತ್ರ ಕಶ್ಚಿತ್ಸ್ನಾನಂ ಸಮಾಚರೇತ್ ।
ನರಃ ಸಮಾಧಿಯುಕ್ತಾತ್ಮಾ ಬ್ರಧ್ನಸ್ಯಾನುಚರೋ ಭವೇತ್ ॥ ೨೨೦ ॥

ಶಾಕಾದಿನಾಽಪಿ ಹಿ ಪಿತ್ರ್ಯಾನ್ಯಸ್ತತ್ರಾರ್ಚಯತೇ ನರಃ ।
ಸೋಽಭ್ಯೇತಿ ವಿಪುಲಾನ್ಭೋಗಾಂಸ್ತೇಷಾಮೇವಾನುಭಾವತಃ ॥ ೨೨೧ ॥

ಯೇ ಪುನರ್ವಿಧಿನಾ ತತ್ರ ಶ್ರಾದ್ಧಂ ಕುರ್ವಂತಿ ಮಾನವಾಃ ।
ತೇ ನಯಂತಿ ಪಿತ್ರ್ಯಾನ್ಸ್ವರ್ಗಂ ನರಕಾದಪಿ ದುಃಖದಾತ್ ॥ ೨೨೨ ॥

---

೨೧೭. ಪುಷ್ಕರಾರಣ್ಯದಲ್ಲಿ ಪೂರ್ವದಿಕ್ಕಿನಲ್ಲಿ ಸರಸ್ವತಿಯಲ್ಲಿ ಸ್ನಾನಮಾಡಿದರೆ ಮತಿ, ಸ್ಮೃತಿ, ಪ್ರಜ್ಞೆ, ಮೇಧೆ, ಬುದ್ಧಿ ಮಾತು ಇವೆಲ್ಲವೂ ಸಿದ್ಧಿಸುತ್ತವೆ ಈ ಆರೂ ಸರಸ್ವತಿಯ ಅಂಗಗಳು ಎಂದು ಹೇಳಲ್ಪಟ್ಟಿವೆ.

೨೧೮-೨೧೯. ಅದು ಮೊದಲು ಸರಸ್ವತಿಯು ಪೂರ್ವದಿಕ್ಕಿನಲ್ಲಿರುವಳು. ಅದರ ದಡದಲ್ಲಿದ್ದುಕೊಂಡು ಅದರ ನೀರನ್ನು ನೋಡಿದವರು ಅಶ್ವಮೇಧ ಫಲವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ.

೨೨೦. ಯಾವನು ಇಲ್ಲಿಳಿದು ಏಕಾಗ್ರಮನಸ್ಸಿನಿಂದ ಸ್ನಾನಮಾಡುತ್ತಾನೆಯೋ, ಅವನು ಸೂರ್ಯನನ್ನು ಅನುಸರಿಸಿ ಸೂರ್ಯಲೋಕವನ್ನು ಹೊಂದುತ್ತಾನೆ.

೨೨೧. ಅಲ್ಲಿ ಶಾಕಾದಿಗಳಿಂದಾದರೂ ಯಾವನು ಪಿತೃಗಳನ್ನು ತೃಪ್ತಿಪಡಿಸುತ್ತಾನೆಯೋ, ಅವನು ಆ ಪಿತೃಗಳ ಆಶೀರ್ವಾದದಿಂದ ಉತ್ತಮವಾದ ಲೋಕವನ್ನು ಹೊಂದುತ್ತಾನೆ.

೨೨೨. ಯಾರು ಅಲ್ಲಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡುತ್ತಾರೆಯೋ. ಅವರು ಪಿತೃಗಳನ್ನು ದುಃಖವನ್ನುಂಟುಮಾಡುವ ನರಕದಿಂದ ಕಾಪಾಡುತ್ತಾರೆ.

**ನೃತ್ಯಂತಿ ಪಿತರಸ್ತಸ್ಯ ಯಸ್ತತ್ರ ಕುಶಮಿಶ್ರಿತಂ ।**
**ಸ್ನಾತ್ವಾ ಪ್ರಯಚ್ಛತೇ ತೋಯಂ ಪೂತಂ ತೇಷಾಂ ತಿಲಾನ್ವಿತಂ ॥ ೩೨೩ ॥**

**ತೇಽಪಿ ತುಷ್ಟಾಃ ಪುನಸ್ತಸ್ಯ ಪ್ರಯಚ್ಛಂತ್ಯಮಿತಂ ಫಲಂ ।**
**ಸರ್ವೇಷಾಮೇವ ತೀರ್ಥಾನಾಮಿದಮೇವಾಧಿಕಂ ಸ್ಮೃತಂ ॥ ೨೨೪ ॥**

**ಆದಿತೀರ್ಥಮಿದಂ ತಸ್ಮಾತ್ತೀರ್ಥಾನಾಂ ಭುವಿ ವಿಶ್ರುತಂ ।**
**ಧರ್ಮಾಪವರ್ಗಯೋಃ ಕ್ರೀಡಾನಿಧಿಭೂತಮುಪಸ್ಥಿತಂ ॥ ೨೨೫ ॥**

**ಸರಸ್ವತ್ಯಾ ಪುನಶ್ಚೈವ ಸಮೇತಂ ಗುಣವತ್ತರಂ ।**
**ಧರ್ಮಾರ್ಥಕಾಮಮೋಕ್ಷಾಣಾಂ ಚತುರ್ಣಾಮಪಿ ದಾಯಕಂ ॥ ೨೨೬ ॥**

**ಯೋಽಪ್ಯತ್ರ ಮಲನಾಶಾಯ ಪುಮಾಂಸೋ ವಿವಿಶುರ್ಜಲಂ ।**
**ಗೋಪ್ರದಾನಸಮಂ ತೇಷಾಂ ಸುಖೇನೈವ ಫಲಂ ಭವೇತ್ ॥ ೨೨೭ ॥**

---

೨೨೩. ಯಾವನು ಅಲ್ಲಿ ದರ್ಭೆಯಿಂದ ಕೂಡಿದ ನೀರನ್ನು ಕೊಡುತ್ತಾನೆಯೋ ಅವನ ವಂಶವೆಲ್ಲವೂ ಪಾವನವಾಗುತ್ತದೆ. ಅವನ ಪಿತೃಗಳು ಕುಣಿಯುತ್ತಾರೆ.

೨೨೪. ಆ ಪಿತೃಗಳು ಸಂತೋಷಗೊಂಡು ಅವನಿಗೆ ಬಹುವಾದ ಫಲವನ್ನು ಕೊಡುತ್ತಾರೆ. ಎಲ್ಲಾ ತೀರ್ಥಕ್ಕಿಂತಲೂ ಈ ತೀರ್ಥವೇ ಉತ್ತಮವಾದುದು, ದೊಡ್ಡದು.

೨೨೫. ಆದ್ದರಿಂದಲೇ ಇದನ್ನು ಆ ತೀರ್ಥಗಳಿಗೆಲ್ಲಾ ಮೊದಲನೆಯ ತೀರ್ಥವೆಂದು ಹೇಳಿದ್ದಾರೆ. ಧರ್ಮಗಳಿಗೆ ನಿಧಿಯ ರೂಪವಾದುದು.

೨೨೬. ಸರಸ್ವತಿಯ ಗುಣವನ್ನಾದರೂ ಕೂಡಿಸಿ, ಹೀಗೆಂದು ಹೇಳಬಹುದು. ಧರ್ಮಾರ್ಥ, ಕಾಮ, ಮೋಕ್ಷಗಳು, ನಾಲ್ಕನ್ನೂ ಕೊಡುತ್ತದೆ.

೨೨೭. ಈ ನದಿಯಲ್ಲಿ ಕೊಳೆಯನ್ನು ಕಳೆದುಕೊಳ್ಳಲು, ಯಾವನಾದರೂ ಸ್ನಾನಕ್ಕೆ ಇಳಿದರೂ ಕೂಡ ಆ ಸ್ನಾನದಿಂದ ಆತನಿಗೆ ಗೋದಾನಮಾಡಿದ ಪುಣ್ಯವು ಸುಖವಾಗಿ ಬರುತ್ತದೆ.

ಸುವರ್ಣದಾನೇನ ಸಮಮೇವಮಾಹುರ್ಮನೀಷಿಣಃ ।
ತರ್ಪಣಾತ್ಪಿಂಡದಾನಾಚ್ಚ ನರಕೇಷ್ವಪಿ ಸಂಸ್ಥಿತಾಃ ॥ ೨೨೮ ॥

ಸ್ವರ್ಗಂ ಪ್ರಯಾಂತಿ ಪಿತರಸ್ತತ್ರ ಪುತ್ರೇಣ ತಾರಿತಾಃ ।
ಪುಷ್ಕರೇಽಪಿ ಸರಸ್ವತ್ಯಾಂ ಯೇ ಪಿಬಂತಿ ಜಲಂ ಜನಾಃ ॥ ೨೨೯ ॥

ತೇ ಲಭಂತ್ಯಕ್ಷಯಾಂಲ್ಲೋಕಾನ್ಬ್ರಹ್ಮವಿಶ್ವೇಶಶಬ್ದಿತಾನ್ ।
ಸ್ವರ್ಗನಿಶ್ರೇಣಿಕಾ ಭೂತಾ ಪುಷ್ಕರೇ ಚ ಸರಸ್ವತೀ ॥ ೨೩೦ ॥

ಸಾ ಪುಣ್ಯವದ್ಭಿಃ ಸಂಪ್ರಾಪ್ತುಂ ಪುಂಭಿಃ ಶಕ್ಯಾ ಮಹಾನದೀ ।
ಮುನಿಭಿರ್ಧರ್ಮತತ್ತ್ವಜ್ಞೈರ್ಯತ್ರ ಯತ್ರ ನಿಷೇವಿತಾ ॥ ೨೩೧ ॥

ತಸ್ಮಾತ್ಸರ್ವತ್ರ ಸಾ ದೇವೀ ಪವಿತ್ರಾ ಸರ್ವತಃ ಸ್ಥಿತಾ ।
ಪುಷ್ಕರೇ ತು ವಿಶೇಷೇಣ ಪೂತಾತ್ಪೂತತಮಾ ಹಿ ಸಾ ॥ ೨೩೨ ॥

ನದೀ ಸರಸ್ವತೀ ಪುಣ್ಯಾ ಸುಲಭಾ ಜಗತಿ ಸ್ಥಿತಾ ।
ದುರ್ಲಭಾ ಸಾ ಕುರುಕ್ಷೇತ್ರೇ ಪ್ರಭಾಸೇ ಪುಷ್ಕರೇ ತಥಾ ॥ ೨೩೩ ॥

---

೨೨೮. ತರ್ಪಣವನ್ನು ಮಾಡಿದರೆ, ಸುವರ್ಣದಾನಕ್ಕೆ ಸಮವಾಗುತ್ತದೆ. ಪಿಂಡದಾನಮಾಡಿದರೆ ನರಕದಲ್ಲಿರುವವರೆಲ್ಲರನ್ನೂ ಆ ಮಗನು ಸ್ವರ್ಗಕ್ಕೆ ಕಳುಹಿಸುತ್ತಾನೆ.

೨೨೯-೨೩೦. ಪುಷ್ಕರದಲ್ಲಿರುವ ಸರಸ್ವತಿಯಲ್ಲಿ ಜನರು ಕುಡಿದರೆ, ಬ್ರಹ್ಮಲೋಕ, ವಿಶ್ವೇಶ್ವರಲೋಕಗಳನ್ನು ಹೊಂದುತ್ತಾರೆ.

೨೩೧. ಆ ನದಿಯು ಮುನಿಗಳು ಸೇವಿಸಿದ ಭಾಗದಲ್ಲಿ ಇತರರು ಸೇವಿಸಬೇಕಾದರೆ ಪುಣ್ಯವನ್ನು ಮಾಡಿದ್ದರೇನೇ ಹೊಂದಲು ಸಾಧ್ಯ.

೨೩೨. ಆದ್ದರಿಂದ ಆ ಸರಸ್ವತಿಯು ಎಲ್ಲಾ ಕಡೆಯಲ್ಲಿಯೂ ಪ್ರಶಸ್ತಳೇ. ಪುಷ್ಕರದಲ್ಲಿ ಅತಿಶಯವಾಗಿ ಪವಿತ್ರಕ್ಕಿಂತಲೂ ಪವಿತ್ರಳಾಗಿರುವಳು.

೨೩೩-೨೩೪. ಪುಣ್ಯವಾದ ಸರಸ್ವತೀ ನದಿಯು ಎಲ್ಲಾ ಕಡೆಯಲ್ಲಿಯೂ ಸುಲಭವಾಗಿ ಸಿಕ್ಕುತ್ತದೆ. ಆ ನದಿಯು ಕುರುಕ್ಷೇತ್ರ, ಪ್ರಭಾಸ, ಪುಷ್ಕರಗಳಲ್ಲಿ,

**ತತ್ತೀರ್ಥಂ ಸರ್ವತೀರ್ಥಾನಾಂ ಪ್ರವರಂ ನಿಹಿತಂ ಭುವಿ ।**
**ಧರ್ಮಾರ್ಥಕಾಮಮೋಕ್ಷಾಣಾಂ ಚತುರ್ಣಾಮಪಿ ಸಾಧಕಂ ॥ ೨೩೪ ॥**

**ಪ್ರಾಚೀಂ ಸರಸ್ವತೀಂ ಪ್ರಾಪ್ಯ ಯೋಽನ್ಯತ್ತೀರ್ಥಂ ಹಿಮಾಗತೇ ।**
**ಸ ಕರಸ್ಥಂ ಸಮುತ್ಸೃಜ್ಯ ಅಮೃತಂ ವಿಷಮಿಚ್ಛತಿ ॥ ೨೩೫ ॥**

**ಜ್ಯೇಷ್ಠೇ ಜ್ಯೇಷ್ಠಾ ಪ್ರಯಾಗಸ್ಯ ಮಧ್ಯಮೇ ಮಧ್ಯಮಾ ಸ್ಮೃತಾ ।**
**ಪ್ರದಕ್ಷಿಣಂ ತತೋ ಗಚ್ಛೇತ್ಕನೀಯಾಂಸಂ ವಿಚಕ್ಷಣಃ ॥ ೨೩೬ ॥**

**ತ್ರಿಷ್ವಪ್ಯೇತೇಷು ಸ್ನಾಯೀತ ಕುರ್ಯಾಚ್ಚಾಪಿ ಪ್ರದಕ್ಷಿಣಂ ।**
**ಯತ್ನವಾನ್ಪ್ರಯತೋ ನಿತ್ಯಂ ತತಃ ಪಶ್ಯೇತ್ಪಿತಾಮಹಂ ॥ ೨೩೭ ॥**

**ಅನುಲೋಮವಿಲೋಮಾಭ್ಯಾಂ ತಥಾ ವ್ಯಸ್ತಸಮಸ್ತಯೋಃ ।**
**ಸ್ನಾತವ್ಯಂ ಪುಷ್ಕರೇ ನಿತ್ಯಂ ಬ್ರಹ್ಮಲೋಕಮಭೀಪ್ಸತಾ ॥ ೨೩೮ ॥**

---

ದುರ್ಲಭವು. ಆ ತೀರ್ಥವು ಎಲ್ಲಾ ತೀರ್ಥಗಳಲ್ಲಿಯೂ ಭೂಮಿಯಲ್ಲಿ ಉತ್ಕೃಷ್ಟವೆಂದು ಹೇಳಲ್ಪಟ್ಟಿದೆ. ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕಕ್ಕೂ ಸಾಧಕವಾಗಿದೆ.

೨೩೫. ಪೂರ್ವದಿಕ್ಕಿನ ಸರಸ್ವತಿಯನ್ನು ಹೊಂದಿದರೂ, ಬೇರೇ ತೀರ್ಥಕ್ಕೆ ಹೋಗಬೇಕೆಂದು ಅಪೇಕ್ಷಿಸುವವನು ಕೈಯ್ಯಲ್ಲಿರುವ ಅಮೃತವನ್ನು ಬಿಟ್ಟು ವಿಷವನ್ನು ಅಪೇಕ್ಷಿಸುವಂತೆ ಆಗುತ್ತದೆ.

೨೩೬. ಪ್ರಯಾಗದ ಮೊದಲಲ್ಲಿ ಈ ನದಿಯು ಉತ್ತಮವಾದುದು. ಮಧ್ಯದಲ್ಲಿ ಮಧ್ಯಮವಾದುದು. ಕೊನೆಯಲ್ಲಿ ಚಿಕ್ಕದು. ಆದ್ದರಿಂದ ಈ ನದಿಯನ್ನು ಮನುಜನು ದಕ್ಷಿಣಾಕಾರವಾಗಿ ಹೊಂದಬೇಕು.

೨೩೭. ಪ್ರದಕ್ಷಿಣಾಕಾರವಾಗಿ ಹೊರಟು ಈ ಮೂರರಲ್ಲಿಯೂ ಸ್ನಾನಮಾಡಬೇಕು. ಪ್ರಯತ್ನಪಟ್ಟು ಇವುಗಳಲ್ಲಿ ಸ್ನಾನಮಾಡುತ್ತ ಅಲ್ಲಿರುವ ಬ್ರಹ್ಮನ ದರ್ಶನವನ್ನು ಮಾಡಬೇಕು.

೨೩೮. ಮೇಲುಗಡೆಯಿಂದಲೂ ತಳಗಡೆಯಿಂದಲೂ ಅನಂತರ ವ್ಯತ್ಯಾಸವಾಗಿಯೂ ಪುಷ್ಕರದಲ್ಲಿ ಸ್ನಾನಮಾಡಿದರೆ ಬ್ರಹ್ಮನ ಲೋಕವು ಪ್ರಾಪ್ತಿಯಾಗುತ್ತದೆ.

**ತ್ರೀಣಿ ಶೃಂಗಾಣಿ ಶುಭ್ರಾಣಿ ತ್ರೀಣಿ ಪ್ರಸ್ರವಣಾನಿ ಚ ।**
**ಪುಷ್ಕರಾಖ್ಯಾನಿ ಸಿದ್ಧಾನಿ ನ ವಿದ್ಮಸ್ತತ್ರ ಕಾರಣಂ ॥ ೨೩೯ ॥**

**ಕನೀಯಾಂಸಂ ಮಧ್ಯಮಂ ಚ ತೃತೀಯಂ ಜ್ಯೇಷ್ಠಪುಷ್ಕರಂ ।**
**ಶೃಂಗಶಬ್ದಾಭಿಧಾನಾನಿ ಶುಭ್ರಪ್ರಸ್ರವಣಾನಿ ಚ ॥ ೨೪೦ ॥**

**ಧರ್ಮಾರ್ಥಕಾಮಮೋಕ್ಷಾಣಾಂ ಸಂಕಲ್ಪೈರಫಲಂ ನರಃ ।**
**ಯಸ್ತತ್ರ ಸಂತ್ಯಜೇದ್ದೇಹಂ ಮೋಕ್ಷಂ ಯಾತಿ ನ ಸಂಶಯಃ ॥ ೨೪೧ ॥**

**ಪ್ರಯತಃ ಸಂಯುತಸ್ತಸ್ಯಾಂ ಸ್ನಾತ್ವಾ ದದ್ಯಾದ್ದ್ವಿಜೇ ಶುಭಾಂ ।**
**ಗಾಮೇಕಾಂ ಶಾಸ್ತ್ರಪೂತಾತ್ಮಾ ಲೋಕಾಂಶ್ಚಾಪ್ನೋತಿ ಸೋಽಕ್ಷಯಾನ್ ॥ ೨೪೨ ॥**

**ಕಿಮತ್ರ ಬಹುನೋಕ್ತೇನ ರಾತ್ರಾವಪಿ ಹಿ ಯೋಽರ್ಥಿನೇ ।**
**ಅರ್ಥಂ ಪ್ರಯಚ್ಛತೇ ಸ್ನಾತ್ವಾ ಸೋಽನಂತಸುಖಭಾಗ್ಭವೇತ್ ॥ ೨೪೩ ॥**

---

೨೩೯. ಆ ನದಿಗಳು ಹೊರಡುವ ಮೂರು ಎತ್ತರ ಪ್ರದೇಶಗಳೂ, ಮೂರು ನದಿಗಳೂ, ಶುಭ್ರವಾದುವು. ಇವೆಲ್ಲವೂ ಪುಷ್ಕರದಲ್ಲಿ ಸಿದ್ಧದಾಯಕಗಳು. ಅದಕ್ಕೆ ಕಾರಣವು ಗೊತ್ತಿಲ್ಲ.

೨೪೦. ಕನೀಯಾಂಸ, ಮಧ್ಯಮ, ಮೊದಲನೆಯದಾದ ಜ್ಯೇಷ್ಠಪುಷ್ಕರ ಇವುಗಳಿಗೆ ಶೃಂಗಗಳೆಂದು ಹೆಸರು. ಇವು ಶುಭ್ರವಾಗಿರುವ ನದಿಗಳು.

೨೪೧. ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು, ಮನಸ್ಸಿನಲ್ಲಿಟ್ಟುಕೊಂಡು ಯಾರು ಅಲ್ಲಿ ಸ್ನಾನಮಾಡುತ್ತಾರೋ, ಅದೇರೀತಿಯಲ್ಲಿ ದೇಹತ್ಯಾಗಮಾಡುತ್ತಾರೋ ಅವರು ಮೋಕ್ಷವನ್ನು ಹೊಂದುತ್ತಾರೆ. ಸಂಶಯವೇ ಇಲ್ಲ.

೨೪೨. ನಿಯಮದಿಂದ ಅದರಲ್ಲಿ ಸ್ನಾನಮಾಡಿ, ಬ್ರಾಹ್ಮಣನಿಗೆ ಗೋದಾನವನ್ನು ಮಾಡಿದರೆ, ಅವನಿಗೆ ಅಕ್ಷಯವಾದ ಲೋಕಗಳು ಲಭಿಸುತ್ತವೆ.

೨೪೩. ಬಹಳ ಹೇಳಿದುದರಿಂದೇನು? ರಾತ್ರಿಯಲ್ಲಿಯೂ ಕೂಡ ಅರ್ಥಿಗೆ ಸ್ನಾನವನ್ನು ಮಾಡಿ ದಾನವನ್ನು ಮಾಡಿದರೆ ಅನಂತವಾದ ಫಲವು ಬರುತ್ತವೆ.

ತತ್ರ ದಾನಂ ಪ್ರಶಂಸಂತಿ ತಿಲಾನಾಂ ಮುನಿಸತ್ತಮಾಃ ।
ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾನಂ ಚ ವಿಹಿತಂ ಸದಾ ॥ ೨೪೪ ॥

ಪಿಣ್ಯಾಕೇನ ಗುಡೇನಾಪಿ ಪಿಂಡಂ ತತ್ರ ಪ್ರಯಚ್ಛತಿ ।
ಪಿತ್ರೂಣಾಂ ಪ್ರಯತೋ ಭೂತ್ವಾ ಪಿತೃಲೋಕಂ ಚ ಗಚ್ಛತಿ ॥ ೨೪೫ ॥

ಪುಷ್ಕರಾರಣ್ಯಮಾಸಾದ್ಯ ಪುನಸ್ತಸ್ಮಾತ್ಸರಸ್ವತೀ ।
ಅಂತರ್ಧಾನಂ ಸ್ಥಿತಾ ಗಂತುಂ ಪ್ರವೃತ್ತಾ ಪಶ್ಚಿಮಾಮುಖೀ ॥ ೨೪೬ ॥

ನಾತಿದೂರೇ ತತಸ್ತಸ್ಯ ಪುಷ್ಕರಸ್ಯ ಸುಶೋಭನಾ ।
ಖರ್ಜೂರೀವನಮಾಸಾದ್ಯ ಫಲಪುಷ್ಪೋಪಶೋಭಿತಂ ॥ ೨೪೭ ॥

ತತ್ರೋದ್ಭಿನ್ನಾ ಪುನರ್ದೇವೀ ವನೇ ಮುನಿಮನೋರಮೇ ।
ಸರ್ವತ್ರ ಕುಸುಮೋಪೇತೇ ಸಿದ್ಧಚಾರಣಸೇವಿತೇ ॥ ೨೪೮ ॥

ನಂದಾ ನಾಮ ಸರಿಚ್ಛ್ರೇಷ್ಠಾ ತ್ರಿಷು ಲೋಕೇಷು ವಿಶ್ರುತಾ ।
ಮೀನನಕ್ರಝಷೋಪೇತಾ ವಿಮಲೋದಕಮಂಡಿತಾ ॥ ೨೪೯ ॥

---

೨೪೪. ಅಲ್ಲಿ ತಿಲ, (ಎಳ್ಳು) ದಾನವು, ಬಹು ಉತ್ತಮವೆಂದು ಹೇಳುತ್ತಾರೆ. ಅಲ್ಲಿ ಕೃಷ್ಣಪಕ್ಷದ ಚತುರ್ದಶಿಯ ದಿನ ಸ್ನಾನವು ಯೋಗ್ಯವೆಂದು ಹೇಳಲ್ಪಟ್ಟಿದೆ.

೨೪೫. ಅಲ್ಲಿ ಚಿಗುಳಿಯನ್ನು ಮಾಡಿ ಪಿಂಡವನ್ನು ಕೊಟ್ಟರೆ ಅವನು ಪಿತೃಲೋಕವನ್ನು ಹೊಂದುತ್ತಾನೆ.

೨೪೬. ಆ ಸರಸ್ವತಿಯು ಪುಷ್ಕರಾರಣ್ಯಕ್ಕೆ ಹೋಗಿ ಅಲ್ಲಿ ಅಂತರ್ಧಾನಳಾಗಿ (ಕಾಣದಂತೆ) ಪಶ್ಚಿಮಮುಖಕ್ಕೆ ಹೋಗುತ್ತಾಳೆ.

೨೪೭-೨೪೮. ಪುಷ್ಕರಕ್ಕೆ ಸ್ವಲ್ಪ ದೂರದಲ್ಲಿ ಫಲ, ಪುಷ್ಪಗಳಿಂದ ಕೂಡಿದ ಒಂದು ಖರ್ಜೂರೀ ವನವಿದೆ. ಅಲ್ಲಿ ಮುನಿಗಳೂ ಇರುವರು. ಹೂವೂ, ಹಣ್ಣುಗಳೂ ಬಹಳವಾಗಿವೆ. ಅಲ್ಲಿ ಸಿದ್ಧರೂ, ಚಾರಣರೂ ಇರುವರು. ಅಲ್ಲಿ ಆ ನದಿಯು ಮತ್ತೆ ಮೇಲಕ್ಕೆದ್ದು ಕಾಣುತ್ತದೆ.

೨೪೯. ಅದಕ್ಕೆ ನಂದೆ ಎಂದು ಹೆಸರು. ಅದು ಮೂರು ಲೋಕದಲ್ಲಿ ಪ್ರಸಿದ್ಧವಾಗಿ ಉತ್ತಮ ನದಿಯಾಗಿ ಮಿಾನು, ಮೊಸಳೆ, ದೊಡ್ಡ ಮಿಾನುಗಳುಳ್ಳದ್ದಾಗಿ ಒಳ್ಳೆಯ ನೀರಿನಿಂದ ಕೂಡಿರುವುದು.

॥ ಸೂತ ಉವಾಚ ॥

ಅಥ ದೇವವ್ರತಃ ಪ್ರಾಹ ಕಿಮನ್ಯಾ ಸಾ ಸರಿದ್ವರಾ ।
ಏತನ್ಮೇ ಕೌತುಕಂ ಬ್ರಹ್ಮನ್ನಂದಾಶಬ್ದಾ ಸರಸ್ವತೀ ॥ ೨೫೦ ॥

ಯಥಾ ಭೂತಾ ಯೇನ ಕೃತಾ ಕಾರಣೇನ ಸರಿದ್ವರಾ ।
ಏವಮುಕ್ತೇ ಪುಲಸ್ತ್ಯೋಽಸೌ ಭೀಷ್ಮಾಯೈತತ್ಪುರಾತನಂ ॥ ೨೫೧ ॥

ಆಖ್ಯಾತುಮುಪಚಕ್ರಾಮ ನಂದಾ ನಾಮೇತಿ ಯತ್ಸ್ಮೃತಂ ।
ಕ್ಷತ್ರವ್ರತಧರೋ ನಿತ್ಯಮಾಸೀದ್ರಾಜಾ ಪ್ರಭಂಜನಃ ॥ ೨೫೨ ॥

ಪ್ರವೃತ್ತೋಽಸೌ ಮೃಗಾನ್ಹಂತುಂ ವನೇ ತಸ್ಮಿನ್ಮಹಾಬಲಃ ।
ಸ ದದರ್ಶ ತತಸ್ತಸ್ಮಿನ್ಮೃಗೀಂ ಗುಲ್ಮಾಂತರೇ ಸ್ಥಿತಾಂ ॥ ೨೫೩ ॥

ಮಾರ್ಗಣೇನ ಸುತೀಕ್ಷ್ಣೇನ ತಾಂ ವಿವ್ಯಾಧ ಪುರೋಗತಾಂ ।
ಸಾ ವಿಲೋಕ್ಯ ದಿಶಃ ಸರ್ವಾಸ್ತಂ ದೃಷ್ಟ್ವಾ ಶರಪಾಣಿನಂ ॥ ೨೫೪ ॥

---

೨೫೦-೨೫೧. ಸೂತನು ಹೇಳಿದನು:—ಅನಂತರ ಭೀಷ್ಮನು ಆ ನದಿಯು ಬೇರೆಯೇ? ನಂದಾಶಬ್ದವನ್ನು ಸರಸ್ವತಿಯು ಏಕೆ ಹೊಂದಿದಳು? ನನಗೆ ಆಶ್ಚರ್ಯ ವಾಗಿದೆ. ಅದು ಹೇಗೆ ಆಯಿತು? ಕಾರಣವೇನು? ಎಂಬುದನ್ನು ತಿಳಿಸೆನಲು, ಪುಲಸ್ತ್ಯನು ಭೀಷ್ಮನಿಗೆ ಪೂರ್ವದ ಕಥೆಯನ್ನು ಹೇಳಲು ಉಪಕ್ರಮಿಸಿ, ಇದಕ್ಕೆ ನಂದೆ ಎಂದು ಹೆಸರು ಬರಲು ಕಾರಣವನ್ನು ತಿಳಿಸಿದನು.

೨೫೨-೨೫೩. ಯಾವಾಗಲೂ ಕ್ಷತ್ರಿಯಧರ್ಮದಲ್ಲಿ ನಿರತನಾದ ಪ್ರಭಂಜನ ನೆಂಬ ಒಬ್ಬ ರಾಜನಿದ್ದನು. ಮಹಾಬಲಿಷ್ಠನು. ಆತನು ಆ ಕಾಡಿನಲ್ಲಿ ಬೇಟೆಯಾಡಲು ಮೊದಲು ಮಾಡಿದನು. ಆಗ ಅವನು ಒಂದು ಹೆಣ್ಣುಜಿಂಕೆಯು ಪೊದರೆಯೊಳಗಿರು ವುದನ್ನು ನೋಡಿದನು.

೨೫೪. ಆಗ ಅದನ್ನು ಹರಿತವಾದ ಬಾಣದಿಂದ ಹೊಡೆದನು. ಆ ಜಿಂಕೆಯು ಸುತ್ತಲೂ ನೋಡಿ, ಅವನ ಕೈಯಲ್ಲಿ ಬಾಣ ಹಿಡಿದಿರುವುದನ್ನು ನೋಡಿ ಅವನನ್ನು ಕುರಿತು, ಎಲೈ ಮೂಢನೇ, ಏನು ಪಾಪಕೆಲಸವನ್ನು ನೀನು ಮಾಡಿದೆ? ಎಂದಿತು.

ಆಹ ತಂ ಕಿಂ ಕೃತಂ ಮೂಢ ತ್ವಯ್ಯೈತತ್ಕರ್ಮ ದುಷ್ಕೃತಂ ।
ಸ್ತನ್ಯಂ ಯಾವತ್ಪ್ರಯಚ್ಛಾಮಿ ಸುತಸ್ಯಾಧೋಮುಖೀ ಸ್ಥಿತಾ ॥ ೨೫೫ ॥

ತಾವತ್ತ್ವೇ ಮಾಂಸಲೋಭೇನ ವಿದ್ಧಾಹಮಕುತೋಭಯಾ ।
ಪಿಬಂತಂ ಚೈವ ಸುಪ್ತಂ ಚ ಮೂಢ ಮೈಥುನಮಾಗತಂ ॥ ೨೫೬ ॥

ಏವಂ ವಿಧಂ ಮೃಗಂ ರಾಜಾ ನ ಹನ್ಯಾತ್ಪ್ರಾಜ್ಞಯಾ ಶ್ರುತಂ ।
ಸ್ತನ್ಯಂ ತು ತನಯಸ್ಯಾಸ್ಯ ಪ್ರಯಚ್ಛಂತೀ ಹತಾ ತ್ವಯಾ ॥ ೨೫೭ ॥

ಬಾಣೇನಾಶನಿಕಲ್ಪೇನ ನಿರ್ದೋಷಾ ವನಮಧ್ಯಗಾ ।
ತಸ್ಮಾತ್ತ್ವಮಪಿ ದುರ್ಬುದ್ಧೇ ಕ್ರವ್ಯಾದತ್ವಮವಾಪ್ಸ್ಯಸಿ ॥ ೨೫೮ ॥

ವನೇಽಸ್ಮಿನ್ಕಂಟಕಾಕೀರ್ಣೇ ವ್ಯಾಘ್ರರೂಪಂ ತ್ವಮಾಪ್ನುಹಿ ।
ಶಾಪಪ್ರದಾನಂ ಶ್ರುತ್ವೇತ್ಥಂ ಸ ರಾಜಾ ಪುರತಃ ಸ್ಥಿತಃ ।
ಪ್ರೋವಾಚ ಪ್ರಾಂಜಲಿರ್ಭೂತ್ವಾ ತಾಂ ಮೃಗೀಂ ವ್ಯಥಿತೇಂದ್ರಿಯಃ
॥ ೨೫೯ ॥

---

೨೫೫. ಕೆಳಗಡೆ ನೋಡುತ್ತ ಕರುವಿಗೆ ಹಾಲು ಕೊಡುತ್ತಿರುವಾಗ ನೀನು ಮಾಂಸದ ಆಸೆಯಿಂದ ಭಯರಹಿತಳಾದ ನನ್ನನ್ನು ಹೊಡೆದಿದ್ದೀಯೆ.

೨೫೬-೨೫೭. ನೀರು ಕುಡಿಯುತ್ತಿವಾಗ, ಮಲಗಿರುವಾಗ, ಪ್ರಿಯನೊಡನೆ ಸಂಭೋಗಿಸುತ್ತಿರುವಾಗ, ಮೃಗವನ್ನು ಹೊಡೆಯಕೂಡದು ಎಂದು ಪೂರ್ವದಲ್ಲಿ ನಾನು ಕೇಳಿದ್ದೇನೆ. ಕರುವಿಗೆ ಹಾಲನ್ನು ಕೊಡುತ್ತಿರುವಾಗ ನೀನು ನನ್ನನ್ನು ಹೊಡೆದಿದ್ದೀಯೆ.

೨೫೮. ಸಿಡಿಲಿನಂತಿರುವ ಬಾಣದಿಂದ ವನದ ಮಧ್ಯದಲ್ಲಿ ದೋಷವಿಲ್ಲದ ನನ್ನನ್ನು ನೀನು ಕೊಂದೆಯಾದುದರಿಂದ ಎಲೈ ದುರ್ಬುದ್ಧಿಯೇ, ನೀನು ಮಾಂಸಹಾರಿಯಾಗುತ್ತೀಯೆ.

೨೫೯. ಮುಳ್ಳಿರುವ ಈ ಕಾಡಿನಲ್ಲಿ ನೀನು ಹುಲಿಯ ಆಕಾರವನ್ನು ಹೊಂದುತ್ತೀಯೆ ಎನ್ನಲು, ಈ ಶಾಪಕೊಟ್ಟುದನ್ನು ಎದುರಿಗಿರುವ ರಾಜನು ಕೇಳಿ, ದುಃಖಪಡುತ್ತಾ ಕೈಮುಗಿದುಕೊಂಡು ಆ ಜಿಂಕೆಗಿಂತೆದನು.

॥ ರಾಜೋವಾಚ ॥

ಸ್ತನ್ಯಂ ತು ತನಯಸ್యೇತ್ಥಂ ಪ್ರಯಚ್ಛಂತೀ ನ ಮೇ ಮತಾ ।
ಅಜ್ಞಾನೇನ ಹತಾ ಭದ್ರೇ ಪ್ರಸೀದ ಸುಸಮಾಧಿನಾ ॥ ೨೬೦ ॥

ವ್ಯಾಘ್ರರೂಪಮಹಂ ಮುಕ್ತ್ವಾ ಪ್ರಾಪ್ಸ್ಯೇ ವೈ ಮಾನುಷಂ ಕದಾ ।
ಏವಂವಿಧಸ್ಯ ಶಾಪಸ್ಯ ವಿಮೋಕ್ಷಂ ಶಂಸ ಮೇಽಧುನಾ ॥ ೨೬೧ ॥

ಏವಮುಕ್ತೇ ಮೃಗೀ ತಸ್ಯ ಪ್ರೋವಾಚ ವಚನಂ ಶುಭಾ ॥ ೨೬೨ ॥

॥ ಮೃಗ್ಯುವಾಚ ॥

ರಾಜನ್ನಬ್ದಶತಾಂತೇ ತು ಶಾಪಸ್ಯಾಗತಯಾ ಗವಾ ।
ನಂದಯಾ ಸಹ ಸಂವಾದಮಾಸಾದ್ಯಾಂತೋ ಭವಿಷ್ಯತಿ ॥ ೨೬೩ ॥

॥ ಪುಲಸ್ತ್ಯ ಉವಾಚ ॥

ಮೃಗ್ಯೋಕ್ತೈರ್ವಚನೈ ರಾಜಾ ವ್ಯಾಘ್ರ ಏವಾಭವತ್ತದಾ ।
ನಖದಂಷ್ಟ್ರಾಯುಧೋಪೇತೋ ಘೋರರೂಪೋ ವಿಭೀಷಣಃ ॥ ೨೬೪ ॥

---

೨೬೦. ರಾಜನು ಹೇಳಿದನು :—ನೀನು ಮಗನಿಗೆ ಹಾಲು ಕೊಡುತ್ತಿದ್ದು ದನ್ನು ನಾನು ತಿಳಿಯಲಿಲ್ಲ. ಅಜ್ಞಾನದಿಂದ ಹೊಡೆದೆನು. ಒಳ್ಳೆಯ ಮನಸ್ಸಿನಿಂದ ಪ್ರಸನ್ನಳಾಗು.

೨೬೧-೨೬೨. ಎಲೈ ಸುಭಗೆಯೇ, ನಾನು ವ್ಯಾಘ್ರರೂಪವನ್ನು ಬಿಟ್ಟು ಮನುಷ್ಯರೂಪವನ್ನು ಯಾವಾಗ ಹೊಂದುತ್ತೇನೆ? ಈರೀತಿಯಾದ ಶಾಪಕ್ಕೆ ನನಗೆ ಈಗ ಬಿಡುಗಡೆಯನ್ನು ಹೇಳೆಂದನು.

೨೬೩. ಮೃಗಿಯು ಹೇಳಿತು :—ಎಲೈ ರಾಜನೇ, ನೂರು ವರ್ಷಗಳಾದ ಮೇಲೆ ಇಲ್ಲಿಗೆ ಒಂದು ನಂದೆಯೆಂಬ ಹಸುವು ಬರುತ್ತದೆ. ಅದರೊಡನೆ ನೀನು ಚರ್ಚಿಸಿದಾಗ ನಿನ್ನ ಶಾಪವು ಕೊನೆಗಾಣುತ್ತದೆ.

೨೬೪. ಪುಲಸ್ತ್ಯನು ಹೇಳಿದನು :—ಮೃಗಿಯ ಶಾಪದಂತೆ ಉಗುರು, ಕೋರೆ, ಆಯುಧಗಳಿಂದ ಕೂಡಿದ ದೊಡ್ಡದಾಗಿ ಭಯಂಕರವಾದ ಹುಲಿಯಾಗಿ ಆ ರಾಜನು ಆದನು.

ತತ್ರಾಸೌ ಭಕ್ಷಯನ್ನಾಸ್ತೇ ಮೃಗಾನ್ಹತ್ವಾ ಚತುಷ್ಪದಾನ್ ।
ದ್ವಿಪದಾನಪಿ ತತ್ರಸ್ಥಾನ್ಕಾಲೇನ ಕ್ರಮಯೋಜಿತಾನ್ ॥ ೨೬೫ ॥

ಏವಂ ತತ್ರ ವನೇ ತಸ್ಯ ವತ್ಸರಾಣಾಂ ಶತಂ ಗತಂ ।
ಆತ್ಮಾನಂ ನಿಂದಮಾನಸ್ಯ ಮೃಗಮಾಂಸಾನಿ ಖಾದತಃ ॥ ೨೬೬ ॥

ಕದಾಽಹಂ ಮಾನುಷಂ ಭಾವಂ ಗಮಿಷ್ಯೇ ಪುನರೀದೃಶಂ ।
ಕುತ್ಸಿತಂ ನ ಕರಿಷ್ಯಾಮಿ ಯೋನಿಕರಣಂ ಮಹತ್ ॥ ೨೬೭ ॥

ಪಶ್ಯತಾಂ ಮಾಂಸಲೋಭೇನ ಮೃಗಯಾಂ ಪರಿಧಾವತಾಂ ।
ಆಪದಾ ಸಹಿತಂ ಪ್ರಾಪ್ತಂ ಮನುಷ್ಯಾಣಾಂ ಭಯಾವಹಂ ॥ ೨೬೮ ॥

ದರ್ಶನಂ ದುಃಖದಂ ಮನ್ಯೇ ಮೃಗಾಣಾಂ ಮಾನುಷೈಃ ಸಹ ।
ಪಾಪೇನ ಪಾಪತಾಂ ನೀತ ಆರ್ಯೋಽಪಿ ಸತತಂ ಕುಲೇ ॥ ೨೬೯ ॥

---

೨೬೫. ಅಲ್ಲಿ ಆ ಹುಲಿಯು ನಾಲ್ಕು ಕಾಲಿನ, ಎರಡು ಕಾಲಿನ, ಮೃತ್ಯುವಿಗೆ ತುತ್ತಾದ ಪ್ರಾಣಿಗಳನ್ನು ಕೊಂದು ತಿನ್ನುತ್ತಿದ್ದಿತು.

೨೬೬. ತನ್ನನ್ನು ನಿಂದಿಸಿಕೊಳ್ಳುತ್ತಿದ್ದ ಮೃಗಗಳ ಮಾಂಸವನ್ನು ತಿನ್ನುತ್ತಿರುವ ಆ ಹುಲಿಗೆ ಈರೀತಿಯಲ್ಲಿ ನೂರು ವರ್ಷಗಳು ಕಳೆದುವು.

೨೬೭-೨೬೮. ನಾನು ಮತ್ತೆ ಯಾವಾಗ ಈರೀತಿಯಾದ ಮನುಷ್ಯಜಾತಿಯನ್ನು ಹೊಂದಿಯೇನು ? ಇನ್ನುಮೇಲೆ ಬೇರೆ ಜಾತಿಗೆ ಬೀಳುವ ಕೆಟ್ಟಕೆಲಸವನ್ನು ಮಾಡುವುದೇ ಇಲ್ಲ. ಮಾಂಸದ ಆಸೆಯಿಂದ ಬೇಟೆಯಾಡುತ್ತಲಿದ್ದು ಮನುಷ್ಯರಿಗೆ ಭಯವನ್ನುಂಟುಮಾಡುವಂತಹ ಆಪತ್ತುಗಳಿಂದ ಕೂಡಿದ ಕಷ್ಟದೆಸೆಯನ್ನು ಹೊಂದಿದೆನು.

೨೬೯. ಮೃಗಗಳು ಮನುಷ್ಯರಿಂದ ಕಾಣಲ್ಪಟ್ಟರೆ ಅವುಗಳಿಗೆ ಅದು ಒಂದು ಕಷ್ಟವೇ. ನಾನು ವಂಶದಲ್ಲಿ ಯೋಗ್ಯನಾಗಿದ್ದರೂ ಪಾಪಕೆಲಸ ಮಾಡಿದುದರಿಂದ ಪಾಪಯೋನಿಯಲ್ಲಿ ಹುಟ್ಟಿರುವೆನು.

**ಉತ್ಪನ್ನೋ ವಿಕೃತಿಂ ನೀತಃ ಪಶ್ಯ ಕಾಲಸ್ಯ ಪರ್ಯಯಂ ।**
**ತಸ್ಮಾನ್ಮೇ ಸುಕೃತಂ ನಾಸ್ತಿ ಹಿಂಸಾಸ್ಯೇಕಾ ವಿಗರ್ಹಿತಾ ॥ ೨೭೦ ॥**

**ತಯಾ ತು ಪ್ರಾಪ್ಯತೇ ದುಃಖಂ ನ ಚ ಮೋಕ್ಷೋ ಭವಿಷ್ಯತಿ ।**
**ಕಥಂ ಮೇ ಭವಿತಾ ಮೋಕ್ಷಃ ಕಥಂ ಸತ್ಯಾ ಮೃಗೀ ಭವೇತ್ ॥ ೨೭೧ ॥**

**ಗತೇ ವರ್ಷಶತೇ ತಸ್ಯ ವಸತಸ್ತು ವನೇ ತದಾ ।**
**ಆಯಾತಂ ಗೋಕುಲಂ ಕಾಲೇ ಯವಸೋದಕಕಾರಣಾತ್ ॥ ೨೭೨ ॥**

**ಗೋವಾಟವಾಟೀಸಂಸ್ಥಾನಂ ತತ್ರತತ್ರ ಸಮುಪಸ್ಥಿತಂ ।**
**ವನೋಪಕಂಠೇ ಮಹತಾ ರವೇಣಾ ಪೂರಿತಂ ಚ ಯತ್ ॥ ೨೭೩ ॥**

**ಕ್ಷೀಬೈರ್ಗೋಪೈಃ ಸಮಾಕೀರ್ಣಂ ಯಾದವೈರಿವ ತದ್ವನಂ ।**
**ನಿಶಿವಾಸರಮೋಪೇತಂ ಗೋಪಾನಾ ತು ಶುಭಪ್ರದಂ ॥ ೨೭೪ ॥**

---

೨೭೦. ಒಳ್ಳೆಯ ವಂಶದವನಾದರೂ ಈರೀತಿಯಾದ ವಿಕಾರವನ್ನು ಹೊಂದಿದೆನು. ಕಾಲದ ಸ್ಥಿತಿಯು ಹೀಗಿರುವುದು. ಆದ್ದರಿಂದ ನನಗೆ ಪುಣ್ಯವೆಂಬುದೇ ಇಲ್ಲ, ಹಿಂಸೆಯೆಂಬುದು ಕೆಟ್ಟದ್ದು.

೨೭೧. ಅಹಿಂಸೆಯಿಂದಲೇ ದುಃಖವು ಬರುತ್ತದೆ. ಬಿಡುಗಡೆಯು ಉಂಟಾಗುವುದೇ ಇಲ್ಲ. ನನಗೆ ಬಿಡುಗಡೆ ಹೇಗಾದೀತು? ಮೃಗದ ಮಾತು ಹೇಗೆ ನಿಜವಾದೀತು? ಹೀಗೆಂದು ಯೋಚಿಸುತ್ತಿತ್ತು.

೨೭೨. ಹೀಗೆ ಯೋಚಿಸುತ್ತಾ ಆ ಹುಲಿಯು ಕಾಡಿನಲ್ಲಿ ವಾಸಿಸುತ್ತಿರಲು ನೂರು ವರ್ಷಗಳು ಕಳೆದುವು. ಹೀಗಿರಲು ಒಂದುದಿನ ಹುಲ್ಲು, ನೀರಿಗೋಸ್ಕರ ಹಸುಗಳ ಗುಂಪೊಂದು ಅಲ್ಲಿಗೆ ಬಂದಿತು.

೨೭೩. ಗೋವುಗಳ ಗುಂಪು ಅಲ್ಲಿ ಬೀಡುಬಿಟ್ಟಿತು. ಬಹುವಾದ ಹುಂಕಾರಗಳಿಂದ ಆ ಕಾಡು ತುಂಬಿತು.

೨೭೪. ಆ ವನವು ಕೊಬ್ಬಿರುವ ಗೋಪರಿಂದ ಯಾದವರಂತೆ ಕೂಡಿಕೊಂಡಿದ್ದಿತು. ರಾತ್ರಿಯ ವಾಸದಿಂದ ಕೂಗುತ್ತಿದ್ದುವು. ಅದು ಗೋಪರಿಗೆ ಅನುಕೂಲವಾಗಿದ್ದಿತು.

ಏವಂ ತು ವಸತಸ್ತಸ್ಯ ಖರ್ಜೂರೀವನಸಂಸದಿ ।
ಹೃಷ್ಟಾ ಪುಷ್ಟಾ ತಥಾ ತುಷ್ಟಾ ನಂದಾ ವೈ ನಾಮ ನಾಮತಃ ॥ ೨೭೫ ॥

ಗೋಮಂಡಲಸ್ಯ ಸಾ ಮುಖ್ಯಾ ಹಂಸವರ್ಣಾ ಘಟಸ್ರವಾ ।
ದೀರ್ಘಘೋಣಾ ವಿಭಕ್ತಾಂಗೀ ಬಂಧುರಾ ಚ ತನುತ್ವಚಾ ॥ ೨೭೬ ॥

ನೀಲಕಂಠಾ ಶುಭಗ್ರೀವಾ ಘಂಟಾಲೀ ಮಧುರಸ್ವರಾ ।
ಸಾ ಚ ಯೂಥಸ್ಯ ಸರ್ವಸ್ಯ ಅಗ್ರೇ ಚರತಿ ನಿರ್ಭಯಾ ॥ ೨೭೭ ॥

ಘಾಸಸ್ಥಾನಂ ಚರೇಚ್ಛನ್ನಂ ಗತ್ವೈಕಾ ಚ ಯಥಾಸುಖಂ ।
ಯಥೇಷ್ಟಕಾಮಂ ಸುರಭಿರಚ್ಛಿನ್ನಂ ಚರತೇ ತೃಣಂ ॥ ೨೭೮ ॥

ರೋಹಿತೋ ನಾಮ ತತ್ರಾನ್ಯಃ ಪರ್ವತಃ ಸರಿತಸ್ತಟೇ ।
ಅನೇಕಕಂದರದರೀಗುಹಾಶತನಿಷೇವಿತಃ ॥ ೨೭೯ ॥

---

೨೭೫. ಖರ್ಜೂರ ವನದಲ್ಲಿ ಹೀಗೆ ವಾಸಮಾಡುತ್ತಿರಲು ಸಂತೋಷದಿಂದಿದ್ದ ಚೆನ್ನಾಗಿ ಕೊಬ್ಬಿದ ದಪ್ಪವಾಗಿರುವ ನಂದೆ ಎಂಬ ಒಂದು ಹಸುವಿದ್ದಿತು.

೨೭೬-೨೭೭. ಅದು ಆ ಗೋವುಗಳ ಗುಂಪಿಗೆ ಮುಖ್ಯವಾಗಿದ್ದಿತು. ಬೆಳ್ಳಗೆ ಹಂಸದಂತಿದ್ದಿತು. ಮಡಕೆಯಂದಿರುವ ಕೆಚ್ಚಲು ಇದ್ದಿತು. ಮುಸುಡಿಯು ಉದ್ದ ವಾಗಿದ್ದಿತು. ಅವಯವಗಳು ಬೇರೆಬೇರೆಯಾಗಿ ಎದ್ದು ಕಾಣುತ್ತಿದ್ದಿತು. ಎತ್ತರ ನಾಗಿದ್ದಿತು. ಚರ್ಮವು ತೆಳುವಾಗಿದ್ದಿತು. ಕತ್ತು ಕಪ್ಪಗಿದ್ದಿತು. ಗಂಡೆಗಲು ಶುಚಿಯಾಗಿದ್ದಿತು. ಘಂಟೆಯನ್ನು ಹಾಕಿದ್ದರು. ಮಧುರವಾದ ಧ್ವನಿಯಿಂದ ಕೂಡಿದ್ದಿತು. ಅದು ಯಾವಾಗಲೂ ತನ್ನ ಗುಂಪಿನ ಮುಂದೆಯೇ ಭಯವಿಲ್ಲದೆ ಸಂಚರಿಸುತ್ತಿದ್ದಿತು.

೨೭೮. ಹುಲ್ಲಿರುವ ಜಾಗಕ್ಕೆ ಒಂಟಿಯಾಗಿ ಹೋಗಿ ತನಗೆ ಇಷ್ಟಬಂದಂತೆ ಆ ಹಸುವು ಹುಲ್ಲನ್ನು ಮೇಯುತ್ತಿತ್ತು.

೨೭೯. ಅಲ್ಲಿ ರೋಹಿತವೆಂಬ ಪರ್ವತವು ಒಂದು ನದಿಯ ದಡದಲ್ಲಿದ್ದಿತು. ಅದು ಬಹುವಾದ ಗುಹೆಗಳಿಂದಲೂ ಹಳ್ಳಗಳಿಂದಲೂ ಕೂಡಿದ್ದಿತು.

**ತಸ್ಯ ಪೂರ್ವೋತ್ತರೇ ಭಾಗೇ ಘೋರೇ ತೃಣಸಮಾಕುಲೇ ।**
**ಸಂಕಟೇ ವಿಷಮೇ ದುರ್ಗೇ ಭೈರವೇ ಲೋಮಹರ್ಷಣೇ ॥ ೨೮೦ ॥**

**ಮೃಗಸಿಂಹಸಮಾಕೀರ್ಣೇ ಬಹುಶ್ವಾಪದಸೇವಿತೇ ।**
**ವಲ್ಲೀವೃಕ್ಷೈಶ್ಚ ಗಹನೇ ಶಿವಾಶತನಿನಾದಿತೇ ॥ ೨೮೧ ॥**

**ದುರ್ಗೇಽಸ್ಮಿನ್ವಸತೇ ರೌದ್ರಃ ಕಾಲರೂಪೀ ಭಯಂಕರಃ ।**
**ದ್ವೀಪೀ ಶೋಣಿತಮಾಂಸಾಶೀ ಮಹಾದಂಷ್ಟ್ರೋ ಮಹಾಬಲಃ ॥ ೨೮೨ ॥**

**ಮಹಾಪರ್ವತಸಂಕಾಶೋ ಮೇಘಗರ್ಜಿತನಿಃಸ್ವನಃ ।**
**ಮಹಾಗುಹಾದರೀವಕ್ತ್ರಸ್ತೀಕ್ಷ್ಣದಂಷ್ಟ್ರೋ ನಖಾಯುಧಃ ॥ ೨೮೩ ॥**

**ನಂದೋ ನಾಮ ಸ ಧರ್ಮಾತ್ಮಾ ಸ ಚ ಗೋಪಹಿತೇ ರತಃ ।**
**ಅಚ್ಛಿನ್ನಾಗ್ರೈಸ್ತೃಣೈರ್ದೀರ್ಘೈರ್ಗೋಧನಂ ಪರಿರಕ್ಷತಿ ॥ ೨೮೪ ॥**

---

೨೮೦-೨೮೧. ಈ ಪರ್ವತದ ಈಶಾನ್ಯದಿಕ್ಕಿನಲ್ಲಿ ಭಯಂಕರ ಜಾಗವೊಂದಿರುವುದು. ಅಲ್ಲಿ ಹುಲ್ಲು ಯಥೇಚ್ಛವಾಗಿರುವುದು. ತೊಂದರೆಕೊಡಲು ಅನುಕೂಲವಾದ ಸ್ಥಳವು. ಹಳ್ಳದಿಡುಕುಗಳುಳ್ಳದಾಗಿದೆ. ಭಯಂಕರವಾಗಿ ನೋಡಿದವರೇನೇ ಮೈಗೂದಲು ನಿಮಿರುವಂತಿರುವುದು. ಅನೇಕ ಮೃಗಗಳೂ ಸಿಂಹಗಳೂ ಅಲ್ಲಿ ಸೇರಿಕೊಂಡಿವೆ. ಅನೇಕವಾದ ದುಷ್ಟಮೃಗಗಳೂ ಇವೆ. ಬಳ್ಳಿಗಳೂ, ಮರಗಳೂ ಅನೇಕವಾಗಿವೆ. ಅನೇಕ ನರಿಗಳು ಕೂಗುತ್ತಿರುತ್ತವೆ. ಇಂತಹ ದುರ್ಗದಲ್ಲಿ ಭಯಂಕರವೂ ಯಮಸ್ವರೂಪಿಯೂ ಆದ ಒಂದು ಹುಲಿಯು ವಾಸಿಸುತ್ತಿತ್ತು.

೨೮೨-೨೮೩. ಆ ಹುಲಿಯು ರಕ್ತಮಾಂಸಗಳ ಆಸೆಯುಳ್ಳದ್ದು. ದೊಡ್ಡ ದಾಡೆಯಿದ್ದಿತು. ಮಹಾ ಬಲವಾಗಿದ್ದಿತು. ದೊಡ್ಡ ಬೆಟ್ಟದಂತೆಯೇ ಇದ್ದಿತು. ಅದರ ಧ್ವನಿಯು ಮೇಘದ ಧ್ವನಿಯಂತಿದ್ದಿತು. ಅದರ ಬಾಯಿಯು ದೊಡ್ಡ ಗುಹೆಯಂತಿದ್ದಿತು. ಹಲ್ಲು ಚೂಪಾಗಿದ್ದುವು. ಅದಕ್ಕೆ ಉಗುರುಗಳೇ ಆಯುಧವು.

೨೮೪. ಅಲ್ಲಿ ಒಬ್ಬನು ನಂದ ಎಂಬ ಧರ್ಮಾತ್ಮನು ಇದ್ದನು. ಅವನು ಗೋಪರ ಹಿತವನ್ನು ನೋಡುವನನು. ಉತ್ತಮವಾಗಿ ಬೆಳೆದಿರುವ ತೆನೆ ಮುರಿಯದ ಉದ್ದವಾದ ಹುಲ್ಲಿನಿಂದ ಗೋಗಳನ್ನು ರಕ್ಷಿಸುತ್ತಿದ್ದನು.

**ತಸ್ಯ ಯೂಥಪರಿಭ್ರಷ್ಟಾ ನಂದಾ ಸಾ ತೃಣತೃಷ್ಣಯಾ ।**
**ಚರಂತೀ ವ್ಯಾಘ್ರಪುರತಃ ಸಾ ವೈ ಧೇನುರುಪಾಗತಾ ।**
**ಅಭ್ಯದ್ರವಚ್ಚ ತಾಂ ದ್ವೀಪೀ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೨೮೫ ॥**

**॥ ವ್ಯಾಘ್ರ ಉವಾಚ ॥**

**ತ್ವಂ ಮೇಽದ್ಯ ವಿಹಿತೋ ಭಕ್ಷಃ ಸ್ವಯಂ ಪ್ರಾಪ್ತಾಽಸಿ ಧೇನುಕೇ ॥ ೨೮೬ ॥**

**॥ ಪುಲಸ್ತ್ಯ ಉವಾಚ ॥**

**ದ್ವೀಪಿನಶ್ಚ ವಚಃ ಶ್ರುತ್ವಾ ನಿಷ್ಠುರಂ ಲೋಮಹರ್ಷಣಂ ।**
**ಶುಭ್ರರೂಪಾನ್ವಿತಂ ಬಾಲಂ ಭದ್ರಮಿಂದುಸಮಪ್ರಭಂ ॥ ೨೮೭ ॥**

**ಸುತಂ ಸ್ಮರತಿ ಸಾ ಧೇನುಃ ಸ್ನೇಹಾರ್ದ್ರಗದ್ಗದಸ್ವರಾ ।**
**ದಹ್ಯಂತೀ ಪುತ್ರಶೋಕೇನ ನಂದಾ ಸಾ ಪುತ್ರವತ್ಸಲಾ ॥ ೨೮೮ ॥**

---

೨೮೫. ಆ ನಂದನ ಹಸುವಿನ ಗುಂಪಿನಿಂದ ಈ ನಂದೆಯು ಹುಲ್ಲಿನ ಆಸೆಯಿಂದ ಗುಂಪನ್ನು ಬಿಟ್ಟು ಹೊರಟುಹೋಯಿತು. ಹುಲ್ಲನ್ನು ಮೇಯುತ್ತಾ ಆ ಹುಲಿಯ ಎದುರಿನಲ್ಲಿ ಹೋಯಿತು. ಆಗ ಆ ಹುಲಿಯು ಅದರ ಬಳಿಗೆ ಬಂದು ನಿಲ್ಲು ನಿಲ್ಲು ಎಂಬುದಾಗಿ ಕೂಗತೊಡಗಿತು.

೨೮೬. ಹುಲಿಯು ಹೇಳಿತು:—ಎಲೈ ಹಸುವೇ, ನೀನು ನನಗೆ ಆಹಾರವಾಗಿದ್ದೀಯೆ. ಆದ್ದರಿಂದಲೇ ನೀನೇ ಬಂದಿದ್ದೀಯೆ.

೨೮೭-೨೮೮. ಪುಲಸ್ತ್ಯನು ಹೇಳಿದನು:—ಕಠಿಣವಾಗಿಯೂ ರೋಮಹರ್ಷಣವನ್ನು ಎಬ್ಬಿಸುವುದಾಗಿಯೂ ಇರುವ, ಆ ಹುಲಿಯ ಮಾತನ್ನು ಕೇಳಿ, ಸುಂದರವಾಗಿರುವ ಬಾಲಕನಾದ ಮಂಗಳಕರನಾದ ಚಂದ್ರನಂತೆ ಕಾಂತಿಯುಳ್ಳ ತನ್ನ ಕರುವನ್ನು ಸ್ಮರಿಸಿಕೊಂಡು ಆ ಹಸುವು ಸ್ನೇಹದಿಂದ ಗದದ್ಗದ ಧ್ವನಿಯುಳ್ಳದ್ದಾಗಿ, ಮಗನ ಮೇಲಿನ ಪ್ರೀತಿಯಿಂದ, ದುಃಖದಿಂದ ಸಂತಪಿಸುತ್ತಿದ್ದಿತು.

**ರುದತೀ ಕರುಣಂ ಚೇವ ನಿರಾಶಾ ಪುತ್ರದರ್ಶನೇ ।**
**ದ್ವೀಪೀ ದೃಷ್ಟ್ವಾ ತು ತಾಂ ಧೇನುಂ ಕ್ರಂದಮಾನಾಂ ಸುದುಃಖಿತಾಂ ॥ ೨೮೯ ॥**

**ಉವಾಚ ವಚನಂ ಘೋರಂ ಧೇನುಕೇ ಕಿಂ ಪ್ರರುದ್ಯತೇ ।**
**ದೈವಾನ್ಮುಖೋಪಪನ್ನಾಽಸಿ ಭಕ್ಷಸ್ತ್ವಂ ಮೇ ಯದೃಚ್ಛಯಾ ॥ ೨೯೦ ॥**

**ರುದತ್ಯಾ ವಾ ಹಸಂತ್ಯಾ ವಾ ನಾದ್ಯ ತೇ ಜೀವನಂ ಭವೇತ್ ।**
**ವಿಹಿತಂ ಭುಜ್ಯತೇ ಲೋಕೇ ಸ್ವಯಂ ಪ್ರಾಪ್ತಾಽಸಿ ಧೇನುಕೇ ॥ ೨೯೧ ॥**

**ಮೃತ್ಯುಸ್ತೇ ವಿಹಿತೋಽದ್ಯೈವ ವೃಥಾ ಕಿಮನುಶೋಚಸಿ ।**
**ಪಪ್ರಚ್ಛ ತಾಂ ಪುನರ್ದ್ವೀಪೀ ಕಿಮರ್ಥಂ ರುದಿತಂ ತ್ವಯಾ ॥ ೨೯೨ ॥**

**ಕೌತುಕಂ ಸಾಂಪ್ರತಂ ಜಾತಂ ಮಹನ್ಮೇ ಕಥಯಸ್ವ ನೈ ।**
**ವ್ಯಾಘ್ರಸ್ಯ ವಚನಂ ಶ್ರುತ್ವಾ ನಂದಾ ವಾಕ್ಯಮಥಾಬ್ರವೀತ್ ॥ ೨೯೩ ॥**

---

೨೮೯. ಆಗ ಆ ಹಸುವು ದುಃಖದಿಂದ ಮಗನನ್ನು ನೋಡುವ ವಿಷಯದಲ್ಲಿ, ಆಶೆಯನ್ನು ಬಿಟ್ಟು ದೀನತೆಯಿಂದ ಅಳುತ್ತಿದ್ದಿತು. ಹುಲಿಯು ದುಃಖದಿಂದ ಅಳು ತ್ತಿರುವ ಆ ಹಸುವನ್ನು ಕುರಿತು ಎಲೈ ಹಸುವೇ, ಏತಕ್ಕೆ ಅಳುತ್ತೀಯೆ? ಎಂದು ಘೋರವಾಗಿ ಕೇಳಿತು.

೨೯೦-೨೯೧. ನನ್ನ ಅದೃಷ್ಟದಿಂದಲೇ ನನ್ನ ಬಾಯಿಯ ಬಳಿಗೆ ಬಂದಿದ್ದೀಯೆ. ಯೋಚಿಸುವುದಕ್ಕೆ ಮೊದಲೇ ನನಗೆ ತಿಂಡಿಯಾಗಿ ಬಂದಿರುತ್ತೀಯೆ. ನೀನು ಅಳು. ನಗು, ಏನೇಮಾಡು, ನಿನ್ನ ಜೀವವು ಉಳಿಯುವುದಿಲ್ಲ. ಬಂದುದನ್ನು ಲೋಕದಲ್ಲಿ ತಿನ್ನುತ್ತಾರೆ. ಎಲೈ ಹಸುವೇ, ನೀನಾಗಿಯೇ ಬಂದಿದ್ದೀಯೆ. ನಿನಗೆ ಇಂದು ಸಾವು ಸಿದ್ಧವಾಗಿದೆ. ಯಾತಕ್ಕೆ ಸುಮ್ಮನೆ ಅಳುತ್ತೀಯೆ?

೨೯೨-೨೯೩. ಆ ಹುಲಿಯು ಮತ್ತೆ, ಎಲೈ ಹಸುವೇ, ನೀನೇಕೆ ಅಳುತ್ತಿ ದ್ದೀಯೆ? ನನಗೆ ಆಶ್ಚರ್ಯವಾಗಿದೆ. ಅದರ ಕಾರಣವನ್ನು ಹೇಳು ಎನ್ನಲು, ಹುಲಿಯ ಆ ಮಾತನ್ನು ಕೇಳಿ ನಂದೆಯು ಇಂತೆಂದಿತು.

**॥ ನಂದೋವಾಚ ॥**

**ಕ್ಷಂತುಮರ್ಹಸಿ ಮೇ ಸರ್ವಂ ಕಾಮರೂಪ ನಮೋಽಸ್ತು ತೇ ।**
**ತ್ವಾಂ ಸಮಾಸಾದ್ಯ ಲೋಕಸ್ಯ ಪರಿತ್ರಾಣಂ ನ ವಿದ್ಯತೇ ॥ ೨೯೪ ॥**

**ಜೀವಿತಂ ನೈವ ಶೋಚಾಮಿ ಪ್ರಾಪ್ತವ್ಯಂ ಮರಣಂ ಮಯಾ ।**
**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ॥ ೨೯೫ ॥**

**ತಸ್ಮಾದಪರಿಹಾರ್ಯೇಽರ್ಥೇ ನ ಶೋಚಾಮಿ ಮೃಗಾಧಿಪ ।**
**ದೇವೈರಪಿ ತಥಾ ಸರ್ವೈರ್ಮರ್ತವ್ಯಮವಶೈರ್ಧ್ರುವಂ ॥ ೨೯೬ ॥**

**ತಸ್ಮಾತ್ತು ನಾಹಮೇವೈಕಾ ವ್ಯಾಘ್ರ ಶೋಚಾಮಿ ಜೀವಿತಂ ।**
**ಕಿಂ ತು ಸ್ನೇಹೇನ ಮೇ ಶೋಕೋ ದುಃಖೇನ ರುದಿತಂ ಮಯಾ ॥ ೨೯೭ ॥**

**ಅಸ್ತಿ ಮೇ ಹೃದಿ ಸಂತಾಪಸ್ತಂ ಚ ತ್ವಂ ಶ್ರೋತುಮರ್ಹಸಿ ।**
**ಪ್ರಥಮೇ ವಯಸಿ ಪ್ರಾಪ್ತೇ ಪ್ರಸೂತಾಽಹಂ ಮೃಗಾಧಿಪ ॥ ೨೯೮ ॥**

೨೯೪. ನಂದೆಯು ಹೇಳಿತು :—ಎಲೈ ಸುಂದರನೇ, ನನ್ನ ತಪ್ಪನ್ನೆಲ್ಲಾ ಕ್ಷಮಿಸು. ನಿನ್ನ ಬಳಿಗೆ ಬಂದಮೇಲೆ ಯಾವ ಪ್ರಾಣಿಯೂ ಬದುಕುವಂತಿಲ್ಲ.

೨೯೫. ನನ್ನ ಬದುಕಿಕೆಯನ್ನು ಕುರಿತು ನಾನು ಯೋಚಿಸುವುದೇ ಇಲ್ಲ. ನಾನು ಎಂದಿದ್ದರೂ ಸಾಯಲೇಬೇಕು. ಹುಟ್ಟಿದವನು ಸಾಯಲೇಬೇಕು. ಸತ್ತವನು ಹುಟ್ಟಲೂ ಬೇಕು ಎಂಬುದು ನಿಶ್ಚಯ.

೨೯೬-೨೯೭. ಇದು ಯಾವಾಗಲೂ ತಪ್ಪಿದುದಲ್ಲವಾದ್ದರಿಂದ ಈ ವಿಷಯದಲ್ಲಿ ದುಃಖಿಸುವುದಿಲ್ಲ. ಮನುಷ್ಯರಾಗಲಿ ದೇವತೆಗಳಾಗಲಿ ಖಂಡಿತವಾಗಿಯೂ ಸಾಯಬೇಕು. ನಾನೊಬ್ಬಳೇ ಅಲ್ಲ. ಆದ್ದರಿಂದ ಎಲೈ ಹುಲಿಯೇ, ಅದಕ್ಕೋಸ್ಕರ ನಾನು ದುಃಖಿಸುವುದಿಲ್ಲ. ಆದರೆ ಒಂದು ಸ್ನೇಹದ ವಿಷಯದಲ್ಲಿ ಮಾತ್ರ ದುಃಖಬಂದಿತು. ಆದ್ದರಿಂದ ನಾನು ಅದರ ವಿಷಯದಲ್ಲಿ ಅತ್ತೆನು.

೨೯೮-೨೯೯. ನನ್ನ ಹೃದಯದಲ್ಲಿ ಒಂದು ದುಃಖವಿದೆ. ಅದನ್ನು ನೀನು ಕೇಳಬೇಕು. ನನಗೆ ಯೌವನ ಬಂದ ಮೊದಲನೆಯ ವಯಸ್ಸಿನಲ್ಲಿಯೇ ಒಂದು

**ಇಷ್ಟಃ ಪ್ರಥಮಜಃ ಪುತ್ರೋ ಮಮ ವ್ಯಾಘ್ರ ಮಹಾಬಲಃ ।**
**ಕ್ಷೀರಪಾಯೀ ಚ ಮೇ ವತ್ಸಸ್ತೃಣಂ ನಾದ್ಯಾಪಿ ಜಿಘ್ರತಿ ॥ ೯೯ ॥**

**ಸ ಚ ಗೋಪಕುಲೇ ಬದ್ಧಃ ಕ್ಷುಧಾರ್ತೋ ಮಾಮವೇಕ್ಷತೇ ।**
**ತಮಹಂ ಚಾನುಶೋಚಾಮಿ ಕಥಂ ಜೀವಿಷ್ಯತೇ ಸುತಃ ॥ ೩೦೦ ॥**

**ತಸ್ಯೇಚ್ಛಾಮಿ ಸ್ತನಂ ದಾತುಂ ಪುತ್ರಸ್ನೇಹವಶಂ ಗತಾ ।**
**ಪಾಯಯಿತ್ವಾ ಚ ತಂ ವತ್ಸಮಲಿಹ್ಯ ಚ ಮೂರ್ಧನಿ ॥ ೩೦೧ ॥**

**ಸಖೀನಾಮರ್ಪಯಿತ್ವಾ ತು ಸಂದಿಶ್ಯ ಚ ಹಿತಾಹಿತಂ ।**
**ಪುನಃ ಪ್ರತ್ಯಾಗಮಿಷ್ಯಾಮಿ ಯಥೇಷ್ಟಂ ಭಕ್ಷಯಿಷ್ಯಸಿ ॥ ೩೦೨ ॥**

**॥ ಪುಲಸ್ತ್ಯ ಉವಾಚ ॥**

**ಸ ನಂದಾಯಾ ವಚಃ ಶ್ರುತ್ವಾ ಮೃಗೇಂದ್ರಃ ಪುನರಬ್ರವೀತ್ ॥ ೩೦೩ ॥**

**॥ ವ್ಯಾಘ್ರ ಉವಾಚ ॥**

**ಕಿಂ ತೇ ಪುತ್ರೇಣ ಕರ್ತವ್ಯಂ ಮರಣಂ ಕಿಂ ನ ಬುಧ್ಯಸೇ ।**

---

ಕರು ಹುಟ್ಟಿತು. ಅದು ಇಷ್ಟವಾಗಿದೆ. ಮೊದನೆಯದು. ಬಲವಾಗಿ ಚೆನ್ನಾಗಿದೆ. ಹಾಲನ್ನು ಕುಡಿಯುತ್ತದೆ. ಇನ್ನೂ ಹುಲ್ಲನ್ನು ಮೂಸಿ ಕೂಡ ನೋಡುವುದಿಲ್ಲ.

೩೦೦. ಅದನ್ನು ಗೋಪರು ತಮ್ಮ ಹಟ್ಟಿಯಲ್ಲಿ ಕೂಡಿಕೊಂಡಿದ್ದಾರೆ. ಹಸುವಿನಿಂದ ಕೂಡಿಕೊಂಡು ಇದೆ. ನನ್ನನ್ನು ಎದುರು ನೋಡುತ್ತಿದೆ. ಅದು ಹೇಗೆ ಜೀವಿಸೀತೆಂದು ನಾನು ಯೋಚಿಸುತ್ತಾ ದುಃಖಿಸುತ್ತಿದ್ದೇನೆ.

೩೦೧-೩೦೨. ಅದಕ್ಕೆ ಹಾಲನ್ನು ಕೊಡಲು ಇಚ್ಛೆಯಿದೆ. ಪುತ್ರಸ್ನೇಹವೆಂಬುದು ನನ್ನನ್ನು ಹಾಗೆ ಮಾಡಿದೆ. ಆ ಕರುವಿಗೆ ಮೊಲೆಯುಂಡಿಸಿ ಬುದ್ಧಿವಾದವನ್ನು ಹೇಳಿ, ಸಖಿಯರಿಗೊಪ್ಪಿಸಿ ಮತ್ತೆ ಬರುತ್ತೇನೆ. ಅನಂತರ ಬೇಕಾದಂತೆ ತಿನ್ನು.

೩೦೩. ಪುಲಸ್ತ್ಯನು ಹೇಳಿದನು:—ಆ ಹುಲಿಯು ನಂದೆಯ ಮಾತನ್ನು ಕೇಳಿ ಮತ್ತೆ ಇಂತೆಂದಿತು.

೩೦೪. ಹುಲಿಯು ಹೇಳಿತು:—ನಿನಗೆ ಮಗನಿದ್ದೇನಾಗಬೇಕು? ಬಂದಿರುವ ಸಾವನ್ನು ಕಾಣೆಯಾ? ನನ್ನ ವಿಷಯವನ್ನು ಕೇಳಿದರೇನೇ, ಎಲ್ಲಾ ಪ್ರಾಣಿಗಳೂ

ತ್ರಸಂತಿ ಸರ್ವಭೂತಾನಿ ಮಾಂ ನಿರೀಕ್ಷ್ಯ ಮ್ರಿಯಂತಿ ಚ ।
ತ್ವಂ ಪುನಃ ಕೃಪಯಾಽವಿಷ್ಟಾ ಪುತ್ರ ಪುತ್ರೇತಿ ಭಾಷಸೇ ॥ ೩೦೪ ॥

ನ ಪುತ್ರಾ ನ ತಪೋ ದಾನಂ ನ ಮಾತಾ ನ ಪಿತಾ ಸುಹೃತ್ ।
ಶಕ್ನುವಂತಿ ಪರಿತ್ರಾತುಂ ನರಂ ಕಾಲೇನ ಪೀಡಿತಂ ॥ ೩೦೫ ॥

ಕಥಂ ತ್ವಂ ಗೋಕುಲಂ ಗತ್ವಾ ಗೋಪೀಜನಸಮಾಕುಲಂ ।
ವೃಷಭೈರ್ನಾದಿತಂ ರಮ್ಯಂ ಬಾಲವತ್ಸವಿಭೂಷಿತಂ ॥ ೩೦೬ ॥

ಭೂಷಣಂ ದೇವಲೋಕಸ್ಯ ಸ್ವರ್ಗತುಲ್ಯಂ ನ ಸಂಶಯಃ ।
ನಿತ್ಯಪ್ರಮುದಿತಂ ದಿವ್ಯಂ ಸರ್ವದೈವತಪೂಜಿತಂ ॥ ೩೦೭ ॥

ಯತ್ಪವಿತ್ರಂ ಪವಿತ್ರಾಣಾಂ ಮಂಗಲಾನಾಂ ಚ ಮಂಗಲಂ ।
ಯತ್ತೀರ್ಥಂ ಸರ್ವತೀರ್ಥಾನಾಂ ರಮ್ಯಾಣಾಂ ರಮ್ಯಮುತ್ತಮಂ ॥ ೩೦೮ ॥

---

ಹೆದರುತ್ತವೆ. ನನ್ನನ್ನು ನೋಡಿದರಂತೂ ಸತ್ತೇ ಹೋಗುತ್ತವೆ. ನಿನ್ನಲ್ಲಿ ಮಾತ್ರ ಸ್ವಲ್ಪ ಕೃಪೆಯುಂಟಾದರೆ ನೀನು ಪುತ್ರ, ಪುತ್ರ ಎಂದೆನ್ನುತ್ತೀಯೆ.

೩೦೫. ಮಗನಾಗಲಿ, ತಪಸ್ಸಾಗಲಿ, ದಾನವಾಗಲಿ, ತಾಯಿ, ತಂದೆಗಳಾಗಲಿ, ಸ್ನೇಹಿತನಾಗಲಿ, ಕಾಲಕ್ಕೆ ಅಧೀನನಾಗಿ (ಯಮನಿಗೆ ಸಿಕ್ಕಿ) ರುವ ಮನುಷ್ಯನನ್ನು ಕಾಪಾಡಲಾರರು.

೩೦೬-೩೦೭. ಗೋಪಿಯರಿರುವ, ಹೋರಿಗಳಿಂದ ಗುಟುರು ಹಾಕಲ್ಪಡುತ್ತಿರುವ, ಎಳಗರುಗಳಿಂದ ಅಲಂಕೃತವಾದ, ದೇವಲೋಕಕ್ಕೆ ಅಲಂಕಾರವಾದ, ಸ್ವರ್ಗಕ್ಕೆ ಸಮಾನವಾದ, ಯಾವಾಗಲೂ ಸಂತೋಷದಿಂದಿರುವ, ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಟ್ಟ ಗೋಕುಲಕ್ಕೆ ನೀನು ಹೋದರೆ ಹೇಗೆತಾನೇ ಹಿಂತಿರುಗಿ ಬರುತ್ತಿಯೋ ?

೩೦೮—೩೧೦. ಪವಿತ್ರಕ್ಕೂ ಯಾವುದು ಪವಿತ್ರವೋ, ಮಂಗಳಕ್ಕೂ ಯಾವುದು ಮಂಗಳವೋ, ತೀರ್ಥಗಳಿಗೂ ಯಾವುದು ತೀರ್ಥವೋ, ರಮಣಿಯ ಪದಾರ್ಥಗಳಿಗೆ ಯಾವುದು ರಮಣೀಯವೋ, ಅಂತಹ ಗೋಕುಲವು ಸಮಸ್ತ

**ಸಮಸ್ತಗುಣಸಂಪನ್ನಮೀಶ್ವರಾಯತನಂ ಮಹತ್ ।**
**ಯತ್ಖ್ಯಾತಂ ಸರ್ವತೀರ್ಥಾನಾಂ ಭೂಮಿಸ್ವರ್ಗಮನುತ್ತಮಂ ॥ ೩೦೯ ॥**

**ಗೋಪೀಮಂಥನಶಬ್ದೇನ ಬಾಲವತ್ಸರವೇಣ ಚ ।**
**ಗವಾಂ ಹುಂಕಾರಶಬ್ದೇನ ಅಲಕ್ಷ್ಮೀಃ ಪ್ರತಿಹನ್ಯತೇ ॥ ೩೧೦ ॥**

**ಯತ್ರ ವತ್ಸಾಶ್ಚ ಹುಂಕಾರಕರುಣಾ ಮಾತೃಕಾಂಕ್ಷಯಾ ।**
**ಯದ್ಗೋಪೈಃ ಪಾಲಿತಂ ಶೂರೈರ್ಬಾಹುಯುದ್ಧಕೃತಶ್ರಮೈಃ ॥ ೩೧೧ ॥**

**ಪ್ರಗೀತನೃತ್ಯಸಂಲಾಪಂ ನಂದಿತಾಸ್ಫೋಟನಾದಿತಂ ।**
**ಇತಸ್ತತಃ ಸ್ಥಿತೈರ್ವಸ್ತ್ರೈರ್ನರ್ದ್ಯಮಾನೈಃ ಸಮಂತತಃ ॥ ೩೧೨ ॥**

**ಸರೋವದ್ರಾಜತೇ ಗೋಷ್ಠಂ ಚಲದ್ಭಿರಿವ ಪಂಕಜೈಃ ।**
**ತಚ್ಛ್ರೀನಿಕೇತನಂ ರಮ್ಯಂ ಹೃಷ್ಟಪುಷ್ಟಜನಾಕುಲಂ ॥ ೩೧೩ ॥**

---

ಗುಣಗಳಿಂದ ಕೂಡಿದೆ. ದೇವರಿಗೆ ನಿಲ್ಲುವ ಜಾಗ. ತೀರ್ಥಗಳಿಗೆ ಉತ್ತಮವಾದು ದಲ್ಲಿದೆ. ಭೂಮಿಯು ಸ್ವರ್ಗವೇ ಅದು. ಗೋಪಿಯರ ಮೊಸರು ಕಡಿಯುವ ಶಬ್ದ ದಿಂದಲೂ, ಎಳೆಗರುಗಳ ಕೂಗಿನಿಂದಲೂ, ಗೋಗಳ ಹುಂಕಾರದಿಂದಲೂ ಅಲಕ್ಷ್ಮಿಯು ಅಲ್ಲಿಂದ ಓಡಿಹೋಗಿರುತ್ತಾಳೆ.

೩೧೧-೩೧೨. ಆ ಗೋಕುಲದಲ್ಲಿ ಕರುಗಳು ತಾಯನ್ನು ನೋಡುವ ಇಚ್ಛೆ ಯಿಂದ ಕರುಣಾಜನಕವಾಗಿಕೂಗುತ್ತವೆ. ಗರಡಿಗಳಲ್ಲಿ ನಿಸ್ಸೀಮರಾದ ಶೂರರಾದ ಗೋಪರು ಅದನ್ನು ಕಾಯುತ್ತಿರುತ್ತಾರೆ. ಗೀತ, ಕುಣಿತ, ಹರಟೆಗಳಿಂದ ಮನೋಹರ ವಾಗಿದೆ. ಆನಂದದಿಂದ ಚಪ್ಪಳೆಯುಳ್ಳದ್ದಾಗಿರುತ್ತದೆ. ಕರುಗಳು ಅಲ್ಲಿದ್ದುಕೊಂಡು ಗುಟುರು ಹಾಕುತ್ತಿರುತ್ತವೆ.

೩೧೩. ಓಡಾಡುತ್ತಿರುವ ಕಮಲಗಳುಳ್ಳ ಸರೋವರದಂತೆ ಆ ಗೋಕುಲವು ಪ್ರಕಾಶಿಸುತ್ತದೆ. ಅದು ಸಂಪತ್ತಿಗೆ ಮನೆಯು. ಸೌಂದರ್ಯ, ಸಂತೋಷ, ದಾರ್ಢ್ಯವುಳ್ಳ ಜನಗಳಿಂದ ಕೂಡಿದೆ. ಗೋಲೋಕದಂತೆಯೇ ಇದೆ. ಇದನ್ನು ನೋಡಿ, ನೀನು ಹೇಗೆತಾನೆ ಹಿಂತಿರುಗಿ ಬರುತ್ತೀಯೇ ?

ಗೋಲೋಕಪ್ರತಿಮಂ ದೃಷ್ಟ್ವಾ ಕಥಂ ಪ್ರತ್ಯಾಗಮಿಷ್ಯಸಿ ।
ಪಂಚ ಭೂತಾನಿ ಮೇ ಭದ್ರೇ ಪಿಬಂತು ರುಧಿರಂ ತವ ।
ನ ನಿರ್ವಿಣ್ಣಾನಿ ಭೂತಾನಿ ವಾಙ್ಮಾತ್ರೇಣ ಕರೋಮ್ಯಹಂ ॥ ೩೧೪ ॥

॥ ನಂದೋವಾಚ ॥

ಅಹಂ ಪ್ರಥಮವತ್ಸಾ ತು ಮೃಗೇಂದ್ರ ಶೃಣು ಮೇ ವಚಃ ।
ದೃಷ್ಟ್ವಾ ಸಖೀಃ ಸುತಂ ಬಾಲಂ ಗೋಪಾಂಶ್ಚ ಪ್ರತಿಪಾಲಕಾನ್ ॥ ೩೧೫ ॥

ಗೋಪೀಜನಮುಪಾಮಂತ್ರ್ಯ ಜನನೀಂ ತಾಂ ವಿಶೇಷತಃ ।
ಶಪಥೈರಾಗಮಿಷ್ಯಾಮಿ ಯದಿ ಮನ್ಯಸಿ ಮುಂಚ ಮಾಂ ॥ ೩೧೬ ॥

ಯತ್ಪಾಪಂ ಬ್ರಹ್ಮಹತ್ಯಾಯಾಂ ಮಾತಾಪಿತೃವಧೇ ತಥಾ ।
ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೇ ಪುನಃ ॥ ೩೧೭ ॥

ಯತ್ಪಾಪಂ ಲುಬ್ಧಕಾನಾಂ ತು ಮ್ಲೇಚ್ಛಾನಾಂ ಗರದಾಯಿನಾಂ ।
ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೇ ಪುನಃ ॥ ೩೧೮ ॥

---

೩೧೪. ಎಲೈ ಭದ್ರೆಯೇ, ನನ್ನ ಪಂಚಭೂತಗಳೂ ನಿನ್ನ ರಕ್ತವನ್ನು ಕುಡಿಯಲು ನಿನ್ನ ಬಾಯಿ ಮಾತಿನಿಂದಲೇ ನನ್ನ ಪಂಚಭೂತಗಳನ್ನು ಸಂತೋಷಪಟ್ಟಂತೆ ಮಾಡಲಾರೆನು.

೩೧೫-೩೧೬. ನಂದೆಯು ಹೇಳಿತು:—ನನಗೆ ಇರುವುದು ಮೊದಲನೆಯ ಕರು ಎಲೈ ಮೃಗೇಂದ್ರನೇ, ಕೇಳು ಸ್ನೇಹಿತೆಯರನ್ನೂ, ಗೋಪರನ್ನೂ, ಗೋಪೀಜನರನ್ನೂ, ನನ್ನ ತಾಯಿಯನ್ನೂ, ನೋಡಿ ಅವರುಗಳಿಂದ ಅಪ್ಪಣೆಯನ್ನು ತೆಗೆದುಕೊಂಡು ಮುಂದೆ ಹೇಳುವ ಆಣೆಗಳಿಗೆ ಒಳಗಾಗಿ ಬರುತ್ತೇನೆ. ಅದನ್ನು ನೀನು ಒಪ್ಪಿಕೊಂಡರೆ ಬಿಡು.

೩೧೭. ಬ್ರಹ್ಮಹತ್ಯೆಯನ್ನು ಮಾಡಿದುದರಿಂದ ಬರುವ ಪಾಪ, ತಾಯಿ ತಂದೆಯರನ್ನು ಕೊಂದುದರಿಂದ ಬರುವ ಪಾಪ ಇವುಗಳನ್ನು ನಾನು ಪುನಃ ಇಲ್ಲಿಗೆ ಬಾರದಿದ್ದರೆ ಹೊಂದುತ್ತೇನೆ.

೩೧೮. ಬೇಡರಿಗೆ ಬರುವ ಪಾಪವೂ, ಮ್ಲೇಚ್ಛರಿಗೆ ಬರುವ ಪಾಪವೂ, ವಿಷವನ್ನು ಹಾಕತಕ್ಕವರಿಗೆ ಬರುವ ಪಾಪವೂ ನಾನು ಮತ್ತೆ ಬರದಿದ್ದರೆ ನನಗೆ ಬರಲಿ.

**ಗೋಷ್ಠವಿಘ್ನಾಂಶ್ಚ ಯೋ ಕುರ್ಯುಃ ಸ್ವಪಂತಂ ತಾಡಯಂತಿ ಚ ।**
**ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೋ ಪುನಃ ॥ ೩೧೯ ॥**

**ಸಕೃದ್ದತ್ತ್ವಾ ತು ಯಃ ಕನ್ಯಾಂ ದ್ವಿತೀಯೋ ದಾತುಮಿಚ್ಛತಿ ।**
**ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೋ ಪುನಃ ॥ ೩೨೦ ॥**

**ದ್ವಿಭಾರ್ಯಃ ಪುರುಷೋ ಯಸ್ತು ಸ್ನೇಹಾದೇಕಾಂ ಪ್ರಪಶ್ಯತಿ ।**
**ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೋ ಪುನಃ ॥ ೩೨೧ ॥**

**ಯಸ್ತ್ವನರ್ಹಾನ್ಬಲೀವರ್ದಾನ್ವಿಷಮಂ ವಾಹಯೇತ್ಪುಮಾನ್ ।**
**ಇತ್ಯೇತೈಃ ಪಾತಕೈರ್ಘೋರೈಃ ಕುರ್ವೇಽಹಂ ಶಪಥಾನ್ವರೇ ॥ ೩೨೨ ॥**

**ಕಥಾಯಾಂ ಕಥ್ಯಮಾನಾಯಾಂ ವಿಘ್ನಂ ಕಾರಯತೇ ತು ಯಃ**
**ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾಗಮೋ ಪುನಃ ॥ ೩೨೩ ॥**

**ಗೃಹಂ ಯಸ್ಯಾಗತಂ ಮಿತ್ರಂ ನಿರಾಶಂ ಪ್ರತಿಗಚ್ಛತಿ ।**
**ತೇನ ಪಾಪೇನ ಲಿಪ್ಯೇಽಹಂ ಯದ್ಯಹಂ ನಾ ಗಮೋ ಪುನಃ ॥ ೩೨೪ ॥**

---

೩೧೯—೩೨೧. ಗೋಕುಲದಲ್ಲಿ, ವಿಘ್ನವನ್ನು ಯಾರು ಮಾಡುತ್ತಾರೆಯೋ, ಮಲಗಿರತಕ್ಕವನನ್ನು ಯಾರು ಹೊಡೆಯುತ್ತಾರೆಯೋ, ಅವರ ಪಾಪವು ನಾನು ಮತ್ತೆ ಬರದಿದ್ದರೆ ಬರಲಿ. ಕನ್ಯೆಯನ್ನು ಒಂದಾವರ್ತಿ ಮದುವೆಮಾಡಿ ಮತ್ತೊಬ್ಬನಿಗೆ ಮದುವೆಮಾಡಲು ಯಾರು ಯತ್ನಿಸುತ್ತಾನೆಯೋ ಅವನ ಪಾಪವು ನಾನು ಮತ್ತೆ ಬಾರದಿದ್ದರೆ ಬರಲಿ. ಇಬ್ಬರು ಹೆಂಡಿರುಳ್ಳವನು ಒಬ್ಬಳನ್ನು ಸ್ನೇಹದಿಂದ ನೋಡಿದರೆ ಅವನಿಗೆ ಬರುವ ಪಾಪವು ನಾನು ಮತ್ತೆ ಬಾರದಿದ್ದರೆ ನನಗೆ ಬರಲಿ.

೩೨೨. ಯೋಗ್ಯವಲ್ಲದ ಎತ್ತುಗಳನ್ನು ಕಷ್ಟವಾದ ಸ್ಥಳಗಳಲ್ಲಿ ಭಾರವನ್ನು ಹೊರಲು ಉಪಯೋಗಿಸಿದರೆ ಅವನಿಗೆ ಬರುವ ಪಾಪವು ನನಗೆ ಬರಲಿ. ಇವೇ ಮುಂತಾದ ಘೋರವಾದ ಪಾಪಗಳಿಂದ ನಾನು ಪ್ರತಿಜ್ಞೆಯನ್ನು ಮಾಡುತ್ತೇನೆ.

೩೨೩-೩೨೪. ಕಥೆಯನ್ನು ಹೇಳುತ್ತಿದ್ದಾಗ ಯಾವನು ವಿಘ್ನವನ್ನು ಮಾಡುತ್ತಾನೆಯೋ ಅವನ ಪಾಪವು ನಾನು ಮತ್ತೆ ಬರದಿದ್ದರೆ ಬರಲಿ ಮನೆಗೆ ಬಂದ ಸ್ನೇಹಿತನನ್ನು ನಿರಾಶೆಯಾಗಿ ಕಳುಹಿದರೆ ಬರುವ ಪಾಪವು ನನಗೆ ಬರಲಿ.

ಇತ್ಯೇತೈಃ ಪಾತಕೈರ್ಘೋರೈರಾಗಮಿಷ್ಯಾಮ್ಯಹಂ ಪುನಃ ।
ಬುದ್ಧ್ವಾ ಸಂಪ್ರತ್ಯಯಂ ದ್ವೀಪೀ ಪುನರ್ವಚನಮಬ್ರವೀತ್ ॥ ೩೨೫ ॥

॥ ದ್ವೀಪ್ಯುವಾಚ ॥

ಸಂಜಾತಃ ಪ್ರತ್ಯಯೋಽಸ್ಮಾಕಂ ಶಪಥೈಸ್ತವ ಧೇನುಕೇ ।
ಕದಾಚಿನ್ಮನ್ಯಸೇ ಗತ್ವಾ ಮೂಢೋಽಸೌ ವಂಚಿತೋ ಮಯಾ ॥ ೩೨೬ ॥

ಅತ್ರಾಪಿ ಕೇಚಿದ್ವಕ್ಷ್ಯಂತಿ ಶಪಥೈರ್ನಾಸ್ತಿ ಪಾತಕಂ ।
ಕಾಮಿನೀಷು ವಿವಾಹೇಷು ಗವಾ ಮುಕ್ತೌ ತಥೈವ ಚ ॥ ೩೨೭ ॥

ಪ್ರಾಣಾತ್ಯಯೇ ಸಮುತ್ಪನ್ನೇ ಶ್ರದ್ಧಾತವ್ಯಂ ನ ಚ ತ್ವಯಾ ।
ಲೋಕೇಽಸ್ಮಿನ್ನಾಸ್ತಿಕಾಃ ಕೇಚಿನ್ಮೂರ್ಖಾಃ ಪಂಡಿತಮಾನಿನಃ ॥ ೩೨೮ ॥

ಭ್ರಾಮಯಿಷ್ಯಂತಿ ತೇ ಬುದ್ಧಿಂ ಚಕ್ರಾರೂಢಮಿವ ಕ್ಷಣಾತ್ ।
ಕುತರ್ಕಹೇತುದೃಷ್ಟಾಂತೈರಜ್ಞಾನಾವೃತಚೇತಸಃ ॥ ೩೨೯ ॥

---

೩೨೫. ಈ ಮಹಾಪಾಪಗಳನ್ನು ಹೊಂದುತ್ತೇನೆ ಎಂದು ಪ್ರತಿಜ್ಞೆಮಾಡಿತು. ಅನಂತರ ಈ ಹಸುವಿನ ವಿಚಾರದಲ್ಲಿ ನಂಬಿಕೆ ಹುಟ್ಟಿ, ಆ ಹುಲಿಯು ಮತ್ತೆ ಇಂತೆಂದಿತು.

೩೨೬. ಹುಲಿಯು ಹೇಳಿತು :—ಎಲೈ ಧೇನುಕೆಯೇ. ನಿನ್ನ ಶಪಥಗಳಿಂದ ನನಗೆ ನಂಬಿಕೆಯು ಬಂದಿತು. ನೀನು ಒಂದುವೇಳೆ ಮನೆಗೆ ಹೋದಮೇಲೆ ಈ ಹುಲಿಯು ಮೂಢನು. ನನ್ನಿಂದ ವಂಚಿತವಾಯಿತು.

೩೨೭-೩೨೮. ಈ ವಿಷಯದಲ್ಲಿ ಕೆಲವರು ಹೆಂಗಸರು ಮದುವೆ, ಹಸುಗಳ ಬಿಡುಗಡೆ, ಪ್ರಾಣಬಿಡುವುದು ಈ ಸಂದರ್ಭಗಳಲ್ಲಿ ಶಪಥವು ಪಾಪವಲ್ಲವೆಂದು ಹೇಳು ವುದನ್ನು ನೀನು ನಂಬಕೂಡದು. ಈ ಲೋಕದಲ್ಲಿ ಕೆಲವರು ನಾಸ್ತಿಕರು ತಾವು ಪಂಡಿತರೆಂದು ತಿಳಿದುಕೊಂಡು ನಿನ್ನ ಬುದ್ಧಿಯ ಚಕ್ರದ ಮೇಲೆ ಇದ್ದಂತೆ ತಿರುಗಿಸು ತ್ತಾರೆ.

೩೨೯-೩೩೦. ಉಪಯೋಗವಿಲ್ಲವಾದ ಹೇತು, ದೃಷ್ಟಾಂತಗಳಿಂದ ಕೆಲವರು

**ಮೋಹಯಂತಿ ನರಾಃ ಕ್ಷುದ್ರಾ ಆಗಮಾರ್ಥವಿಶಾರದಾಃ ।**
**ಅತತ್ಥ್ಯಾನ್ಯಪಿ ತಥ್ಯಾನಿ ದರ್ಶಯಂತ್ಯತಿಪೇಶಲಾಃ ॥ ೩೩೦ ॥**

**ಸಮೋ ನಿಮ್ನೋನ್ನತಾನೀವ ಚಿತ್ರಕರ್ಮವಿದೋ ಜನಾಃ ।**
**ಪ್ರಾಯಃ ಕೃತಾರ್ಥೋ ಲೋಕೋಽಯಂ ಮನ್ಯತೇ ನೋಪಕಾರಿಣಂ ॥ ೩೩೧ ॥**

**ವತ್ಸಃ ಕ್ಷೀರಕ್ಷಯಂ ದೃಷ್ಟ್ವಾ ಪರಿತ್ಯಜತಿ ಮಾತರಂ ।**
**ನ ತಂ ಪಶ್ಯಾಮಿ ಲೋಕೇಽಸ್ಮಿನ್ಕೃತೇ ಪ್ರತಿಕರೋತಿ ಯಃ ॥ ೩೩೨ ॥**

**ಸರ್ವಸ್ಯ ಹಿ ಕೃತಾರ್ಥಸ್ಯ ಮತಿರನ್ಯಾ ಪ್ರಜಾಯತೇ ।**
**ಋಷಿದೇವಾಸುರನರೈಃ ಶಪಥಾಃ ಕಾರ್ಯಸಿದ್ಧಯೇ ॥ ೩೩೩ ॥**

**ಕೃತಾಃ ಪರಸ್ಪರಂ ಪೂರ್ವಂ ತಾಂಸ್ತು ಮನ್ಯಾಮಹೇ ವಯಂ ।**
**ಸತ್ಯೇನಾಪಿ ಶಪೇದ್ಯಸ್ತು ದೇವಾಗ್ನಿಗುರುಸಂನಿಧೌ ॥ ೩೩೪ ॥**

---

ಅಜ್ಞರು ಜನರನ್ನು ಮೋಹಗೊಳಿಸುತ್ತಾರೆ. ಮತ್ತೆ ಕೆಲವರು ವೇದಾರ್ಥದಲ್ಲಿ ವಿಶಾರದರಾಗಿರುವವರು, ಸುಳ್ಳನ್ನೂ ನಿಜವನ್ನಾಗಿ ತೋರ್ಪಡಿಸಿಕೊಳ್ಳುತ್ತಾರೆ.

೩೩೧. ಚಿತ್ರಕರ್ಮವನ್ನು ಬಲ್ಲವರು ಸಮವಾಗಿರುವ ಜಾಗದಲ್ಲಿಯೂ, ಹಳ್ಳ ದಿಡುಕುಗಳನ್ನು ಕಾಣುವಂತೆ ಜನರು ತಮ್ಮ ಕೆಲಸವನ್ನು ಮಾಡಿಕೊಂಡ ಮೇಲೆ ಈ ಲೋಕವು ಉಪಕಾರಮಾಡಿದವನನ್ನು ಜ್ಞಾಪಿಸಿಕೊಳ್ಳುವುದಿಲ್ಲ.

೩೩೨. ಕರುವು ಹಸುವಿನಲ್ಲಿ ಹಾಲು ಕಡಮೆಯಾದುದನ್ನು ನೋಡಿ ತಾಯಿ ಯನ್ನು ಬಿಟ್ಟುಬಿಡುತ್ತದೆ. ಉಪಕಾರಮಾಡಿದುದದಕ್ಕೆ ಪ್ರತ್ಯುಪಕಾರಮಾಡತಕ್ಕನ ನನ್ನು ಈ ಲೋಕದಲ್ಲಿ ಎಲ್ಲಿಯೂ ನಾನು ಕಾಣೆನು. ಕೃತಾರ್ಥನಾದವನು ಪ್ರತಿ ಯೊಬ್ಬನಿಗೂ ಬೇರೆ ಬುದ್ಧಿಯು ಹುಟ್ಟುತ್ತದೆ.

೩೩೩. ಋಷಿಗಳು, ದೇವತೆಗಳು, ಅಸುರರು, ನರರು, ಇವರೆಲ್ಲರೂ ಕಾರ್ಯ ಸಿದ್ಧಿಗೋಸ್ಕರ ಪೂರ್ವದಲ್ಲಿ ಅನ್ಯೋನ್ಯವಾಗಿ ಬೇಕಾದಷ್ಟು ಶಪಥಗಳನ್ನು ಮಾಡಿರು ವುದನ್ನು ಬಲ್ಲೆನು.

೩೩೪-೩೩೫. ದೇವರು, ಅಗ್ನಿ, ಗುರುಗಳ ಬಳಿಯಲ್ಲಿ ಯಾವನು ಸತ್ಯದಿಂದ ಪ್ರತಿಜ್ಞೆಮಾಡುವನೋ ಆವನಿಗೆ ಯಮಧರ್ಮರಾಜನು ಅರ್ಧ ಧರ್ಮವನ್ನು ಹಾಳು

**ತಸ್ಯ ವೈವಸ್ವತೋ ರಾಜಾ ಧರ್ಮಸ್ಯಾರ್ಥಂ ನಿಕೃಂತತಿ ।**
**ಮಾ ತೇ ಬುದ್ಧಿರ್ಭವೇದೇವಂ ಶಪಥೈರೇಷ ವಂಚಿತಃ ।**
**ತ್ವಯೈವ ದರ್ಶಿತಂ ಸರ್ವಂ ಯಥೇಷ್ಟಂ ಕುರು ಸಾಂಪ್ರತಂ ॥ ೩೩೫ ॥**

**॥ ನಂದೋವಾಚ ॥**

**ಏವಮೇವ ಮಯಾ ಸಾಧೋ ಕಸ್ತ್ವಾಂ ವಂಚಯಿತುಂ ಕ್ಷಮಃ ।**
**ಆತ್ಮೈವ ವಂಚಿತಸ್ತೇನ ಯಃ ಪರಂ ವಂಚಯಿಷ್ಯತಿ ॥ ೩೩೬ ॥**

**॥ ದ್ವೀಪ್ಯುವಾಚ ॥**

**ಧೇನುಕೇ ಗಚ್ಛ ಪಶ್ಯ ತ್ವಂ ಪುತ್ರಕಂ ಪುತ್ರವತ್ಸಲೇ ।**
**ಪಾಯಯಿತ್ವಾ ಸ್ತನಂ ವತ್ಸಮುಪಲಿಹ್ಯ ಚ ಮೂರ್ಧನಿ ॥ ೩೩೭ ॥**

**ಮಾತರಂ ಭ್ರಾತರಂ ದೃಷ್ಟ್ವಾ ಸಖೀಸ್ಸ್ವಜನಬಾಂಧವಾನ್ ।**
**ಸತ್ಯಮೇವಾಗ್ರತಃ ಕೃತ್ವಾ ಶ್ರೀಘ್ರಮಾಗಮನಂ ಕುರು ॥ ೩೩೮ ॥**

---

ಮಾಡುವನು. ಪ್ರತಿಜ್ಞೆಯಿಂದ ಈತನನ್ನು ವಂಚಿಸಿದ್ದೇನೆ ಎಂಬ ಬುದ್ಧಿಯು ನಿನಗೆ ಬೇಡ. ನೀನೇ ಎಲ್ಲವನ್ನೂ ತೋರಿಸಿದ್ದೇಯೆ. ಈಗ ನಿನ್ನ ಇಷ್ಟಬಂದಂತೆ ಮಾಡು.

೩೩೬. ನಂದೆಯು ಹೇಳಿದಳು :—ಎಲೈ ಸಾಧುವೇ, ನೀನು ಹೇಳಿದಂತೆಯೇ ಆಗಲಿ. ನಿನ್ನನ್ನು ವಂಚಿಸುವುದಕ್ಕೆ ಯಾವನಿಗೆ ಶಕ್ತಿಯಿದೆ? ಹಾಗೆ ವಂಚಿಸಿದವನು ತನ್ನನ್ನೇ ತಾನು ವಂಚಿಸಿಕೊಂಡಂತಾಗುವುದಿಲ್ಲವೇ ?

೩೩೭-೩೩೮. ಹುಲಿಯು ಹೇಳಿತು:—ಎಲೈ ಧೇನುವೇ, ಹೋಗು. ಮಗನನ್ನು ನೋಡು. ಮಗನಿಗೆ ಹಾಲನ್ನು ಕುಡಿಸಿ. ತಲೆಯನ್ನೆಲ್ಲಾ ನೆಕ್ಕಿ, ತಾಯಿ, ಸೋದರ, ಸಖಿಯರು, ಸ್ವಜನರು, ಬಂಧುಗಳು ಇವರನ್ನು ನೋಡಿ ಸತ್ಯವನ್ನೇ ಮುಂದೆ ಮಾಡಿಕೊಂಡು ಬೇಗನೆ ಬಾ.

॥ ಪುಲಸ್ತ್ಯ ಉವಾಚ ॥

ಏವಂ ಸಾ ಶಪಥಾನ್ಕೃತ್ವಾ ಧೇನುರ್ವೈ ಸತ್ಯವಾದಿನೀ ।
ಅನುಜ್ಞಾತಾ ಮೃಗೇಂದ್ರೇಣ ಪ್ರಯಾತಾ ಪುತ್ರವತ್ಸಲಾ ॥ ೩೩೯ ॥

ಅಶ್ರುಪೂರ್ಣಮುಖೀ ದೀನಾ ವೇಪಮಾನಾ ಸುದುಃಖಿತಾ ।
ಹಂಭಾರವಂ ಪ್ರಮುಂಚಂತೀ ಪತಿತಾ ಶೋಕಸಾಗರೇ ॥ ೩೪೦ ॥

ಕರೀವ ಚರಣಗ್ರಾಹಂ ಗೃಹೀತಃ ಸಲಿಲಾಶಯೇ ।
ಅಶಕ್ತಾ ತತ್ಪರಿತ್ರಾಣೇ ವಿಲಪಂತೀ ಮುಹುರ್ಮುಹುಃ ॥ ೩೪೧ ॥

ಸಾ ತು ವೈ ಗೋಕುಲಂ ಪ್ರಾಪ್ಯ ಇಂದ್ರನದ್ಯಾಸ್ತಟೇ ಸ್ಥಿತಂ ।
ಶ್ರುತ್ವಾ ತು ವತ್ಸಂ ಕ್ರೋಶಂತಂ ಪರ್ಯಧಾವತ ಸಂಮುಖೀ ॥ ೩೪೨ ॥

ಉಪಸೃಪ್ಯ ತು ತಂ ಬಾಲಂ ಬಾಷ್ಪಪರ್ಯಾಕುಲೇಕ್ಷಣಾ ।
ಸಂಪ್ರಾಪ್ಯ ಮಾತರಂ ವತ್ಸಃ ಶಂಕಿತಃ ಪರಿಪೃಚ್ಛತಿ ॥ ೩೪೩ ॥

---

೩೩೯. ಪುಲಸ್ತ್ಯನು ಹೇಳಿದನು:—ಸತ್ಯವಾದಿನಿಯಾದ ಆ ಹಸುವು ಈ ರೀತಿ ಪ್ರತಿಜ್ಞೆಯನ್ನು ಮಾಡಿ, ಆ ಹುಲಿಯಿಂದ ಅಪ್ಪಣೆಯನ್ನು ಹೊಂದಿ ಮಗನನ್ನು ನೋಡಲು ಹೊರಟಿತು.

೩೪೦-೩೪೧. ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು ನಡಗುತ್ತ, ಅಳುತ್ತ ಹಂಭಾ ಎಂದು ಕೂಗುತ್ತಾ ದುಃಖವೆಂಬ ಸಾಗರದಲ್ಲಿ ಮುಳುಗಿ, ನೀರಿನೊಳಗೆ ಕಾಲನ್ನು ಹಿಡಿದಿರುವ ಆನೆಯಂತೆ ತನ್ನನ್ನು ಕಾಪಾಡಿಕೊಳ್ಳುವುದರಲ್ಲಿ, ಸಾಮರ್ಥ್ಯವಿಲ್ಲದೆ ಬಾರಿಬಾರಿಗೂ ಅಳುತ್ತಾ ಹೊರಟಿತು.

೩೪೨. ಇಂದ್ರಾನದಿಯ ದಡದಲ್ಲಿರುವ ಗೋಕುಲಕ್ಕೆ ಆ ಹಸುವು ಹೋಗಿ, ಕೂಗಿಕೊಳ್ಳುತ್ತಿರುವ ಕರುವಿನ ಧ್ವನಿಯನ್ನು ಕೇಳಿ ಅಲ್ಲಿಗೆ ಓಡಿತು

೩೪೩. ಹಸುವು ಆ ಕರುವಿನ ಬಳಿಗೆ ಹೋಗಿ, ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ನಿಂತುಕೊಂಡಿತು. ಆಗ ಕರುವು ಹಸುವನ್ನು ನೋಡಿ ಸಂದೇಹಗೊಂಡು ಕೇಳಿತು.

॥ ವತ್ಸ ಉವಾಚ ॥

ನ ತೇ ಪಶ್ಯಾಮಿ ಸೌಮ್ಯತ್ವಂ ಶರ್ಮ ನೈವಾದ್ಯ ಲಕ್ಷಯೇ ।
ಉದ್ವಿಗ್ನಾ ಚಾಪಿ ತೇ ದೃಷ್ಟಿರ್ಭೀತಾ ಚಾತೀವ ಲಕ್ಷ್ಯಸೇ ॥ ೩೪೪ ॥

॥ ನಂದೋವಾಚ ॥

ಪಿಬ ಪುತ್ರಸ್ತನಂ ಮೇಽದ್ಯ ಕಾರಣಂ ಯದಿ ಪೃಚ್ಛಸಿ ।
ಅಶಕ್ತಾಹಂ ತವಾಖ್ಯಾತುಂ ಕುರು ತೃಪ್ತಿಂ ಯಥೇಪ್ಸಿತಾಂ ॥ ೩೪೫ ॥

ಅಪಶ್ಚಿಮಂ ತು ತೇ ಪುತ್ರ ದುರ್ಲಭಂ ಮಾತೃದರ್ಶನಂ ।
ಏಕಾಹಮದ್ಯ ಮೇ ಪೀತ್ವಾ ಪ್ರಭಾತೇ ಕಸ್ಯ ಪಾಸ್ಯಸಿ ॥ ೩೪೬ ॥

ಮಯಾಽದ್ಯ ಪುತ್ರ ಗಂತವ್ಯಂ ಶಪಥೈರಾಗತಾ ಹ್ಯಹಂ ।
ಕ್ಷುತ್ಕ್ಷಾಮಸ್ಯ ತು ವ್ಯಾಘ್ರಸ್ಯ ದಾತವ್ಯಂ ಚಾತ್ಮಜೀವಿತಂ ।
ನಂದಾಯಾಶ್ಚ ವಚಃ ಶ್ರುತ್ವಾ ವತ್ಸೋ ವಚನಮಬ್ರವೀತ್ ॥ ೩೪೭ ॥

---

೩೪೪. ಕರುವು ಹೇಳಿತು:—ಅಮ್ಮ. ನಿನ್ನ ಮುಖದಲ್ಲಿ ಸಮಾಧಾನವು ಕಾಣುವುದಿಲ್ಲ. ಸುಖವಿರುವಂತೆ ಕಾಣುವುದಿಲ್ಲ. ನಿನ್ನ ದೃಷ್ಟಿಯು ಕಳವಳ ಗೊಂಡಿರುವುದು. ಬಹುವಾಗಿ ಹೆದರಿಕೊಂಡಂತೆ ಕಾಣುತ್ತೀಯೆ.

೩೪೫. ನಂದೆಯು ಹೇಳಿತು:—ಎಲೈ ಮಗುವೇ, ನನ್ನ ಮೊಲೆಯನ್ನು ಕುಡಿ. ಕಾರಣವನ್ನು ಕೇಳಿದರೆ ನಾನು ನಿನಗೆ ಹೇಳಲಾರೆ. ಬೇಕಾದಷ್ಟು ತೃಪ್ತಿ ಯನ್ನು ಪಡೆ.

೩೪೬. ಎಲೈ ಮಗನೇ, ಇದೇ ನಿನಗೆ ಕೊನೆಯ ದರ್ಶನವು ಇನ್ನು ಮುಂದೆ ದುರ್ಲಭವು. ಇದೊಂದು ದಿನ ನನ್ನ ಹಾಲನ್ನು ಕುಡಿ. ಬೆಳಿಗ್ಗೆ ಯಾರ ಮೊಲೆ ಯನ್ನು ಕುಡಿಯುತ್ತೀಯೋ.

೩೪೭. ಎಲೈ ಮಗನೇ, ನಾನು ಈಗ ಹೋಗಬೇಕು. ಪ್ರತಿಜ್ಞೆಮಾಡಿ ಬಂದಿದ್ದೇನೆ. ಹಸಿದಿರುವ ಒಂದು ಹುಲಿಗೆ ನನ್ನ ಜೀವಿತವನ್ನು ಕೊಡಬೇಕು. ಎನ್ನಲು ನಂದೆಯ ಮಾತನ್ನು ಕೇಳಿ ಕರುವು ಇಂತೆಂದಿತು.

॥ ವತ್ಸ ಉವಾಚ ॥

ಅಹಂ ತತ್ರ ಗಮಿಷ್ಯಾಮಿ ಯತ್ರ ತ್ವಂ ಗಂತುಮಿಚ್ಛಸಿ ।
ಶ್ಲಾಘ್ಯಂ ಮಮಾಪಿ ಮರಣಂ ತ್ವಯಾ ಸಹ ನ ಸಂಶಯಃ ॥ ೩೪೮ ॥

ಏಕಾಕಿನ್ಯಾಽಪಿ ಮರ್ತವ್ಯಂ ಮಯ್ಯಾಽಪಿ ಚ ತ್ವಯಾ ವಿನಾ ।
ಯದಿ ಮಾಂ ಸಹಿತಂ ಮಾತರ್ವನೇ ವ್ಯಾಘ್ರೋ ಹನಿಷ್ಯತಿ ॥ ೩೪೯ ॥

ಯಾ ಗತಿರ್ಮಾತೃಭಕ್ತಾನಾಂ ಧ್ರುವಂ ಸಾ ಮೇ ಭವಿಷ್ಯತಿ ।
ತಸ್ಮಾದವಶ್ಯಂ ಯಾಸ್ಯಾಮಿ ತ್ವಯಾ ಸಹ ನ ಸಂಶಯಃ ॥ ೩೫೦ ॥

ಅಥವಾ ತಿಷ್ಠ ಮಾತಸ್ತ್ವಂ ಶಪಥಾಃ ಸಂತು ತೇ ಮಮ ।
ಜನನೀವಿಪ್ರಯುಕ್ತಸ್ಯ ಜೀವಿತೇ ಕಿಂ ಪ್ರಯೋಜನಂ ॥ ೩೫೧ ॥

ಅನಾಥಸ್ಯ ಚ ಮೇ ನಿತ್ಯಂ ಕೋ ಹಿ ನಾಥೋ ಭವಿಷ್ಯತಿ ।
ನಾಸ್ತಿ ಮಾತೃಸಮೋ ಬಂಧುರ್ಬಾಲಾನಾಂ ಕ್ಷೀರಪಾಯಿನಾಂ ॥ ೩೫೨ ॥

---

೩೪೮. ಕರುವು ಹೇಳಿತು:—ಅಮ್ಮ, ನೀನು ಹೋಗಬೇಕೆಂದಿರುವ ಜಾಗಕ್ಕೆ ನಾನೂ ಬರುತ್ತೇನೆ. ನಿನ್ನೊಡನೇ ನನಗೂ ಮರಣವು ಶ್ಲಾಘ್ಯವಾದುದು. ಸಂಶಯವಿಲ್ಲ. ನೀನಿಲ್ಲದಿದ್ದರೆ ನಾನೂ ಒಬ್ಬಟಿಂಗನಾಗಿ ಸಾಯಲೇಬೇಕು.

೩೪೯-೩೫೦. ಅಮ್ಮ, ನನ್ನನ್ನು ಕಾಡಿನಲ್ಲಿ ನಿನ್ನ ಜೊತೆಯಲ್ಲಿಯೇ ಆ ಹುಲಿಯು ಕೊಂದರೆ, ಮಾತೃಭಕ್ತರಿಗೆ ಯಾವ ಗತಿಯು ಬರುತ್ತದೆಯೋ, ಆ ಗತಿಯು ನನಗೆ ಬರುತ್ತದೆ. ಆದ್ದರಿಂದ ನಾನೂ ನಿನ್ನೊಡನೆ ಬರುತ್ತೇನೆ. ಸಂಶಯವಿಲ್ಲ.

೩೫೧. ಇಲ್ಲದಿದ್ದರೆ ಅಮ್ಮ, ನೀನು ಇಲ್ಲೇ ಇರು. ನೀನು ಮಾಡಿದ ಪ್ರತಿಜ್ಞೆಯೆಲ್ಲಾ ನನಗಿರಲಿ. ತಾಯಿ ಇಲ್ಲದವನಿಗೆ ಬದುಕುವುದರಿಂದ ಪ್ರಯೋಜನವೇನು?

೩೫೨. ಅನಾಥನಾದ ನನಗೆ ಯಾರು ತಾನೇ ನಾಥರಾಗುವರು? ಹಾಲು ಕುಡಿಯುವ ಮಕ್ಕಳಿಗೆ ತಾಯಿಯಂತಹ ಬಂಧುಗಳಿಲ್ಲ.

ನಾಸ್ತಿ ಮಾತೃಸಮೋ ನಾಥೋ ನಾಸ್ತಿ ಮಾತೃಸಮಾ ಗತಿಃ ।
ನಾಸ್ತಿ ಮಾತೃಸಮಃ ಸ್ನೇಹೋ ನಾಸ್ತಿ ಮಾತೃಸಮಂ ಸುಖಂ ॥ ೩೫೩ ॥

ನಾಸ್ತಿ ಮಾತೃಸಮೋ ದೇವ ಇಹ ಲೋಕೇ ಪರತ್ರ ಚ ।
ಏವಂ ವೈ ಪರಮಂ ಧರ್ಮಂ ಪ್ರಜಾಪತಿವಿನಿರ್ಮಿತಂ ।
ಯೇ ತಿಷ್ಠಂತಿ ಸದಾ ಪುತ್ರಾಸ್ತೇ ಯಾಂತಿ ಪರಮಾಂ ಗತಿಂ ॥ ೩೫೪ ॥

॥ ನಂದೋವಾಚ ॥

ಮಮೈವ ವಿಹಿತೋ ಮೃತ್ಯುರ್ನ ತ್ವಂ ಪುತ್ರಾಗಮಿಷ್ಯಸಿ ।
ನ ಚಾಯಮಲ್ಪಜೀನಾನಾಂ ಮೃತ್ಯುಃ ಸ್ಯಾದನ್ಯಮೃತ್ಯುನಾ ॥ ೩೫೫ ॥

ಅಪಶ್ಚಿಮಸ್ತ್ವಯಂ ಪುತ್ರ ಮಾತೃಸಂದೇಶ ಉತ್ತಮಃ ।
ಅತ್ರ ತಿಷ್ಠಸ್ವ ಮದ್ವಾಕ್ಯೇ ತತಃ ಶುಶ್ರೂಷಣಂ ಪುನಃ ॥ ೩೫೬ ॥

ಜಲೇ ವನೇ ಚ ವಿಚರನ್ಪ್ರಮಾದಂ ಮಾ ಕರಿಷ್ಯಸಿ ।
ಪ್ರಮಾದಾತ್ಸರ್ವಭೂತಾನಿ ವಿನಶ್ಯಂತಿ ನ ಸಂಶಯಃ ॥ ೩೫೭ ॥

---

೩೫೩-೩೫೪. ತಾಯಿಗೆ ಸಮಾನರಾದ ನಾಥರಿಲ್ಲ. ತಾಯಿಗೆ ಸಮಾನವಾದ ಗತಿಯಿಲ್ಲ. ತಾಯಿಗೆ ಸಮವಾದ ದೇವರು ಇಲ್ಲಾಗಲೀ, ಪರದಲ್ಲಾಗಲೀ ಇಲ್ಲವೇ ಇಲ್ಲ. ಇದು ಬ್ರಹ್ಮನು ನಿರ್ಮಿಸಿರುವ ಉತ್ತಮವಾದ ಧರ್ಮವು. ಈರೀತಿಯಾಗಿ ಯಾರು ತಿಳಿದಿರುವರೋ ಅವರು ಉತ್ತಮವಾದ ಗತಿಯನ್ನು ಹೊಂದುತ್ತಾರೆ.

೩೫೫. ನಂದೆಯು ಹೇಳಿತು :—ಎಲೈ ಮಗನೇ, ನನಗೆ ಮೃತ್ಯುವು ಸಂನಿಹಿತವಾಗಿರುವುದು. ನಿನಗಲ್ಲ. ಮತ್ತೊಬ್ಬನಿಗೆ ಬಂದಿರುವ ಮತ್ಯುವಿನಿಂದ ಚಿಕ್ಕವರಿಗೆ ಮೃತ್ಯುವುಂಟಾಗಬಾರದು.

೩೫೬. ಎಲೈ ಮಗನೇ, ತಾಯಿಯ ಬುದ್ಧಿವಾದವು ಇದೇ ಕೊನೆಯದು. ಮೊದಲು ನನ್ನ ಮಾತಿನಂತೆ ಇರು. ಆಮೇಲೆ ನನ್ನನ್ನು ಶುಶ್ರೂಷೆಮಾಡುವುದು.

೩೫೭. ನೀರಿನಲ್ಲಾಗಲಿ, ನೆಲದಲ್ಲಾಗಲಿ, ಓಡಾಡುತ್ತಿರುವಾಗ ಬುದ್ಧಿಗೆಟ್ಟಿರಬೇಡ. ಆಲಸ್ಯದಿಂದ ಎಲ್ಲಾ ಪ್ರಾಣಿಗಳೂ ನಾಶಹೊಂದುತ್ತವೆ. ಸಂಶಯವಿಲ್ಲ.

**ನ ಚ ಲೋಭೇನ ವರ್ತವ್ಯಂ ವಿಷಮಸ್ಥಂ ತೃಣಂ ಕ್ವಚಿತ್ ।**
**ಲೋಭಾದ್ವಿನಾಶಃ ಸರ್ವೇಷಾಮಿಹ ಲೋಕೇ ಪರತ್ರ ಚ ॥ ೩೫೮ ॥**

**ಸಮುದ್ರಮಟವೀಂ ದುರ್ಗಂ ವಿಶಂತೇ ಲೋಭಮೋಹಿತಾಃ ।**
**ಲೋಭಾದಕಾರ್ಯಮತ್ಯುಗ್ರಂ ವಿದ್ವಾನಪಿ ಸಮಾಚರೇತ್ ॥ ೩೫೯ ॥**

**ಲೋಭಾತ್ಪ್ರಮಾದಾದ್ವಿಶ್ರಂಭಾತ್ರಿಭಿರ್ನಿತ್ಯೈಃ ಕ್ಷೀಯತೇ ಜಗತ್ ।**
**ತಸ್ಮಾಲ್ಲೋಭಂ ನ ಕುರ್ವೀತ ನ ಪ್ರಮಾದಂ ನ ವಿಶ್ವಸೇತ್ ॥ ೩೬೦ ॥**

**ಆತ್ಮಾ ಹಿ ಸತತಂ ಪುತ್ರ ರಕ್ಷಣೀಯಃ ಪ್ರಯತ್ನತಃ ।**
**ಸರ್ವೇಭ್ಯಃ ಶ್ವಾಪದೇಭ್ಯಶ್ಚ ಮ್ಲೇಚ್ಛಚೌರಾದಿಸಂಕಟೇ ॥ ೩೬೧ ॥**

**ತಿರಶ್ಚಾಂ ಪಾಪಯೋನೀನಾಮೇಕತ್ರ ವಸತಾಮಪಿ ।**
**ವಿಪರೀತಾನಿ ಚಿತ್ತಾನಿ ವಿಜ್ಞಾಯಂತೇ ನ ಪುತ್ರಕ ॥ ೩೬೨ ॥**

---

೩೫೮. ಅತ್ಯಾಸೆಯನ್ನು ಪಡಬೇಡ. ಕಷ್ಟವಾದ ಸ್ಥಳದಲ್ಲಿರುವ ಹುಲ್ಲನ್ನು ತಿನ್ನಲು ಹೋಗಬೇಡ. ಆ ಆಸೆಯಿಂದ ಪ್ರತಿಯೊಬ್ಬನೂ ಇಹಪರಗಳನ್ನು ಕಳೆದುಕೊಳ್ಳುತ್ತಾನೆ.

೩೫೯. ಆಸೆಯಿಂದ ಬುದ್ಧಿಗೆಟ್ಟವರು ಸಮುದ್ರ, ಕಾಡು, ದುರ್ಗಗಳನ್ನಾದರೂ ಪ್ರವೇಶಿಸುತ್ತಾರೆ. ವಿದ್ವಾಂಸನಾದರೂ ಆಸೆಯಿದ್ದರೆ ಕೆಟ್ಟಕೆಲಸವನ್ನು ಮಾಡುವನು.

೩೬೦. ಆಸೆ, ಪ್ರಮಾದ, ನಂಬಿಕೆ ಈ ಮೂರರಿಂದ ಪಪ್ರಂಚವು ನಾಶವಾಗುತ್ತದೆ. ಆದ್ದರಿಂದ ಅತ್ಯಾಸೆಪಡಬಾರದು. ಉದಾಸೀನರಾಗಿರಬಾರದು. ವಿಶ್ವಾಸವನ್ನು ಹೊಂದಬಾರದು.

೩೬೧. ತನ್ನನ್ನು ಯಾವಾಗಲೂ ಪ್ರಯತ್ನಪಟ್ಟು ಕಾಪಾಡಿಕೊಳ್ಳಬೇಕು. ದುಷ್ಟಪ್ರಾಣಿಗಳು, ಮ್ಲೇಚ್ಛರು, ಕಳ್ಳರು, ಕಷ್ಟ ಇವುಗಳಲ್ಲಿ ಸಿಕ್ಕಿಬಿದ್ದಾಗಲೂ ಪ್ರಯತ್ನಪಟ್ಟು ಆತ್ಮವನ್ನು ರಕ್ಷಿಸಿಕೊಳ್ಳಬೇಕು.

೩೬೨. ಪಾಪಿಗಳಾದ ನೀಚಜಾತಿಯಲ್ಲಿ ಹುಟ್ಟಿದವುಗಳೊಡನೆ ಒಂದೇ ಕಡೆಯಲ್ಲಿ ವಾಸಮಾಡಿಕೊಂಡಿದ್ದರೂ ಮನಸ್ಸು ವ್ಯತ್ಯಾಸವಾಗಿರುವುದು. ಗೊತ್ತು ಹತ್ತುವುದಿಲ್ಲ

ನಖಿನಾಂ ಚ ನದೀನಾಂ ಚ ಶೃಂಗಿಣಾಂ ಶಸ್ತ್ರಧಾರಿಣಾಂ ।
ವಿಶ್ವಾಸೋ ನೈವ ಕರ್ತವ್ಯಃ ಸ್ತ್ರೀಣಾಂ ಪ್ರೇಷ್ಯಜನಸ್ಯ ಚ ॥ ೩೬೩ ॥

ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿ ವಿಶ್ವಸೇತ್ ।
ವಿಶ್ವಾಸಾದ್ಭಯಮುತ್ಪನ್ನಂ ಮೂಲಾದಪಿ ನಿಕೃಂತತಿ ॥ ೩೬೪ ॥

ನ ವಿಶ್ವಸೇತ್ಸ್ವದೇಹೇಽಪಿ ಬಾಲೇಽಪ್ಯಾಭೀತಚೇತಸಿ ।
ವಕ್ಷ್ಯಂತಿ ಗೂಢಮತ್ಯರ್ಥಂ ಸುಪ್ರಮತ್ತೇ ಪ್ರಮಾದತಃ ॥ ೩೬೫ ॥

ಗಂಧಃ ಸರ್ವತ್ರ ಸತತಮಾಘ್ರಾತವ್ಯಃ ಪ್ರಯತ್ನತಃ ।
ಗಾವಃ ಪಶ್ಯಂತಿ ಗಂಧೇನ ರಾಜಾನಶ್ಚಾರಚಕ್ಷುಷಾ ॥ ೩೬೬ ॥

ನೈಕಸ್ತಿಷ್ಠೇದ್ವನೇ ಘೋರೇ ಧರ್ಮಮೇವ ಪ್ರಚಿಂತಯೇತ್ ।
ನ ಚೋದ್ವೇಗಸ್ತ್ವಯಾ ಕಾರ್ಯಃ ಸರ್ವಸ್ಯ ಮರಣಂ ಧ್ರುವಂ ॥ ೩೬೭ ॥

---

೩೬೩. ಉಗುರುಳ್ಳ ಪ್ರಾಣಿಗಳು, ನದಿಗಳು, ಕೊಂಬುಳ್ಳ ಪ್ರಾಣಿಗಳು, ಶಸ್ತ್ರ ಧಾರಿಗಳು, ಇವರಲ್ಲಿ ವಿಶ್ವಾಸವನ್ನು ಮಾಡಬಾರದು. ಮತ್ತು ಹೆಂಗಸರಲ್ಲಿಯೂ ಆಳುಗಳಲ್ಲಿಯೂ ನಂಬಿಕೆಯಿದಬಾರದು.

೩೬೪. ವಿಶ್ವಾಸಹೊಂದದವನಲ್ಲಿ ವಿಶ್ವಾಸವಿಡಬಾರದು. ವಿಶ್ವಾಸವಿಟ್ಟವನಲ್ಲಿ ಹೆಚ್ಚು ವಿಶ್ವಾವಿಡಬಾರದು. ವಿಶ್ವಾಸದಿಂದ ಹುಟ್ಟಿದ ಭಯವು ಬುಡದಿಂದಲೇ ಕತ್ತರಿಸುತ್ತದೆ.

೩೬೫. ತನ್ನ ದೇಹದಲ್ಲಿಯೂ ವಿಶ್ವಾಸವನ್ನು ಪಡಬಾರದು. ಹುಡುಗನಲ್ಲಿಯೂ, ಹೆದರುವವನಲ್ಲಿಯೂ, ವಿಶ್ವಾಸವನ್ನಿಡಬಾರದು. ಎಚ್ಚರತಪ್ಪಿದವನ ವಿಷಯದಲ್ಲಿ ಪ್ರಮಾದದಿಂದ ಗುಟ್ಟನ್ನೆಲ್ಲಾ ಹೇಳಿಬಿಡುವರು.

೩೬೬. ವಾಸನೆಯಿಂದ ಪ್ರಯತ್ನಪಟ್ಟು ಎಲ್ಲಾ ಕಡೆಯಲ್ಲಿಯೂ ನೋಡು. ಗೋವುಗಳು ಗಂಧದಿಂದಲೇ ತಿಳಿಯುತ್ತವೆ. ರಾಜರು ಆಳುಗಳೆಂಬ ಕಣ್ಣಿನಿಂದ ತಿಳಿಯುತ್ತಾರೆ.

೩೬೭. ಒಬ್ಬನೇ ಘೋರವಾದ ಕಾಡಿನಲ್ಲಿರಬಾರದು. ಧರ್ಮವನ್ನೇ ಯೋಚಿಸಬೇಕು. ನೀನು ಆತುರಪಡಬೇಡ. ಎಲ್ಲರಿಗೂ ಸಾವು ಸಿದ್ಧವಾಗಿದೆ.

ಯಥಾ ಹಿ ಪಥಿಕಃ ಕಶ್ಚಿಚ್ಛಾಯಾಮಾಶ್ರಿತ್ಯ ತಿಷ್ಠತಿ ।
ವಿಶ್ರಮ್ಯ ಚ ಪುನರ್ಗಚ್ಛೇತ್ತದ್ವದ್ಭೂತಸಮಾಗಮಃ ॥ ೩೬೮ ॥

ಪುತ್ರಾನಿತ್ಯಂ ಜಗತ್ಸರ್ವಂ ತತ್ಕೈಕಃ ಶೋಚಸೇ ಕಥಂ ।
ತಾವತ್ತ್ವಂ ಶೋಕಮುತ್ಸೃಜ್ಯ ಮದ್ವಾಕ್ಯಮನುಪಾಲಯ ॥ ೩೬೯ ॥

॥ ಪುಲಸ್ತ್ಯ ಉವಾಚ ॥

ಶಿರಸ್ಯಾಘ್ರಾಯ ತಂ ಪುತ್ರಮವಲಿಹ್ಯ ಚ ಮೂರ್ಧನಿ ।
ಶೋಕೇನ ಮಹತಾವಿಷ್ಟಾ ಬಾಷ್ಪವ್ಯಾಕುಲಲೋಚನಾ ॥ ೩೭೦ ॥

ವಿನಿಶ್ವಸತೀ ನಾಗೀವ ದೀರ್ಘಮುಷ್ಣಂ ಮುಹುರ್ಮುಹುಃ ।
ಪುತ್ರಹೀನಂ ಜಗಚ್ಛೂನ್ಯಂ ಪ್ರಪಶ್ಯಂತೀವ ಸಾಽಭವತ್ ॥ ೩೭೧ ॥

ಮಹಾಪಂಕನಿಮಗ್ನೇವ ತಿಷ್ಠಂತೀ ಚಾವಸೀದತಿ ।
ವಿಲಪ್ಯ ನಂದಿನೀ ಪುತ್ರಮುವಾಚೇದಂ ಪುನರ್ವಚಃ ॥ ೩೭೨ ॥

---

೩೬೮. ಒಬ್ಬ ಹಾದಿಗಾರನು ನೆರಳಿನಲ್ಲಿ ಬಂದು ಕೂತುಕೊಂಡು ಸುಧಾರಿಸಿಕೊಂಡು ಹೋಗುವಂತೆ ಪ್ರಾಣಿಗಳ ಸೇರುವಿಕೆಯೂ ಕೂಡ ಹಾಗೇ ಆಗಿದೆ.

೩೬೯. ಎಲೈ ಮಗನೇ, ಈ ಜಗತ್ತು ಅನಿತ್ಯವಾದುದು. ನೀನೊಬ್ಬನೇ ಯಾಕೆ ದುಃಖಿಸುತ್ತೀಯೆ? ಶೋಕವನ್ನು ದೂರವಾಗಿ ಬಿಟ್ಟು ನನ್ನ ಮಾತನ್ನು ಅನುಸರಿಸು.

೩೭೦-೩೭೧. ಪುಲಸ್ತ್ಯನು ಹೇಳಿದನು:—ಆ ಕರುವನ್ನು ತಲೆಯಲ್ಲಿ ಮೂಸಿನೋಡಿ ಮತ್ತು ನೆಕ್ಕಿ ಬಹು ದುಃಖದಿಂದ ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು ಹೆಣ್ಣುಹಾವಿನಂತೆ ಬಾರಿಬಾರಿಗೆ ಉದ್ದವಾಗಿ ನಿಟ್ಟುಸುರು ಬಿಡುತ್ತ ಪ್ರಪಂಚವೆಲ್ಲವನ್ನೂ ಮಕ್ಕಳಿಲ್ಲದಿರುವಂತೆ ತಿಳಿಯಿತು.

೩೭೨. ಬಹುವಾದ ಕೆಸರಿನಲ್ಲಿ ಬಿದ್ದುಹೋದಂತೆ ನಿಂತುಕೊಂಡು ದುಃಖಪಡುತ್ತಾ, ಅತ್ತು ಆ ಹಸುವು ಮಗನನ್ನು ಕುರಿತು ಇಂತೆಂದಿತು.

॥ ನಂದೋವಾಚ ॥

ನಾಸ್ತಿ ಪುತ್ರಸಮಃ ಸ್ನೇಹೋ ನಾಸ್ತಿ ಪುತ್ರಸಮಂ ಸುಖಂ ।
ನಾಸ್ತಿ ಪುತ್ರಸಮಾ ಪ್ರೀತಿರ್ನಾಸ್ತಿ ಪುತ್ರಸಮಾ ಗತಿಃ ॥ ೩೭೩ ॥

ಅಪುತ್ರಸ್ಯ ಗೃಹಂ ಶೂನ್ಯಮಪುತ್ರಸ್ಯ ಜನಸ್ತಥಾ ।
ಪುತ್ರೇಣ ಲಭತೇ ಲೋಕಾನಪುತ್ರೋ ನರಕಂ ಧ್ರುವಂ ॥ ೩೭೪ ॥

ಲೋಕೋ ವದತಿ ವಾಕ್ಯಾನಿ ಚಂದನಂ ಕಿಲ ಶೀತಲಂ ।
ಪುತ್ರಗಾತ್ರಪರಿಷ್ವಂಗಶ್ಚಂದನಾದಪಿ ಶೀತಲಃ ॥ ೩೭೫ ॥

॥ ಪುಲಸ್ತ್ಯ ಉವಾಚ ॥

ಇತಿ ಪುತ್ರಗುಣಾನುಕ್ತ್ವಾ ನಿರೀಕ್ಷ್ಯ ಚ ಪುನಃ ಪುನಃ ।
ಸ್ವಮಾತರಂ ಸಖೀರ್ಗೋಪೀಸ್ತ್ವರಮಾಣಾ ಚ ಪೃಚ್ಛತಿ ॥ ೩೭೬ ॥

---

೩೭೩. ನಂದೆಯು ಹೇಳಿತು :—ಮಗನಿಗೆ ಸಮಾನವಾದ ಸ್ನೇಹವಿಲ್ಲ, ಮಗನಿಗೆ ಸಮವಾದ ಸುಖವಿಲ್ಲ, ಮಗನಿಗೆ ಸಮವಾದ ಪ್ರೀತಿಯಿಲ್ಲ, ಮಗನಿಗೆ ಸಮವಾದ ಗತಿಯಿಲ್ಲ.

೩೭೪. ಮಕ್ಕಳಿಲ್ಲದವನಿಗೆ ಮನೆಯು ಬರಿದು, ಮಕ್ಕಳಿಲ್ಲದವನಿಗೆ ಜನವು ವ್ಯರ್ಥವು, ಮಕ್ಕಳಿಂದಲೇ ಒಳ್ಳೆಯ ಲೋಕವೂ ಬರುತ್ತದೆ. ಮಕ್ಕಳಿಲ್ಲದವನಿಗೆ ನರಕವು ಖಂಡಿತವಾಗಿದೆ.

೩೭೫. ಜನವು ಚಂದನವು ತಣ್ಣಗಿದೆಯೆನ್ನುತ್ತಾರೆ. ಮಗನ ಆಲಿಂಗನವು ಚಂದನಕ್ಕಿಂತಲೂ ತಣ್ಣಗಿರುವುದು.

೩೭೬. ಪುಲಸ್ತ್ಯನು ಹೇಳಿದನು :—ಈರೀತಿ ಪುತ್ರನ ಗುಣಗಳನ್ನು ಹೇಳಿ, ಬಾರಿಬಾರಿಗೂ ನೋಡುತ್ತ, ತನ್ನ ತಾಯಿ, ಸ್ನೇಹಿತೆಯರು, ಗೋಪಿಯರನ್ನು ಅವಸರ ಪಡುತ್ತಾ ಕೇಳಿತು.

॥ ನಂದೋವಾಚ ॥

ಯೂಥಸ್ಯಾಗ್ರೇ ಚರಂತೀ ಮಾಮಾಸಸಾದ ಮೃಗಾಧಿಪಃ ।
ಮುಕ್ತಾಽಹಂ ತೇನ ಶಪಥೈಃ ಪುನರ್ಯಾಸ್ಯಾಮಿ ತತ್ರ ವೈ ॥ ೩೭೭ ॥

ಸುತಂ ಚ ಮಾತರಂ ಚೈವ ಸಖೀರ್ದ್ರಷ್ಟುಂ ಚ ಗೋಕುಲಂ ।
ಆಗತಾ ಸತ್ಯವಾಕ್ಯೇನ ಪುನರ್ಯಾಸ್ಯಾಮಿ ತತ್ರ ವೈ ॥ ೩೭೮ ॥

ಮಾತಃ ಕ್ಷಮಸ್ವ ತತ್ಸರ್ವಂ ದೌಃಶೀಲ್ಯಾದ್ಯನ್ಮಯಾ ಕೃತಂ ।
ಸುತಸ್ತವಾಯಂ ದೌಹಿತ್ರಃ ಕಿಮನ್ಯದ್ಯದ್ಬ್ರವೀಮ್ಯಹಂ ॥ ೩೭೯ ॥

ವಿಪುಲೇ ಚಂಪಕೇ ದಾಮೇ ಭದ್ರೇ ಸುರಭಿಮಾಲಿನಿ ।
ವಸುಧಾರೇ ಪ್ರಿಯೇ ನಂದೇ ಮಹಾನಂದೇ ಘಟಸ್ರವೇ ॥ ೩೮೦ ॥

ಅಜ್ಞಾನಾಜ್ಞಾನತೋ ವಾಽಪಿ ಯದುಕ್ತಂ ಕಿಂಚಿದಪ್ರಿಯಂ ।
ತತ್ಕ್ಷಮಧ್ವಂ ಮಹಾಭಾಗಾ ಯಚ್ಚಾನ್ಯಚ್ಚ ಕೃತಂ ಮಯಾ ॥ ೩೮೧ ॥

---

೩೭೭. ನಂದೆಯು ಹೇಳಿತು :—ಗುಂಪಿನ ಮುಂಭಾಗದಲ್ಲಿ ಸಂಚರಿಸುತ್ತಿದ್ದ ನನ್ನನ್ನು ಹುಲಿಯು ಹಿಡಿಯಿತು. ಅನೇಕ ಪ್ರತಿಜ್ಞೆಗಳನ್ನು ಮಾಡಿ ಬಿಡಿಸಿಕೊಂಡು ಬಂದಿರುವೆನು. ಮತ್ತೆ ಅಲ್ಲಿಗೆ ಹೋಗುತ್ತೇನೆ.

೩೭೮. ಮಗ, ತಾಯಿ, ಸ್ನೇಹಿತರು, ಗೋವುಗಳ ಗುಂಪು, ಇವನ್ನು ನೋಡಲು ಆ ಸತ್ಯವಾಕ್ಯದಿಂದ ಬಂದಿರುವೆನು. ಮತ್ತೆ ಅಲ್ಲಿಗೆ ಹೋಗುತ್ತೇನೆ.

೩೭೯. ಅಮ್ಮ, ದುಷ್ಟತನದಿಂದ ನಾನೇನನ್ನು ಮಾಡಿದ್ದರೂ ಅದೆಲ್ಲವನ್ನೂ ಕ್ಷಮಿಸು. ನನ್ನ ಮಗನು ನಿನ್ನ ಮಗನೇ. ಮತ್ತೇನನ್ನು ಹೇಳಲಿ?

೩೮೧-೩೮೧. ವಿಪುಲೆಯೇ, ಚಂಪಕೆಯೇ, ದಾಮೆಯೇ, ಭದ್ರೆಯೇ, ಸುರಭಿಯೇ. ಮಾಲಿನಿಯೇ, ವಸುಧಾರೆಯೇ, ಪ್ರಿಯೆಯೇ, ನಂದೆಯೇ, ಮಹಾನಂದೆಯೇ, ಘಟಸ್ರವೆಯೇ, ಅಜ್ಞಾನದಿಂದಲಾಗಲಿ, ಜ್ಞಾನದಿಂದಲಾಗಲಿ, ಏನಾದರೂ ಹೇಳಿದ್ದರೆ, ಅದೆಲ್ಲವನ್ನೂ ಕ್ಷಮಿಸಿರಿ.

ಸರ್ವಾಃ ಸರ್ವಗುಣೋಪೇತಾಃ ಸರ್ವಲೋಕಸ್ಯ ಮಾತರಃ ।
ಸರ್ವಾಃ ಸರ್ವಪ್ರದಾ ನಿತ್ಯಂ ಕ್ಷಮಧ್ವಂ ಮಮ ಬಾಲಕಂ ॥ ೩೮೨ ॥

ಅನಾಥಂ ವಿಕಲಂ ದೀನಂ ರಕ್ಷಧ್ವಂ ಮಮ ಪುತ್ರಕಂ ।
ಮಾತೃಶೋಕಾಗ್ನಿಸಂತಪ್ತಂ ಭಗಿನ್ಯಃ ಪಾಲಯಿಷ್ಯಥ ॥ ೩೮೩ ॥

ಭಗನೀನಾಮಯಂ ಪುತ್ರೋ ಹ್ಯರ್ಪಿತಃ ಸ್ವಸುತೋ ಮಯಾ ।
ಪಾಲ್ಯೋ ಬಾಲಶ್ಚ ಸರ್ವಾಭಿಃ ಪೋಷ್ಯಃ ಪಾಲ್ಯಶ್ಚ ಪುತ್ರವತ್ ॥ ೩೮೪ ॥

ತಸ್ಮಾದನಾಥಂ ಮದ್ಧೀನಂ ಪುತ್ರವತ್ಪಾಲಯಿಷ್ಯಥ ।
ಕ್ಷಮಧ್ವಂ ಚ ಮಹಾಭಾಗಾ ಯಾಸ್ಯೇಽಹಂ ಸತ್ಯಸಂಶ್ರಯಾತ್ ॥ ೩೮೫ ॥

ನ ಚಿಂತಾ ಮಹತೀ ಕಾರ್ಯಾ ಸಖೀಭಿಶ್ಚ ಕಥಂಚನ ।
ಪ್ರಥಮಸ್ಯಾಸ್ಯ ಜಾತಸ್ಯ ಸ್ಥಿತಂ ಮರಣಮಗ್ರತಃ ॥ ೩೮೬ ॥

---

೩೮೨. ನೀವೆಲ್ಲರೂ ಎಲ್ಲಾ ಗುಣಗಳಿಂದಲೂ ಕೂಡಿದ್ದೀರಿ. ಎಲ್ಲರಿಗೂ ತಾಯಿಯರು. ನೀವೆಲ್ಲರೂ ಎಲ್ಲರಿಗೂ ಎಲ್ಲವನ್ನೂ ಕೊಡುತ್ತೀರಿ. ನೀವೆಲ್ಲರೂ ನನ್ನ ಮಗನನ್ನು ಕ್ಷಮಿಸಿರಿ.

೩೮೩. ಅನಾಥ, ತಿಳಿಯುವದನು, ದೀನ, ಇಂತಹ ಮಗನನ್ನು ಕ್ಷಮಿಸಿರಿ. ತಾಯಿಯ ದುಃಖವೆಂಬ ಬೆಂಕಿಯಿಂದ ಬೆಂದ ಮಗನನ್ನು ಸೋದರಿಯರಿರಾ, ಕಾಪಾಡಿರಿ.

೩೮೪. ಸೋದರಿಯರಿರಾ, ನಿಮಗೆ ಈ ನನ್ನ ಮಗನನ್ನು ಕೊಟ್ಟಿದ್ದೇನೆ. ಇವನು ಹುಡುಗನು. ಕಾಪಾಡಿರಿ, ನಿಮ್ಮ ಮಗನಂತೆ ಕಾಪಾಡಿ ನೋಡಿಕೊಳ್ಳಿರಿ.

೩೮೫. ಆದ್ದರಿಂದ ಅನಾಥನಾದ, ನನ್ನಿಂದ ಬಿಡಲ್ಪಟ್ಟ ಇವನನ್ನು ಮಗನಂತೆ ಕಾಪಾಡಿರಿ. ಅಮ್ಮಾ ಕ್ಷಮಿಸಿರಿ. ಸತ್ಯದ ಕಾರಣದಿಂದ ನಾನು ಹೋಗುತ್ತೇನೆ.

೩೮೬. ಸಖಿಯರೇ, ಬಹಳ ಯೋಚನೆಯನ್ನು ಮಾಡಬೇಡಿರಿ. ಮೊದಲು ಹುಟ್ಟಿದ ಕರು ಇದಕ್ಕೆ ಸಾವು ಎದುರುಕಾದಿದೆ.

॥ ಪುಲಸ್ತ್ಯ ಉವಾಚ ॥

ಶ್ರುತ್ವಾ ತು ನಂದಾವಚನಂ ಮಾತಾ ಸಖ್ಯಶ್ಚ ದುಃಖಿತಾಃ ।
ವಿಷಾದಂ ಪರಮಂ ಜಗ್ಮುರಿದಮೂಚುಃ ಸುವಿಸ್ಮಿತಾಃ ॥ ೩೮೭ ॥

॥ ಮಾತೃಸಖ್ಯ ಊಚುಃ ॥

ಅಹೋಽತ್ರ ಮಹದಾಶ್ಚರ್ಯಂ ಯದ್ವ್ಯಾಘ್ರವಚನಾತ್ತ್ವಯಾ ।
ಪ್ರವೇಷ್ಟುಮುದ್ಯತಾ ಭೀಮಂ ನಂದಿನೀ ಸತ್ಯವಾದಿನೀ ॥ ೩೮೮ ॥

ಶಪಥೈಃ ಸತ್ಯವಾಕ್ಯೇನ ವಂಚಯಿತ್ವಾ ಮಹಾಭಯಂ ।
ನಾಶಿತವ್ಯಂ ಪ್ರಯತ್ನೇನ ಆತ್ಮರಕ್ಷಾ ಯಥಾ ತಥಾ ॥ ೩೮೯ ॥

ನಂದೇ ನ ಚೈವ ಗಂತವ್ಯಮಧರ್ಮೋಽಯಂ ಕೃತಸ್ತ್ವಯಾ ।
ಯದ್ಬಾಲಂ ಸ್ವಸುತಂ ತ್ಯಕ್ತ್ವಾ ಸತ್ಯಲೋಭೇನ ಗಮ್ಯತೇ ॥ ೩೯೦ ॥

---

೩೮೭. ಪುಲಸ್ತ್ಯನು ಹೇಳಿದನು :—ನಂದೆಯ ಮಾತನ್ನು ಕೇಳಿ ಅದರ ತಾಯಿಯೂ, ಸಖಿಯರೂ, ದುಃಖಗೊಂಡು ಅನಂತರ ಇಂತೆಂದುವು.

೩೮೮. ತಾಯಿಯೂ, ಸಖಿಯರೂ, ಹೇಳಿದರು :—ಓಹೋ, ಇದು ಬಹು ಆಶ್ಚರ್ಯಕರವು, ನೀನು ಆ ಹುಲಿಯ ಮಾತಿನಿಂದ ಸತ್ಯವನ್ನಾಡುತ್ತ ಭಯಂಕರವಾದ ಆಪತ್ತನ್ನು ಹೊಂದಲು ಪ್ರಯತ್ನಿಸಿದ್ದೀಯೆ.

೩೮೯. ಪ್ರತಿಜ್ಞೆಗಳಿಂದಲೂ, ಸತ್ಯವಾಕ್ಯಗಳಿಂದಲೂ ಆ ಮಹಾಸಂಕಟಗಳನ್ನು ಮೋಸಗೊಳಿಸಿ, ಪ್ರಯತ್ನಪಟ್ಟಾದರೂ ನಾಶಮಾಡಿ, ಅದರಿಂದ ನಿನ್ನನ್ನು ನೀನು ಕಾಪಾಡಿಕೊಂಡಿದ್ದೀಯೆ.

೩೯೦. ನಂದೆ, ನೀನು ಹೋಗಬೇಡ. ಬಾಲಕನಾದ ಮಗುವನ್ನು ಬಿಟ್ಟು ಸತ್ಯದ ಲೋಭದಿಂದ ಹೋದರೆ ಆಗ ನೀನು ಅಧರ್ಮವನ್ನು ಮಾಡಿದಂತಾಗುತ್ತದೆ.

ಅತ್ರ ಗಾಥಾ ಪುರಾ ಗೀತಾ ಋಷಿಭಿರ್ಧರ್ಮವಾದಿಭಿಃ ।
ಪ್ರಾಣತ್ಯಾಗೇ ಸಮುತ್ಪನ್ನೇ ಶಪಥೈರ್ನಾಸ್ತಿ ಪಾತಕಂ ॥ ೩೯೧ ॥

ಉಕ್ತ್ವಾಽನೃತಂ ಭವೇದ್ಯತ್ರ ಪ್ರಾಣಿನಾಂ ಪ್ರಾಣರಕ್ಷಣಂ ।
ಅನೃತಂ ತತ್ರ ಸತ್ಯಂ ಸ್ಯಾತ್ಸತ್ಯಮಪ್ಯನೃತಂ ಭವೇತ್ ॥ ೩೯೨ ॥

ಕಾಮಿನೀಷು ವಿವಾಹೇಷು ಗವಾಂ ಮುಕ್ತೌ ತಥೈವ ಚ ।
ಬ್ರಾಹ್ಮಣಾನಾಂ ವಿಪತ್ತೌ ಚ ಶಪಥೈರ್ನಾಸ್ತಿ ಪಾತಕಂ ॥ ೩೯೩ ॥

॥ ನಂದೋವಾಚ ॥

ಪರೇಷಾಂ ಪ್ರಾಣರಕ್ಷಾರ್ಥಂ ವದಾಮ್ಯೇವಾನೃತಂ ವಚಃ ।
ನಾತ್ಮಾರ್ಥಮುತ್ಸಹೇ ವಕ್ತುಂ ಜೀವಿತಾರ್ಥೇ ಕಥಂಚನ ॥ ೩೯೪ ॥

ಏಕಃ ಸಂಶ್ಲಿಷ್ಯತೇ ಗರ್ಭೇ ಮರಣೇ ಭರಣೇ ತಥಾ ।
ಭುಂಕ್ತೇ ಚೈಕಃ ಸುಖಂ ದುಃಖಮತಃ ಸತ್ಯಂ ವದಾಮ್ಯಹಂ ॥ ೩೯೫ ॥

---

೩೯೧. ಈ ವಿಷಯದಲ್ಲಿ ಧರ್ಮವನ್ನು ಬಲ್ಲ ಋಷಿಗಳು, ಪ್ರಾಣತ್ಯಾಗ ಕಾಲದಲ್ಲಿ ಪ್ರತಿಜ್ಞೆಗಳನ್ನು ಮಾಡಿದರೆ ಪಾಪವಿಲ್ಲವೆಂದು ಒಂದು ಗಾದೆಯನ್ನು ಹೇಳಿದ್ದಾರೆ.

೩೯೨. ಯಾವ ಜಾಗದಲ್ಲಿ ಸುಳ್ಳು ಹೇಳಿದರೆ, ಪ್ರಾಣಿಗಳ ಪ್ರಾಣವು ಉಳಿಯುತ್ತವೆಯೋ, ಅಲ್ಲಿ ಸುಳ್ಳೂ ನಿಜವಾಗುತ್ತದೆ. ನಿಜವೂ ಸುಳ್ಳಾಗುತ್ತದೆ.

೩೯೩. ಹೆಂಗಸರ ವಿಷಯದಲ್ಲಿ, ವಿವಾಹದ ವಿಷಯದಲ್ಲಿ, ಗೋವುಗಳ ಬಿಡುಗಡೆಯಲ್ಲಿ, ಬ್ರಾಹ್ಮಣರಿಗೆ ಕಷ್ಟದಲ್ಲಿ ಪ್ರತಿಜ್ಞೆಯನ್ನು ಮಾಡಿದರೆ ಪಾಪವಿಲ್ಲ.

೩೯೪. ನಂದೆಯು ಹೇಳಿತು :—ಇತರರ ಪ್ರಾಣವು ಉಳಿಯಬೇಕಾದರೆ ಸುಳ್ಳನ್ನು ಹೇಳುತ್ತೇನೆ. ನನ್ನ ಜೀವಿತಕ್ಕೋಸ್ಕರ ಸುಳ್ಳನ್ನು ಹೇಳಲು ಇಚ್ಛೆಪಡುವುದಿಲ್ಲ.

೩೯೫. ಹುಟ್ಟುವಾಗ, ಸಾಯುವಾಗ, ಬದುಕಿರುವಾಗ, ಸತ್ಯವೊಂದೇ ಒಂದು ನಮ್ಮನ್ನು ಹೊಂದಿರುವುದು. ಸುಖದುಃಖಗಳನ್ನು ಅನುಭವಿಸುತ್ತಾನೆ. ಆದ್ದರಿಂದ ನಿಜವನ್ನು ಹೇಳುತ್ತೇನೆ.

ಸತ್ಯೇ ಪ್ರತಿಷ್ಠಿತಾ ಲೋಕಾ ಧರ್ಮಃ ಸತ್ಯೇ ಪ್ರತಿಷ್ಠಿತಃ ।
ಉದಧಿಃ ಸತ್ಯವಾಕ್ಯೇನ ಮರ್ಯಾದಾಂ ನ ವಿಲಂಘತಿ ॥ ೩೯೬ ॥

ವಿಷ್ಣವೇ ಪೃಥಿವೀಂ ದತ್ವಾ ಬಲಿಃ ಪಾತಾಲಮಾಸ್ಥಿತಃ ।
ಛದ್ಮನಾಽಪಿ ಬಲಿರ್ಬದ್ಧಃ ಸತ್ಯವಾಕ್ಯೇನ ತಿಷ್ಠತಿ ॥ ೩೯೭ ॥

ಪ್ರವರ್ಧಮಾನಃ ಶೈಲೇಂದ್ರಃ ಶತಶೃಂಗಃ ಸಮುಚ್ಛ್ರಿತಃ ।
ಸತ್ಯೇನ ಸಂಸ್ಥಿತೋ ವಿಂಧ್ಯಃ ಪ್ರಬಂಧಂ ನಾತಿವರ್ತತೇ ॥ ೩೯೮ ॥

ಸ್ವರ್ಗೋ ಮೋಕ್ಷಸ್ತಥಾ ಧರ್ಮಃ ಸರ್ವೇ ವಾಚಿ ಪ್ರತಿಷ್ಠಿತಾಃ ।
ಯಸ್ತಾಂ ಲೋಪಯತೇ ವಾಚಮಶೇಷಂ ತೇನ ಲೋಪಿತಂ ॥ ೩೯೯ ॥

ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೌರೇಣಾತ್ಮಾಪಹಾರಿಣಾ ॥ ೪೦೦ ॥

---

೩೯೬. ಲೋಕವು ಸತ್ಯದಿಂದಲೇ ನಿಂತಿದೆ. ಧರ್ಮವು ಸತ್ಯದಿಂದಲೇ ನಿಂತಿರುವುದು. ಸಮುದ್ರವೂ ಕೂಡ ಸತ್ಯದಿಂದಲೇ ಎಲ್ಲೆಯನ್ನೂ ಮೀರದಿರುವುದು.

೩೯೭. ಬಲಿಯು ವಿಷ್ಣುವಿಗೆ ಭೂಮಿಯನ್ನು ಕೊಟ್ಟು ಪಾತಾಳಕ್ಕೆ ಹೋದನು. ಮೋಸದಿಂದ ಬಲಿಯನ್ನು ಕಟ್ಟಿ ಹಾಕಿದರೂ ಆ ಬಲಿಯು ಸತ್ಯವನ್ನು ಬಿಡಲಿಲ್ಲ.

೩೯೮. ವಿಂಧ್ಯ ಪರ್ವತವು ಅತಿಯಾಗಿ ಬೆಳೆಯುತ್ತ ನೂರಾರು ಶಿಖರವುಳ್ಳದ್ದಾಗಿ ಬೆಳೆಯಿತು. ಆಗ ಅಗಸ್ತ್ಯನ ಮಾತನ್ನು ಕೇಳಿ ಕಟ್ಟುಬಿದ್ದು ತಾನು ಬರುವ ವರೆಗೂ ಏಳುವುದಿಲ್ಲವೆಂದು ಮಾತುಕೊಟ್ಟು ಸತ್ಯವನ್ನು ಮೀರದಿದೆ.

೩೯೯. ಸ್ವರ್ಗ, ಮೋಕ್ಷ, ಧರ್ಮಗಳೆಲ್ಲವೂ, ಬಾಯಿನ ಮಾತಿನಲ್ಲಿಯೇ ಇವೆ. ಆ ಮಾತನ್ನು ಯಾವನು ಕಳೆದು ಕೊಳ್ಳುತ್ತಾನೆಯೋ, ಅವನು ಎಲ್ಲವನ್ನೂ ನಾಶಮಾಡಿಕೊಳ್ಳುತ್ತಾನೆ.

೪೦೦. ಒಂದು ವಿಷಯದಲ್ಲಿರತಕ್ಕವನು ಅದನ್ನು ಬೇರೆಯ ರೀತಿಯಾಗಿ ತಪ್ಪಾಗಿ ಆಶ್ರಯಿಸಿದಲ್ಲಿ ಅವನು ಪಾಪವನ್ನು ಮಾಡದೆ ಮತ್ತೇನು? ಅವನು ಆತ್ಮವನ್ನು ಹಾಳುಮಾಡಿಕೊಳ್ಳುವ ಕಳ್ಳನೇ ಆಗಿರುತ್ತಾನೆ.

ಯಾಸ್ಯಾಮಿ ನರಕಂ ಘೋರಂ ವಿಲೋಪ್ಯಾತ್ಮಾನಮಾತ್ಮನಾ ।
ತಸ್ಯ ವೈವಸ್ವತೋ ರಾಜಾ ಧರ್ಮಸ್ಯಾರ್ಥಂ ನಿಕೃಂತತಿ ॥ ೪೦೧ ॥

ಅಗಾಧಸಲಿಲೇ ಶುದ್ಧೇ ಸತ್ಯತೀರ್ಥೇ ಕ್ಷಮಾಹ್ರದೇ ।
ಸ್ನಾತ್ವಾ ಪಾಪವಿನಿರ್ಮುಕ್ತಃ ಪ್ರಯಾತಿ ಪರಮಾಂ ಗತಿಂ ॥ ೪೦೨ ॥

ಅಶ್ವಮೇಧಸಹಸ್ರಂ ಚ ಸತ್ಯಂ ಚ ತುಲಯಾ ಧೃತಂ ।
ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥ ೪೦೩ ॥

ಸತ್ಯಂ ಸಾಧು ತಪಃ ಶ್ರುತಂ ಚ ಪರಮಂ ಕ್ಲೇಶಾದಿಭಿರ್ವರ್ಜಿತಂ
ಸಾಧೂನಾಂ ನಿಕಷಂ ಸತಾಂ ಕುಲಧನಂ ಸರ್ವಾಶ್ರಮಾಣಾಂ ವರಂ ।
ಸ್ವಾಧೀನಂ ಚ ಸುದುರ್ಲಭಂ ಚ ಜಗತಃ ಸಾಧಾರಣಂ ಭೂಷಣಂ
ಯನ್ಮ್ಲೇಚ್ಛೋಽಪ್ಯಭಿಧಾಯ ಗಚ್ಛತಿ ದಿವಂ ತತ್ತ್ಯಜ್ಯತೇ ವಾ ಕಥಂ
॥ ೪೦೪ ॥

---

೩೦೧. ಸುಳ್ಳನ್ನು ಹೇಳಿದರೆ, ನನಗೆ ನಾನೇ ಲೋಪಮಾಡಿ ಕೊಂಡಂತಾಗುತ್ತದೆ. ಆಗ ಘೋರವಾದ ನಕರವನ್ನು ಹೊಂದುತ್ತೇನೆ. ಆಗ ಅಂತಹವನ ಧರ್ಮದ ಅರ್ಥವನ್ನು ಯಮನು ನಾಶಮಾಡುತ್ತಾನೆ.

೪೦೨. ಬಹಳ ಆಳವಾದ, ಶುದ್ಧವಾದ, ಕ್ಷಮೆಯೆಂಬ ಮಡುವುಳ್ಳ, ಸತ್ಯವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಪಾಪವನ್ನು ಕಳೆದುಕೊಂಡು ಉತ್ತಮಗತಿಯನ್ನು ಹೊಂದುತ್ತಾನೆ.

೪೦೩. ಸಾವಿರ ಅಶ್ವಮೇಧಗಳನ್ನೂ, ಸತ್ಯವನ್ನೂ ಬ್ರಹ್ಮನು ತಕ್ಕಡಿಗೆ ಹಾಕಿ ತೂಗಿದನು. ಆಗ ಸಾವಿರ ಅಶ್ವಮೇಧಗಳಿಗಿಂತಲೂ ಸತ್ಯವು ಭಾರವಾಗಿತ್ತು.

೪೦೪. ಸತ್ಯವು ಉತ್ತಮವಾದ ತಪಸ್ಸು. ಕ್ಲೇಶಾದಿಗಳಿಲ್ಲದ ಉತ್ತಮ ಜ್ಞಾನವು. ಇದು ಸಾಧುಗಳಿಗೆ ಒರೆಗಲ್ಲು, ಸತ್ಪುರುಷರಿಗೆ ಕುಲಧನ, ಎಲ್ಲಾ ಆಶ್ರಮಕ್ಕಿಂತಲೂ ಶ್ರೇಷ್ಠವು. ತಮ್ಮ ವಶದಲ್ಲಿರುವ, ಸುಲಭವಾದ ಜಗತ್ತಿನ ಸಾಮಾನ್ಯವಾದ ಒಡವೆಯು. ಇದನ್ನು ಮ್ಲೇಚ್ಛರೂ ಕೂಡ ಹೇಳಿ ಸ್ವರ್ಗವನ್ನು ಹೊಂದುತ್ತಾರೆ.

॥ ಸಖ್ಯ ಊಚುಃ ॥

ನಂದೇ ಸಾ ತ್ವಂ ನಮಸ್ಕಾರ್ಯಾ ಸರ್ವೈರಪಿ ಸುರಾಸುರೈಃ ।
ಯಾ ತ್ವಂ ಪರಮಸತ್ಯೇನ ಪ್ರಾಣಾಂಸ್ತ್ಯಜಸಿ ದುಸ್ತ್ಯಜಾನ್ ॥ ೪೦೫ ॥

ಬ್ರೂಮಃ ಕಿಂ ತತ್ರ ಕಲ್ಯಾಣಿ ಯಾ ತ್ವಂ ಧರ್ಮಧುರಂಧರಾ ।
ಸತ್ಯೇನಾನೇನ ನಾಪ್ರಾಪ್ಯಂ ತ್ರೈಲೋಕ್ಯೇ ವಸ್ತು ಕಿಂಚನ ॥ ೪೦೬ ॥

ಅನಿಯೋಗಂ ಚ ಪಶ್ಯಾಮಸ್ತ್ಯಾಗಾದಸ್ಮಾತ್ಸುತೇನ ಹಿ ।
ನಾರ್ಯಾಃ ಕಲ್ಯಾಣಚಿತ್ತಾಯಾ ನಾಪದಃ ಸಂತಿ ಕುತ್ರಚಿತ್ ॥ ೪೦೭ ॥

॥ ಪುಲಸ್ತ್ಯ ಉವಾಚ ॥

ದೃಷ್ಟ್ವಾ ಗೋಪೀಜನಂ ಸರ್ವಂ ಪರಿಕ್ರಮ್ಯ ಚ ಗೋಕುಲಂ ।
ನಂದಾ ಸಂಪ್ರಸ್ಥಿತಾ ದೇವಾನ್ವೃಕ್ಷಾಂಶ್ಚಾಪೃಚ್ಛ್ಯ ಸಾ ಪುನಃ ॥ ೪೦೮ ॥

ಕ್ಷಿತಿಂ ವರುಣಮಗ್ನಿಂ ಚ ವಾಯುಂ ವ್ಯಾಪಿ ನಿಶಾಕರಂ ।
ದಶ ದಿಗ್ದೇವತಾ ವೃಕ್ಷಾನ್ನಕ್ಷತ್ರಾಣಿ ಗ್ರಹೈಃ ಸಹ ॥

---

೪೦೫. ಸಖಿಯರು ಹೇಳಿದರು :—ಎಲೈ ನಂದೆಯೇ, ನೀನು ದೇವದಾನವರಿಂದಲೂ ಕೂಡ ನಮಸ್ಕರಿಸಲು ಯೋಗ್ಯಳು. ಏತಕ್ಕೆಂದರೆ ಉತ್ತಮವಾದ ಸತ್ಯಕ್ಕೋಸ್ಕರ ಬಿಡಬಾರದ ಪ್ರಾಣಗಳನ್ನೂ ಕೂಡ ಬಿಡಲು ಯತ್ನಿಸುತ್ತೀಯೆ.

೪೦೬. ಎಲೈ ಕಲ್ಯಾಣಿಯೇ, ಈ ವಿಷಯದಲ್ಲಿ ನಾವೇನು ಹೇಳೋಣ? ನೀನು ಧರ್ಮದಲ್ಲಿ ಆಸಕ್ತಿಯುಳ್ಳವಳು. ಸತ್ಯದಿಂದ ಹೊಂದದಿರುವುದು ಮೂರು ಲೋಕದಲ್ಲಿ ಒಂದೂ ಇಲ್ಲ.

೪೦೭. ನಿನ್ನ ಈ ಧರ್ಮ (ಸತ್ಯ) ತ್ಯಾಗದಿಂದ ನಿನ್ನ ಮಗನೊಡನೆ ಯಾವಾಗಲೂ ಇರುತ್ತೀಯೆ ಎಂದು ನಮಗೆ ಕಾಣುತ್ತದೆ. ಒಳ್ಳೆಯ ಮನಸ್ಸುಳ್ಳ ಹೆಂಗಸಿಗೆ ಆಪತ್ತು ಎಲ್ಲೂ ಬಂದಿಲ್ಲ. ಬರುವುದೂ ಇಲ್ಲ.

೪೦೮. ಪುಲಸ್ತ್ಯನು ಹೇಳಿದನು :—ಗೋಪಿಗಳೆಲ್ಲರನ್ನೂ ನೋಡಿ, ಗೋಕುಲವನ್ನು ಸುತ್ತಿ, ದೇವತೆಗಳಿಗೂ, ವೃಕ್ಷಗಳಿಗೂ ಹೇಳಿ ಆ ನಂದೆಯು ಹೊರಟಿತು.

೪೦೯. ಭೂಮಿ, ನೀರು, ಅಗ್ನಿ, ವಾಯು, ಚಂದ್ರ, ಹತ್ತುದಿಕ್ಕಿನ ದೇವತೆ

ಸರ್ವಾನ್ವಿಜ್ಞಾಪಯಾಮಾಸ ಪ್ರಣಿಪತ್ಯ ಮುಹುರ್ಮುಹುಃ ॥ ೪೯ ॥

॥ ನಂದೋವಾಚ ॥

ಯೇ ಸಂಶ್ರಿತಾ ವನೇ ಸಿದ್ಧಾಃ ಸರ್ವಾಶ್ಚ ವನದೇವತಾಃ ।
ವನೇ ಚರಂತಂ ಶರಣಂ ತೇ ರಕ್ಷಂತು ಸುತಂ ಮಮ ॥ ೪೧೦ ॥

ಚಂಪಕಾಶೋಕಪುನ್ನಾಗಾಃ ಸರಲಾರ್ಜುನಕಿಂಶುಕಾಃ ॥ ೪೧೧ ॥

ಶೃಣ್ವಂತು ಪಾದಪಾಃ ಸರ್ವೇ ಸಂದೇಶಂ ಮಮ ವಿಕ್ಲವಂ ।
ಬಾಲಮೇಕಾಕಿನಂ ದೀನಂ ಚರಂತಂ ವಿಷಮೇ ವನೇ ॥ ೪೧೨ ॥

ರಕ್ಷಧ್ವಂ ವತ್ಸಲಂ ಬಾಲಂ ಸ್ನೇಹಾತ್ಪುತ್ರಮಿವೌರಸಂ ।
ಮಾತಾಪಿತೃವಿಹೀನಂ ಚ ಅನಾಥಂ ದೀನಮಾನಸಂ ॥ ೪೧೩ ॥

ವಿಚರಂತಮಿಮಾಂ ಭೂಮಿಂ ಕ್ರಂದಮಾನಂ ಸುದುಃಖಿತಂ ।
ತಸ್ಯೇಹ ಕ್ರಂದಮಾನಸ್ಯ ಮತ್ಪುತ್ರಸ್ಯ ಮಹಾವನೇ ॥ ೪೧೪ ॥

---

ಗಳು, ಮರಗಳು, ನಕ್ಷತ್ರಗಳು, ಗ್ರಹಗಳು, ಇವರೆಲ್ಲರಿಗೂ ನಮಸ್ಕರಿಸಿ ಪದೇ ಪದೇ ವಿಜ್ಞಾಪಿಸಿಕೊಂಡಿತು.

೪೧೦-೪೧೧. ನಂದೆಯು ಹೇಳಿತು :—ವನದಲ್ಲಿರುವ ಸಿದ್ಧರು, ಎಲ್ಲಾ ವನದೇವತೆಗಳು, ಸಂಪಿಗೆ, ಅಶೋಕ, ಪುನ್ನಾಗ, ಸರಳ, ಮತ್ತಿಮರ, ಇನ್ನೂ ಯಾರು ಈ ವನವನ್ನು ಆಶ್ರಯಿಸಿಕೊಂಡಿದ್ದೀರೋ ಅವರೆಲ್ಲರೂ ಕೇಳಿರಿ. ವನದಲ್ಲಿ ಓಡಾಡುತ್ತಿರುವ, ನಿಮ್ಮ ಮರೆಯನ್ನು ಹೊಕ್ಕ ನನ್ನ ಮಗನನ್ನು ಕಾಪಾಡಿರಿ.

೪೧೨-೪೧೩. ಮರಗಳೆಲ್ಲವೂ ನನ್ನ ದೀನವಾದ ವಿಜ್ಞಾಪನೆಯನ್ನು ಕೇಳಿರಿ. ಬಾಲಕನೂ, ಒಬ್ಬಂಟಿಗನೂ, ದೀನನೂ, ಕೆಟ್ಟದಾದ ವನದಲ್ಲಿ ಸುತ್ತುವವನೂ ಆದ ನನ್ನ ಮಗನನ್ನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಕಾಪಾಡಿರಿ. ತಾಯಿ ತಂದೆಗಳಿಲ್ಲದ, ರಕ್ಷಕರಿಲ್ಲದ, ದುಃಖಗೊಂಡ ಮನಸ್ಸುಳ್ಳ, ಈ ಕಷ್ಟವಾದ ಭೂಮಿಯಲ್ಲಿ ಸಂಚಾರಮಾಡುತ್ತಿರುವ, ದುಃಖದಿಂದ ಅಳುತ್ತಿರುವ, ನನ್ನ ಮಗನನ್ನು ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆಯೇ ಕಾಪಾಡಿರಿ.

೪೧೪-೪೧೫. ಈ ಮಹಾವನದಲ್ಲಿ ದುಃಖಿಸುತ್ತ ಕೂಗುತ್ತಿರುವ, ಹೆಚ್ಚು ಶೋಕದಿಂದ ಕೂಡಿದ, ಹಸಿವು ಬಾಯಾರಿಕೆಗಳಿಂದ ಕೂಡಿದ, ಯಾರೂ ಇಲ್ಲದಿರುವ,

**ಮಹಾಶೋಕಾಭಿಭೂತಸ್ಯ ಕ್ಷುತ್ಪಿಪಾಸಾತುರಸ್ಯ ಚ ।**
**ಶೂನ್ಯಸ್ಯೈಕಾಕಿನಃ ಸರ್ವಂ ಜಗಚ್ಛೂನ್ಯಂ ಪ್ರಪಶ್ಯತಃ　　॥ ೪೧೫ ॥**

**ಚರಮಾಣಸ್ಯ ಕರ್ತವ್ಯಂ ಸಾನುಕ್ರೋಶೈಸ್ತು ರಕ್ಷಣಂ ।**
**ಏವಂ ಸಂದಿಶ್ಯ ಬಹುಲಂ ಪುತ್ರಸ್ನೇಹವಶಂಗತಾ　　॥ ೪೧೬ ॥**

**ಶೋಕಾಗ್ನಿನಾಽತಿಸಂದೀಪ್ತಾ ನಿರಾಶಾ ಪುತ್ರದರ್ಶನೇ ।**
**ವಿಯುಕ್ತಾ ಚಕ್ರವಾಕೀವ ಲತೇವ ಪತಿತಾ ತರೋಃ　　॥ ೪೧೭ ॥**

**ಅಂಧೇವ ಯಷ್ಟಿರಹಿತಾ ಪ್ರಸ್ಖಲಂತೀ ಪದೇ ಪದೇ ।**
**ಅಗಚ್ಛತ್ಸಾ ಪುನಸ್ತತ್ರ ಯತ್ರಾಸೌ ಪಿಶಿತಾಶನಃ　　॥ ೪೧೮ ॥**

**ಆಸ್ತೇ ವಿಸ್ಫೂರ್ಜಿತಮುಖಸ್ತೀಕ್ಷ್ಣದಂಷ್ಟ್ರೋ ಭಯಾವಹಃ ।**
**ತಾವತ್ತದಗ್ರತೋ ವತ್ಸ ಊರ್ಧ್ವಪುಚ್ಛೋಽತಿವೇಗವಾನ್　　॥ ೪೧೯ ॥**

---

ಒಬ್ಬಂಟಿಗನಾದ, ಜಗತ್ತನ್ನೇ ಶೂನ್ಯವನ್ನಾಗಿ ನೋಡುತ್ತಿರುವ, ಓಡಾಡುತ್ತಿರುವ, ನನ್ನ ಮಗನ ರಕ್ಷಣೆಯನ್ನು ದಯೆಯಿಂದ ಕೂಡಿಕೊಂಡು ಮಾಡಬೇಕು.

೪೧೬-೪೧೭. ಈರೀತಿ ಬಹುವಾಗಿ ಹೇಳಿ, ಮಗನ ಸ್ನೇಹಕ್ಕೆ ಅಧೀನಳಾಗಿ, ಶೋಕವೆಂಬ ಬೆಂಕಿಯಿಂದ ಉರಿಯುತ್ತ, ಮಗನ ದರ್ಶನದಲ್ಲಿ ನಿರಾಶಳಾಗಿ ಗಂಡನಿಂದ ವಿಯೋಗವನ್ನು ಹೊಂದಿದ ಚಕ್ರವಾಕದಂತೆಯೂ, ಮರವನ್ನು ಬಿಟ್ಟು ಬಿದ್ದ ಬಳ್ಳಿಯಂತೆಯೂ ಕೆಳಗೆ ಬಿದ್ದಳು.

೪೧೮. ದೊಣ್ಣೆಯನ್ನು ಹಿಡಿಯದ ಕುರುಡಿಯರಂತೆ ಹೆಜ್ಜೆಹೆಜ್ಜೆಗೂ ಎಡವುತ್ತ, ಮುಖವನ್ನು ಅಗಲಮಾಡಿಕೊಂಡು ಚೂಪಾದ ಕೋರೆಹಲ್ಲುಳ್ಳದ್ದಾದ ಆ ಮಾಂಸಾಹಾರಿಯಾದ ಹುಲಿಯು ಇದ್ದಲ್ಲಿಗೆ ಹೋಯಿತು.

೪೧೯. ಈ ಹಸುವು ಆ ಹುಲಿಯ ಬಳಿಗೆ ಬರುವುದರೊಳಗೆ ಬಾಲವನ್ನು ಮೇಲಕ್ಕೆತ್ತಿಕೊಂಡು ಬಹು ವೇಗದಿಂದ ಓಡುತ್ತ, ಆ ಹಸುವಿನ ಕರುವು ಓಡಿಬಂದು ಆ ಹಸುವಿನ ಮುಂದೆ ಹುಲಿಯ ಎದುರಿಗೆ ನಿಂತಿತು.

ಆಗಮ್ಯ ಮಾತುರಗ್ರೇ ಸ ಮೃಗೇಂದ್ರಸ್ಯಾಗ್ರತೋಽಭವತ್ ।
ಆಗತಂ ತುಂ ಸುತಂ ದೃಷ್ಟ್ವಾ ಮೃತ್ಯುಂ ತಂ ಚಾಗ್ರತಃ ಸ್ಥಿತಂ ॥
ವ್ಯಾಘ್ರಂ ದೃಷ್ಟ್ವಾ ತು ಸಾ ಧೇನುರಿದಂ ವಚನಮಬ್ರವೀತ್, ॥ ೪೨೦ ॥

॥ ನಂದೋವಾಚ ॥

ಭೋ ಭೋ ಮೃಗೇಂದ್ರಾಗತಾಽಹಂ ಸತ್ಯಧರ್ಮವ್ರತೇ ಸ್ಥಿತಾ ।
ಕುರುಂ ತೃಪ್ತಿಂ ಯಥಾಕಾಮಂ ಮಮ ಮಾಂಸೇನ ಸಾಂಪ್ರತಂ ॥ ೪೨೧ ॥

ತೃಪ್ಯಂತು ಪಂಚ ಭೂತಾನಿ ಪಿಬ ತ್ವಂ ಶೋಣಿತಂ ಮಮ ।
ಮೃತಾಯಾಂ ಮಯಿ ಚ ವ್ಯಾಘ್ರ ಭಕ್ಷಸ್ವೇಮಂ ಸುಪುತ್ರಕಂ ॥ ೪೨೨ ॥

॥ ದ್ವೀಪ್ಯುವಾಚ ॥

ಸ್ವಾಗತಂ ತವ ಕಲ್ಯಾಣಿ ಧೇನುಕೇ ಸತ್ಯವಾದಿನಿ ।
ನ ಹಿ ಸತ್ಯವತಾಂ ಕಿಂಚಿದಶುಭಂ ಭವತಿ ಕ್ವಚಿತ್ ॥ ೪೨೩ ॥

---

೪೨೦. ಬಂದ ಮಗನನ್ನು ನೋಡಿ ಮೃತ್ಯುವು ಒದಗಿರುವುದನ್ನು ತಿಳಿದು ಆ ಹಸುವು ಹುಲಿಯನ್ನು ನೋಡಿ ಇಂತೆಂದಿತು.

೪೨೧. ನಂದೆಯು ಹೇಳಿತು :—ಎಲೈ ಮೃಗೇಂದ್ರನೇ, ಸತ್ಯವೆಂಬ ಧರ್ಮವನ್ನು ಅನುಸರಿಸಿ ನಾನು ಬಂದಿದ್ದೇನೆ. ನನ್ನ ಮಾಂಸದಿಂದ ಈಗ ನೀನು ಬೇಕಾದಷ್ಟು ತೃಪ್ತಿಯನ್ನು ಹೊಂದು.

೪೨೨. ನಿನ್ನ ಪಂಚಭೂತಗಳೂ ತೃಪ್ತಿಯನ್ನು ಹೊಂದಲಿ. ನನ್ನ ರಕ್ತವನ್ನು ಕುಡಿ. ಎಲೈ ಹುಲಿಯೇ, ನಾನು ಸತ್ತನಂತರ ನನ್ನ ಈ ಕರುವನ್ನೂ ತಿಂದು ಬಿಡು.

೪೨೩. ಹುಲಿಯು ಹೇಳಿತು :—ಎಲೈ ಸತ್ಯವಾದಿನಿಯಾದ ಧೇನುವೇ, ಕಲ್ಯಾಣಿಯೇ, ನಿನಗೆ ಸುಖಾಗಮನವೇ ? ಸತ್ಯವಂತರಿಗೆ ಕೆಟ್ಟದ್ದು ಎಲ್ಲಿಯೂ ಯಾವಾಗಲೂ ಆಗುವುದೇ ಇಲ್ಲ.

**ತ್ವಯೋಕ್ತಂ ಧೇನುಕೇ ಪೂರ್ವಂ ಸತ್ಯಂ ಪ್ರತ್ಯಾಗಮೋ ಪುನಃ ।**
**ತೇನ ಮೇ ಕೌತುಕಂ ಜಾತಂ ಪ್ರಾಪ್ತಾಗಚ್ಛೇತ್ಕಥಂ ಪುನಃ ॥ ೪೨೪ ॥**

**ತವ ಸತ್ಯಪರೀಕ್ಷಾರ್ಥಂ ಪ್ರೇಷಿತಾಽಸಿ ಮಯಾ ಪುನಃ ।**
**ಅನ್ಯಥಾ ಮಾಂ ಸಮಾಸಾದ್ಯ ಜೀವಂತೀ ಯಾಸ್ಯಸೇ ಕಥಂ ॥ ೪೨೫ ॥**

**ತಚ್ಚ ನಃ ಕೌತುಕಂ ಜಾತಂ ಸತ್ಯಮನ್ವೇಷಣಂ ಮಮ ।**
**ತಸ್ಮಾದನೇನ ಸತ್ಯೇನ ಮುಕ್ತಾಽಸಿ ಚ ಮಯಾಽಧುನಾ ॥ ೪೨೬ ॥**

**ಭಗಿನೀ ಭವಸೇ ಮಹ್ಯಂ ಭಾಗಿನೇಯಃ ಸುತಸ್ತವ ।**
**ದತ್ತೋಪದೇಶಾಽಸಿ ಶುಭೇ ಮಮ ಪಾಪಿಷ್ಠಕರ್ಮಣಃ ॥ ೪೨೭ ॥**

**ಸತ್ಯೇ ಪ್ರತಿಷ್ಠಿತಾ ಲೋಕಾ ಧರ್ಮಃ ಸತ್ಯೇ ಪ್ರತಿಷ್ಠಿತಃ ।**
**ಸತ್ಯೇನ ಗೌಃ ಕ್ಷೀರಧಾರಾಂ ಪ್ರಮುಂಚತಿ ಹವಿಷ್ಪ್ರಿಯಾಂ ॥ ೪೨೮ ॥**

---

೪೨೪. ಎಲೈ ಧೇನುಕೆಯೇ, ನೀನು ಸತ್ಯವಾಗಿಯೂ ಮತ್ತೆ ಹಿಂತಿರುಗಿ ಬರುತ್ತೇನೆಂದು ಹೇಳಿದೆ. ಅದರಿಂದ ನನಗೆ ಆಶ್ಚರ್ಯವಾಯಿತು. ಈಗ ಸಿಕ್ಕದೇ ಹೋದರೆ ಮತ್ತೆ ಹೇಗೆತಾನೇ ಬಂದೀತು ಎಂದು.

೪೨೫. ನಿನ್ನ ಸತ್ಯವನ್ನು ಪರೀಕ್ಷಿಸುವುದಕ್ಕೋಸ್ಕರ ನಾನು ನಿನ್ನನ್ನು ಕಳುಹಿಸಿದೆ. ಅಷ್ಟೇ. ಇಲ್ಲದಿದ್ದರೆ ನನ್ನ ಬಳಿಗೆ ಬಂದು ಬದುಕಿ ಮತ್ತೆ ಹೇಗೆ ಹೋಗುತ್ತೀಯೆ ?

೪೨೬. ಅದು ನನಗೆ ಆಶ್ಚರ್ಯವಾಯಿತು. ಸತ್ಯವನ್ನು ಹುಡುಕಿದೆನು. ಆದ್ದರಿಂದ ಈ ಸತ್ಯದಿಂದಲೇ ನನ್ನಿಂದ ನೀನು ಬಿಡಲ್ಪಟ್ಟಿದ್ದೀಯೆ.

೪೨೭. ನನಗೆ ನೀನು ಸೋದರಿಯಾದೆ. ನಿನ್ನ ಮಗನು ಸೋದರಳಿಯನಾದನು. ಪಾಪ ಕರ್ಮಿಯಾದ ನನಗೆ ನೀನು ಉಪದೇಶವನ್ನು ಮಾಡಿದೆ.

೪೨೮. ಲೋಕವೆಲ್ಲವೂ ಸತ್ಯದಲ್ಲಿಯೇ ನಿಂತಿದೆ. ಧರ್ಮವು ಸತ್ಯದಲ್ಲಿ ನಿಂತಿದೆ. ಸತ್ಯದಿಂದಲೇ ಹಸುವು ಹವಿಸ್ಸಿಗೆ ಯೋಗ್ಯವಾದ ಹಾಲನ್ನು ಕರೆಯುತ್ತದೆ.

ಸ ವೈ ಧನ್ಯತಮೋ ಲೋಕೋ ಯಸ್ತೇ ಕ್ಷೀರೇನ ಜೀವತಿ ।
ಭೂಮೇಃ ಪ್ರದೇಶಾ ಧನ್ಯಾಸ್ತೇ ಸತೃಣಾ ವೀರುಧಃ ಶುಭೇ ॥ ೪೨೯ ॥

ತೇ ಧನ್ಯಾಸ್ತೇ ಕೃತಾರ್ಥಾಶ್ಚ ತೈರೇವ ಸುಕೃತಂ ಕೃತಂ ।
ತೈರಾಪ್ತಂ ಜನ್ಮನಃ ಸಾರಂ ಯೇ ಪಿಬಂತಿ ಪಯಸ್ತವ ॥ ೪೩೦ ॥

ಮೃಗೇಂದ್ರಃ ಪ್ರತ್ಯಯಂ ದೃಷ್ಟ್ವಾ ವಿಸ್ಮಯಂ ಪರಮಂ ಗತಃ ।
ಪ್ರತ್ಯಾದೇಶೋಽಯಮಸ್ಮಾಕಂ ಸತ್ಯಂ ದೇವೈಃ ಪ್ರದರ್ಶಿತಃ ॥ ೪೩೧ ॥

ಸತ್ಯಮೇವಂ ಗವಾಂ ದೃಷ್ಟ್ವಾ ನ ಮೇ ರೋಚತಿ ಜೀವಿತಂ ।
ತತ್ಕರಿಷ್ಯೇ ಅಹಂ ಕರ್ಮ ಯೇನ ಮುಂಚಾಮಿ ಕಿಲ್ಬಿಷಾತ್ ॥ ೪೩೨ ॥

ಮಯಾ ಜೀವಸಹಸ್ರಾಣಿ ಭಕ್ಷಿತಾನಿ ಹತಾನಿ ಚ ।
ಗತಿಂ ಕಾಂ ತು ಗಮಿಷ್ಯಾಮಿ ದೃಷ್ಟ್ವಾ ಗೋಸತ್ಯಮೀದೃಶಂ ॥ ೪೩೩ ॥

---

೪೨೯. ನಿನ್ನ ಹಾಲಿನಿಂದ ಜೀವಿಸುವ ಲೋಕವೇ ಧನ್ಯವಾದುದು. ನೀನು ತಿನ್ನುವ ಹುಲ್ಲು, ಬಳ್ಳಿಗಳೂ ಇರುವ ಭೂಪ್ರದೇಶಗಳೇ ಧನ್ಯಗಳು.

೪೩೦. ನಿನ್ನ ಹಾಲನ್ನು ಕುಡಿಯುವವರೇ ಧನ್ಯರು, ಕೃತಾರ್ಥರು. ಅವರೇ ಪುಣ್ಯಶಾಲಿಗಳು, ಅವರೇ ಜನ್ಮಸಾಫಲ್ಯವನ್ನು ಹೊಂದಿದವರು.

೪೩೧. ಆ ಹುಲಿಯು ನಂಬಿಕೆಯನ್ನು ನೋಡಿ, ಆಶ್ಚರ್ಯವನ್ನು ಬಹುವಾಗಿ ಹೊಂದಿತು. ಇದು ನನಗೆ ತಿರಸ್ಕಾರವನ್ನು ದೇವರು ತೋರಿಸಿದ ರೀತಿಯು. ನಿಶ್ಚಯವು.

೪೩೨. ಈರೀತಿಯಾದ ಹಸುಗಳನ್ನು ನೋಡುವುದರಿಂದ ನನಗೆ ಜೀವಿಸುವಿಕೆಯೇ ಬೇಡವಾಗಿದೆ. ನಿಶ್ಚಯವು. ಆದ್ದರಿಂದ ಪಾಪದಿಂದ ಮುಕ್ತಿಯನ್ನು ಹೊಂದುವ ಕೆಲಸವನ್ನೂ ನಾನು ಮಾಡಬೇಕು.

೪೩೩. ನಾನು ಅನೇಕ ಪ್ರಾಣಿಗಳನ್ನೂ ಕೊಂದಿದ್ದೇನೆ, ತಿಂದಿದ್ದೇನೆ. ಗೋವಿನ ಈರೀತಿಯಾದ ಸತ್ಯವನ್ನು ನೋಡಿ ಯಾವಗತಿಯನ್ನು ಹೊಂದುವೆನು ?

**ಅಹಂ ಪಾಪೋ ದುರಾಚಾರೋ ನೃಶಂಸೋ ಜೀವಘಾತಕಃ ।**
**ಕಾಂಸ್ತು ಲೋಕಾನ್ಗಮಿಷ್ಯಾಮಿ ಕೃತ್ವಾ ಕರ್ಮ ಸುದಾರಣಂ** ॥ ೪೩೪ ॥

**ಗಮಿಷ್ಯೇ ಪುಣ್ಯತೀರ್ಥಾನಿ ಕರಿಷ್ಯೇ ಪಾಪಮೋಚನಂ ।**
**ಪತಿಷ್ಯೇ ಗಿರಿಮಾರುಹ್ಯ ವಿಶೇ ವಾಽಪಿ ಹುತಾಶನಂ** ॥ ೪೩೫ ॥

**ಧೇನೋಽದ್ಯ ಯನ್ಮಯಾ ಕಾರ್ಯಂ ತಪಃ ಪಾಪವಿಶುದ್ಧಯೇ ।**
**ತದಾದಿಶಸ್ವ ಸಂಕ್ಷೇಪಾನ್ನ ಕಾಲೋ ವಿಸ್ತರಸ್ಯ ತು** ॥ ೪೩೬ ॥

**॥ ಧೇನುರುವಾಚ ॥**

**ತಪಃ ಕೃತೇ ಪ್ರಶಂಸಂತಿ ತ್ರೇತಾಯಾಂ ಜ್ಞಾನಕರ್ಮ ಚ ।**
**ದ್ವಾಪರೇ ಯಜ್ಞಮೇವಾಹುರ್ದಾನಮೇಕಂ ಕಲೌ ಯುಗೇ** ॥ ೪೩೭ ॥

**ಸರ್ವೇಷಾಮೇವ ದಾನಾನಾಮಿದಮೇವೈಕಮುತ್ತಮಂ ।**
**ಅಭಯಂ ಸರ್ವಭೂತಾನಾಂ ನಾಸ್ತಿ ದಾನಮತಃ ಪರಂ** ॥ ೪೩೮ ॥

---

೪೩೪. ನಾನು ಪಾಪಿಯು, ದುರಾಚಾರಿಯು, ಕ್ರೂರನು, ಜೀವರನ್ನು ಕೊಲ್ಲುವವನು. ಈರೀತಿಯಾದ ಕ್ರೂರಕರ್ಮವನ್ನು ಮಾಡಿ ನನಗೆ ಯಾವ ಲೋಕವು ಪ್ರಾಪ್ತಿಯಾಗುವುದು ?

೪೩೫. ಪುಣ್ಯತೀರ್ಥಗಳಿಗೆ ಹೋಗುತ್ತೇನೆ, ಪಾಪಗಳನ್ನು ನಾಶಮಾಡಿಕೊಳ್ಳುತ್ತೇನೆ, ಬೆಟ್ಟವನ್ನು ಹತ್ತಿ ಅಲ್ಲಿಂದ ಬಿದ್ದಾಗಲಿ, ಬೆಂಕಿಯನ್ನು ಪ್ರವೇಶಿಸಿಯಾಗಲಿ ಸಾಯುತ್ತೇನೆ.

೪೩೬. ಎಲೈ ಧೇನುವೇ, ಪಾಪಶುದ್ಧಿಗೋಸ್ಕರ ನಾನೇನು ತಪಸ್ಸನ್ನು ಮಾಡಬೇಕು ? ಅದನ್ನು ಸಂಕ್ಷೇಪವಾಗಿ ತಿಳಿಸು. ವಿಸ್ತಾರವಾಗಿ ಕೇಳಲು ಕಾಲವಿಲ್ಲ.

೪೩೭. ಹಸುವು ಹೇಳಿತು :—ಕೃತಯುಗದಲ್ಲಿ ತಪಸ್ಸು ಶ್ರೇಷ್ಠವು. ತ್ರೇತಾಯುಗದಲ್ಲಿ ಜ್ಞಾನಕರ್ಮವು ಮುಖ್ಯವಾದುದು. ದ್ವಾಪರದಲ್ಲಿ ಯಜ್ಞವನ್ನು ಶ್ರೇಷ್ಠವೆಂದು ಹೇಳುತ್ತಾರೆ. ಕಲಿಯುಗದಲ್ಲಿ ದಾನವೇ ಉತ್ತಮವೆಂದು ಹೇಳುತ್ತಾರೆ.

೪೩೮. ದಾನಗಳೆಲ್ಲಕ್ಕೂ ಅಭಯದಾನವೇ ಉತ್ತಮವು. ಅದಕ್ಕಿಂತ ಉತ್ತಮ ದಾನ ಮತ್ತೊಂದು ಇಲ್ಲ

ಚರಾಚರಾಣಾಂ ಭೂತಾನಾಮಭಯಂ ಯಃ ಪ್ರಯಚ್ಛತಿ ।
ಸ ಸರ್ವಭಯಸಂತ್ಯಕ್ತಃ ಪರಂ ಬ್ರಹ್ಮಾಧಿಗಚ್ಛತಿ ॥ ೪೩೯ ॥

ನಾಸ್ತ್ಯಹಿಂಸಾಸಮಂ ದಾನಂ ನಾಸ್ತ್ಯಹಿಂಸಾಸಮಂ ತಪಃ ।
ಯಥಾ ಹಸ್ತಿಪದೇ ಹ್ಯನ್ಯತ್ಪದಂ ಸರ್ವಂ ಪ್ರಲೀಯತೇ ॥ ೪೪೦ ॥

ಸರ್ವೇ ಧರ್ಮಾಸ್ತಥಾ ವ್ಯಾಘ್ರ ಪ್ರತೀಯಂತೇ ಹ್ಯಹಿಂಸಯಾ ।
ಯೋಗವೃಕ್ಷಸ್ಯ ಯಾ ಛಾಯಾ ತಾಪತ್ರಯವಿನಾಶಿನೀ ॥ ೪೪೧ ॥

ಧರ್ಮಜ್ಞಾನಸ್ಯ ಪುಷ್ಪಾಣಿ ಸ್ವರ್ಗಮೋಕ್ಷಫಲಾನಿ ಚ ।
ದುಃಖತ್ರಯಾಭಿಸಂತಪ್ತಾಶ್ಛಾಯಾಂ ಯೋಗತರೋಃ ಶ್ರಿತಾಃ ॥ ೪೪೨ ॥

ನ ಬಾಧ್ಯಂತೇ ಪುನರ್ದುಃಖೈಃ ಪ್ರಾಪ್ಯ ನಿರ್ವಾಣಮುತ್ತಮಂ ।
ಇತ್ಯೇತತ್ಪರಮಂ ಶ್ರೇಯಃ ಕೀರ್ತಿತಂ ತೇ ಸಮಾಸತಃ ।
ಜ್ಞಾತಂ ಚೈವ ತ್ವಯಾ ಸರ್ವಂ ಕೇವಲಂ ಮಾಂ ತು ಪೃಚ್ಛಸಿ ॥ ೪೪೩ ॥

---

೪೩೯. ಚರಾಚರ ಪ್ರಾಣಿಗಳಿಗೆ ಅಭಯದಾನವನ್ನು ಯಾವನು ಕೊಡುತ್ತಾನೆಯೋ, ಅವನು ಭಯಗಳನ್ನೆಲ್ಲಾ ಬಿಟ್ಟವನಾಗಿ ಪರಬ್ರಹ್ಮನನ್ನು ಹೊಂದುತ್ತಾನೆ.

೪೪೦. ಅಹಿಂಸೆಗೆ ಸಮವಾದ ದಾನವಾವುದೂ ಇಲ್ಲ, ಅಹಿಂಸಿಗೆ ಸಮವಾದ ತಪಸ್ಸೂ ಇಲ್ಲ. ಆನೆಯ ಕಾಲಿನ ಹೆಜ್ಜೆಯಲ್ಲಿ ಮಿಕ್ಕವುಗಳ ಹೆಜ್ಜೆಯು ಹೇಗೆ ಮುಳುಗಿಹೋಗುತ್ತದೆಯೋ ಹಾಗೆ ಅಹಿಂಸೆಯಲ್ಲಿ ಎಲ್ಲವೂ ಅಡಗುತ್ತವೆ.

೪೪೧. ಎಲೈ ವ್ಯಾಘ್ರನೇ, ಎಲ್ಲಾ ಧರ್ಮಗಳೂ, ಅಹಿಂಸೆಯಿದ್ದರೇನೆಯೇ ಪ್ರಕಾಶಿಸುತ್ತವೆ. ಯೋಗವೆಂಬ ಮರದ ನೆರಳು ತಾಪತ್ರಯಗಳನ್ನು ನಾಶ ಮಾಡುತ್ತದೆ.

೪೪೨. ಆ ಯೋಗವೆಂಬ ಮರಕ್ಕೆ ಧರ್ಮಜ್ಞಾನವೇ ಹೂವು. ಸ್ವರ್ಗವೂ ಮೋಕ್ಷವೂ ಫಲಗಳು. ತಾಪತ್ರಯದಿಂದ ಸುಡಲ್ಪಟ್ಟ ಯೋಗವೆಂಬ ಮರದ ನೆರಳನ್ನು ಆಶ್ರಯಿಸಿರಬೇಕು.

೪೪೩. ಮೋಕ್ಷವನ್ನು ಹೊಂದಿದವರು ದುಃಖಕ್ಕೆ ಒಳಗಾಗುವುದಿಲ್ಲ. ಈರೀತಿ ಶ್ರೇಯಸ್ಕರವಾದುದನ್ನು ನಿನಗೆ ಹೇಳಿದ್ದೇನೆ. ನಿನಗೆ ಎಲ್ಲವೂ ಗೊತ್ತಿದೆ. ನನ್ನನ್ನು ಸುಮ್ಮನೆ ಕೇಳುತ್ತಿದ್ದೀಯೆ,.

॥ ದ್ವೀಪ್ಯುವಾಚ ॥

ಅಹಂ ಮೃಗ್ಯಾ ಪುರಾ ಶಪ್ತೋ ವ್ಯಾಘ್ರರೂಪೇಣ ಸಂಸ್ಥಿತಃ ।
ತತಃ ಪ್ರಾಣಿವಧಾತ್ಸರ್ವಮಶೇಷಮಪಿ ವಿಸ್ಮೃತಂ ॥ ೪೪೪ ॥

ತ್ವತ್ಸಂಪರ್ಕೋಪದೇಶೇನ ಸಂಜಾತಂ ಸ್ಮರಣಂ ಮಮ ।
ತ್ವಂ ಚಾಪ್ಯನೇನ ಸತ್ಯೇನ ಗಮಿಷ್ಯಾಮಿ ಪರಾಂ ಗತಿಂ ॥ ೪೪೫ ॥

ತದಹಂ ತ್ವಾಂ ಪುನಃ ಪೃಚ್ಛೇ ಪ್ರಶ್ನಮೇಕಂ ಹೃದಿ ಸ್ಥಿತಂ ।
ಸಾಗ್ರಂ ವರ್ಷಶತಂ ಜಾತಂ ಚಿಂತಯಾನಸ್ಯ ಮೇ ಶುಭೇ ॥ ೪೪೬ ॥

ಭವತೀಭಾಗ್ಯಯೋಗೇನ ಕದಾಚಿತ್ಸ್ವರ್ಗಶೋಭನೇ ।
ಕೃತಂ ಧರ್ಮಸ್ಯ ಸಂಸ್ಥಾನಂ ಸತಾಂ ಮಾರ್ಗೇ ಪ್ರತಿಷ್ಠಿತಂ ।
ಕಿಂ ತೇಽಭಿಧಾನಂ ಕಲ್ಯಾಣಿ ಬ್ರೂಹಿ ಮೇ ತಚ್ಚ ಶೋಭನಂ ॥ ೪೪೭ ॥

---

೪೪೪. ಹುಲಿಯು ಹೇಳಿತು :—ನಾನು ಪೂರ್ವದಲ್ಲಿ ಒಂದು ಜಿಂಕೆಯಿಂದ ಶಾಪವನ್ನು ಹೊಂದಿದೆನು. ಈ ಹುಲಿಯಾಗಿ ಹುಟ್ಟಿದೆನು. ಅನಂತರ ಪ್ರಾಣಿವಧೆಯ ಪಾಪದಿಂದ ಎಲ್ಲವೂ ಮರೆತುಹೋಯಿತು.

೪೪೫. ನಿನ್ನ ಸಂಬಂಧವಾದ ಉಪದೇಶದಿಂದ ನನಗೆ ಪುನಃ ಸ್ಮರಣೆಯುಂಟಾಯಿತು. ನೀನೂ, ಕೂಡ ಈ ಸತ್ಯದಿಂದ ಉತ್ತಮವಾದ ಗತಿಯನ್ನು ಹೊಂದುತ್ತಿಯೆ.

೪೪೬. ಆದ್ದರಿಂದ ನನ್ನ ಮನಸ್ಸಿನಲ್ಲಿರುವ, ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಇದನ್ನೇ ಯೋಚಿಸುತ್ತಿದ್ದ ನನಗೆ ನೂರು ವರ್ಷಗಳು ಕಳೆದುವು.

೪೪೭. ನಿನ್ನೊಡನೆ ಒಂದಾವರ್ತಿ ಸಂಬಂಧಭಾಗ್ಯಯೋಗದಿಂದ ಉತ್ತಮವಾದ ಸ್ವರ್ಗವು ಸಿಕ್ಕಿತು. ಧರ್ಮವನ್ನು ಸ್ಥಾಪಿಸಿರುವೆ. ಸತ್ಪುರುಷರ ಮಾರ್ಗದಲ್ಲಿ ನಿಂತಿರುವೆ. ಆದರೆ ಎಲೈ ಕಲ್ಯಾಣಿಯೇ, ನಿನ್ನ ಹೆಸರೇನು? ಅದನ್ನು ದಯವಿಟ್ಟು ಹೇಳು.

॥ ನಂದೋವಾಚ ॥

ಮಮ ನಂದೇತಿ ಸಂಜ್ಞಾ ತು ಕೃತಾ ನಂದೇನ ಸ್ವಾಮಿನಾ ।
ಸಾಂಪ್ರತಂ ಭಕ್ಷಯಸ್ವೇತಿ ತಿಷ್ಠೇಸ್ತ್ವಂ ಕೇನ ಹೇತುನಾ ॥ ೪೪೮ ॥

॥ ಪುಲಸ್ತ್ಯ ಉವಾಚ ॥

ನಂದೇತಿ ಶ್ರುತ್ವಾ ತನ್ನಾಮ ಮುಕ್ತಃ ಶಾಪಾತ್ಪ್ರಭಂಜನಃ ।
ಪುನರ್ನೃಪತ್ವಮಾಪನ್ನೋ ಬಲರೂಪಸಮನ್ವಿತಃ ॥ ೪೪೯ ॥

ಏತಸ್ಮಿನ್ನಂತರೇ ಧರ್ಮಸ್ತಾಂ ನಂದಾಂ ಸತ್ಯವಾದಿನೀಂ ।
ದ್ರಷ್ಟುಂ ಸಮಾಗಮತ್ತತ್ರ ಪ್ರಾಬ್ರವೀಚ್ಚ ಯಶಸ್ವಿನೀಂ ॥ ೪೫೦ ॥

॥ ಧರ್ಮ ಉವಾಚ ॥

ತವ ಸತ್ಯಗಿರಾಕೃಷ್ಟೋ ಧರ್ಮೋಽಹಮಿಹ ಚಾಗತಃ ।
ನಂದೇ ವೃಣೀಷ್ವ ಭದ್ರಂ ತೇ ವರಂ ವರತಮಂ ಹಿ ಯತ್ ।
ಏವಮುಕ್ತಾ ತು ಸಾ ದೇವೀ ನಂದಾ ತಂ ಪ್ರಾರ್ಥಯದ್ವರಂ ॥ ೪೫೧ ॥

---

೪೪೮. ನಂದೆಯು ಹೇಳಿತು :—ನನ್ನ ಸ್ವಾಮಿಯಾದ ನಂದನು ನನಗೆ ನಂದೆ ಎಂಬದಾಗಿ ಹೆಸರಿಟ್ಟಿರುವನು. ಈಗ ನೀನು ತಿನ್ನು ಎಂದು ನಿಂತಿದ್ದೇನೆ ನೀನು ಸುಮ್ಮನಿರಲು ಕಾರಣವೇನು ?

೪೪೯. ಪುಲಸ್ತ್ಯನು ಹೇಳಿದನು :—ನಂದೆ ಎಂಬ ಹೆಸರನ್ನು ಕೇಳಿದೊಡನೆಯೇ, ಆ ಪ್ರಭಂಜನನು ಶಾಪದಿಂದ ಮುಕ್ತನಾಗಿ ಮತ್ತೆ ರೂಪಬಲದಿಂದ ಕೂಡಿದ ಪ್ರಭಂಜನನೆಂಬ ರಾಜನೇ ಆದನು.

೪೫೦. ಇಷ್ಟರೊಳಗೆ ಧರ್ಮನು ಆ ಸತ್ಯವಾದಿಯಾದ ನಂದೆಯನ್ನು ನೋಡಿದನು. ಆಕೆಯನ್ನು ಕುರಿತು ಇಂತೆಂದನು.

೪೫೧. ಧರ್ಮನು ಹೇಳಿದನು :—ಎಲೈ ನಂದೆಯೇ, ನಿನ್ನ ಧರ್ಮದ ಮಾತಿನಿಂದ ಸೆಳೆಯಲ್ಪಟ್ಟವನಾಗಿ ಧರ್ಮನಾದ ನಾನು ಬಂದಿದ್ದೇನೆ. ಅಮ್ಮ ನೀನು ಉತ್ತಮೋತ್ತಮವಾದ ವರವನ್ನು ಕೇಳಿಕೋ ಎಂದನು. ಹೀಗೆ ಹೇಳಲು ಆ ನಂದೆಯು ವರವನ್ನು ಕೇಳಿಕೊಂಡಿತು.

॥ ನಂದೋವಾಚ ॥

ತವಾನುಭಾವಾತ್ಸಸುತಾ ಗಚ್ಛಾಮಿ ಪದಮುತ್ತಮಂ ।
ಭವತ್ವಿದಂ ಶುಭಂ ತೀರ್ಥಂ ಮುನೀನಾಂ ಧರ್ಮದಾಯಕಂ ॥ ೪೫೨ ॥

ಮನ್ನಾಮ್ನಾ ಚ ಸರಿದಿಯಂ ನಂದಾ ನಾಮ ಸರಸ್ವತೀ।
ವರಪ್ರದಾನಾದ್ದೇವೇಶ ತದೇತತ್ಪ್ರಾರ್ಥಿತಂ ಮಯಾ ॥ ೪೫೩ ॥

॥ ಪುಲಸ್ತ್ಯ ಉವಾಚ ॥

ಸಾ ತತ್ಕ್ಷಣಾದ್ಗತಾ ದೇವೀ ಸ್ಥಾನಂ ಸತ್ಯವತಾಂ ಶುಭಂ ।
ಪ್ರಭಂಜನೋಽಪಿ ತದ್ರಾಜ್ಯಂ ಸಂಪ್ರಾಪ್ತಃ ಪ್ರಾಗುಪಾರ್ಜಿತಂ ॥ ೪೫೪ ॥

ನಂದಾ ಯೇನ ಗತಾ ಸ್ವರ್ಗಂ ನಂದಾ ಪ್ರಾಪ್ಯ ಸರಸ್ವತೀಂ ।
ತೇನಾಖ್ಯೇಯಂ ಬುಧೈಸ್ತಸ್ಯಾಃ ಕೃತಾ ನಂದಾಸರಸ್ವತೀ ॥ ೪೫೫ ॥

ಸರಸ್ವತೀ ಪುನಸ್ತಸ್ಮಾದ್ವನಾತ್ಖರ್ಜೂರಸಂಜ್ಞಿತಾತ್ ॥ ೪೫೬ ॥

---

೪೫೨-೪೫೩. ನಂದೆಯು ಕೇಳಿತು :—ಎಲೈ ದೇವೇಶನೇ, ನಿನ್ನ ಕೃಪೆಯಿಂದ ಮಗನೊಡನೆ ಕೂಡಿದ ನನಗೆ ಉತ್ತಮಪದವನ್ನು ದಯಪಾಲಿಸು. ಈ ಜಾಗವು ಮುನಿಗಳಿಗೆ ಧರ್ಮವನ್ನುಂಟುಮಾಡುವ ತೀರ್ಥವಾಗಲಿ. ಇಲ್ಲಿರುವ ಸರಸ್ವತೀ ನದಿಯು ನನ್ನ ಹೆಸರನ್ನು ಹೊಂದಿ ಪ್ರಸಿದ್ಧವಾಗಲಿ. ಈ ವರವನ್ನು ಕೊಡೆಂದು ಕೇಳಿಕೊಳ್ಳುತ್ತೇನೆ.

೪೫೪. ಪುಲಸ್ತ್ಯನು ಹೇಳಿದನು :—ಒಡನೆಯೇ, ಆ ನಂದೆಯು ಸತ್ಯವಂತರು ಹೊಂದತಕ್ಕ ಸ್ಥಾನವನ್ನು ಹೊಂದಿತು. ಪ್ರಭಂಜನನೂ ಕೂಡ ತನ್ನ ಮೊದಲು ಹೊಂದಿದ್ದ ರಾಜ್ಯವನ್ನು ಹೊಂದಿದನು.

೪೫೫-೪೫೬. ನಂದೆಯು ನಂದೆಯೆಂಬ ಸರಸ್ವತಿಯನ್ನು ಹೊಂದಿ ಸ್ವರ್ಗವನ್ನು ಹೊಂದಿದುದರಿಂದ ನಂದಾ ಎಂದು ತಿಳಿದವರು ಹೆಸರಿಟ್ಟರು. ಆ ನಂದಾ ಸರಸ್ವತಿಯು ಮತ್ತೆ ಆ ಖರ್ಜೂರಿಕಾವನದಿಂದ ದಕ್ಷಿಣಕ್ಕೆ ಭೂಮಿಯನ್ನು ಪಾವನ ಮಾಡುತ್ತಾ ಹೊರಟಿದೆ.

ದಕ್ಷಿಣೇನ ಪುನರ್ಯಾತಾ ಪಾವಯಂತೀ ಧರಾತಲಂ ।
ಆಗಚ್ಛನ್ನಪಿ ಯಸ್ತಸ್ಯಾ ನಾಮ ಗೃಹ್ಣಾತಿ ಮಾನವಃ ॥ ೪೫೭ ॥

ಸ ಜೀವನ್ಸುಖಮಾಪ್ನೋತಿ ಮೃತೋ ಭವತಿ ಖೇಚರಃ ।
ತತ್ರ ಯೇ ಶುಭಕರ್ಮಾಣಸ್ತ್ಯಜಂತಿ ಸ್ವಾಂ ತನುಂ ನರಾಃ ॥ ೪೫೮ ॥

ತೇಽಪಿ ವಿದ್ಯಾಧರಾ ರಾಜನ್ಭವಂತಿ ಸುಖಿನೋ ಜನಾಃ ।
ನರಾಣಾಂ ಸ್ವರ್ಗನಿಃಶ್ರೇಣೀ ಸ್ನಾನಾತ್ಪಾನಾತ್ಸರಸ್ವತೀ ॥ ೪೫೯ ॥

ತತ್ರ ಸ್ನಾನಂ ಪ್ರಕುರ್ವಂತಿ ಯೇಽಷ್ಟಮ್ಯಾಂ ಸುಸಮಾಹಿತಾಃ ।
ತೇ ಮೃತಾಃ ಸ್ವರ್ಗಮಾಸಾದ್ಯ ಮೋದಂತೇ ಸುಖಿನೋ ನರಾಃ ॥ ೪೬೦ ॥

ಸರಸ್ವತೀ ಸದಾ ಸ್ತ್ರೀಣಾಂ ತತ್ರ ಸೌಭಾಗ್ಯದಾಯಿಕಾ ।
ಉಪೋಷಿತಾ ತೃತೀಯಾಯಾಂ ಸಾಽಪಿ ಸೌಭಾಗ್ಯದಾಯಿಕಾ ॥ ೪೬೧ ॥

ತತ್ರ ತದ್ದರ್ಶನೇನಾಪಿ ಮುಚ್ಯತೇ ಪಾಪಸಂಚಯಾತ್ ।
ಸ್ಪೃಶಂತಿ ಯೇ ನರಾಃ ಕೇಚಿತ್ತೇಽಪಿ ಜ್ಞೇಯಾ ಮುನೀಶ್ವರಾಃ ॥ ೪೬೨ ॥

---

೪೫೭. ಬರುತ್ತಿರುವಾಗಲೇ ಅದರ ಹೆಸರನ್ನು ಹೇಳಿದ ಮನುಷ್ಯನು ಬದುಕಿರುವಾಗಲೇ ಸುಖವನ್ನು ಹೊಂದುತ್ತಾನೆ. ಸತ್ತನಂತರ ಖೇಚರನಾಗುತ್ತಾನೆ.

೫೫೮-೪೫೯. ಅಲ್ಲಿ ಪ್ರಾಣವನ್ನು ಬಿಟ್ಟ ಪುಣ್ಯವಂತರು ವಿದ್ಯಾಧರರಾಗಿ ಸುಖಿಗಳಾಗಿ ಆಗುತ್ತಾರೆ. ಈರೀತಿ ಸರಸ್ವತಿಯು ಸ್ನಾನದಿಂದಲೂ, ಕುಡಿಯುವುದರಿಂದಲೂ ನರರಿಗೆ ಸ್ವರ್ಗಕ್ಕೆ ಏಣಿಯಾಗಿದೆ.

೪೬೦. ಅಷ್ಟಮಿಯ ದಿನ ಯಾರು ನಿಯಮದಿಂದ ಈ ಸರಸ್ವತಿಯಲ್ಲಿ ಸ್ನಾನ ಮಾಡುತ್ತಾರೆಯೋ, ಅವರು ಸತ್ತಮೇಲೆ, ಸ್ವರ್ಗವನ್ನು ಹೊಂದಿ ಅಲ್ಲಿ ಸುಖಿಗಳಾಗಿ ಇರುತ್ತಾರೆ.

೪೬೧. ಸರಸ್ವತಿಯು ಹೆಂಗಸರಿಗೆ ಯಾವಾಗಲೂ ಸೌಭಾಗ್ಯವನ್ನು ಕೊಡುತ್ತದೆ. ತದಿಗೆಯ ದಿವಸ ಉಪವಾಸಮಾಡಿದರೆ ಸೌಭಾಗ್ಯವನ್ನು ಕೊಡುತ್ತದೆ.

೪೬೨. ಅಲ್ಲಿ ಆ ನದಿಯನ್ನು ನೋಡುವುದರಿಂದಲೇ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾರೆ. ಅದನ್ನು ಮುಟ್ಟಿದರೇನೇ ಅವರು ಮುನೀಶ್ವರರಾಗುತ್ತಾರೆ.

**ರಜತಸ್ಯ ಪ್ರದಾನೇನ ರೂಪವಾನ್ ಜಾಯತೇ ನರಃ ।**
**ಪುಣ್ಯಾ ಪುಣ್ಯಜಲೋಪೇತಾ ನದೀಯಂ ಬ್ರಹ್ಮಣಃ ಸುತಾ ॥ ೪೬೩ ॥**

**ನಂದಾ ನಾಮೇತಿ ವಿಪುಲಾ ಪ್ರಸನ್ನಾ ದಕ್ಷಿಣಾಮುಖೀ ।**
**ಗತ್ವಾ ತತೋ ನಾತಿದೂರಂ ಪುನರ್ಯಾತಾ ಪರಾಙ್ಮುಖೀ ॥ ೪೬೪ ॥**

**ತತಃ ಪ್ರಭೃತಿ ಸಾ ದೇವೀ ಪ್ರಸಭಂ ಪ್ರಕಟಾ ಸ್ಥಿತಾ ।**
**ತಸ್ಯಾಸ್ತಟೇಷು ರಮ್ಯಾಣಿ ತೀರ್ಥಾನ್ಯಾಯತನಾನಿ ಚ ॥ ೪೬೫ ॥**

**ಸಂಸೇವಿತಾನಿ ಮುನಿಭಿಃ ಸಿದ್ಧೈಶ್ಚಾಪಿ ಸಮಂತತಃ ।**
**ತೇಷು ಸರ್ವೇಷು ಭವತಿ ಧರ್ಮಹೇತುಃ ಸರಸ್ವತೀ ॥ ೪೬೬ ॥**

**ಸ್ನಾನಾತ್ಪಾನಾತ್ಪ್ರದಾನಾದ್ವಾ ಹಿರಣ್ಯಸ್ಯ ಮಹಾನದೀ ।**
**ಹಾಟಕಕ್ಷಿತಿಗೌರೀಣಾಂ ನಂದಾತೀರ್ಥೇ ಮಹೋದಯಂ ।**
**ದಾನಂ ದತ್ತಂ ನರೈಃ ಸ್ನಾತೈರ್ಜನಯತ್ಯಕ್ಷಯಂ ಫಲಂ ॥ ೪೬೭ ॥**

---

೪೬೩. ಬೆಳ್ಳಿಯನ್ನು ದಾನಮಾಡಿದರೆ ಆತನು ಸುಂದರನಾಗಿ ಹುಟ್ಟುತ್ತಾನೆ. ಈ ಬ್ರಹ್ಮನ ಮಗಳಾದ ಸರಸ್ವತಿಯು ಪುಣ್ಯಜಲದಿಂದ ಕೂಡಿ ಪುಣ್ಯಪ್ರದವಾದುದು.

೪೬೪. ನಂದೆ ಎಂಬ ಹೆಸರಿನಿಂದ ದಕ್ಷಿಣ ಮುಖವಾಗಿ ಹರಿದು ಸ್ವಲ್ಪ ದೂರ ಹೋಗಿ ಮತ್ತೆ ಹಿಂತಿರುಗುತ್ತಾಳೆ.

೪೬೫-೪೬೬. ಅದರ ಮೊದಲು ಆ ಸರಸ್ವತಿಯು ಪ್ರಕಾಶಮಾನವಾಗಿದ್ದಾಳೆ ಅದರ ದಡದಲ್ಲಿ ಚೆನ್ನಾಗಿರುವ ತೀರ್ಥಗಳೂ, ದೇವಸ್ಥಾನಗಳೂ ಇವೆ. ಅವುಗಳು ಸಿದ್ಧರಿಂದಲೂ, ಮುನಿಗಳಿಂದಲೂ ಸೇವಿಸಲ್ಪಟ್ಟಿವೆ. ಅವೆಲ್ಲವುಗಳಲ್ಲಿಯೂ ಸರಸ್ವತಿಯು ಧರ್ಮದ ಹೇತುವಾಗಿ ಇದ್ದಾಳೆ.

೪೬೭. ಆ ತೀರ್ಥದಲ್ಲಿ ಸ್ನಾನದಿಂದಲೂ, ಕುಡಿಯುವುದರಿಂದಲೂ, ಚಿನ್ನವನ್ನು ದಾನಮಾಡುವುದರಿಂದಲೂ, ಸ್ವರ್ಣಗೌರಿ ಮಣ್ಣಿನಗೌರಿಗಳನ್ನು ಪೂಜಿಸಿ ದಾನಮಾಡುವುದರಿಂದಲೂ, ಪುಣ್ಯವು ಬಹು ಹೆಚ್ಚುತ್ತದೆ. ಅಲ್ಲಿ ಸ್ನಾನವನ್ನು ಮಾಡಿ ದಾನಮಾಡಿದರೆ ಅದು ನರರಿಗೆ ಅಕ್ಷಯವನ್ನು ಕೊಡುತ್ತದೆ.

ಧಾನ್ಯಪ್ರದಾನಂ ಪ್ರವದಂತಿ ಶಸ್ತಂ
ವಸ್ತ್ರಪ್ರದಾನಂ ಚ ತಥಾ ಮುನೀಂದ್ರಾಃ ।
ಯೈಸ್ತೇಷು ತೀರ್ಥೇಷು ನರೈಃ ಪ್ರದತ್ತಂ
ತದ್ಧರ್ಮಹೇತುಃ ಪ್ರವರಂ ಪ್ರದಿಷ್ಟಂ ॥ ೪೬೮ ॥

ಪ್ರಾಯೋಪವೇಶಂ ಪ್ರಯತಃ ಪ್ರಯತ್ನಾ-
ದ್ಯಸ್ತೇಷು ಕುರ್ಯಾತ್ಪ್ರಮುದಾ ಪುಮಾನ್ವಾ ।
ತೀರ್ಥೇಷು ಸಾಯುಜ್ಯಮವಾಪ್ಯ ಚೇತ್ಥಂ
ಭುಂಕ್ತೇ ಫಲಂ ಬ್ರಹ್ಮಗೃಹೇ ಯಥೇಷ್ಟಂ ॥ ೪೬೯ ॥

ತಸ್ಯೋಪಕಂಠೇ ತು ಮೃತಾಸ್ತು ಯೇ ವೈ
ಕರ್ಮಕ್ಷಯೇ ಸ್ಥಾವರಜಂಗಮಾಶ್ಚ ।
ತೈಶ್ಚಾಪಿ ಸರ್ವೈಃ ಸಹಸಾ ಪ್ರಸಹ್ಯ
ಲಭ್ಯೇತ ಯಜ್ಞಸ್ಯ ಫಲಂ ದುರಾಪಂ ॥ ೪೭೦ ॥

ತತಸ್ತು ಸಾ ಧರ್ಮಫಲಪ್ರದಾ ಭವೇ-
ಜ್ಜನ್ಮಾದಿದುಃಖಾರ್ದಿತಚೇಸಾಂ ನೃಣಾಂ ।

---

೪೬೮. ಅಲ್ಲಿ ಧಾನ್ಯದ ದಾನವೂ ಉತ್ತಮವಾದುದು. ಬಟ್ಟೆಯ ದಾನವೂ ಹಾಗೆಯೇ ಎಂದೆನ್ನುತ್ತಾರೆ. ಆ ತೀರ್ಥದಲ್ಲಿ ಮನುಷ್ಯರು ಯಾವ ದಾನಮಾಡಿದರೂ ಅದು ಧರ್ಮಹೇತುವೆಂದು ಹೇಳುತ್ತಾರೆ.

೪೬೯. ನಿಯಮದಿಂದ ಅಲ್ಲಿ ಗಂಡಸಾಗಲಿ, ಹೆಂಗಸಾಗಲಿ ಪ್ರಾಯೋಪವೇಶವನ್ನು ಮಾಡಿದರೆ ಬ್ರಹ್ಮನ ಸಾಯುಜ್ಯವನ್ನು ಹೊಂದಿ, ಯಥೇಚ್ಛವಾಗಿ, ಬ್ರಹ್ಮನ ಲೋಕದಲ್ಲಿ ಫಲವನ್ನು ಹೊಂದುತ್ತಾರೆ.

೪೭೦. ಆ ನದಿಯ ದಡದಲ್ಲಿ ಸತ್ತ ಚರಾಚರಗಳು ಪಾಪಕರ್ಮವನ್ನು ಕಳೆದುಕೊಂಡು ಅವೂ ಕೂಡ ಅಸಾಧ್ಯವಾದ ಯಜ್ಞದ ಫಲವನ್ನು ಹೊಂದುತ್ತವೆ.

೪೭೧. ಹುಟ್ಟು, ಸಾವುಗಳಿಂದ ದುಃಖಗೊಂಡಿರುವ ಜನರಿಗೆ ಧರ್ಮದ ಫಲ

**ಸರ್ವಾತ್ಮನಾ ಪುಣ್ಯಫಲಾ ಸರಸ್ವತೀ**
**ಸೇವ್ಯಾ ಪ್ರಯತ್ನಾನ್ಮನುಜೈರ್ಮಹಾನದೀ** ॥ ೪೭೧ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ**
**ನಂದಾಪ್ರಾಚೀಮಾಹಾತ್ಮ್ಯೇಽಷ್ಟಾದಶೋಽಧ್ಯಾಯಃ**



---

ವನ್ನು ಕೊಡುತ್ತದೆ. ಆದ್ದರಿಂದ ಮನುಷ್ಯರು ಸರ್ವಪ್ರಯತ್ನಗಳಿಂದಲೂ ಆ ಮಹಾನದಿಯನ್ನು ಸೇವಿಸಿ ಪುಣ್ಯಫಲವನ್ನು ಹೊಂದಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ನಂದಾಪ್ರಾಚೀ ಮಹಿಮೆಯಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಏಕೋನವಿಂಶೋऽಧ್ಯಾಯಃ

॥ ಭೀಷ್ಮ ಉವಾಚ ॥

ಪುಷ್ಕರಸ್ಯ ಚ ನಂದಾಯಾಃ ಶ್ರುತಂ ಮಾಹಾತ್ಮ್ಯಮುತ್ತಮಂ ।
ಋಷಿಕೋಟಿರ್ಯಥಾ ಯಾತಾ ಪುಷ್ಕರೇ ಮುಖದರ್ಶನಾತ್ ॥ ೧ ॥

ಸರ್ವೈಃ ಸುರೂಪತಾ ಲಬ್ಧಾ ಸರ್ವಮೇತನ್ಮಯಾ ಶ್ರುತಂ ।
ಯಜ್ಞೋಪವೀತೈರ್ಭಕ್ತಾನಿ ಯಾನಿ ತಾನಿ ವದಸ್ವ ಮೇ ॥ ೨ ॥

ಕಥಂ ತೀರ್ಥವಿಭಾಗಸ್ತು ಕೃತಸ್ತೈಸ್ತು ಮಹಾತ್ಮಭಿಃ ।
ಆಶ್ರಮಾ ಯಾನಿ ತೀರ್ಥಾನಿ ಕೃತಾನ್ಯಪಿ ಮಹರ್ಷಿಭಿಃ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯವು.

೧. ಭೀಷ್ಮನು ಕೇಳಿದನು :—ಎಲೈ ಋಷಿಯೇ, ಪುಷ್ಕರ ಮತ್ತು ನಂದೆಯ ಉತ್ತಮವಾದ ಮಹಿಮೆಯನ್ನು ಕೇಳಿದೆನು. ಪುಷ್ಕರವನ್ನು ನೋಡುತ್ತಲೂ ಋಷಿಗಳು ಹೇಗೆ ಆದರು ?

೨. ಅವರೆಲ್ಲರೂ ಹೇಗೆ ಒಳ್ಳೆಯ ರೂಪವನ್ನು ಹೊಂದಿದರು ? ಎಂಬುದೆಲ್ಲವೂ ನನಗೆ ತಿಳಿಯಿತು. ಅವರು ಯಜ್ಞೋಪವೀತದಿಂದ ಮಾಡಿಕೊಂಡ ಭಾಗಗಳನ್ನು ತಿಳಿಸು.

೩. ಆ ಮಹಾತ್ಮರು ತೀರ್ಥದ ವಿಭಾಗವನ್ನು ಹೇಗೆ ಮಾಡಿದರು ? ಯಾವ ಯಾವ ಆಶ್ರಮಗಳೂ ಯಾವ ತೀರ್ಥಗಳೂ ಅವುಗಳಲ್ಲಿ ಮಾಡಲ್ಪಟ್ಟುವು ?

ಪದನ್ಯಾಸಃ ಕೃತಃ ಪೂರ್ವಂ ವಿಷ್ಣುನಾ ಯಜ್ಞಪರ್ವತೇ ।
ನಾಗೈಸ್ತತ್ರ ಪಂಚತೀರ್ಥಂ ಕೃತಂ ತೈಸ್ತು ಮಹಾವಿಷೈಃ ॥ ೪ ॥

ಪಿಂಡಪ್ರದಾನವಾಪೀ ಚ ಕೇನ ವೈ ಪೂರ್ವನಿರ್ಮಿತಾ ।
ಉದಙ್ಮುಖೀ ಭೂಮಿಗತಾ ಕಥಂ ಗಂಗಾ ಸರಸ್ವತೀ ॥ ೫ ॥

ಬ್ರಾಹ್ಮಣೈರ್ವೇದವಿದ್ವದ್ಭಿಃ ಕಥಂ ಯಾತ್ರಾ ತ್ರಿಪುಷ್ಕರೇ ।
ಕೃತಾಯಾಂ ಯತ್ಫಲಂ ಪುಂಸಾಂ ಜಾಯತೇ ತದ್ವದಸ್ವ ಮೇ ॥ ೬ ॥

॥ ಪುಲಸ್ತ್ಯ ಉವಾಚ ॥

ಪ್ರಶ್ನಭಾರೋ ಮಹಾನೇಷ ಭವತಾ ಪರಿಕಲ್ಪಿತಃ ।
ತದೇಕಾಗ್ರಮನಾ ಭೂತ್ವಾ ಶೃಣು ತೀರ್ಥಮಹಾಫಲಂ ॥ ೭ ॥

ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೮ ॥

---

೪. ಆ ಯಜ್ಞಪರ್ವತದಲ್ಲಿ ವಿಷ್ಣುವು ಹೇಗೆ ಪದನ್ಯಾಸವನ್ನು (ಕಾಲಿನ ಗುರುತು) ಮಾಡಿದನು? ಮಹಾವಿಷವುಳ್ಳ ಸರ್ಪಗಳು ಪಂಚತೀರ್ಥವನ್ನು ಹೇಗೆ ಮಾಡಿದುವು?

೫. ಪಿಂಡಪ್ರದಾನ ವಾಪಿಯನ್ನು ಪೂರ್ವದಲ್ಲಿ ಯಾರು ನಿರ್ಮಿಸಿದರು? ಗಂಗೆಯೂ ಸರಸ್ವತಿಯೂ ಉತ್ತರಮುಖವಾಗಿ ಭೂಮಿಯಲ್ಲೇಕೆ ಹೋಗುತ್ತಿರುವುವು?

೬. ವೇದವಿತ್ತರಾದ ಬ್ರಾಹ್ಮಣರು ಆ ತ್ರಿಪುಷ್ಕರದಲ್ಲಿ ಯಾತ್ರೆಯನ್ನು ಹೇಗೆ ಮಾಡಬೇಕು? ಯಾತ್ರೆಯನ್ನು ಮಾಡಿದವರಿಗೆ ಯಾವ ಫಲವು ಬರುತ್ತದೆ? ಅದನ್ನು ನನಗೆ ಹೇಳು.

೭. ಪುಲಸ್ತ್ಯನು ಹೇಳಿದನು :—ನಿನ್ನ ಪ್ರಶ್ನೆಯು ಬಹು ದೊಡ್ಡದಾದುದು. ಆದ್ದರಿಂದ ಒಂದೇ ಮನಸ್ಸಿನಿಂದ ಆ ತೀರ್ಥಗಳ ಫಲವನ್ನು ಕೇಳು.

೮. ಯಾವನ ಕೈಕಾಲುಗಳು ಸರಿಯಾಗಿದ್ದು ವಿದ್ಯಾವಂತನೂ, ತಪಸ್ವಿಸಿಯೂ, ಕೀರ್ತಿವಂತನೂ ಆಗಿರುವನೋ ಅವನು ತೀರ್ಥದ ಫಲವನ್ನು ಹೊಂದುತ್ತಾನೆ.

ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ।
ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥ ೯ ॥

ಅಕ್ರೋಧನಶ್ಚ ರಾಜೇಂದ್ರ ಸತ್ಯಶೀಲೋ ದೃಢವ್ರತಃ ।
ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥ ೧೦ ॥

ಋಷೀಣಾಂ ಪರಮಂ ಗುಹ್ಯಮಿದಂ ಭರತಸತ್ತಮ ।
ಪೂರ್ವಂ ಯತ್ರ ಮಹಾರಾಜ ಸತ್ರೇ ಪೈತಾಮಹೇ ತದಾ ॥ ೧೧ ॥

ಯತೀನಾಮುಗ್ರತಪಸಾಮೃಷಿಕೋಟಿಃ ಸಮಾಗತಾ ।
ಮುಖದರ್ಶನಮಾಶ್ರಿತ್ಯ ಸ್ಥಿತಾಸ್ತೇ ಜ್ಯೇಷ್ಠಪುಷ್ಕರೇ ॥ ೧೨ ॥

ಸುರೂಪತಾಂ ಪರಾಂ ಲಬ್ಧ್ವಾ ಪ್ರೀತಾಸ್ತೇ ಮುನಿಸತ್ತಮಾಃ ।
ಹರ್ಷೇಣ ಮಹತಾವಿಷ್ಟಾ ಬ್ರಹ್ಮದರ್ಶನಕಾಂಕ್ಷಿಣಃ ॥ ೧೩ ॥

ಯಜ್ಞೋಪವೀತೈಸ್ತೇ ಭೂಮಿಂ ಪ್ರಾಪ್ಯ ಸರ್ವೇ ಚತುರ್ದಿಶಂ ।
ಕೃತ್ವಾ ತೀರ್ಥವಿಭಾಗಂ ತು ತೇ ಚ ಭಕ್ತಿಪರಾಯಣಾಃ ॥ ೧೪ ॥

---

೯. ದಾನ ತೆಗೆದುಕೊಳ್ಳದವನೂ, ಏನು ಸಿಕ್ಕಿದರೆ ಅದಕ್ಕೆ ಸಂತೋಷಪಡುವವನೂ, ಅಹಂಕಾರವನ್ನು ಬಿಟ್ಟವನೂ, ತೀರ್ಥದ ಫಲವನ್ನು ಹೊಂದುತ್ತಾನೆ.

೧೦. ಕ್ರೋಧವನ್ನು ಬಿಟ್ಟು ಸತ್ಯಶೀಲನಾಗಿ ದೃಢವತ್ರವುಳ್ಳವನೂ, ಪ್ರಾಣಿಗಳನ್ನು ತನ್ನಂತೆಯೇ ಕಾಣುವವನೂ ತೀರ್ಥಫಲವನ್ನು ಹೊಂದುತ್ತಾನೆ.

೧೧-೧೨. ಇದು ಋಷಿಗಳಿಗೆ ಗುಟ್ಟಾದುದು. ಪೂರ್ವದಲ್ಲಿ ಬ್ರಹ್ಮನ ಯಜ್ಞದಲ್ಲಿ ಉಗ್ರತಪಸ್ವಿಗಳಾದ ಋಷಿಗಳ ಗುಂಪು ಬಂದಿತು. ಜ್ಯೇಷ್ಠಪುಷ್ಕರಕ್ಕೆ ಹೋಗಿ ಅಲ್ಲಿ ಮುಖವನ್ನು ನೋಡುತ್ತ ನಿಂತುಕೊಂಡಿತು.

೧೩. ತಮಗೆ ಒಳ್ಳೆಯ ರೂಪು ಬಂದುದನ್ನು ನೋಡಿ ಸಂತೋಷಪಟ್ಟರು. ಆಗ ಬಹು ಸಂತೋಷವುಳ್ಳವರಾಗಿ ಬ್ರಹ್ಮನನ್ನು ನೋಡಬೇಕೆಂಬ ಆಸೆಯಿಂದ ಇದ್ದರು.

೧೪. ಎಲ್ಲರೂ ಯಜ್ಞೋಪವೀತದ ಅಳತೆಯಿಂದ ಎಲ್ಲರ ಕಡೆಯಲ್ಲಿಯೂ ಭೂಮಿಯನ್ನು ಹೊಂದಿದರು. ಅವರಂತೆ ತೀರ್ಥಗಳನ್ನು ವಿಭಾಗಮಾಡಿಕೊಂಡು ಭಕ್ತಿಯಿಂದ ಇದ್ದರು.

**ಆಸನ್ನಾಸ್ತು ತತಸ್ತೇಷಾಂ ತದಾ ತುಷ್ಟಃ ಪಿತಾಮಹಃ ।**
**ಕೋಟಿಂ ಕೃತ್ವಾ ತದಾ ತೇಷಾಂ ಮಾನಂ ದೃಷ್ಟ್ವಾ ಮನೀಷಿಣಾಂ ॥ ೧೫ ॥**

**॥ ಬ್ರಹ್ಮೋವಾಚ ॥**

**ಅದ್ಯಪ್ರಭೃತಿ ಯುಷ್ಮಾಕಂ ಧರ್ಮವೃದ್ಧಿರ್ಭವಿಷ್ಯತಿ ।**
**ಇಹಾಗತ್ಯ ನರೋ ಯೋ ವೈ ಸರ್ವಾಂಗಂ ಪ್ರಥಮಂ ಜಲೇ ॥ ೧೬ ॥**

**ಪ್ಲಾವಯಿಷ್ಯತಿ ರೂಪಾರ್ಥೀ ರೂಪಿತಾ ತೀರ್ಥಕಾರಿತಾ ।**
**ಭವಿಷ್ಯತಿ ನ ಸಂದೇಹೋ ಯೋಜನಾಯುತಮಂಡಲೇ ॥ ೧೭ ॥**

**ಅರ್ಧಯೋಜನವಿಸ್ತೀರ್ಣಂ ದೈರ್ಘ್ಯೆ ಸಾರ್ಧದ್ವಿಯೋಜನಂ ।**
**ಏತತ್ಪ್ರಮಾಣಂ ತೀರ್ಥಸ್ಯ ಋಷಿಕೋಟಿಸಮಾವೃತಂ ॥ ೧೮ ॥**

**ಗಮನಾದೇವ ರಾಜೇಂದ್ರ ಪುಷ್ಕರಸ್ಯ ತ್ವರಿಂದಮ ।**
**ರಾಜಸೂಯಾಶ್ವಮೇಧಾಭ್ಯಾಂ ಫಲಮಾಪ್ನೋತಿ ಮಾನವಃ ॥ ೧೯ ॥**

---

೧೫. ಅವುಗಳ ಹತ್ತಿರಕ್ಕೆ ಬ್ರಹ್ಮನು ಹೋಗಿ, ಅವರಿಗೆ ಒಂದೊಂದು ವಿಭಾಗವನ್ನು ಕಲ್ಪಿಸಿ, ಅವುಗಳ ಅಳತೆಯನ್ನು ನೋಡಿ ಸಂತೋಷಗೊಂಡನು.

೧೬-೧೭. ಬ್ರಹ್ಮನು ಹೇಳಿದನು :—ಇದು ಮೊದಲುಗೊಂಡು ನಿಮಗೆ ಧರ್ಮ ವೃದ್ಧಿಯುಂಟಾಗುತ್ತದೆ. ಯಾವನು ಇಲ್ಲಿಗೆ ಬಂದು ಎಲ್ಲಾ ಅವಯವಗಳನ್ನು ನೀರಿನಲ್ಲಿ ಮೊದಲು ನೆನಿಸಿಕೊಳ್ಳುತ್ತಾನೆಯೋ ಅವನು ಆ ನೀರಿನಿಂದ ಒಳ್ಳೆಯ ರೂಪವನ್ನು ಹೊಂದಿದವನಾಗುತ್ತಾನೆ. ಸಂದೇಹವಿಲ್ಲ. ಈ ತೀರ್ಥವು ಒಂದು ಯೋಜನ ವಿಸ್ತಾರವಾಗಿದೆ.

೧೮. ಅರ್ಧಯೋಜನ ವಿಸ್ತಾರವಾಗಿಯೂ, ಎರಡೂವರೆಯೋಜನ ಉದ್ದವಾಗಿಯೂ ಈ ತೀರ್ಥದ ಪ್ರಮಾಣವಿದೆ. ಋಷಿಗಳನೇಕರಿಂದ ಕೂಡಿಕೊಂಡಿದೆ.

೧೯. ಪುಷ್ಕರಕ್ಕೆ ಹೋಗುವುದರಿಂದಲೇ ರಾಜಸೂಯ, ಅಶ್ವಮೇಧಗಳ ಫಲವನ್ನು ಮನುಷ್ಯನು ಹೊಂದುತ್ತಾನೆ.

ಸರಸ್ವತೀ ಮಹಾಪುಣ್ಯಾ ಪ್ರವಿಷ್ಟಾ ಜ್ಯೇಷ್ಠಪುಷ್ಕರೇ ।
ತತ್ರ ಬ್ರಹ್ಮಾದಯೋ ದೇವಾ ಋಷಯಃ ಸಿದ್ಧಚಾರಣಾಃ ॥ ೨೦ ॥

ಅಭಿಗಚ್ಛಂತಿ ರಾಜೇಂದ್ರ ಚೈತ್ರಶುಕ್ಲಚತುರ್ದಶೀಂ ।
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇಽರತಃ ॥ ೨೧ ॥

ತದಾಽಭಯಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ಏವಂ ತೀರ್ಥವಿಭಾಗಸ್ತು ಕೃತಸ್ತೈಸ್ತು ಮಹರ್ಷಿಭಿಃ ॥ ೨೨ ॥

ಪಿತೄನ್ ದೇವಾಂಶ್ಚ ಸಂತರ್ಪ್ಯ ವಿಷ್ಣುಲೋಕೇ ಮಹೀಯತೇ ।
ತತ್ರ ಸ್ನಾತ್ವಾ ಭವೇನ್ಮರ್ತ್ಯೋ ವಿಮಲಶ್ಚಂದ್ರಮಾ ಯಥಾ ॥ ೨೩ ॥

ಬಹ್ಮಲೋಕಮವಾಪ್ನೋತಿ ಗತಿಂ ಚ ಪರಮಾಂ ವ್ರಜೇತ್ ।
ತ್ರೈಲೋಕ್ಯೇ ದೇವದೇವಸ್ಯ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೨೪ ॥

---

೨೦-೨೧. ಮಹಾ ಪುಣ್ಯಪ್ರದವಾದ ಸರಸ್ವತಿಯು ಜ್ಯೇಷ್ಠಪುಷ್ಕರದ ಬಳಿಗೆ ಪ್ರವೇಶಿಸಿದೆ. ಬ್ರಹ್ಮಾದಿದೇವತೆಗಳೂ, ಋಷಿಗಳೂ, ಸಿದ್ಧರೂ, ಚಾರಣರೂ ಚೈತ್ರ ಶುದ್ಧ ಚತುರ್ದಶಿಯ ದಿನ ಇಲ್ಲಿಗೆ ಸ್ನಾನಕ್ಕೆ ಬರುತ್ತಾರೆ. ಅಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೂ, ದೇವತೆಗಳಿಗೂ ಪೂಜೆಮಾಡಿ ತೃಪ್ತಿಪಡಿಸಬೇಕು.

೨೨. ಆಗ ಅವನು ಭಯದಿಂದ ವರ್ಜಿತನಾಗಿ ಕುಲವನ್ನು ಉದ್ಧಾರ ಮಾಡುತ್ತಾನೆ. ಈರೀತಿಯಾಗಿ ತೀರ್ಥವಿಭಾಗವನ್ನು ಮಹರ್ಷಿಗಳು ಮಾಡಿದ್ದಾರೆ.

೨೩. ಅಲ್ಲಿ ಪಿತೃಗಳಿಗೂ ದೇವತೆಗಳಿಗೂ ತೃಪ್ತಿಪಡಿಸಿದರೆ ವಿಷ್ಣುಲೋಕವನ್ನು ಹೊಂದುತ್ತಾನೆ. ಅಲ್ಲಿ ಮನುಷ್ಯನು ಸ್ನಾನಮಾಡಿದರೆ ಚಂದ್ರನಂತೆ ಪರಿಶುದ್ಧನಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ. ಉತ್ತಮವಾದ ಗತಿಯೂ ಸಿಕ್ಕುತ್ತದೆ.

೨೪. ಈ ದೇವದೇವನಾದ ಬ್ರಹ್ಮನ ತೀರ್ಥವು ಮೂರು ಲೋಕದಲ್ಲಿಯೂ, ಪ್ರಸಿದ್ಧವಾಗಿದೆ. ಈ ಪುಷ್ಕರವು ಹೆಸರನ್ನು ಪಡೆದು ಪುಷ್ಕರತೀರ್ಥವೆಂಬ ಮಹಾ ಪಾಪಗಳನ್ನು ನಾಶಮಾಡುತ್ತದೆ.

ಪುಷ್ಕರಂ ನಾಮ ವಿಖ್ಯಾತಂ ಮಹಾಪಾತಕನಾಶನಂ ।
ದಶಕೋಟಿಸಹಸ್ರಾಣಿ ತೀರ್ಥಾನಾಂ ವೈ ಮಹೀಪತೇ ॥ ೨೫ ॥

ಸಾಂನಿಧ್ಯಂ ಪುಷ್ಕರೇ ಯೇಷಾಂ ತ್ರಿಸಂಧ್ಯಂ ಕುರುನಂದನ ।
ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚ ಸಮರುದ್ಗಣಾಃ ॥ ೨೬ ॥

ಗಂಧರ್ವಾಪ್ಸರಸಶ್ಚೈವ ನಿತ್ಯಂ ಸಂನಿಹಿತಾ ವಿಭೋ ।
ಯತ್ರ ದೇವಾಸ್ತಪಸ್ತಪ್ತ್ವಾ ದೈತ್ಯಾ ಬ್ರಹ್ಮರ್ಷಯಸ್ತಥಾ ॥ ೨೭ ॥

ದಿವ್ಯಯೋಗಾ ಮಹಾರಾಜ ಪುಣ್ಯೇನ ಮಹತಾನ್ವಿತಾಃ ।
ಮನಸಾಪ್ಯಭಿಕಾಮಸ್ಯ ಪುಷ್ಕರಾಣಿ ಮನಸ್ವಿನಃ ॥ ೨೮ ॥

ಪೂಯಂತೇ ಸರ್ವಪಾಪಾನಿ ನಾಕಪೃಷ್ಠೇ ಸ ಪೂಜ್ಯತೇ ।
ತಸ್ಮಿಂಸ್ತೀರ್ಥೇ ಮಹಾರಾಜ ನಿತ್ಯಮೇವ ಪಿತಾಮಹಃ ॥ ೨೯ ॥

ಉವಾಸ ಪರಮಪ್ರೀತೋ ದೇವದಾನವಸಂಮತಃ ।
ಪುಷ್ಕರೇಷು ಮಹಾರಾಜ ದೇವಾಃ ಸರ್ಷಿಪುರೋಗಮಾಃ ॥ ೩೦ ॥

---

೨೫. ಹತ್ತುಸಾವಿರಕೋಟಿ ತೀರ್ಥಗಳೂ ಈ ಪುಷ್ಕರದಲ್ಲಿ ಮೂರು ಸಂಧ್ಯೆಗಳಲ್ಲಿಯೂ, ಬಂದು ಸೇರುತ್ತವೆ.

೨೬. ಆದಿತ್ಯರೂ, ವಸುಗಳೂ, ರುದ್ರರೂ, ಸಾಧ್ಯರೂ, ಮರುದ್ಗಣಗಳೂ, ಗಂಧರ್ವರೂ, ಅಪ್ಸರಸ್ಸುಗಳೂ ಯಾವಾಗಲೂ ಅಲ್ಲಿ ಇರುತ್ತಾರೆ.

೨೭. ಎಲೈ ದೊರೆಯೇ, ದೇವತೆಗಳೂ, ದೈತ್ಯರೂ, ಬ್ರಹ್ಮರ್ಷಿಗಳೂ, ಇಲ್ಲಿ ತಪಸ್ಸುಮಾಡಿ, ಬಹು ಪುಣ್ಯವನ್ನು ಹೊಂದಿ ದಿವ್ಯಭೋಗವನ್ನು ಹೊಂದಿದ್ದಾರೆ.

೨೮. ಯಾವ ಮನುಷ್ಯನು ಮನಸ್ಸಿನಿಂದಾದರೂ ಪುಷ್ಕರಕ್ಕೆ ಹೋಗಬೇಕೆನ್ನುತ್ತಾನೆಯೋ ಅಂತಹವನ ಪಾಪವೆಲ್ಲವೂ ಹೋಗಿ ಶುದ್ಧವಾಗುತ್ತಾನೆ. ಸ್ವರ್ಗದಲ್ಲಿ ಸುಖಿಸುತ್ತಾನೆ.

೨೯-೩೦. ಎಲೈ ದೊರೆಯೇ, ಆ ತೀರ್ಥದಲ್ಲಿ ದೇವದಾನವರಿಗೆ ಇಷ್ಟನಾದ ಬ್ರಹ್ಮನು ವಾಸಮಾಡುತ್ತಾನೆ. ಪುಷ್ಕರದಲ್ಲಿ ದೇವತೆಗಳೂ, ಋಷಿಗಳೂ ಒಳ್ಳೆಯ ಮನಸ್ಸಿನಿಂದ ಸಿದ್ಧಿಯನ್ನು ಹೊಂದಿದರು. ಮಹಾ ಪುಣ್ಯದಿಂದ ಕೂಡಿಕೊಂಡಿದ್ದಾರೆ.

ಸಿದ್ಧಿಂ ಸುಮನಸಃ ಪ್ರಾಪ್ತಾಃ ಪುಣ್ಯೇನ ಮಹತಾನ್ವಿತಾಃ ।
ತತ್ರಾಭಿಷೇಕಂ ಯಃ ಕುರ್ಯಾತ್ಪಿತೃದೇವಾರ್ಚನೇ ರತಃ ॥ ೩೧ ॥

ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಿಣಃ ।
ಅಪ್ಯೇಕಂ ಭೋಜಯೇದ್ವಿಪ್ರಂ ಪುಷ್ಕರಾರಣ್ಯಮಾಶ್ರಿತಃ ॥ ೩೨ ॥

ಅನ್ನೇನ ತೇನ ಸುಪ್ರೀತಾ ಕೋಟಿರ್ಭವತಿ ಭೋಜಿತಾ ।
ತೇನಾಸೌ ಕರ್ಮಣಾ ಭೀಷ್ಮ ಪ್ರೇತ್ಯ ಚೇಹ ಚ ಮೋದತೇ ॥ ೩೩ ॥

ಶಾಕೈರ್ಮೂಲೈಃ ಫಲೈರ್ವಾಽಪಿ ಯೇನ ವಾ ವರ್ತತೇ ಸ್ವಯಂ ।
ತದ್ವೈ ದದ್ಯಾದ್ಬ್ರಾಹ್ಮಣಾಯ ಶ್ರದ್ಧಾವಾನನಸೂಯಕಃ ॥ ೩೪ ॥

ತೆನೈವ ಪ್ರಾಪ್ನುಯಾತ್ಪ್ರಾಜ್ಞ ಹಯಮೇಧಫಲಂ ನರಃ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ರಾಜಸತ್ತಮಃ ॥ ೩೫ ॥

---

೩೧. ಅಲ್ಲಿ ಯಾವನು ಸ್ನಾನಮಾಡಿ ಪಿತೃದೇವಾರ್ಚನೆಯನ್ನು ಮಾಡುತ್ತಾನೋ, ಅವನಿಗೆ ಅಶ್ವಮೇಧಕ್ಕಿಂತ ಹತ್ತರಷ್ಟು ಪುಣ್ಯ ಬರುತ್ತದೆಂದು ವಿದ್ವಾಂಸರು ಹೇಳುತ್ತಾರೆ.

೩೨-೩೩. ಪುಷ್ಕರಾರಣ್ಯದಲ್ಲಿ ಒಬ್ಬನಿಗೆ ಭೋಜನಮಾಡಿಸಿ ತೃಪ್ತಿಪಡಿಸಿದರೆ, ಕೋಟಿ ಜನಗಳಿಗೆ ಭೋಜನಮಾಡಿಸಿದಂತಾಗುತ್ತದೆ. ಆ ಪುಣ್ಯದಿಂದ ಅವನು ಇಹಪರಗಳಲ್ಲಿ ಸುಖಿಸುತ್ತಾನೆ.

೩೪. ಕಾಯಿಪಲ್ಯದಿಂದಾಗಲಿ, ಗೆಡ್ಡೆಗೆಣಸುಗಳಿಂದಾಗಲಿ ಮನುಷ್ಯನು ಯಾವುದನ್ನು ತಿಂದುಕೊಂಡಿರುತ್ತಾನೆಯೋ ಅದನ್ನು ಬ್ರಾಹ್ಮಣನಿಗೆ ಅಸೂಯೆಪಡದೆ ಶ್ರದ್ಧೆಯಿಂದ ಕೊಡಬೇಕು. ಎಲೈ ಭೀಷ್ಮನೇ, ಅದರಿಂದ ಅವನು ಅಶ್ವಮೇಧ ಫಲವನ್ನು ಹೊಂದುತ್ತಾನೆ.

೩೫. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರುಗಳಲ್ಲಿ ಯಾರು ಮಾಡಿದರೂ ಅಶ್ವಮೇಧ ಫಲವನ್ನು ಹೊಂದುತ್ತಾರೆ.

ಪಿತಾಮಹಸರಃ ಪುಣ್ಯಂ ಪುಷ್ಕರಂ ನಾಮ ನಾಮತಃ ।
ವೈಖಾನಸಾನಾಂ ಸಿದ್ಧಾನಾಂ ಮುನೀನಾಂ ಪುಣ್ಯದಂ ಹಿ ಯತ್ ॥ ೩೬ ॥

ಸರಸ್ವತೀ ಪುಣ್ಯತಮಾ ಯಸ್ಮಾದ್ಯಾತಾ ಮಹಾರ್ಣವಂ ।
ಆದಿದೇವೋ ಮಹಾಯೋಗೀ ಯತ್ರಾsಸ್ತೇ ಮಧುಸೂದನಃ ॥ ೩೭ ॥

ಖ್ಯಾತಶ್ಚಾದಿವರಾಹೇತಿ ನಾಮ್ನಾ ತ್ರಿದಶಪೂಜಿತಃ ।
ಹೀನವರ್ಣಾಶ್ಚ ಯೇ ವರ್ಣಾಸ್ತೀರ್ಥೇ ಪೈತಾಮಹೇ ಗತಾಃ ॥ ೩೮ ॥

ನ ವಿಯೋನಿಂ ವ್ರಜಂತ್ಯೇತೇ ಸ್ನಾತ್ವಾ ತೀರ್ಥೇ ಮಹಾತ್ಮನಃ ।
ಕಾರ್ತಿಕ್ಯಾಂ ತು ವಿಶೇಷೇಣ ಯೋsಭಿಗಚ್ಛೇತ ಪುಷ್ಕರಂ ॥ ೩೯ ॥

ಫಲಂ ತತ್ರಾಕ್ಷಯಂ ತಸ್ಯ ಭವಿತೀತ್ಯನುಶುಶ್ರುಮ ।
ಸಾಯಂ ಪ್ರಾತಃ ಸ್ಮರೇದ್ಯಸ್ತು ಪುಷ್ಕರಾಣಿ ಕೃತಾಂಜಲಿಃ ॥ ೪೦ ॥

---

೩೬. ಪುಷ್ಕರವೆಂಬ ಹೆಸರಿನಿಂದ ಈ ಪಿತಾಮಹನ ಸರೋವರವು ಪುಣ್ಯಕರವಾದುದು. ವೈಖಾನಸರು, ಸಿದ್ಧರು, ಮುನಿಗಳು ಇವರಿಗೆ ಇದು ಪುಣ್ಯವನ್ನು ಕೊಡುತ್ತದೆ.

೩೭. ಪುಣ್ಯತಮವಾದ ಸರಸ್ವತಿಯು ಇಲ್ಲಿಂದಲೇ, ಸಮುದ್ರಕ್ಕೆ ಹೋಗುತ್ತದೆ. ಇಲ್ಲಿಯೇ ಆದಿದೇವನೂ ಮಹಾಯೋಗಿಯೂ ಆದ ಶ್ರೀ ವಿಷ್ಣುವು ಇದ್ದಾನೆ.

೩೮. ಆ ವಿಷ್ಣುವು ಆದಿವರಾಹನೆಂಬ, ಹೆಸರಿನಿಂದ ಇಲ್ಲಿ ದೇವತೆಗಳಿಂದಲೂ ಪೂಜೆಯನ್ನು ಹೊಂದುತ್ತಿದ್ದಾನೆ.

೩೯. ಕೀಳುಜಾತಿಯವರು ಆ ಪಿತಾಮಹನ ತೀರ್ಥಕ್ಕೆ ಹೋಗಿ ಸ್ನಾನ ಮಾಡಿದರೆ ಮುಂದೆ ಕೆಟ್ಟಜನ್ಮದಲ್ಲಿ ಹುಟ್ಟುವುದಿಲ್ಲ ಮತ್ತು ಮಹಾತ್ಮರಾಗುತ್ತಾರೆ.

೪೦. ಕಾರ್ತಿಕಮಾಸದಲ್ಲಿ ಪುಷ್ಕರಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಅಕ್ಷಯ ಫಲವುಂಟಾಗುತ್ತದೆಂದು ಕೇಳಿದ್ದೇವೆ.

ಉಪಸ್ಪೃಷ್ಟಂ ಭವೇತ್ತೇನ ಸರ್ವತೀರ್ಥೇಷು ಕೌರವ ।
ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷಸ್ಯ ವಾ ॥ ೪೧ ॥

ಪುಷ್ಕರೇ ಸ್ನಾನಮಾತ್ರೇಣ ಸರ್ವಮೇತತ್ಪ್ರಣಶ್ಯತಿ ।
ಯಥಾ ಸುರಾಣಾಂ ಪ್ರವರಃ ಸರ್ವೇಷಾಂ ತು ಪಿತಾಮಹಃ ॥ ೪೨ ॥

ತಥೈವ ಪುಷ್ಕರಂ ತೀರ್ಥಂ ತೀರ್ಥಾನಾಮಾದಿರುಚ್ಯತೇ ।
ತತ್ರೇಷ್ಟ್ವಾ ದಶ ವರ್ಷಾಣಿ ಪುಷ್ಕರೇ ನಿಯತಃ ಶುಚಿಃ ॥ ೪೩ ॥

ಕ್ರತೂನ್ಸರ್ವಾನವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ।
ಯಸ್ತು ವರ್ಷಶತಂ ಪೂರ್ಣಮಗ್ನಿಹೋತ್ರಮುಪಾಸತೇ ॥ ೪೪ ॥

ಕಾರ್ತಿಕೀಮಾವಸೇದೇಕಾಂ ಪುಷ್ಕರೇ ಸಮಮೇವ ತು ।
ಪುಷ್ಕರೇ ದುಷ್ಕರೋ ವಾಸಃ ಪುಷ್ಕರೇ ದುಷ್ಕರಂ ತಪಃ ॥ ೪೫ ॥

---

೪೧. ಯಾವನು ಸಾಯಂಕಾಲ, ಬೆಳಗಿನ ಕಾಲಗಳಲ್ಲಿ ಕೈಮುಗಿದುಕೊಂಡು ಪುಷ್ಕರವನ್ನು ಸ್ಮರಣೆಮಾಡುತ್ತಾನೋ, ಅವನಿಗೆ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯವು ಬರುತ್ತದೆ.

೪೨. ಹೆಂಗಸಿಗಾಗಲಿ, ಗಂಡಸಿಗಾಗಲಿ ಹುಟ್ಟಿದ ಮೊದಲುಗೊಂಡು ಮಾಡಿದ ಪಾಪವು ಪುಷ್ಕರದಲ್ಲಿ ಸ್ನಾನಮಾಡಿದ ಮಾತ್ರದಿಂದ ಎಲ್ಲವೂ ನಾಶವಾಗುತ್ತದೆ.

೪೩. ದೇವತೆಗಳಲ್ಲಿ ಎಲ್ಲರಿಗೂ ಬ್ರಹ್ಮನು ಹೇಗೆ ಆದಿಯೋ ಹಾಗೇ ಪುಷ್ಕರವು ತೀರ್ಥಗಳಿಗೆಲ್ಲಾ ಮೊದಲನೆಯದೆಂದು ಹೇಳಲ್ಪಟ್ಟಿದೆ.

೪೪. ಆ ಪುಷ್ಕರದಲ್ಲಿ ಹತ್ತು ವರ್ಷಗಳವರೆಗೆ ಶುಚಿಯಾಗಿ ನಿಯಮದಿಂದ ಯಾಗಮಾಡಿದರೆ ಎಲ್ಲಾ ಯಾಗವನ್ನೂ ಮಾಡಿದಂತಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ.

೪೫. ಇತರ ಕಡೆಗಳಲ್ಲಿ ನೂರುವರ್ಷಗಳು ಅಗ್ನಿಹೋತ್ರವನ್ನು ಮಾಡಿದ ಪುಣ್ಯವು ಈ ಪುಷ್ಕರದಲ್ಲಿ ಕಾರ್ತಿಕ ಮಾಸದಲ್ಲಿ ಒಂದು ತಿಂಗಳಿದ್ದರೆ ಬರುತ್ತದೆ. ಅದು ಇದಕ್ಕೆ ಸಮವು.

ಪುಷ್ಕರೇ ದುಷ್ಕರಂ ದಾನಂ ಗಂತುಂ ಚೈವ ಸುದುಷ್ಕರಂ ।
ಬ್ರಾಹ್ಮಣೋ ಬ್ರಹ್ಮವಿದ್ವಾಂಸ್ತು ಗತ್ವಾ ವೈ ಜ್ಯೇಷ್ಠಪುಷ್ಕರೇ ॥ ೪೬ ॥

ಸ್ನಾನಾದ್ಭವೇನ್ಮೋಕ್ಷಭಾಗೀ ಶ್ರಾದ್ಧೇನ ಪಿತೃತಾರಕಃ ।
ನಾಮಮಾತ್ರೋಽಪಿ ಯೋ ವಿಪ್ರೋ ಗತ್ವಾ ಸಂಧ್ಯಾಮುಪಾಸತೇ ॥ ೪೭ ॥

ವರ್ಷಾಣಿ ದ್ವಾದಶೈವೇಹ ತೇನ ಸಂಧ್ಯಾ ಹ್ಯುಪಾಸಿತಾ ।
ಭವೇತ್ತು ನಾತ್ರ ಸಂದೇಹಃ ಪುರಾ ಪ್ರೋಕ್ತಂ ಸ್ವಯಂಭುವಾ ॥ ೪೮ ॥

ಸಾವಿತ್ರೀಕಥಿತೋ ದೋಷಃ ಕುಲೇ ತಸ್ಯ ನ ಜಾಯತೇ ।
ಯಾ ಪತ್ನೀ ದದತೇ ಭರ್ತುಃ ಸಂಧ್ಯೋಪಾಸ್ತಿಂ ಕರಿಷ್ಯತಃ ॥ ೪೯ ॥

ಕರಕೇಣಾಚ್ಛತಾಮ್ರೇಣ ತೋಯಂ ಮುಕ್ತಾ ದಿವಂ ವ್ರಜೇತ್ ।
ಬ್ರಹ್ಮಲೋಕಮನುಪ್ರಾಪ್ಯ ತಿಷ್ಠತಿ ಬ್ರಹ್ಮಣೋ ದಿನಂ ॥ ೫೦ ॥

---

೪೬. ಪುಷ್ಕರದಲ್ಲಿ ವಾಸವೂ ಕಷ್ಟವು. ಪುಷ್ಕರದಲ್ಲಿ ತಪಸ್ಸುಮಾಡುವುದೂ ಕಷ್ಟವು. ಪುಷ್ಕರದಲ್ಲಿ ದಾನಮಾಡುವುದೂ ಕಷ್ಟವು. ಆ ಪುಷ್ಕರಕ್ಕೆ ಹೋಗುವುದೂ ಕಷ್ಟವು.

೪೭. ಬ್ರಹ್ಮಜ್ಞಾನಿಯಾದ ಬ್ರಾಹ್ಮಣನು ಜ್ಯೇಷ್ಠಪುಷ್ಕರದಲ್ಲಿ ಸ್ನಾನಮಾಡಿದರೆ ಮೋಕ್ಷವನ್ನು ಹೊಂದುವನು. ಶ್ರಾದ್ಧಮಾಡಿದರೆ ಪಿತೃಗಳನ್ನು ಉದ್ಧರಿಸುತ್ತಾನೆ.

೪೮. ಹೆಸರಿಗೆ ಮಾತ್ರ ಬ್ರಾಹ್ಮಣನಾದವನೂ ಕೂಡ ಅಲ್ಲಿಗೆ ಹೋಗಿ ಸಂಧ್ಯಾವಂದನೆಯನ್ನು ಮಾಡಿದರೆ ಹನ್ನೆರಡುವರ್ಷ ಸಂಧ್ಯಾವಂದನೆ ಮಾಡಿದಂತಾಗುತ್ತದೆ. ಇದರಲ್ಲಿ ಸಂದೇಹವಿಲ್ಲ. ಬ್ರಹ್ಮನು ತಾನಾಗಿಯೇ ಹೇಳಿದ್ದಾನೆ.

೪೯-೫೦. ಸಾವಿತ್ರಿಯು ಹೇಳಿರುವ ದೋಷಗಳು ಆತನ ಕುಲದಲ್ಲಿ ಉಂಟಾಗುವುದಿಲ್ಲ. ಗಂಡನು ಸಂಧ್ಯಾವಂದನೆ ಮಾಡುವಾಗ ಯಾವ ಹೆಂಡತಿಯು ಗಿಂಡಿಯಿಂದ ನೀರನ್ನು ಹಾಕುತ್ತಾಳೋ ಅವಳು ಮುಕ್ತಿಯನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾಳೆ. ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನ ಒಂದು ದಿನ ಅಲ್ಲಿರುತ್ತಾರೆ.

ಏಕಾಕೀನಾ ಗತೇನಾಪಿ ಸಂಧ್ಯಾ ವಂದ್ಯಾ ಯಥಾಕ್ರಮಂ ।
ಪೌಷ್ಕರೇಣಾಥ ತೋಯೇನ ಭೃಂಗಾರೇಣ ಹಿ ತೇನ ತು ॥ ೫೧ ॥

ತೇನಾಪಿ ದ್ವಾದಶಾಬ್ದಾನಿ ಸಂಧ್ಯೋಪಾಸ್ತಾ ನ ಸಂಶಯಃ ।
ಭವೇತ್ಸಮೀಪಗಾ ಪತ್ನೀ ಕುರ್ವತಃ ಪಿತೃತರ್ಪಣಂ ॥ ೫೨ ॥

ದಕ್ಷಿಣಾಂ ದಿಶಮಾಸ್ಥಾಯ ಗಾಯತ್ರ್ಯಾ ನೃಪಸತ್ತಮ ।
ಪಿತೄಣಾಂ ಪರಮಾ ತೃಪ್ತಿಃ ಕ್ರಿಯತೇ ದ್ವಾದಶಾಬ್ದಿಕೀ ॥ ೫೩ ॥

ಪುನಃ ಸಮಗ್ರಪಿಂಡೇನ ಶ್ರಾದ್ಧೇನಾನಂತ್ಯಮಶ್ನುತೇ ।
ಏತದರ್ಥಂ ಹಿ ವಿದ್ವಾಂಸಃ ಕುರ್ವತೇ ದಾರಸಂಗ್ರಹಂ ॥ ೫೪ ॥

ತೀರ್ಥೇ ಗತ್ವಾ ಪ್ರದಾಸ್ಯಾಮಃ ಪಿಂಡಾನ್ವೈ ಶ್ರಾದ್ಧಪೂರ್ವಕಂ ।
ತೇಷಾಂ ಪುತ್ರಾ ಧನಂ ಧಾನ್ಯಮವಿಚ್ಛಿನ್ನಾ ಚ ಸಂತತಿಃ ॥ ೫೫ ॥

---

೫೧. ಒಬ್ಬಂಟಿಗನಾಗಿ ಪುಷ್ಕರಕ್ಕೆ ಹೋದರೂ ಸಂಧ್ಯಾವಂದನೆಯನ್ನು ಮಾಡಬೇಕು. ಆ ಸಂಧ್ಯಾವಂದನೆಯನ್ನು ಮಾಡುವಾಗ ಪುಷ್ಕರದ ನೀರನ್ನು ಗಿಂಡಿಯಲ್ಲಿ ತೆಗೆದುಕೊಂಡು ಅದರಿಂದ ನೀರನ್ನು ಹಾಕಿಕೊಂಡು ಮಾಡಿದರೆ ಅವನು ಹನ್ನೆರಡು ವರ್ಷಗಳ ಸಂಧ್ಯಾವಂದನೆ ಮಾಡಿದಂತಾಗುತ್ತದೆ.

೫೨-೫೩. ಪಿತೃತರ್ಪಣವನ್ನು ಮಾಡುತ್ತಿರುವಾಗ ಹೆಂಡತಿಯು ಪಕ್ಕದಲ್ಲಿದ್ದು ಗಾಯತ್ರಿಯಿಂದ ತರ್ಪಣವನ್ನು ದಕ್ಷಿಣದಿಕ್ಕಿಗೆ ತಿರುಗಿಕೊಂಡು ಕೊಟ್ಟರೆ ಪಿತೃಗಳಿಗೆ ಹನ್ನೆರಡು ವರ್ಷಗಳ ತೃಪ್ತಿಯುಂಟಾಗುತ್ತದೆ.

೫೪. ಶ್ರಾದ್ಧವನ್ನು ಮಾಡಿ ಸರಿಯಾಗಿ ಪಿಂಡವನ್ನು ಕೊಟ್ಟರೆ ಅನಂತವಾದ ಸುಖವನ್ನು ಹೊಂದುತ್ತಾರೆ. ಇದಕ್ಕೋಸ್ಕರಲೇ ವಿದ್ವಾಂಸರು ಮದುವೆಮಾಡಿಕೊಳ್ಳುವುದು.

೫೫-೫೬. ತೀರ್ಥದಲ್ಲಿ ಹೋಗಿ ಪಿಂಡವನ್ನು ಕೊಟ್ಟು ಶ್ರಾದ್ಧವನ್ನು ಮಾಡಬೇಕೆನ್ನುತ್ತಾರೆ. ಅವರಿಗೆ ಮಕ್ಕಳು, ಧನವು, ಸಂತತಿಯು ಎಡಬಿಡದೆ ಉಂಟಾಗು

**ಭವೇದ್ವೈ ನಾತ್ರ ಸಂದೇಹ ಏತದಾಹ ಪಿತಾಮಹಃ ।**
**ತರ್ಪಯಿತ್ವಾ ಪಿತೄನ್ದೇವಾನಗ್ನಿಷ್ಟೋಮಫಲಂ ಲಭೇತ್ ॥ ೫೬ ॥**

**ಆಶ್ರಮಾನಪಿ ತೇ ವಚ್ಮಿ ಶೃಣುಷ್ವೇಕಮನಾ ನೃಪ ।**
**ಅಗಸ್ತ್ಯೇನ ಕೃತಶ್ಚಾತ್ರ ಆಶ್ರಮೋ ದೇವಸಂಮಿತಃ ॥ ೫೭ ॥**

**ಸಪ್ತರ್ಷೀಣಾಂ ಪುರಾ ಚಾತ್ರ ಆಶ್ರಮೋ ದೇವಸಂಮಿತಃ ।**
**ಬ್ರಹ್ಮರ್ಷೀಣಾಂ ತಥಾ ಚಾತ್ರ ಮನೂನಾಂ ವೈ ಪರಂತಪ ॥ ೫೮ ॥**

**ನಾಗಾನಾಂ ತು ಪುರೀ ರಮ್ಯಾ ಯಜ್ಞಪರ್ವತರೋಧಸಿ ।**
**ಅಗಸ್ತ್ಯಸ್ಯ ಮಹಾರಾಜ ಪ್ರಭಾವಮಮಿತಾತ್ಮನಃ ॥ ೫೯ ॥**

**ಕಥಯಾಮಿ ಸಮಾಸೇನ ಶೃಣು ತ್ವಂ ಸುಸಮಾಹಿತಃ ।**
**ಪೂರ್ವಂ ಕೃತಯುಗೇ ಭೀಷ್ಮ ದಾನವಾ ಯುದ್ಧದುರ್ಮದಾಃ ॥ ೬೦ ॥**

---

ತ್ತವೆ. ಹೀಗಾಗುವುದರಲ್ಲಿ ಸಂದೇಹವಿಲ್ಲ ಎಂದು ಬ್ರಹ್ಮನು ಹೇಳಿದ್ದಾನೆ. ಪಿತೃಗಳಿಗೂ ದೇವತೆಗಳಿಗೂ ತರ್ಪಣಮಾಡಿದರೆ ಅಗ್ನಿಷ್ಟೋಮ ಫಲವು ಬರುತ್ತದೆ.

೫೭. ಆಶ್ರಮಗಳನ್ನು ನಿನಗೆ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. ದೇವತೆಗಳಿಗೆ ಸಮನಾದ ಅಗಸ್ತ್ಯನು ಇಲ್ಲಿ ಆಶ್ರಮವನ್ನು ಮಾಡಿಕೊಂಡಿರುವನು.

೫೮. ದೇವತೆಗಳ ಆಶ್ರಮದಂತಿರುವ ಸಪ್ತಋಷಿಗಳ ಆಶ್ರಮವೂ ಇಲ್ಲಿ ಇದೆ. ಬ್ರಹ್ಮರ್ಷಿಗಳು ಮತ್ತು ಮನುಗಳ ಆಶ್ರಮವೂ ಇಲ್ಲಿದೆ. ನಾಗರೆಂಬ ಸರ್ಪಗಳ ಪಟ್ಟಣವು ಈ ಯಜ್ಞಪರ್ವತದ ತಪ್ಪಲಲ್ಲಿದೆ.

೫೯. ಎಲೈ ದೊರೆಯೇ, ಉತ್ಕೃಷ್ಟವಾದ ಶಕ್ತಿಯುಳ್ಳ ಅಗಸ್ತ್ಯನ ಪ್ರಭಾವವನ್ನು ಸಂಗ್ರಹವಾಗಿ ಹೇಳುತ್ತೇನೆ ಕೇಳು.

೬೦. ಎಲೈ ಭೀಷ್ಮನೇ, ಪೂರ್ವದಲ್ಲಿ ಯುದ್ಧದಲ್ಲಿ ಕೊಬ್ಬಿದ ದಾನವರಲ್ಲಿ ಕಾಲೇಯರೆಂಬ ಒಂದು ಗುಂಪು ಸಿದ್ಧವಾಗಿ ಕ್ರೂರವಾಗಿದ್ದಿತು.

ಕಾಲೇಯಾ ಇತಿ ವಿಖ್ಯಾತಾ ಗಣಾಃ ಪರಮದಾರುಣಾಃ ।
ತೇ ತು ವೃತ್ರಂ ಸಮಾವೃತ್ಯ ನಾನಾಪ್ರಹರಣೋದ್ಯತಾಃ ॥ ೬೧ ॥

ಸಮಂತಾತ್ಪರ್ಯಧಾವಂತ ಮಹೇಂದ್ರಪ್ರಮುಖಾನ್ಸುರಾನ್ ।
ತತೋ ವೃತ್ರವಧೇ ಯತ್ನಮಕುರ್ವಂಸ್ತ್ರಿದಶಾಃ ಪುರಾ ॥ ೬೨ ॥

ಪುರಂದರಂ ಪುರಸ್ಕೃತ್ಯ ಬ್ರಹ್ಮಾಣಮುಪತಸ್ಥಿರೇ ।
ಕೃತಾಂಜಲಿಪುಟಾನ್ಸರ್ವಾನ್ಪರಮೇಷ್ಠೀತ್ಯುವಾಚ ಹ ॥ ೬೩ ॥

॥ ಬ್ರಹ್ಮೋವಾಚ ॥

ವಿದಿತಂ ಮೇ ಸುರಾಃ ಸರ್ವಂ ಯದ್ವಃ ಕಾರ್ಯಂ ಚಿಕೀರ್ಷಿತಂ ।
ತಮುಪಾಯಂ ವದಿಷ್ಯಾಮಿ ಯಥಾ ವೃತ್ರಂ ವಧಿಷ್ಯಥ ॥ ೬೪ ॥

ದಧೀಚಿರಿತಿ ವಿಖ್ಯಾತೋ ಮಹಾನೃಷಿರುದಾರಧೀಃ ।
ತಂ ಗತ್ವಾ ಸಹಿತಾಃ ಸರ್ವೇ ವರಂ ಚ ಸಮಯಾಚತ ॥ ೬೫ ॥

---

೬೧. ಅವರು ವೃತ್ರಾಸುರನನ್ನು ಆಶ್ರಯಿಸಿಕೊಂಡಿದ್ದು ಅನೇಕಬಗೆಯಾದ ಆಯುಧಗಳನ್ನು ತೆಗೆದುಕೊಂಡು ಇಂದ್ರ ಮುಂತಾದ ದೇವತೆಗಳ ಮೇಲೆ ಬೀಳಲು, ಎಲ್ಲಾ ಕಡೆಯಿಂದಲೂ ಮುತ್ತಿದರು.

೬೨-೬೩. ಅನಂತರ ದೇವತೆಗಳು ವೃತ್ರನ ವಧೆಗಾಗಿ ಪ್ರಯತ್ನಪಟ್ಟು ಇಂದ್ರನನ್ನು ಮುಂದುಮಾಡಿಕೊಂಡು ಬ್ರಹ್ಮನ ಬಳಿಗೆ ಹೋಗಿ ಕೈಮುಗಿದುಕೊಂಡು ಕೇಳಿಕೊಳ್ಳಲು, ಆ ಬ್ರಹ್ಮನು ಅವರಿಗೆ ಇಂತೆಂದನು.

೬೪. ಬ್ರಹ್ಮನು ಹೇಳಿದನು :—ಎಲೈ ದೇವತೆಗಳಿರಾ, ನೀವು ಮಾಡಬೇಕೆಂದು ಇರುವ ವಿಷಯವೆಲ್ಲವೂ ತಿಳಿಯಿತು. ವೃತ್ರನನ್ನು ಕೊಲ್ಲುವ ಉಪಾಯವನ್ನು ಹೇಳುತ್ತೇನೆ.

೬೫. ಒಳ್ಳೆಯ ಮನಸ್ಸುಳ್ಳ ದಧೀಚಿಯೆಂಬ ಒಬ್ಬ ಮಹಾಋಷಿಯಿರುವನು. ನೀವೆಲ್ಲರೂ ಅವನ ಬಳಿಗೆ ಹೋಗಿ ವರವನ್ನು ಕೇಳಿಕೊಳ್ಳಿರಿ.

ಸ ವೋ ದಾಸ್ಯತಿ ಧರ್ಮಾತ್ಮಾ ಸುಪ್ರೀತೇನಾಂತರಾತ್ಮನಾ ।
ಸ ವಾಚ್ಯಃ ಸಹಿತೈಃ ಸರ್ವೈರ್ಭವದ್ಭಿರ್ಜಯಕಾಂಕ್ಷಿಭಿಃ ॥ ೬೬ ॥

ಸ್ವಾನ್ಯಸ್ಥೀನಿ ಪ್ರಯಚ್ಛಸ್ವ ತ್ರೈಲೋಕ್ಯಹಿತಕಾಮ್ಯಯಾ ।
ಸ ಶರೀರಂ ಸಮುತ್ಸೃಜ್ಯ ಸ್ವಾನ್ಯಸ್ಥೀನಿ ಪ್ರದಾಸ್ಯತಿ ॥ ೬೭ ॥

ತಸ್ಯಾಸ್ಥಿಭಿರ್ಮಹಾಘೋರಂ ವಜ್ರಂ ಸಂಕ್ರಿಯತಾಂ ದೃಢಂ ।
ಮಹಚ್ಛತ್ರುಹನಂ ದಿವ್ಯಂ ಸದಸ್ರಮಶನಿಸ್ವನಂ ॥ ೬೮ ॥

ತೇನ ವಜ್ರೇಣ ವೈ ವೃತ್ರಂ ವಧಿಷ್ಯತಿ ಶತಕ್ರತುಃ ।
ಏತದ್ವಃ ಸರ್ವಮಾಖ್ಯಾತಂ ತಸ್ಮಾಚ್ಛೀಘ್ರಂ ವಿಧೀಯತಾಂ ॥ ೬೯ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಾಸ್ತತೋ ದೇವಾ ಅನುಜ್ಞಾಪ್ಯ ಪಿತಾಮಹಂ ।
ಶತಕ್ರತುಂ ಪುರಸ್ಕೃತ್ಯ ದಧೀಚೇರಾಶ್ರಮಂ ಯಯುಃ ॥ ೭೦ ॥

---

೬೬. ಆ ಧರ್ಮಿಷ್ಠನು ಪ್ರೀತಿಯುಳ್ಳವನಾಗಿ ನಿಮಗೆ ವರವನ್ನು ಕೊಡುತ್ತಾನೆ. ಜಯಕಾಂಕ್ಷಿಗಳಾದ ನೀವೆಲ್ಲರೂ ಅವನ ಬಳಿಗೆ ಹೋಗಿ ಇಂತೆನ್ನಿರಿ.

೬೭. ಮೂರು ಲೋಕಕ್ಕೂ ಹಿತವಾಗಬೇಕೆಂಬ ಮನಸ್ಸಿನಿಂದ ನಿನ್ನ ಮೂಳೆಗಳನ್ನು ಕೊಡು ಎನ್ನಿರಿ. ಆತನು ಶರೀರವನ್ನು ಬಿಟ್ಟು ನಿಮಗೆ ಮೂಳೆಗಳನ್ನು ಕೊಡುವನು.

೬೮. ಆ ಮೂಳೆಗಳಿಂದ ಮಹಾ ಘೋರವಾದ, ಗಟ್ಟಿಯಾದ, ಶತ್ರುಗಳನ್ನು ನಾಶಮಾಡುವ, ಸಾವಿರ ಸಿಡಿಲುಗಳ ಶಬ್ದವುಳ್ಳ ವಜ್ರಾಯುಧವನ್ನು ಮಾಡಿರಿ.

೬೯. ಆ ವಜ್ರದಿಂದ ಇಂದ್ರನು ವೃತ್ರನನ್ನು ಕೊಲ್ಲುತ್ತಾನೆ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ. ಜಾಗ್ರತೆಯಾಗಿ ಈ ಕೆಲಸವನ್ನು ಮಾಡಿರಿ.

೭೦. ಪುಲಸ್ತ್ಯನು ಹೇಳಿದನು :—ಬ್ರಹ್ಮನು ಹೀಗೆನ್ನಲು ದೇವತೆಗಳು ಬ್ರಹ್ಮನ ಅಪ್ಪಣೆಯನ್ನು ಪಡೆದು, ಇಂದ್ರನನ್ನು ಮುಂದುಮಾಡಿಕೊಂಡು ದಧೀಚಿಯ ಆಶ್ರಮಕ್ಕೆ ಹೋದರು.

**ಸರಸ್ವತ್ಯಾಃ ಪರೇ ಪಾರೇ ನಾನಾದ್ರುಮಲತಾವೃತಂ ।**
**ಷಟ್ಪದೋದ್ಗೀತನಿನದೈರ್ವಿಘುಷ್ಟಂ ಸಾಮಗೈರಿವ ॥ ೭೦ ॥**

**ಪುಂಸ್ಕೋಕಿಲರವೋನ್ಮಿಶ್ರಂ ಜೀವಂಜೀವಕನಾದಿತಂ ।**
**ಮಹಿಷೈಶ್ಚ ವರಾಹೈಶ್ಚ ಸೃಮರೈಶ್ಚಮರೈರಪಿ ॥ ೭೨ ॥**

**ತತ್ರ ತತ್ರಾನುಚರಿತೈಃ ಶಾರ್ದೂಲಭಯವರ್ಜಿತೈಃ ।**
**ಕರೇಣುಭಿರ್ವಾರಣೈಶ್ಚ ಪ್ರಭಿನ್ನಕರಟಾಮುಖೈಃ ॥ ೭೩ ॥**

**ಸ್ವರೋದ್ಗಾರೈಶ್ಚ ಕ್ರೀಡದ್ಭಿಃ ಸಮಂತಾದನುನಾದಿತಂ ।**
**ಸಿಂಹವ್ಯಾಘ್ರೈರ್ಮಹಾನಾದೈರ್ನದದ್ಭಿರನುನಾದಿತಂ ॥ ೭೪ ॥**

**ಮಯೂರೈಶ್ಚಾಪಿ ಸಲ್ಲೀನೈರ್ಗುಹಾಕಂದರವಾಸಿಭಿಃ ।**
**ತೇಷು ತೇಷ್ವವಕಾಶೇಷು ನಾದಿತಂ ಚ ಮನೋರಮಂ ॥ ೭೫ ॥**

**ತ್ರಿವಿಷ್ಟಪಸಮಪ್ರಖ್ಯಂ ದಧೀಚ್ಯಾಶ್ರಮಮಾಗಮನ್ ।**
**ತತ್ರಾಪಶ್ಯನ್ದಧೀಚಿಂ ತೇ ದಿವಾಕರಸಮಪ್ರಭಂ ॥ ೭೬ ॥**

---

೭೧. ಸರಸ್ವತಿಯ ಆಚೆಯ ದಡದಲ್ಲಿ ಬಗೆಬಗೆಯ ಲತೆ ಮರಗಳಿಂದ ಕೂಡಿದ, ಸಾಮಗಾನ ಮಾಡುವಂತೆ ಹಾಡುವ ಭ್ರಮರಗಳಿಂದ ತುಂಬಿದ ದಧೀಚಿಯ ಆಶ್ರಮಕ್ಕೆ ಬಂದರು.

೭೨—೭೫. ಗಂಡುಕೋಗಿಲೆಗಳು ಕೂಗುತ್ತಿರುವ, ಚಕೋರಗಳ ಧ್ವನಿಯುಳ್ಳ, ಕಾಡುಕೋಣಗಳು, ಹಂದಿಗಳು, ಗವಯುಗಳೂ ವಾಸವಾಗಿರುವ, ಹುಲಿಯ ಭಯವಿಲ್ಲದೆ ಅಲ್ಲಲ್ಲಿಯೇ ಸಂಚಾರಮಾಡುತ್ತಿರುವ ಜಿಂಕೆಗಳುಳ್ಳ, ಸಿಂಹದ ಭಯವನ್ನು ಬಿಟ್ಟು ಸಂಚರಿಸುತ್ತಿರುವ ಗಂಡಾನೆಗಳಿಂದಲೂ, ಮದಿಸಿರುವ ಹೆಣ್ಣಾನೆಗಳಿಂದಲೂ ಕೂಗಿಕೊಂಡು ಅಲ್ಲಲ್ಲೇ ಸಂಚರಿಸುತ್ತಿರುವ ಮೃಗಳಿಂದಲೂ ಸಿಂಹ ಹುಲಿಗಳ ಗರ್ಜನೆಗಳಿಂದಲೂ, ಪ್ರತಿಧ್ವನಿತವಾದ ಗುಹೆಗಳಲ್ಲಿ ವಾಸಮಾಡುತ್ತಿರುವ, ನವಿಲುಗಳಿಂದ ಧ್ವನಿತವಾಗಿರುವ ಮನೋಹರವಾದ ಸ್ವರ್ಗದಂತಿರುವ ದಧೀಚಿಯ ಆಶ್ರಮವನ್ನು ಹೊಂದಿದರು.

೭೬. ಅಲ್ಲಿ ಸೂರ್ಯನಂತೆ ಕಾಂತಿಯುಳ್ಳ, ಬ್ರಹ್ಮನಂತೆ ಪ್ರಕಾಶವಾಗಿ ಜ್ವಲಿಸುತ್ತಿರುವ ದಧೀಚಿಯನ್ನು ಕಂಡರು.

**ಜಾಜ್ವಲ್ಯಮಾನಂ ವಪುಷಾ ಯಥಾ ಲಕ್ಷ್ಮ್ಯಾ ಪಿತಾಮಹಂ ।**
**ತಸ್ಯ ಪಾದೌ ಸುರಾ ರಾಜನ್ನಭಿವಂದ್ಯ ಪ್ರಣಮ್ಯ ಚ ॥ ೭೭ ॥**

**ಅಯಾಚಂತ ವರಂ ಸರ್ವೇ ಯಥೋಕ್ತಂ ಪರಮೇಷ್ಠಿನಾ ।**
**ತತೋ ದಧೀಚಿಃ ಪರಮಪ್ರೀತಿತಶ್ಚ ಸುರೋತ್ತಮಾನ್ ।**
**ಉವಾಚ ಪ್ರಣತೋ ಭೂತ್ವಾ ಇದಂ ಕಾರ್ಯಕರಂ ವಚಃ ॥ ೭೮ ॥**

**॥ ದಧೀಚಿರುವಾಚ ॥**

**ಇಂದ್ರಾದ್ಯಾಸ್ತ್ವಾಗತಾ ದೇವಾಃ ಕಿಮರ್ಥಂ ತದ್ವದಸ್ವ ನಃ ।**
**ಪೀಡ್ಯಮಾನಾನಹಂ ಲಕ್ಷ್ಯೇ ಹತಪ್ರಭಸುರೋತ್ತಮಾಃ ।**
**ಯದರ್ಥಂ ಪೀಡಿತಾತ್ಮಾನಸ್ತದ್ವದಂತು ನಿರಾಕುಲಂ ॥ ೭೯ ॥**

**॥ ದೇವಾ ಊಚುಃ ॥**

**ತ್ವದಸ್ಥಿಕೃತಶಸ್ತ್ರೇಣ ದೇವಾಃ ಸಂತು ನಿರಾಮಯಾಃ ॥ ೮೦ ॥**

**॥ ದಧೀಚಿರುವಾಚ ॥**

**ಕರೋಮಿ ಯದ್ವೋ ಹಿತಮದ್ಯ ದೇವಾಃ**
**ಸ್ವಂ ಚಾಪಿ ದೇಹಂ ತ್ವಿದಮುತ್ಸೃಜಾಮಿ ।**

---

೭೭. ಎಲೈ ಭೀಷ್ಮನೇ, ಆತನ ಪಾದಗಳನ್ನು ದೇವತೆಗಳು ಅಭಿವಾದನೆ ಮಾಡಿ ನಮಸ್ಕರಿಸಿ, ಬ್ರಹ್ಮನು ಹೇಳಿದಂತೆ ವರವನ್ನು ಕೇಳಿಕೊಂಡರು.

೭೮. ಅನಂತರ ದಧೀಚಿಯು ಬಹು ಸಂತೋಷಪಟ್ಟು ನಮ್ರತೆಯಿಂದ ದೇವತೆಗಳನ್ನು ಕುರಿತು ಈ ಕಾರ್ಯಕಾರಿಯಾದ ಮಾತನ್ನಾಡಿದನು.

೭೯. ಧೀಚಿಯು ಹೇಳಿದನು :—ಎಲೈ ದೇವತೆಗಳಿರಾ, ಇಂದ್ರನೇ ಮೊದಲುಗೊಂಡು ಎಲ್ಲರೂ ಬಂದಿದ್ದೀರಿ. ಅದಕ್ಕೆ ಕಾರಣವೇನು ? ನನಗೆ ಹೇಳಿರಿ. ನಿಮ್ಮ ಮುಖದಲ್ಲಿ ಕಾಂತಿಯಿಲ್ಲದಿರುವುದರಿಂದ ತೊಂದರೆಪಡುತ್ತಿರುವಂತೆ ಕಾಣುತ್ತಿದ್ದೀರಿ. ನಿಮ್ಮ ಆ ಪೀಡೆಗೆ ಕಾರಣವೇನು ? ಅದನ್ನು ನಿರ್ಬಾಧಕವಾಗಿ ಹೇಳಿರಿ.

೮೦. ದೇವತೆಗಳು ಹೇಳಿದರು :—ನಿನ್ನ ಮೂಳೆಯಿಂದ ಮಾಡಿಕೊಂಡ ಅಸ್ತ್ರದಿಂದ ದೇವತೆಗಳು ತೊಂದರೆಯನ್ನು ತಪ್ಪಿಸಿಕೊಳ್ಳಬೇಕು.

೮೧. ದಧೀಚಿಯು ಹೇಳಿದನು :—ಎಲೈ ದೇವತೆಗಳಿರಾ, ನಿಮಗೆ ಹಿತ

॥ ಪುಲಸ್ತ್ಯ ಉವಾಚ ॥

ಸ ಏವಮುಕ್ತ್ವಾ ದ್ವಿಪದಾಂ ವರಿಷ್ಠಃ
ಪ್ರಾಣಾನಥಾಸೌ ಸಹಸೋತ್ಸಸರ್ಜ ॥ ೮೧ ॥

ಸುರಾಸ್ತದಸ್ಥೀನಿ ಗತಾಯುಷಸ್ತೇ
ಯಥೋಪಯೋಗಂ ಜಗೃಹುಃ ಸಮಸ್ತಾಃ ।
ಸುಹೃಷ್ಟರೂಪಾಶ್ಚ ಜಯಾಯ ದೇವಾ-
ಸ್ತ್ವಷ್ಟಾರಮಾಸಾದ್ಯ ಸಮಸ್ತಮೂಚುಃ ॥ ೮೨ ॥

ತ್ವಷ್ಟಾ ತು ತೇಷಾಂ ವಚನಂ ನಿಶಮ್ಯ
ಪ್ರಹೃಷ್ಟರೂಪಃ ಪ್ರಯತಃ ಪ್ರಯತ್ನಾತ್ ।
ಚಕಾರ ವಜ್ರಂ ಭೃಶಮುಗ್ರವೀರ್ಯಂ
ಕೃತ್ವಾ ಚ ಶಸ್ತ್ರಂ ಚ ಜಗಾದ ವಾಚಂ ॥ ೮೩ ॥

॥ ತ್ವಷ್ಟೋವಾಚ ॥

ಅನೇನ ಶಸ್ತ್ರಪ್ರವರೇಣ ದೇವ
ಭಸ್ಮೀ ಕುರುಷ್ವಾದ್ಯ ಸುರಾರಿಮುಗ್ರಂ ।
ತ್ರೈಲೋಕ್ಯರಾಜ್ಯಂ ಸಗಣಃ ಸುಖೀ ತ್ವಂ
ಪ್ರಶಾಧಿ ಕೃತ್ಸ್ನಂ ತ್ರಿದಿವಂ ದಿವಿಷ್ಠಃ

---

ವಾದುದನ್ನು ಮಾಡುತ್ತೇನೆ. ಪುಲಸ್ತ್ಯನು ಹೇಳಿದನು :—ಆ ಶ್ರೇಷ್ಠನಾದ ದಧೀಚಿಯು ಈ ರೀತಿ ಹೇಳಿ ಪ್ರಾಣಗಳನ್ನು ಬಿಟ್ಟುಬಿಟ್ಟನು.

೮೨. ಆಗ ದೇವತೆಗಳು ಅವನ ಮೂಳೆಗಳಲ್ಲಿ ಕೆಲಸಕ್ಕೆ ಬರುವುದನ್ನೆಲ್ಲಾ ತೆಗೆದುಕೊಂಡರು. ಸಂತೋಷದಿಂದ ಅವುಗಳನ್ನು ಆಯುಧವನ್ನಾಗಿ ಮಾಡಿಕೊಡಲು ವಿಶ್ವಕರ್ಮನಿಗೆ ಕೊಟ್ಟು ನಡೆದ ವಿಷಯವನ್ನೆಲ್ಲ ಹೇಳಿದರು.

೮೩. ವಿಶ್ವಕರ್ಮನು ಅವರ ಮಾತನ್ನು ಕೇಳಿ ಸಂತೋಷಗೊಂಡು ಪ್ರಯತ್ನಪಟ್ಟು ವಜ್ರಾಯುಧವನ್ನು ಬಹು ನಾಜೂಕಾಗಿಯೂ ಬಲವುಳ್ಳದ್ದಾಗಿಯೂ ಮಾಡಿದನು. ಅನಂತರ ಇಂತೆಂದನು.

೮೪. ತ್ವಷ್ಟನು ಹೇಳಿದನು :—ಎಲೈ ಇಂದ್ರನೇ, ಈ ಶಸ್ತ್ರದಿಂದ ಕ್ರೂರನಾದ

॥ ಪುಲಸ್ತ್ಯ ಉವಾಚ ॥

ತ್ವಷ್ಟ್ರಾ ತಥೋಕ್ತಸ್ತು ಪುರಂದರಶ್ಚ
ವಜ್ರಂ ಪ್ರಹೃಷ್ಟಃ ಪ್ರಯತಃ ಪ್ರಗೃಹ್ಯ ॥ ೮೪ ॥

ತತಃ ಶಕ್ರೋ ವಜ್ರಯುತೋ ದೈವತೈರಭಿರಕ್ಷಿತಃ ।
ಆಸಸಾದ ತತೋ ವೃತ್ರಂ ಸ್ಥಿತಮಾವೃತ್ಯ ರೋದಸೀ ॥ ೮೫ ॥

ಕಾಲಕೇಯೈರ್ಮಹಾಕಾಯೈಃ ಸಮಂತಾದಭಿರಕ್ಷಿತಂ ।
ಸಮುದ್ಯತಪ್ರಹರಣೈಃ ಸಶೃಂಗೈರಿವ ಪರ್ವತೈಃ ॥ ೮೬ ॥

ತತೋ ಯುದ್ಧಂ ಸಮಭವದ್ದೇವಾನಾಂ ಸಹ ದಾನವೈಃ ।
ಮುಹೂರ್ತಂ ಭರತಶ್ರೇಷ್ಠ ಲೋಕತ್ರಾಸಕರಂ ಮಹತ್ ॥ ೮೭ ॥

ಉದ್ಯತಃ ಪರಿಸೃಷ್ಟಾನಾಂ ಖಡ್ಗಾನಾಂ ವೀರಬಾಹುಭಿಃ ।
ಆಸೀತ್ಸತುಮುಲಃ ಶಬ್ದಃ ಶರೀರೇಷ್ವನಿವಾರಿತಃ ॥ ೮೮ ॥

---

ದೇವತೆಗಳ ಶತ್ರುವಾದ ವೃತ್ರಾಸುರನನ್ನು ಭಸ್ಮವನ್ನಾಗಿ ಮಾಡು. ಮೂರುಲೋಕದ ರಾಜ್ಯವನ್ನೂ, ದೇವಲೋಕದಲ್ಲಿದ್ದುಕೊಂಡು ಜತೆಯವರೊಡನೆ ಸುಖವಾಗಿ ಆಳು. ಪುಲಸ್ತ್ಯನು ಹೇಳಿದನು:—ವಿಶ್ವಕರ್ಮನಿಂದ ಹೀಗೆ ಹೇಳಲ್ಪಟ್ಟ ಆ ಇಂದ್ರನು ನಿಯಮಪೂರ್ವಕವಾಗಿ ಸಂತೋಷದಿಂದ ಆ ವಜ್ರಾಯುಧವನ್ನು ಹಿಡಿದುಕೊಂಡನು.

೮೫. ಆಮೇಲೆ ಆ ಇಂದ್ರನು ವಜ್ರಾಯುಧವನ್ನು ಹಿಡಿದು, ದೇವತೆಗಳನ್ನು ರಕ್ಷಕರನ್ನಾಗಿ ಕರೆದುಕೊಂಡು ಎಲ್ಲಾ ಲೋಕಗಳನ್ನೂ ಆವರಿಸಿಕೊಂಡಿರುವ ವೃತ್ರನನ್ನು ಎದುರಿಸಿದನು.

೮೬. ಆ ವೃತ್ರನೂ ಕೂಡ ದೊಡ್ಡ ದೇಹವುಳ್ಳ ಕಾಲಕೇಯರೆಂಬ ಗಣದಿಂದ ಕಾಪಾಡಲ್ಪಟ್ಟವನಾಗಿ ಪರ್ವತದ ಶಿಖರಗಳಂತೆ ಆಯುಧಗಳನ್ನು ಧರಿಸಿದ್ದನು. ಅವರನ್ನು ಇಂದ್ರನು ಎದುರಿಸಿದನು.

೮೭. ದೇವತೆಗಳಿಗೂ, ದಾನವರಿಗೂ ಲೋಕವನ್ನೇ ಹೆದರಿಸುವಂತಹ ಯುದ್ಧವು ಕ್ಷಣಕಾಲ ನಡೆಯಿತು.

೮೮. ಖಡ್ಗದಿಂದ ಕೂಡಿಕೊಂಡಿರುವ ಬಾಹುಗಳುಳ್ಳ ಆ ವೀರರುಗಳಿಗೆ ಬಹು ಭಯಂಕರವಾದ ತುಮುಲಯುದ್ಧವು ನಡೆಯಿತು.

**ಶಿರೋಭಿಃ ಪ್ರಪತದ್ಭಿಶ್ಚ ಅಂತರಿಕ್ಷಾನ್ಮಹೀತಲಂ ।**
**ತಾಲೈರಿವ ಮಹೀಪಾಲ ವೃತಂ ತೈರೇವ ದೃಶ್ಯತೇ ॥ ೮೯ ॥**

**ತೇ ಹೇಮಕವಚಾ ಭೂತ್ವಾ ಕಾಲೇಯಾಃ ಪರಿಘಾಯುಧಾಃ ।**
**ತ್ರಿದಶಾನಭ್ಯವರ್ತಂತ ದಾವದಗ್ಧಾ ಇವ ದ್ರುಮಾಃ ॥ ೯೦ ॥**

**ತೇಷಾಂ ವೇಗವತಾಂ ವೇಗಂ ಸಹಿತಾನಾಂ ಪ್ರಧಾವತಾಂ ।**
**ನ ಶೇಕುಃ ಸಹಿತಾಃ ಸೋಢುಂ ಭಗ್ನಾಸ್ತೇ ಪ್ರಾದವನ್ಭಯಾತ್ ॥ ೯೧ ॥**

**ತಾನ್ದೃಷ್ಟ್ವಾ ದ್ರವತೋ ಭೀತ್ವಾ ಸಹಸ್ರಾಕ್ಷಃ ಪುರಂದರಃ ।**
**ವೃತ್ರಂ ವಿವರ್ಧಮಾನಂ ತು ಕಶ್ಮಲಂ ಮಹದಾವಿಶತ್ ॥ ೯೨ ॥**

**ತಂ ಶಕ್ರಂ ಕಶ್ಮಲಾವಿಷ್ಟಂ ದೃಷ್ಟ್ವಾ ವಿಷ್ಣುಃ ಸನಾತನಃ ।**
**ಸ್ವತೇಜೋ ವ್ಯದಧಾಚ್ಛಕ್ರೇ ಬಲಂ ತಸ್ಯ ವ್ಯವರ್ಧಯತ್ ॥ ೯೩ ॥**

---

೮೯. ಅಂತರಿಕ್ಷದಲ್ಲಿ ಬೀಳುತ್ತಿರುವ ಆ ಯೋಧರ ರುಂಡಗಳಿಂದ ಭೂಮಿಯು ತಾಳಫಲದಂತೆ ಆವರಿಸಲ್ಪಟ್ಟ ಹಾಗೆ ಕಾಣುತ್ತಿದ್ದಿತು.

೯೦. ಆ ಕಾಲಕೇಯರು ಚಿನ್ನದ ಕವಚವನ್ನು ತೊಟ್ಟುಕೊಂಡು, ಪರಿಘವನ್ನು ಹಿಡಿದು, ಕಾಳ್ಕಿಚ್ಚಿನಿಂದ ಸುಟ್ಟಮರವು ಹೇಗೆ ಬೆಂಕಿಯ ಮೇಲೆ ಬೀಳುವುದೋ ಹಾಗೇ ದೇವತೆಗಳ ಮೇಲೆ ಬಿದ್ದರು.

೯೧. ಒಟ್ಟಿಗೆ ಮೇಲೆ ಬೀಳುತ್ತಿರುವ ಬಲಿಷ್ಠರಾದ ಅವರ ವೇಗವನ್ನು ದೇವತೆಗಳು ತಡೆಯಲಾರದೆ ಭಯದಿಂದ ಓಡಿದರು.

೯೨. ಸಹಸ್ರಾಕ್ಷನಾದ ಇಂದ್ರನು ಹೆದರಿಕೆಯಿಂದ ತಮ್ಮವರು ಓಡುತ್ತಿರುವುದನ್ನೂ, ವೃತ್ರಾಸುರನು ಹೆಚ್ಚುತ್ತಿರುವುದನ್ನೂ ನೋಡಿ ಇಂದ್ರನಿಗೆ ಮುಖವು ಬಾಡಿತು.

೯೩. ಬಾಡಿ ಬಲಗುಂದುತ್ತಿರುವ ಇಂದ್ರನನ್ನು ಸನಾತನನಾದ ವಿಷ್ಣುವು ನೋಡಿ ತನ್ನ ಬಲವನ್ನು ಅವನಿಗೆ ಕೊಟ್ಟು ಅವನ ಬಲವನ್ನು ಹೆಚ್ಚಿಸಿದನು.

ವಿಷ್ಣುನಾಽಽಪ್ಯಾಯಿತಂ ಶಕ್ರಂ ದೃಷ್ಟ್ವಾ ದೇವಗಣಾಸ್ತದಾ ।
ಸ್ವಂ ಸ್ವಂ ತೇಜಃ ಸಮಾದಧ್ಯುಸ್ತಥಾ ಬ್ರಹ್ಮರ್ಷಯೋಽಮಲಾಃ ॥ ೯೪॥

ಸ ಸಮಾಪ್ಯಾಯಿತಃ ಶಕ್ರೋ ವಿಷ್ಣುನಾ ದೈವತೈಃ ಸಹ ।
ಋಷಿಭಿಶ್ಚ ಮಹಾಭಾಗೈರ್ಬಲವಾನ್ಸಮಪದ್ಯತ ॥ ೯೫ ॥

ಜ್ಞಾತ್ವಾ ಬಲಸ್ಥಂ ತ್ರಿದಶಾಧಿಪಂ ತಂ
ನನಾದ ವೃತ್ರೋ ಮಹದಾನಿನಾದಂ ।
ತಸ್ಯ ಪ್ರಣಾದೇನ ಧರಾ ದಿಶಶ್ಚ
ಖಂ ದ್ಯೌರ್ನಗಶ್ಚೈವ ಚಚಾಲ ಸರ್ವಂ ॥ ೯೬ ॥

ತತೋ ಮಹೇಂದ್ರಃ ಪರಮಾಭಿತಪ್ತಃ
ಶ್ರುತ್ವಾ ರವಂ ಘೋರತರಂ ಮಹಾಂತಂ ।
ಭಯೇನ ಮಗ್ನಸ್ತ್ವರಿತಂ ಮುಮೋಚ
ವಜ್ರಂ ಮಹಾಸ್ತ್ರಂ ಖಲು ತಸ್ಯ ರಾಜನ್ ॥ ೯೭ ॥

ಸ ಶಕ್ರವಜ್ರಾಭಿಹತಃ ಪಪಾತ
ಮಹಾಸುರಃ ಕಾಂಚನಮಾಲ್ಯಧಾರೀ ।

---

೯೪. ವಿಷ್ಣುವು ಆ ಇಂದ್ರನಿಗೆ ಬಲವನ್ನು ಕೊಟ್ಟುದನ್ನು ನೋಡಿ, ದೇವತೆಗಳೂ, ಬ್ರಹ್ಮರ್ಷಿಗಳೂ ತಮ್ಮ ತಮ್ಮ ಬಲವನ್ನು ಕೊಟ್ಟರು.

೯೫. ವಿಷ್ಣುವಿನಿಂದಲೂ, ದೇವತೆಗಳಿಂದಲೂ, ಋಷಿಗಳಿಂದಲೂ ವೃದ್ಧಿಪಡಿಸಲ್ಪಟ್ಟ ಇಂದ್ರನು ಬಲಿಷ್ಠನಾದನು.

೯೬. ಇಂದ್ರನು ಬಲಿಷ್ಠನಾದುದನ್ನು ವೃತ್ರನು ತಿಳಿದು ಬಹಳವಾಗಿ ಗರ್ಜಿಸಿದನು. ಅವನ ಆ ಗರ್ಜನೆಯಿಂದ ಭೂಮಿಯೂ, ದಿಕ್ಕುಗಳೂ, ಸ್ವರ್ಗವೂ, ಆಕಾಶವೂ, ಎಲ್ಲವೂ ಕೂಡ ನಡುಗಿದುವು.

೯೭. ಅನಂತರ ಇಂದ್ರನು ಆ ಘೋರವಾದ ಧ್ವನಿಯನ್ನು ಕೇಳಿ ಬಹು ತಪಿಸಿ ಆ ಹೆದರಿಕೆಯಿಂದ ಮಹಾಸ್ತ್ರವಾದ ವಜ್ರವನ್ನು ಅವನ ಮೇಲೆ ಬಿಟ್ಟನು.

೯೮. ಆ ಶಸ್ತ್ರವಾದ ವಜ್ರಾಯುಧದಿಂದ ಹೊಡೆಯಲು ಕಾಂಚನಮಾಲಿ

ಯಥಾ ಮಹಾಶೈಲವರಃ ಪುರಸ್ತಾ-
ತ್ಸ ಮಂದರೋ ವಿಷ್ಣುಕರಾದ್ವಿಮುಕ್ತಃ ॥ ೯೮ ॥

ತಸ್ಮಿನ್ಹತೇ ದೈತ್ಯವರೇ ಭಯಾರ್ತಃ
ಶಕ್ರಃ ಪ್ರದುದ್ರಾವ ಸರಃ ಪ್ರವೇಷ್ಟುಂ ।
ವಜ್ರಂ ಸ ಮೇನೇ ಸ್ವಕರಾತ್ಪ್ರಮುಕ್ತಂ
ವೃತ್ರಂ ಭಯಾಚ್ಚೈವ ಹತಂ ನ ಪಶ್ಯತಿ ॥ ೯೯ ॥

ಸರ್ವೇ ಚ ದೇವಾ ಮುದಿತಾಃ ಪ್ರಹೃಷ್ಟಾ
ಮಹರ್ಷಯಶ್ಚೈವಮಥ ಸ್ತುವಂತಿ ।
ತತಶ್ಚ ಕೇಚಿನ್ಮತಿನಿಶ್ಚಯಜ್ಞಾ-
ಸ್ತಾಂಸ್ತಾನುಪಾಯಾನ್ಪರಿಚಿಂತಯಂತಃ ॥ ೧೦೦ ॥

ಶೇಷಾಂಸ್ತು ದೈತ್ಯಾಂಸ್ತ್ವರಿತಾಃ ಸಮೇತ್ಯ
ಜಘ್ನುಃ ಸುರಾ ವೃತ್ರವಧಾಭಿತಪ್ತಾನ್ ।
ತೇ ವಧ್ಯಮಾನಾಸ್ತ್ರಿದಶೈಸ್ತದಾನೀಂ
ಮಹಾಸುರಾ ವಾಯುಸಮಾನವೇಗಾಃ ॥ ೧೦೧ ॥

---

ಯನ್ನು ಹಾಕಿಕೊಂಡು ಪ್ರಕಾಶಿಸುತ್ತಿದ್ದ ಆತನು ಮಹಾಪರ್ವತವಾದ ಮಂದರವು ವಿಷ್ಣುವಿನ ಕೈಯಿಂದ ಕೆಳಗೆ ಬಿದ್ದಂತೆ ಬಿದ್ದನು.

೯೯. ಆ ವೃತ್ರನನ್ನು ಕೊಂದ ನಂತರ ಇಂದ್ರನು ಭಯದಿಂದ ಕೊಳದಲ್ಲಿ ಮುಳುಗಿಕೊಳ್ಳಲು ಓಡಿಹೋದನು. ವಜ್ರಾಯುಧವು ಕೈಯಿಂದ ಕೆಳಗೆ ಬಿದ್ದಿತು. ಭಯದಿಂದ ವೃತ್ರನು ಸತ್ತುದನ್ನೂ ನೋಡದೆ ಓಡಿಹೋದನು.

೧೦೦. ದೇವತೆಗಳೆಲ್ಲ ಸಂತೋಷಗೊಂಡರು. ಮಹರ್ಷಿಗಳು ಸ್ತೋತ್ರ ಮಾಡಿದರು. ಅನಂತರ ಕೆಲವರು ನಿಶ್ಚಯಬುದ್ಧಿಯುಳ್ಳವರು, ಅವರು ಮಾಡಿದ ಉಪಾಯಗಳನ್ನು ಯೋಚಿಸುತ್ತಿದ್ದರು.

೧೦೧. ದೇವತೆಗಳು ವೃತ್ರ ವಧೆಯಿಂದ ನೊಂದ ಮಿಕ್ಕ ರಾಕ್ಷಸರ ಮೇಲೆ ಜಾಗ್ರತೆಯಾಗಿ ಬಿದ್ದು ಹೊಡೆದರು. ಏಟು ತಿನ್ನುತ್ತಾ ಅವರೆಲ್ಲರೂ ಆಗ ವಾಯು ವೇಗದಿಂದ ಓಡಿದರು.

ಸಮುದ್ರವೇಲಾಂ ವಿವಿಶುರ್ಭಯಾರ್ತಾಃ
ಪ್ರವಿಶ್ಯ ಚೈವೋದಧಿಮಪ್ರಮೇಯಂ ।
ಝಷಾಕುಲಂ ರತ್ನಸಮಾಕುಲಂ ಚ
ತದಾ ಸ್ಮ ಮಂತ್ರಂ ಸಹಿತಾಃ ಪ್ರಚಕ್ರುಃ ॥ ೧೦೨ ॥

ತ್ರೈಲೋಕ್ಯನಾಶಾಯ ಮತಿಂ ಸ್ಮರಂತ-
ಸ್ತತ್ರ ಸ್ಮ ಕೇಚಿನ್ಮತಿನಿಶ್ಚಯಜ್ಞಾಃ ।
ತಾಂಸ್ತಾನುಪಾಯಾನನುದರ್ಶಯಂತೋ
ಭಯಾರ್ದಿತಾ ದೇವ ನಿಕಾಯತಪ್ತಾಃ ॥ ೧೦೩ ॥

ತೇಷಾಂ ತು ತತ್ರ ಕ್ಷಯಕಾಲಯೋಗಾ-
ದ್ಘೋರಾ ಮತಿಶ್ಚಿಂತಯತಾಂ ಬಭೂವ ।
ಯೇ ಸಂತಿ ವಿದ್ಯಾತಪಸೋಪಪನ್ನಾ-
ಸ್ತೇಷಾಂ ವಿನಾಶಃ ಪ್ರಥಮಂ ತು ಕಾರ್ಯಃ ॥ ೧೦೪ ॥

ಲೋಕಾಶ್ಚ ಸರ್ವೇ ತಪಸಾ ಧ್ರಿಯಂತೇ
ತಸ್ಮಾತ್ತ್ವರಧ್ವಂ ತಪಸಃ ಕ್ಷಯಾಯ ।

---

೧೦೨. ಅವರೆಲ್ಲರೂ ಹೆದರಿ ಸಮುದ್ರದ ದಡಕ್ಕೆ ಹೋಗಿ ಹೆದರಿಕೆಯಿಂದ ಮೀನು, ಮೊಸಳೆಗಳಿಂದಲೂ, ರತ್ನಗಳಿಂದಲೂ, ಕೂಡಿದ ಸಮುದ್ರವನ್ನು ಹೊಕ್ಕು ಅಲ್ಲಿ ಮಂತ್ರಾಲೋಚನೆ ಮಾಡಿದರು.

೧೦೩. ದೇವತೆಗಳಿಂದ ತೊಂದರೆ ಹೊಂದಿ ಭಯಪಟ್ಟ ಆ ರಾಕ್ಷಸರು ಮೂರುಲೋಕಗಳ ನಾಶಕ್ಕೋಸ್ಕರ ಯೋಚಿಸುತ್ತಾ, ನಿಶ್ಚಯಿಸುತ್ತ, ಆಯಾಯ ಉಪಾಯಗಳನ್ನು ಯೋಚಿಸುತ್ತಿದ್ದರು.

೧೦೪. ಆ ರಾಕ್ಷಸರಿಗೆ ವಿನಾಶ ಕಾಲವೊದಗಿದ್ದುದರಿಂದ ಅದಕ್ಕನುಸಾರವಾಗಿ ಅವರ ನಿಶ್ಚಯದಿಂದ ವಿದ್ಯೆ ತಪಸ್ಸುಗಳಿಂದ ಕೂಡಿರುವವರನ್ನು ಮೊದಲು ನಾಶ ಮಾಡಬೇಕೆಂದು ಬುದ್ಧಿಯುಂಟಾಯಿತು.

೧೦೫. ಲೋಕವೆಲ್ಲವೂ ತಪಸ್ಸಿನಿಂದ ನಿಂತಿದೆ. ಆದ್ದರಿಂದ ತಪಸ್ಸನ್ನು

ಯೇ ಸಂತಿ ಕೇಚಿದ್ಧಿ ವಸುಂಧರಾಯಾಂ
ತಪಸ್ವಿನೋ ಧರ್ಮವಿದಶ್ಚ ತಜ್ಜ್ಞಾಃ ॥ ೧೦೫ ॥

ತೇಷಾಂ ವಧೋ ಹಿ ಕ್ರಿಯತಾಂ ಚ ಕ್ಷಿಪ್ರಂ
ತೇಷು ಪ್ರನಷ್ಟೇಷು ಜಗತ್ಪ್ರನಷ್ಟಂ ।
ಏವಂ ಹಿ ಸರ್ವೇ ಗತಬುದ್ಧಿಭಾವಾ-
ಜ್ಜಗದ್ವಿನಾಶೇ ಪರಮಪ್ರಹೃಷ್ಟಾಃ ।
ದುರ್ಗಂ ಸಮಾಶ್ರಿತ್ಯ ಮಹೋರ್ಮಿಮಂತಂ
ರತ್ನಾಕರಂ ವಾರುಣಮಾಲಯಂ ಸ್ಮ ॥ ೧೦೬ ॥

ಸಮುದ್ರಂ ತೇ ಸಮಾಸಾದ್ಯ ವಾರುಣಂ ನಿಧಿಮಂಭಸಃ ।
ಕಾಲೇಯಾಃ ಸಮಪದ್ಯಂತ ತ್ರೈಲೋಕ್ಯಸ್ಯ ವಿನಾಶನೇ ॥ ೧೦೭ ॥

ತೇ ರಾತ್ರೌ ಸಮಭಿಕ್ರುದ್ಧಾ ಭಕ್ಷಯಂತಿ ಸದಾ ಮುನೀನ್ ।
ಆಶ್ರಮೇಷು ಚ ಯೇ ಸಂತಿ ಪುಣ್ಯೇಷ್ವಾಯತನೇಷು ಚ ॥ ೧೦೮ ॥

---

ನಾಶಮಾಡಿರಿ. ಭೂಮಿಯಲ್ಲಿರುವ ತಪಸ್ವಿಗಳನ್ನೂ, ಧರ್ಮಜ್ಞರನ್ನೂ ಮೊದಲು ನಾಶಮಾಡಿರಿ.

೧೦೬. ಅವರೆಲ್ಲರನ್ನೂ ಕೊಲ್ಲಿರಿ, ಅವರೆಲ್ಲರೂ ಸತ್ತರೆ ಜಗತ್ತು ನಾಶವಾದಂತೆಯೇ ಸರಿ, ಬುದ್ಧಿಕೆಟ್ಟುದರಿಂದ ಈರೀತಿ ಅವರೆಲ್ಲರೂ ಪ್ರಪಂಚನಾಶದ ವಿಷಯದಲ್ಲಿ ಸಂತೋಷಗೊಂಡು ರತ್ನಾಕರನೂ, ಅಲೆಗಳುಳ್ಳವನೂ, ಆದ ಸಮುದ್ರವನ್ನೇ ದುರ್ಗವನ್ನಾಗಿ ಮಾಡಿಕೊಂಡರು.

೧೦೭. ನೀರಿನ ಸ್ಥಾನವಾದ ಸಮುದ್ರವನ್ನು ಕಾಲೇಯರು ಆಶ್ರಯಿಸಿಕೊಂಡು ತ್ರೈಲೋಕ್ಯನಾಶದಲ್ಲಿ ಸಿದ್ಧರಾದರು.

೧೦೮. ಕೋಪಗೊಂಡ ಅವರು ರಾತ್ರಿಯ ವೇಳೆಯಲ್ಲಿ ಎಲ್ಲಾ ಆಶ್ರಮಗಳಿಗೂ ಪುಣ್ಯಸ್ಥಳಗಳಿಗೂ ನುಗ್ಗಿ ಅವರನ್ನು ತಿನ್ನುತ್ತಾ ಬಂದರು.

ವಸಿಷ್ಠಸ್ಯಾಶ್ರಮೇ ವಿಪ್ರಾ ಭಕ್ಷಿತಾಸ್ತೈರ್ದುರಾತ್ಮಭಿಃ ।
ಅಶೀತಿಃ ಶತಮಷ್ಟೌ ಚ ವನೇ ಚಾನ್ಯೇ ತಪಸ್ವಿನಃ ॥ ೧೦೯ ॥

ಚ್ಯವನಸ್ಯಾಶ್ರಮಂ ಗತ್ವಾ ಪುಣ್ಯಂ ದ್ವಿಜನಿಷೇವಿತಂ ।
ಫಲಮೂಲಾಶನಾನಾಂ ಚ ಮುನೀನಾಂ ಭಕ್ಷಿತಂ ಶತಂ ॥ ೧೧೦ ॥

ಏವಂ ರಾತ್ರೌ ಸ್ಮ ಕುರ್ವಂತಿ ವಿವಿಶುಶ್ಚಾರ್ಣವಂ ದಿವಾ ।
ಭರದ್ವಾಜಾಶ್ರಮೇ ಗತ್ವಾ ನಿಯತಾ ಬ್ರಹ್ಮಚಾರಿಣಃ ॥ ೧೧೧ ॥

ವಾಯ್ವಾಹಾರಾಂಬುಭಕ್ಷಾಶ್ಚ ವಿಂಶತಿಃ ಪರಿಸೂದಿತಾಃ ।
ಏವಂ ಕ್ರಮೇಣ ಭಕ್ಷಾರ್ಥಂ ಮುನೀನಾಂ ದಾನವಾಸ್ತದಾ ॥ ೧೧೨ ॥

ನಿಶಾಯಾಂ ಪರ್ಯಧಾವಂತ ಶಕ್ತಾ ಭುಜಬಲಾಶ್ರಯಾಃ ।
ಕಾಲೇನ ಮಹತಾ ಘ್ನಂತಿ ತತೋ ಮುನಿಗಣಾನ್ಬಹೂನ್ ॥ ೧೧೩ ॥

ನ ಚೈತಾನವ ಬುಧ್ಯಂತ ಮನುಜಾ ಮನುಜಾಧಿಪ ।
ನಿಃಸ್ವಾಧ್ಯಾಯವಷಟ್ಕಾರಂ ನಷ್ಟಯಜ್ಞೋತ್ಸವಕ್ರಿಯಂ ॥ ೧೧೪ ॥

---

೧೦೯. ಅವರು ವಸಿಷ್ಠನ ಆಶ್ರಮಕ್ಕೆ ನುಗ್ಗಿ ನೂರ ಎಂಬತ್ತೆಂಟು ಜನ ತಪಸ್ವಿಗಳನ್ನು ತಿಂದರು.

೧೧೦. ಪುಣ್ಯವಂತರಾದ ಜನರುಳ್ಳ ಚ್ಯವನನ ಆಶ್ರಮಕ್ಕೆ ಹೋಗಿ ನೂರು ಜನ ಋಷಿಗಳನ್ನು ತಿಂದರು.

೧೧೧. ಈರೀತಿ ರಾತ್ರಿಯಲ್ಲಿ ಅವರೆಲ್ಲರನ್ನೂ ತಿಂದು ಹಗಲಿನಲ್ಲಿ ಸಮುದ್ರವನ್ನು ಹೊಕ್ಕಿಕೊಳ್ಳುವರು. ಒಂದುಸಾರಿ ವಾಯು ನೀರುಗಳೇ ಆಹಾರವಾಗಿ ಉಳ್ಳ ಇಪ್ಪತ್ತು ಜನರನ್ನು ಭರದ್ವಾಜಾಶ್ರಮಕ್ಕೆ ಹೋಗಿ ತಿಂದುಬಿಟ್ಟರು

೧೧೨-೧೧೩. ಈರೀತಿ ಆ ಋಷಿಗಳನ್ನು ತಿನ್ನಲು ದಾನವರು ತಮ್ಮ ಭುಜಬಲವನ್ನೇ ಪ್ರಧಾನವಾಗಿಟ್ಟುಕೊಂಡು ರಾತ್ರಿಯ ಹೊತ್ತು ಹೋಗುತ್ತಿದ್ದರು. ಬಹುಕಾಲದವರಿಗೆ ಬಹುಜನ ಋಷಿಗಳನ್ನು ಕೊಂದರು.

೧೧೪. ಎಲೈ ಭೀಷ್ಮನೇ, ಈ ರಾಕ್ಷಸರನ್ನು ಮನುಷ್ಯರು ತಿಳಿದುಕೊಳ್ಳಲಿಲ್ಲ. ಕೊನೆಗೆ ಪ್ರಪಂಚವು ವೇದಘೋಷರಹಿತವೂ, ವಷಟ್ಕಾರವಿಲ್ಲದುದೂ, ಯಜ್ಞದ ಕೆಲಸವಿಲ್ಲದುದೂ ಕೂಡ ಕಾಲೇಯರಿಂದ ಆಯಿತು.

ಜಗದಾಸೀನ್ನಿರುತ್ಸಾಹಂ ಕಾಲೇಯಭಯಪೀಡಿತಂ ।
ಏವಂ ಪಕ್ಷೀಯಮಾಣಾಃ ಸ್ಮ ಮಾನವಾ ಮನುಜೇಶ್ವರ ॥ ೧೧೫ ॥

ಆತ್ಮತ್ರಾಣಪರಾ ಭೀತಾಃ ಪ್ರದ್ರವಂತಿ ದಿಶೋ ದಶ ।
ಕೇಚಿದ್ಗುಹಾಂ ಪ್ರವಿವಿಶುರ್ನಿರ್ಝರಾಂಶ್ಚಾಪರೇ ದ್ವಿಜಾಃ ॥ ೧೧೬ ॥

ಅಪರೇ ಚ ಭಯೋದ್ವಿಗ್ನಾ ಭಯಾತ್ಪ್ರಾಣಾನ್ಸಮುತ್ಸೃಜನ್ ।
ಕೇಚಿಚ್ಛೂರಾ ಮಹೇಷ್ವಾಸಾ ವೀರಾಃ ಪರಮದರ್ಪಿತಾಃ ॥ ೧೧೭ ॥

ಮಾರ್ಗಮಾಣಾಃ ಪರಂ ಯತ್ನಂ ದಾನವಾನಾಂ ಪ್ರಚಕ್ರಿರೇ ।
ನ ಚೈತಾನನುಜಗ್ಮುಸ್ತೇ ಸಮುದ್ರಂ ಸಮುಪಾಶ್ರಿತಾನ್ ॥ ೧೧೮ ॥

ಶ್ರಮಂ ಜಗ್ಮುಶ್ಚ ಪರಮಮಾಜಗ್ಮುಃ ಕ್ಷಯಮೇವ ಚ ।
ಜಗತ್ಯುಪಶಮಂ ಯಾತೇ ನಷ್ಟಯಜ್ಞೋತ್ಸವಕ್ರಿಯೇ ॥ ೧೧೯ ॥

---

೧೧೫. ಈರೀತಿ ನಾಶಹೊಂದುತ್ತಿದ್ದ ಜನರು ತಮ್ಮ ರಕ್ಷಣೆಗೋಸ್ಕರ ಸಿಕ್ಕಿದ ಕಡೆಗೆ ಓಡುತ್ತಿದ್ದರು.

೧೧೬. ಕೆಲವರು ಗುಹೆಯನ್ನು ಸೇರಿಕೊಂಡರು. ಕೆಲವರು ಗಿರಿ ನದಿಗಳ ಬಳಿಗೆ ಹೋಗಿ ಮರೆಯಾಗಿದ್ದರು. ಕೆಲವರು ಭಯಪಟ್ಟುಗೊಂಡೇ ಪ್ರಾಣಬಿಟ್ಟರು.

೧೧೭. ಶೂರರಾದ ಧನುರ್ಧಾರಿಗಳಾದ ಕೆಲವರು ಕೊಬ್ಬಿನಿಂದ ಆ ರಾಕ್ಷಸರನ್ನು ಹುಡುಕಲು ಬಹಳ ಪ್ರಯತ್ನಪಡುತ್ತಿದ್ದರು.

೧೧೮. ಅವರು ಈ ದಾನವರು ಸಮುದ್ರವನ್ನು ಆಶ್ರಯಿಸಿಕೊಂಡಿರುವುದನ್ನು ತಿಳಿಯದೇ ಹೋದರು. ಬಹುಶ್ರಮವನ್ನು ಮಾತ್ರ ಹೊಂದಿದರು. ತಾವೂ ನಾಶವಾಗುತ್ತಲೇ ಇದ್ದರು.

೧೧೯. ಈರೀತಿ ಪ್ರಪಂಚವು ನಾಶವಾಗುತ್ತಲಿದ್ದು ಯಜ್ಞಾದಿಗಳು ನಡೆಯದಿರಲು ದೇವತೆಗಳು ದುಃಖಪಡುತ್ತಲಿದ್ದರು.

ಆಜಗ್ಮುಃ ಪರಮಾಮಾರ್ತಿಂ ತ್ರಿದಶಾ ಮನುಜೇಶ್ವರ ।
ಸಮೇತ್ಯ ಸಮಹೇಂದ್ರಾಸ್ತು ಭಯಾನ್ಮಂತ್ರಂ ಪ್ರಚಕ್ರಿರೇ ॥ ೧೨೦ ॥

ನಾರಾಯಣಂ ಪುರಸ್ಕೃತ್ಯ ವೈಕುಂಠಮಪರಾಜಿತಂ ।
ತತೋ ದೇವಾಃ ಸಮೇತಾಸ್ತೇ ಸಮೂಚುರ್ಮಧುಸೂದನಂ ॥ ೧೨೧ ॥

॥ ದೇವಾ ಊಚುಃ ॥

ತ್ವಂ ನಃ ಸ್ರಷ್ಟಾ ಚ ಗೋಪ್ತಾ ಚ ಭರ್ತಾ ಚ ಜಗತಃ ಪ್ರಭೋ ।
ತ್ವಯಾ ಸೃಷ್ಟಂ ಜಗತ್ಸರ್ವಂ ಯಚ್ಚೇಂಗದ್ಯಚ್ಚ ನೇಂಗತಿ ॥ ೧೨೨ ॥

ತ್ವಯಾ ಭೂಮಿಃ ಪುರಾ ನಷ್ಟಾ ಸಮುದ್ರಾತ್ಪುಷ್ಕರೇಕ್ಷಣ ।
ವಾರಾಹಂ ರೂಪಮಾಸ್ಥಾಯ ಜಗದರ್ಥೇ ಸಮುದ್ಧೃತಾ ॥ ೧೨೩ ॥

ಆದಿದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುಸ್ತ್ವಯಾ ।
ನಾರಸಿಂಹಂ ವಪುಃ ಕೃತ್ವಾ ಸೂದಿತಃ ಪುರುಷೋತ್ತಮ ॥ ೧೨೪ ॥

---

೧೨೦-೧೨೧. ಆ ಇಂದ್ರಾದಿಗಳೆಲ್ಲಾ ಸೇರಿಕೊಂಡು ಭಯಪಟ್ಟು ಆಲೋಚಿಸಿದರು. ಅವರೆಲ್ಲರೂ ಸೋಲನ್ನರಿಯದ ವೈಕುಂಠಾಧಿಪತಿಯಾದ ನಾರಾಯಣನ ಬಳಿಗೆ ಹೋಗಿ ಆತನನ್ನು ಕುರಿತು ಇಂತೆಂದರು.

೧೨೨. ದೇವತೆಗಳು ಹೇಳಿದರು :—ಎಲೈ ಸ್ವಾಮಿಯೇ, ನೀನೇ ನಮ್ಮನ್ನು ಸೃಷ್ಟಿಸಿದವನು, ಕಾಪಾಡುವವನು, ನಮಗೆ ಒಡೆಯನಾಗಿ ಬೇಕಾದುದನ್ನೆಲ್ಲಾ ಕೊಡತಕ್ಕವನು, ನೀನೇ ಜಗತ್ತನ್ನೆಲ್ಲಾ ಸೃಷ್ಟಿಸಿದೆ. ಚರಾಚರಗಳೆಲ್ಲವನ್ನೂ ಉತ್ಪತ್ತಿ ಮಾಡಿದೆ.

೧೨೩. ನೀನೇ ಪೂರ್ವದಲ್ಲಿ ನಾಶವಾಗಿದ್ದ ಭೂಮಿಯನ್ನು ವರಾಹ ಅವತಾರವನ್ನು ಎತ್ತಿ ಸಮುದ್ರದಿಂದ ತಂದು ಪ್ರಪಂಚಕ್ಕೋಸ್ಕರ ಇಟ್ಟೆ.

೧೨೪. ಆದಿದೈತ್ಯನಾದ ಮಹಾಪರಾಕ್ರಮಿಯಾದ ಹಿರಣ್ಯಕಶಿಪುವನ್ನು ನೀನು ನರಸಿಂಹಾವತಾರವನ್ನು ಮಾಡಿ ಕೊಂದುಹಾಕಿದೆ.

**ಅವಧ್ಯಃ ಸರ್ವಭೂತಾನಾಂ ಬಲಿಶ್ಚಾಪಿ ಮಹಾಬಲಃ ।**
**ವಾಮನಂ ವಪುರಾಸ್ಥಾಯ ತ್ರೈಲೋಕ್ಯಾದ್ಭ್ರಂಶಿತಸ್ತ್ವಯಾ ॥ ೧೨೫ ॥**

**ಅಸುರಶ್ಚ ಮಹೇಷ್ವಾಸೋ ಜಂಭ ಇತ್ಯಭಿವಿಶ್ರುತಃ ।**
**ಯಜ್ಞಕ್ಷೋಭಕರಃ ಕ್ರೂರಸ್ತ್ವಯಾ ಸ ವಿನಿಪಾತಿತಃ ॥ ೧೨೬ ॥**

**ಏವಮಾದೀನಿ ಕರ್ಮಾಣಿ ಯೇಷಾಂ ಸಂಖ್ಯಾ ನ ವಿದ್ಯತೇ ।**
**ಅಸ್ಮಾಕಂ ಭಯಭೀತಾನಾಂ ತ್ವಂ ಗತಿರ್ಮಧುಸೂದನ ॥ ೧೨೭ ॥**

**ತಸ್ಮಾತ್ತ್ವಾಂ ದೇವದೇವೇಶ ಲೋಕಾರ್ಥಂ ಜ್ಞಾಪಯಾಮಹೇ ।**
**ರಕ್ಷ ಲೋಕಾಂಶ್ಚ ದೇವಾಂಶ್ಚ ಶಕ್ರಂ ಚ ಮಹತೋ ಭಯಾತ್ ॥ ೧೨೮ ॥**

**ಭವತ್ಪ್ರಸಾದಾದ್ವರ್ತಂತೇ ಪ್ರಜಾಃ ಸರ್ವಾಶ್ಚತುರ್ವಿಧಾಃ ।**
**ಸ್ವಸ್ಥಾ ಭವಂತಿ ಮನುಜಾ ಹವ್ಯಕವ್ಯೈರ್ದಿವೌಕಸಃ ॥ ೧೨೯ ॥**

---

೧೨೫. ಬಲಿಯು ಒಬ್ಬನಿಂದಲೂ ಸಾಯತಕ್ಕವನಲ್ಲ. ಮತ್ತು ಬಲಿಷ್ಠನು. ಅಂತಹವನನ್ನು ವಾಮನಾವತಾರವನ್ನು ಮಾಡಿ ಮೂರು ಲೋಕಗಳಿಗೂ ಅವನ ಬಂಧವಿಲ್ಲದಂತೆ ಮಾಡಿ ಅವನನ್ನು ಹಾಳುಮಾಡಿದೆ.

೧೨೬. ಶೂರನಾದ ಜಂಭಾಸುರನು ಯಜ್ಞಗಳನ್ನೆಲ್ಲಾ ನಾಶಮಾಡುತ್ತಿದ್ದುದರಿಂದ ನೀನು ಅವನನ್ನೂ ಕೊಂದೆ.

೧೨೭. ಈರೀತಿಯಾಗಿ ಲೆಕ್ಕವಿಲ್ಲದ ಅನೇಕ ಕೆಲಸಗಳನ್ನು ಮಾಡಿದ್ದೀಯೆ. ಎಲೈ ಮಧುಸೂದನನೇ, ಭಯಪಡುತ್ತಿರುವ ನಮಗೆ ನೀನೇ ಗತಿಯು.

೧೨೮. ಎಲೈ ದೇವದೇವನೇ, ಆದ್ದರಿಂದ ನಿನ್ನನ್ನು ಲೋಕರಕ್ಷಣೆಗೋಸ್ಕರ ವಿಜ್ಞಾಪಿಸಿಕೊಳ್ಳುತ್ತೇವೆ. ಈ ಮಹಾಭಯದಿಂದ ಲೋಕಗಳನ್ನೂ, ದೇವತೆಗಳನ್ನೂ, ಇಂದ್ರನನ್ನೂ ರಕ್ಷಿಸು.

೧೨೯. ಎಲೈ ಸ್ವಾಮಿಯೇ, ನಿನ್ನ ಅನುಗ್ರಹದಿಂದಲೇ ಚಾತುರ್ವರ್ಣ್ಯದ ಪ್ರಜೆಗಳೂ ಕೂಡ ಸುಖದಿಂದಿರುತ್ತೇವೆ. ಮನುಷ್ಯರೂ ಕೂಡ ಸುಖದಿಂದಿರುತ್ತಾರೆ. ದೇವತೆಗಳೂ ಕೂಡ ಹವ್ಯಕವ್ಯಗಳಿಂದ ತೃಪ್ತಿಪಡುತ್ತಾರೆ.

ಲೋಕಾಸ್ತ್ವೇವಂ ಪ್ರವರ್ತಂತೇ ಅನ್ಯೋನ್ಯಂ ಚ ಸಮಾಶ್ರಿತಾಃ ।
ತ್ವತ್ಪ್ರಸಾದಾನ್ನಿರುದ್ವಿಗ್ನಾಸ್ತ್ವಯ್ಯೈವ ಪರಿರಕ್ಷಿತಾಃ ॥ ೧೩೦ ॥

ಇದಂ ಚ ಸಮನುಪ್ರಾಪ್ತಂ ಲೋಕಾನಾಂ ಭಯಮುತ್ತಮಂ ।
ಜಾನೀಮೋ ನ ಚ ಕೇನೇಮೇ ವಧ್ಯಂತೇ ಬ್ರಾಹ್ಮಣಾ ನಿಶಿ ॥ ೧೩೧ ॥

ಬ್ರಾಹ್ಮಣೇಷು ಚ ಕ್ಷೀಣೇಷು ಪೃಥಿವೀ ಕ್ಷಯಮೇಷ್ಯತಿ ।
ತ್ವತ್ಪ್ರಸಾದಾನ್ಮಹಾಬಾಹೋ ಲೋಕಾಃ ಸರ್ವೇ ಜಗತ್ಪತೇ ।
ವಿನಾಶಂ ನಾಧಿಗಚ್ಛೇಯುಸ್ತ್ವಯಾ ವೈ ಪರಿರಕ್ಷಿತಾಃ ॥ ೧೩೨ ॥

॥ ವಿಷ್ಣುರುವಾಚ ॥

ವಿದಿತಂ ಮೇ ಸುರಾಃ ಸರ್ವಂ ಪ್ರಜಾಯಾಃ ಕ್ಷಯಕಾರಣಂ ।
ಭವತಾಂ ಚಾಪಿ ವಕ್ಷ್ಯಾಮಿ ಶೃಣ್ವಂತು ವಿಗತಜ್ವರಾಃ ॥ ೧೩೩ ॥

---

೧೩೦. ಜನಗಳೆಲ್ಲರೂ ಕೂಡ ಅನ್ಯೋನ್ಯವಾಗಿ ನಿನ್ನ ಅನುಗ್ರಹದಿಂದಲೇ ಇರುತ್ತಾರೆ. ನಿನ್ನಿಂದಲೇ ಭಯವನ್ನು ಬಿಟ್ಟು ರಕ್ಷಿಸಲ್ಪಟ್ಟವರಾಗಿದ್ದಾರೆ.

೧೩೧. ಈರೀತಿಯಾಗಿ ಭಯವು ಲೋಕದಲ್ಲೆಲ್ಲಾ ಪ್ರಾಪ್ತವಾಗಿದೆ. ರಾತ್ರಿಯಲ್ಲಿ ಬ್ರಾಹ್ಮಣರನ್ನು ಕೊಂದುಹಾಕುತ್ತಿದ್ದಾರೆ. ಇದನ್ನು ಯಾರು ಮಾಡುತ್ತಿದ್ದಾರೆ ಎಂಬುದನ್ನು ನಾವು ತಿಳಿಯೆವು.

೧೩೨. ಬ್ರಾಹ್ಮಣರು ನಾಶವಾದರೆ ಭೂಮಿಯು ನಾಶಹೊಂದುತ್ತದೆ. ನಿನ್ನ ಅನುಗ್ರಹದಿಂದ ಎಲೈ ಸ್ವಾಮಿಯೇ, ಲೋಕಗಳು ನಾಶವಾಗಬಾರದು. ನೀನೇ ಕಾಪಾಡಿದ್ದೀಯೆ.

೧೩೩. ವಿಷ್ಣುವು ಹೇಳಿದನು :—ಎಲೈ ದೇವತೆಗಳಿರಾ, ಪ್ರಜೆಗಳಿಗೆ ನಾಶಕಾರಣವು ನನಗೆ ಗೊತ್ತಾಯಿತು. ನಿಮಗೂ ಹೇಳುತ್ತೇನೆ. ಭಯಪಡದೇನೇ ಕೇಳಿರಿ.

ಕಾಲೇಯ ಇತಿ ವಿಖ್ಯಾತೋ ಗಣಃ ಪರಮದಾರುಣಃ ।
ತೈಶ್ಚ ಕೃತ್ಸ್ನಂ ಸಮಾಶ್ರಿತ್ಯ ಜಗತ್ಸರ್ವಂ ಪ್ರಬಾಧಿತಂ ॥ ೧೩೪ ॥

ತೇ ವೃತ್ರಂ ನಿಹತಂ ದೃಷ್ಟ್ವಾ ಸಹಸ್ರಾಕ್ಷೇಣ ಧೀಮತಾ ।
ಜೀವಿತಂ ಪರಿರಕ್ಷಂತಃ ಪ್ರವಿಷ್ಟಾ ವರುಣಾಲಯಂ ॥ ೧೩೫ ॥

ತೇ ಪ್ರವಿಶ್ಯೋದಧಿಂ ಘೋರಂ ನಾನಾಗ್ರಾಹಸಮಾಕುಲಂ ।
ಉತ್ಸಾದನಾರ್ಥಂ ಲೋಕಸ್ಯ ರಾತ್ರೌ ಭಕ್ಷಂತಿ ವೈ ಮುನೀನ್ ॥ ೧೩೬ ॥

ನ ತು ಶಕ್ಯಾಃ ಕ್ಷಯಂ ನೇತುಂ ಸಮುದ್ರಾಂತರ್ಹಿತಾ ಹಿ ತೇ ।
ಸಮುದ್ರಸ್ಯ ಕ್ಷಯೇ ಬುದ್ಧಿರ್ಭವದ್ಭಿಃ ಪರಿಚಿಂತ್ಯತಾಂ ॥ ೧೩೭ ॥

॥ ಪುಲಸ್ತ್ಯ ಉವಾಚ ॥

ಏತಚ್ಛ್ರುತ್ವಾ ವಚೋ ದೇವಾ ವಿಷ್ಣುನಾ ಸಮುದಾಹೃತಂ ।
ಪರಮೇಷ್ಠಿನಮಾಸಾದ್ಯ ಅಗಸ್ತ್ಯಸ್ಯಾಶ್ರಮಂ ಯಯುಃ, ॥ ೧೩೮ ॥

---

೧೩೪. ಕಾಲೇಯವೆಂಬ ಒಂದು ಬಹು ಕ್ರೂರವಾದ ರಾಕ್ಷಸಗಣವಿದೆ. ಅವರು ಕಷ್ಟವಾದ ಜಾಗವನ್ನು ಸೇರಿಕೊಂಡು ಎಲ್ಲರನ್ನೂ ತೊಂದರೆಪಡಿಸುತ್ತಿದ್ದಾರೆ.

೧೩೫. ಅವರು ವೃತ್ರನನ್ನು ಆಶ್ರಯಿಸಿದ್ದರು. ಇಂದ್ರನು ಆ ವೃತ್ರನನ್ನು ಕೊಂದುದನ್ನು ನೋಡಿ ತಮ್ಮ ಜೀವವನ್ನು ಕಾಪಾಡಿಕೊಳ್ಳಲು ಸಮುದ್ರವನ್ನು ಸೇರಿಕೊಂಡರು.

೧೩೬. ಅವರು ಈರೀತಿ ನಾನಾ ಬಗೆಯಾದ ದುಷ್ಟ ಮೊಸಳೆಗಳುಳ್ಳ ಘೋರವಾದ ಸಮುದ್ರವನ್ನು ಹೊಂದಿ, ಲೋಕವನ್ನೇ ನಾಶಮಾಡಬೇಕೆಂದು ರಾತ್ರಿಯಲ್ಲಿ ಮುನಿಗಳನ್ನು ನಾಶಮಾಡುತ್ತಿದ್ದಾರೆ.

೧೩೭. ಅವರು ಸಮುದ್ರದಲ್ಲಿ ಮುಚ್ಚಿಟ್ಟುಕೊಂಡಿರುವುದರಿಂದ ಅವರನ್ನು ನಾಶಮಾಡಲಾಗುವುದಿಲ್ಲ. ಆದ್ದರಿಂದ ಸಮುದ್ರವನ್ನು ಕ್ಷಯಿಸುವ ಆಲೋಚನೆಯನ್ನು ಮಾಡಿರಿ.

೧೩೮. ಪುಲಸ್ತ್ಯನು ಹೇಳಿದನು :—ದೇವತೆಗಳು ವಿಷ್ಣುವಿನ ಈ ಮಾತನ್ನು ಕೇಳಿ, ಬ್ರಹ್ಮನ ಬಳಿಗೆ ಹೋಗಿ ಅವನ ಮಾತಿನಂತೆ ಅಗಸ್ತ್ಯಾಶ್ರಮಕ್ಕೆ ಹೋದರು.

**ತತ್ರಾಪಶ್ಯನ್ಮಹಾತ್ಮಾನಂ ವಾರುಣಂ ದೀಪ್ತತೇಜಸಂ ।**
**ಉಪಾಸ್ಯಮಾನಮೃಷಿಭಿಸ್ತೈಶ್ಚೈವ ಪರಿವಾರಿತಂ ॥ ೧೩೯ ॥**

**ತೇಽಭಿಗಮ್ಯ ಮಹಾತ್ಮಾನಂ ಮೈತ್ರಾವರುಣಿಮಚ್ಯುತಂ ।**
**ಅಪ್ರಮತ್ತಂ ತಪೋರಾಶಿಂ ಕರ್ಮಭಿಃ ಸ್ವೈರಭಿಷ್ಟುತಂ ॥ ೧೪೦ ॥**

**॥ ದೇವಾ ಊಚುಃ ॥**

**ನಹುಷೇಣಾಭಿತಪ್ತಾನಾಂ ತ್ವಂ ಲೋಕಾನಾಂ ಗತಿಃ ಪರಾ ।**
**ಭ್ರಂಶಿತಶ್ಚ ಸುರೈಶ್ವರ್ಯಾಲ್ಲೋಕಾರ್ಥಂ ಲೋಕಕಂಟಕಃ ॥ ೧೪೧ ॥**

**ಕ್ರೋಧಾತ್ಪ್ರವೃದ್ಧಃ ಸುಮಹಾನ್ಭಾಸ್ಕರಸ್ಯ ನಗೋತ್ತಮಃ ।**
**ವಚಸ್ತವಾನತಿಕ್ರಾಮನ್ವಿಂಧ್ಯಃ ಶೈಲೋ ನ ವರ್ಧತೇ ॥ ೧೪೨ ॥**

**ತಮಸಾ ಚಾರ್ದಿತೇ ಲೋಕೇ ಮೃತ್ಯುನಾಽಭ್ಯರ್ದಿತಾಃ ಪ್ರಜಾಃ ।**
**ತ್ವಾಮೇವ ನಾಥಮಾಗತ್ಯ ನಿರ್ವೃತಿಂ ಪರಮಾಂ ಗತಾಃ ॥ ೧೪೩ ॥**

---

೧೩೯. ಆ ಆಶ್ರಮದಲ್ಲಿ ವರುಣಪುತ್ರನಾದ, ತೇಜಸ್ಸಿನಿಂದ ಬೆಳಗುತ್ತಿರುವ, ಋಷಿಗಳಿಂದ ಸುತ್ತುವರಿಯಲ್ಪಟ್ಟು ಅವರಿಂದಲೂ ಸೇವೆಗೊಳ್ಳುತ್ತಿರುವ ಆ ಅಗಸ್ತ್ಯನನ್ನು ನೋಡಿದರು.

೧೪೦. ಅವರು ನಾಶರಹಿತನಾದ, ಮಿತ್ರಾವರುಣರ ಮಗನಾದ, ತಪೋರಾಶಿಯಾದ, ಜೋಕೆಯಿಂದಿರುವ, ತನ್ನ ಕೆಲಸಗಳಿಂದಲೇ ಸ್ತುತಿಸಲ್ಪಡುತ್ತಿರುವ ಆತನಿಗೆ ನಮಸ್ಕರಿಸಿದರು.

೧೪೧. ದೇವತೆಗಳು ಹೇಳಿದರು :—ನಹುಷನಿಂದ ತೊಂದರೆಪಡುತ್ತಿದ್ದ ಲೋಕಗಳನ್ನು ನೀನು ಮೊದಲು ಕಾಪಾಡಿದೆ. ಆತನು ಲೋಕಕಂಟಕನಾಗಿರುವುದನ್ನು ತಿಳಿದು ಅವನನ್ನು ಇಂದ್ರಪದವಿಯಿಂದ ತಳ್ಳಿದೆ.

೧೪೨. ಸೂರ್ಯನ ಮೇಲಿನ ಕೋಪದಿಂದ ವಿಂಧ್ಯಪರ್ವತವು ಉದ್ದವಾಗಿ ಬೆಳೆಯಲು ಅದನ್ನು ಶಾಂತಿಮಾಡಲು ನೀನು ಹೋದೆ. ಅದು ನಿನ್ನ ಮಾತನ್ನು ಮೀರದೆ ಈಗಲೂ ಬೆಳೆಯದೆ, ಏಳದೇ ಹಾಗೆಯೇ ಇದೆ.

೧೪೩. ಆಗ ಕತ್ತಲೆಯಿಂದ ತೊಂದರೆಪಟ್ಟ ಲೋಕವು ನಾಶವಾಗುತ್ತಿತ್ತು. ನಿನ್ನನ್ನು ಹೊಂದಿದುದರಿಂದ ಅತ್ಯಂತ ಸುಖವನ್ನು ಹೊಂದಿತು.

ಅಸ್ಮಾಕಂ ಭಯಭೀತಾನಾಂ ನಿತ್ಯಶೋ ಭಗವಾನ್ಗತಿಃ ।
ತತಸ್ತ್ವತ್ತಃ ಪ್ರಯಾಚಾಮಸ್ತ್ವಾಂ ವರಂ ವರದೋ ಹ್ಯಸಿ ॥ ೧೪೪ ॥

॥ ಭೀಷ್ಮ ಉವಾಚ ॥

ಕಿಮರ್ಥಂ ಸಹಸಾ ವಿಂಧ್ಯಃ ಪ್ರವೃದ್ಧಃ ಕ್ರೋಧಮೂರ್ಛಿತಃ ।
ಏತದಿಚ್ಛಾಮ್ಯಹಂ ಶ್ರೋತುಂ ವಿಸ್ತರೇಣ ಮಹಾಮುನೇ ॥ ೧೪೫ ॥

॥ ಪುಲಸ್ತ್ಯ ಉವಾಚ ॥

ಅದ್ರಿರಾಜಂ ಮಹಾಶೈಲಂ ಮೇರುಂ ಕನಕಪರ್ವತಂ ।
ಉದಯಾಸ್ತಮನೇ ಭಾನುಃ ಪ್ರದಕ್ಷಿಣಮವರ್ತತ ॥ ೧೪೬ ॥

ತಂ ತು ದೃಷ್ಟ್ವಾ ತದಾ ವಿಂಧ್ಯಃ ಶೈಲಃ ಸೂರ್ಯಮಥಾಬ್ರವೀತ್ ॥ ೧೪೭ ॥

॥ ವಿಂಧ್ಯ ಉವಾಚ ॥

ಯಥಾ ಹಿ ಮೇರುರ್ಭವತಾ ನಿತ್ಯಂ ಸಂಪರಿಗಮ್ಯತೇ ।

---

೧೪೪. ಭಯದಿಂದ ಹೆದರಿರುವ ನಮಗೆ ಯಾವಾಗಲೂ ನೀನೇ ಗತಿಯು. ಆದ್ದರಿಂದ ನಿನ್ನನ್ನು ಕೇಳಿಕೊಳ್ಳುತ್ತೇವೆ. ವರದನಾಗಿದ್ದೀಯೆ, ವರವನ್ನು ಕೊಡು.

೧೪೫. ಭೀಷ್ಮನು ಹೇಳಿದನು :—ವಿಂಧ್ಯವು ಏತಕ್ಕೋಸ್ಕರ ಅಕಸ್ಮಾತ್ತಾಗಿ ಬೆಳೆಯಿತು ? ಕೋಪಬರಲು ಕಾರಣವೇನು ? ಎಲೈ ಮುನಿಯೇ, ಇದನ್ನು ಕೇಳಲು ಇಚ್ಛಿಸುತ್ತೇನೆ.

೧೪೬-೧೪೭. ಪುಲಸ್ತ್ಯನು ಹೇಳಿದನು :—ಪರ್ವತರಾಜನಾದ, ಮಹಾ ಪರ್ವತವಾದ, ಚಿನ್ನದ ಬೆಟ್ಟವಾದ ಮೇರುವನ್ನು ಸೂರ್ಯನು ಉದಯದಿಂದ ಅಸ್ತಮಾನದವರೆಗೆ ಸುತ್ತುತ್ತಿರುತ್ತಾನೆ. ಅದನ್ನು ನೋಡಿ, ವಿಂಧ್ಯಪರ್ವತವು ಸೂರ್ಯನನ್ನು ಕುರಿತು ಇಂತೆಂದಿತು.

೧೪೮. ವಿಂಧ್ಯವು ಹೇಳಿತು :—ಎಲೈ ಸೂರ್ಯನೇ, ನೀನು ನಿತ್ಯವೂ ಮೇರು ಪರ್ವತವನ್ನು ಹೊಂದಿ ಗೌರವಿಸಿ, ಅದನ್ನು ಪ್ರದಕ್ಷಿಣೆಯನ್ನು ಮಾಡುತ್ತೀಯೆ.

**ಪ್ರದಕ್ಷಿಣಶ್ಚ ಕ್ರಿಯತೇ ಮಾಮೇವಂ ಕುರು ಭಾಸ್ಕರ ।**
**ಏವಮುಕ್ತಸ್ತತಃ ಸೂರ್ಯಃ ಶೈಲೇಂದ್ರಂ ಪ್ರತ್ಯಭಾಷತ ॥ ೧೪೮ ॥**

**॥ ಸೂರ್ಯ ಉವಾಚ ॥**

**ನಾಹಮಾತ್ಮೇಚ್ಛಯಾ ಶೈಲ ಕರಿಷ್ಯೇ ತಂ ಪ್ರದಕ್ಷಿಣಂ ।**
**ಏಷ ಮಾರ್ಗಃ ಪ್ರದೃಷ್ಟೋ ಮೇ ಯೇನೇದಂ ನಿರ್ಮಿತಂ ಜಗತ್ ॥ ೧೪೯ ॥**

**॥ ಪುಲಸ್ತ್ಯ ಉವಾಚ ॥**

**ಏವಮುಕ್ತಸ್ತದಾ ಕ್ರೋಧಾತ್ಪ್ರವೃದ್ಧಃ ಸಹಸಾಚಲಃ ।**
**ಸೂರ್ಯಾಚಂದ್ರಮಸೋರ್ಮಾರ್ಗಂ ರೋದ್ಧುಮಿಚ್ಛನ್ಪರಂತಪ ॥ ೧೫೦ ॥**

**ತತೋ ಹಿ ದೇವಾಃ ಸಹಿತಾಸ್ತು ಸರ್ವೇ**
**ಸೇಂದ್ರಾಃ ಸಮಾಗಮ್ಯ ಮಹಾದ್ರಿರಾಜಂ ।**
**ನಿವಾರಯಾಮಾಸುರಥೋತ್ಪತಂತಂ**
**ನ ಚ ಸ್ಮ ತೇಷಾಂ ವಚನಂ ಚಕಾರ ॥ ೧೫೧ ॥**

---

ಹಾಗೆಯೇ ನನ್ನನ್ನೂ ಮಾಡು ಎಂದಿತು. ಹೀಗೆ ಹೇಳಲು ಸೂರ್ಯನು ಪರ್ವತವನ್ನು ಕುರಿತು ಇಂತೆಂದನು.

೧೪೯. ಸೂರ್ಯನು ಹೇಳಿದನು :—ಎಲೈ ಶೈಲೇಂದ್ರನೇ, ನನ್ನ ಇಚ್ಛೆಯಿಂದ ನಾನು ಅದನ್ನು ಪ್ರದಕ್ಷಿಣೆಮಾಡುತ್ತಿಲ್ಲ. ಯಾವನು ಈ ಜಗತ್ತನ್ನು ನಿರ್ಮಿಸಿದನೋ ಆತನೇ ಈ ದಾರಿಯನ್ನು ನನಗೆ ತೋರಿಸಿದ್ದಾನೆ.

೧೫೦. ಪುಲಸ್ತ್ಯನು ಹೇಳಿದನು :—ಸೂರ್ಯನು ಹೀಗೆನ್ನಲು ಆ ಪರ್ವತವು ಕೋಪಗೊಂಡು ಈ ಸೂರ್ಯಚಂದ್ರರ ಮಾರ್ಗವನ್ನು ತಡೆಯಲು ಇಚ್ಛಿಸಿ ಬೆಳೆಯಿತು.

೧೫೧. ಆಗ ಇಂದ್ರನೇ ಮುಂತಾದ ದೇವತೆಗಳು ಆ ಪರ್ವತದ ಬಳಿಗೆ ಬಂದು ಮೇಲಕ್ಕೆ ಬೆಳೆಯಬೇಡವೆಂದು ತಡೆದರು. ಆದರೂ ಅವರ ಮಾತನ್ನು ಆ ಗಿರಿಯು ಕೇಳಲಿಲ್ಲ.

ಅಥಾಭಿಜಗ್ಮುರ್ಮುನಿಮಾಶ್ರಮಸ್ಥಂ
ತಪಸ್ವಿನಂ ಧರ್ಮವತಾಂ ವರಿಷ್ಠಂ ।
ಅಗಸ್ತ್ಯಮತ್ಯದ್ಭುತದೀಪ್ತವೀರ್ಯ
ತಂ ಚಾರ್ಥಮೂಚುಃ ಸಹಿತಾಃ ಸುರಾಸ್ತೇ ॥ ೧೫೨ ॥

॥ ದೇವಾ ಊಚುಃ ॥

ಸೂರ್ಯಚಂದ್ರಮಸೋರ್ಮಾರ್ಗಂ ನಕ್ಷತ್ರಾಣಾಂ ಗತಿಂ ತಥಾ ।
ಶೈಲರಾಜೋ ವೃಣೋತ್ಯೇಷ ವಿಂಧ್ಯಃ ಕ್ರೋಧವಶಾನುಗಃ ॥ ೧೫೩ ॥

ತಂ ಚ ವಾರಯಿತುಂ ಶಕ್ತೋ ನ ಚ ಕಶ್ಚಿನ್ಮುನೀಶ್ವರ ।
ತಚ್ಛ್ರುತ್ವಾ ವಚನಂ ವಿಪ್ರಃ ಸುರಾಣಾಂ ಶೈಲಮನ್ವಗಾತ್ ॥ ೧೫೪ ॥

ಸೋಽಭಿಗಮ್ಯಾಬ್ರವೀದ್ವಿಂಧ್ಯಂ ಸಾದರಂ ಸಮುಪಸ್ಥಿತಂ ॥ ೧೫೫ ॥

॥ ಅಗಸ್ತ್ಯ ಉವಾಚ ॥

ಮಾರ್ಗಮಿಚ್ಛಾಮ್ಯಹಂ ದತ್ತಂ ಭವತಾ ಪರ್ವತೋತ್ತಮ ।
ದಕ್ಷಿಣಾಮಭಿಗಂತಾಸ್ಮಿ ದಿಶಂ ಕಾರ್ಯೇಣ ಕೇನಚಿತ್ ॥ ೧೫೬ ॥

---

೧೫೨. ಅನಂತರ ಅವರೆಲ್ಲರೂ ಧರ್ಮಿಷ್ಠನೂ, ತಪಸ್ವಿಯೂ, ಆದ ಈ ಅಗಸ್ತ್ಯನ ಆಶ್ರಮಕ್ಕೆ ಬಂದರು. ಅವನನ್ನು ಕುರಿತು ಈ ಪರ್ವತದ ಅದ್ಭುತ ಕೆಲಸವನ್ನು ವಿವರಿಸಿದರು.

೧೫೩. ದೇವತೆಗಳು ಹೇಳಿದರು :—ಎಲೈ ಋಷಿಯೇ, ಆ ವಿಂಧ್ಯವು ಸೂರ್ಯ, ಚಂದ್ರರ, ಅಂತೆಯೇ ನಕ್ಷತ್ರಗಳ ಮಾರ್ಗವನ್ನು ಕೋಪದಿಂದ ತಡೆದಿರುವುದು. ಎಲೈ ಋಷಿಯೇ, ಅವನನ್ನು ತಡೆಯಲು ಒಬ್ಬನೂ ಶಕ್ತನಾಗಿಲ್ಲ.

೧೫೪-೧೫೫. ದೇವತೆಗಳ ಆ ಮಾತನ್ನು ಕೇಳಿ, ಋಷಿಯು ಆ ಪರ್ವತವ ಬಳಿಗೆ ಬಂದನು. ಬರಲು ವಿಂಧ್ಯವು ಆದರದಿಂದ ಬಂದಿತು. ಆಗ ಅದಕ್ಕೆ ಇಂತೆಂದನು.

೧೫೬-೧೫೭. ಅಗಸ್ತ್ಯನು ಹೇಳಿದನು :—ಎಲೈ ಪರ್ವತಶ್ರೇಷ್ಠನೇ, ಒಂದಾನೊಂದು ಕೆಲಸಕ್ಕಾಗಿ ದಕ್ಷಿಣದಿಕ್ಕಿಗೆ ಹೋಗಬೇಕಾಗಿದೆ. ಅದಕ್ಕೋಸ್ಕರ ನನಗೆ

**ಯಾವದಾಗಮನಂ ಮಹ್ಯಂ ತಾವತ್ತ್ವಂ ಪರಿಪಾಲಯ ।**
**ನಿವೃತ್ತೇ ಮಯಿ ಶೈಲೇಂದ್ರ ತತೋ ವರ್ಧಸ್ವ ಕಾಮತಃ　　　॥ ೧೫೭ ॥**

**॥ ಪುಲಸ್ತ್ಯ ಉವಾಚ ॥**

**ಅದ್ಯಾಪಿ ದಕ್ಷಿಣಾದೇಶಾದ್ವಾರುಣಿರ್ನ ನಿವರ್ತತೇ ।**
**ಏತತ್ತೇ ಸರ್ವಮಾಖ್ಯಾತಂ ಯಥಾ ವಿಂಧ್ಯೋ ನ ವರ್ಧತೇ　　　॥ ೧೫೮ ॥**

**ಅಗಸ್ತ್ಯಸ್ಯ ಪ್ರಭಾವೇಣ ಯಥಾ ತ್ವಂ ಪರಿಪೃಷ್ಟವಾನ್ ।**
**ಕಾಲೇಯಾಸ್ತು ಯಥಾ ಜಂಭಾಃ ಸುರೈಃ ಸರ್ವೇ ನಿಷೂದಿತಾಃ　॥ ೧೫೯ ॥**

**ಅಗಸ್ತ್ಯವರಮಾಸಾದ್ಯ ತನ್ಮೇ ನಿಗದತಃ ಶೃಣು ।**
**ತ್ರಿದಶಾನಾಂ ವಚಃ ಶ್ರುತ್ವಾ ಮೈತ್ರಾವರುಣಿರಬ್ರವೀತ್　　　॥ ೧೬೦ ॥**

**ಅಗಸ್ತ್ಯ ಉವಾಚ ॥**

**ಕಿಮರ್ಥಮಿಹ ಯಾತಾಶ್ಚ ವರಂ ಮತ್ತಃ ಕಿಮಿಚ್ಛಥ ।**
**ಏವಮುಕ್ತಾಸ್ತದಾ ತೇನ ದೇವಾಸ್ತಂ ಮುನಿರಬ್ರವೀತ್　　　॥ ೧೬೧ ॥**

---

ದಾರಿಯನ್ನು ಕೊಡು. ನಾನು ಬರುವವರೆಗೂ ಹಾಗೆಯೇ ಇರು. ನಾನು ಬಂದ ನಂತರ ಬೇಕಾದಂತೆ ಬೆಳೆಯುತ್ತೀಯಂತೆ.

೧೫೮. ಪುಲಸ್ತ್ಯನು ಹೇಳಿದನು :—ಇನ್ನೂ ಕೂಡ ದಕ್ಷಿಣದಿಕ್ಕಿನಿಂದ ಅಗಸ್ತ್ಯನು ಹಿಂತಿರುಗಲೇ ಇಲ್ಲ. ಇದು ವಿಂಧ್ಯವು ಬೆಳೆಯದಿರಲು ಕಾರಣ. ಇದೆಲ್ಲವನ್ನೂ ನಿನಗೆ ಹೇಳಿದ್ದೇನೆ.

೧೫೯. ಕಾಲೇಯರೂ, ಜಂಭನೂ, ಎಲ್ಲರೂ ಅಗಸ್ತ್ಯನ ಪ್ರಭಾವದಿಂದ ಹೇಗೆ ನಾಶವಾದರೆಂಬುದನ್ನು ಕೇಳಿದೆಯಲ್ಲ, ಹೇಳುವೆನು ಕೇಳು.

೧೬೦. ಅಗಸ್ತ್ಯನ ವರವನ್ನು ಹೊಂದಿ ಹೇಳುತ್ತಿರುವುದನ್ನು ಕೇಳು. ಆತನು ದೇವತೆಗಳ ಈ ಮಾತನ್ನು ಕೇಳಿ ದೇವತೆಗಳಿಗಿಂತೆಂದನು.

೧೬೧. ಅಗಸ್ತ್ಯನು ಹೇಳಿದನು :—ನೀವೇಕೆ ಇಲ್ಲಿಗೆ ಬಂದಿರಿ? ನನ್ನಿಂದ ಯಾವ ವರವನ್ನು ಇಚ್ಛಿಸುತ್ತೀರಿ? ಎನ್ನಲು, ದೇವತೆಗಳು ಅವನಿಗೆ ಇಂತೆಂದರು.

॥ ದೇವಾ ಊಚುಃ ॥

ಇಚ್ಛಾಮ ಏಕಂ ವರಮುದ್ಭೃತಂ ತೇ
ಪಿಬಾರ್ಣವಂ ದೇವಮುನೇ ಮಹಾತ್ಮನ್ ।
ಏವಂ ತ್ವಯೇಚ್ಛಾಮ ಕೃತೇ ಮಹರ್ಷೇ
ಮಹಾರ್ಣವೇ ಪೀಯಮಾನೇ ಮಹಾತ್ಮನ್ ।
ತತೋ ವಧಿಷ್ಯಾಮಿ ಚ ಸಾನುಬಂಧಾ-
ನ್ಕಾಲೇಯಸಂಜ್ಞಾನ್ಸುರವಿದ್ವಿಷಸ್ತಾನ್ ॥ ೧೬೨ ॥

ತ್ರಿದಶಾನಾಂ ವಚಃ ಶ್ರುತ್ವಾ ತಥೇತಿ ಮುನಿರಬ್ರವೀತ್ ।
ಕರಿಷ್ಯೇ ಭವತಾಂ ಕಾಮಂ ಲೋಕನಾಥ ಸುರೇಶ್ವರ ॥ ೧೬೩ ॥

ಏವಮುಕ್ತ್ವಾ ತತೋಽಗಚ್ಛತ್ಸಮುದ್ರಂ ನಿಧಿಮಂಭಸಾಂ ।
ತಪಃಸಿದ್ಧೈಸ್ತು ಮುನಿಭಿಃ ಸಾರ್ಧಂ ದೇವೈಶ್ಚ ಸುವ್ರತ ॥ ೧೬೪ ॥

ಮನುಷ್ಯೋರಗಗಂಧರ್ವಾ ಯಕ್ಷಾಃ ಕಿಂಪುರುಷಾಸ್ತಥಾ ।
ಅನುಜಗ್ಮುರ್ಮಹಾತ್ಮಾನಂ ದ್ರಷ್ಟುಕಾಮಾಸ್ತದದ್ಭುತಂ ॥ ೧೬೫ ॥

---

೧೬೨. ದೇವತೆಗಳು ಹೇಳಿದರು:—ನಿನ್ನಿಂದ ಒಂದು ವರವನ್ನು ಕೇಳಿಕೊಳ್ಳುತ್ತೇವೆ. ಎಲೈ ದೇವಮುನಿಯೇ, ಸಮುದ್ರವನ್ನು ಕುಡಿ. ಇದು ನಮಗೆ ಬೇಕು. ನೀನು ಸಮುದ್ರವನ್ನು ಕುಡಿದರೆ, ಆ ಕಾಲೇಯರನ್ನೂ ಅವರ ಅನುಬಂಧಿಗಳನ್ನೂ ಕೊಂದುಹಾಕುತ್ತೇವೆ.

೧೬೩. ಆ ಅಗಸ್ತ್ಯನು ಆ ದೇವತೆಗಳ ಮಾತನ್ನು ಕೇಳಿ, ಹಾಗೇ ಆಗಲೆಂದು ಹೇಳಿ, ಎಲೈ ಇಂದ್ರನೇ, ನಿಮ್ಮ ಕೆಲಸವನ್ನು ಮಾಡಿಕೊಡುತ್ತೇನೆಂದು ಹೇಳಿದನು.

೧೬೪. ಹೀಗೆಂದು ಹೇಳಿ, ನೀರಿನ ನಿಧಿಯಾದ ಸಮುದ್ರಕ್ಕೆ ಸಿದ್ಧರೊಡನೆಯೂ ಮುನಿಗಳೊಡನೆಯೂ ದೇವತೆಗಳೊಡನೆಯೂ ಹೊರಟನು.

೧೬೫. ಮನುಷ್ಯರೂ, ಉರಗರೂ, ಗಂಧರ್ವರೂ, ಯಕ್ಷರೂ, ಕಿಂಪುರುಷರೂ ಎಲ್ಲರೂ ಕೂಡ ಈ ಅದ್ಭುತವನ್ನು ನೋಡಲು ಅವನನ್ನು ಅನುಸರಿಸಿ ಹೋದರು.

**ತತೋಽಭ್ಯಗಚ್ಛನ್ಸಹಸಾ ಸಮುದ್ರಂ ಭೀಮನಿಸ್ವನಂ ।**
**ನೃತ್ಯಂತಮಿವ ವೀಚೀಭಿಶ್ಚಲಂತಮಿವ ವಾಯುಭಿಃ　　॥ ೧೬೬ ॥**

**ಹಸಂತಮಿವ ಫೇನೌಘೈಃ ಸ್ಖಲಂತಂ ಕಂದರೇಷು ಚ ।**
**ನಾನಾಗ್ರಾಹಸಮಾಕೀರ್ಣಂ ನಾನಾದ್ವಿಜಸಮಾಕುಲಂ　　॥ ೧೬೭ ॥**

**ಅಗಸ್ತ್ಯಸಹಿತಾ ದೇವಾಃ ಸಗಂಧರ್ವಾ ಮಹೋರಗಾಃ ।**
**ಋಷಯಶ್ಚ ಮಹಾಭಾಗಾಃ ಸಮಾಸೇದುರ್ಮಹೋದಧಿಂ　　॥ ೧೬೮ ॥**

**ಸಮುದ್ರಂ ಚ ಸಮಾಸಾದ್ಯ ವಾರುಣಿರ್ಭಗವಾನೃಷಿಃ ।**
**ಉವಾಚ ಸಹಿತಾನ್ದೇವಾನೃಷೀಂಸ್ತಾಂಸ್ತು ಸಮಾಗತಾನ್　　॥ ೧೬೯ ॥**

**ಪಾತುಕಾಮಃ ಸಮುದ್ರಂ ತು ಅಗಸ್ತ್ಯ ಋಷಿಸತ್ತಮಃ　　॥ ೧೭೦ ॥**

**॥ ಅಗಸ್ತ್ಯ ಉವಾಚ ॥**

**ಏಷ ಲೋಕಹಿತಾರ್ಥಾಯ ಪಿಬಾಮಿ ವರುಣಾಲಯಂ ।**
**ಭವತಾಂ ಯದನುಷ್ಠೇಯಂ ತಚ್ಛೀಘ್ರಂ ಸಂವಿಧೀಯತಾಂ　　॥ ೧೭೧ ॥**

---

೧೬೬—೧೬೮. ಭಯಂಕರ ಧ್ವನಿಯುಳ್ಳ, ಅಲೆಗಳಿಂದ ಕುಣಿಯುವಂತಿರುವ, ಗಾಳಿಯಿಂದ ನಡೆಯುವ ಹಾಗೆ ಅಲ್ಲಾಡುತ್ತಿರುವ ನೊರೆಗಳಿಂದ ನಗುತ್ತಿರುವ, ಸುಳಿಗಳಲ್ಲಿ ಜಾರಿ ಬೀಳುವಂತಿರುವ ಅನೇಕಬಗೆಯ ಮೊಸಳೆಗಳುಳ್ಳ, ಅನೇಕಬಗೆಯ ಮೊಟ್ಟೆಗಳಿಂದ ಹುಟ್ಟುವ ಪ್ರಾಣಿಗಳುಳ್ಳ ಸಮುದ್ರಕ್ಕೆ ಅಗಸ್ತ್ಯನೊಡನೆ ಗಂಧರ್ವ, ಉರಗ, ಋಷಿಗಳು ಮುಂತಾದವರೆಲ್ಲರೂ ಹೋಗಿ ಸೇರಿದರು.

೧೬೯-೧೭೦. ಋಷಿಶ್ರೇಷ್ಠನಾದ ಅಗಸ್ತ್ಯನು ಸಮುದ್ರವನ್ನು ಕುಡಿಯಲು ಇಚ್ಛಿಸಿ, ಸಮುದ್ರದ ಬಳಿಗೆ ಹೋಗಿ ಅಲ್ಲಿರುವ ದೇವತೆಗಳು ಋಷಿಗಳು ಮುಂತಾದವರನ್ನು ಕುರಿತು ಇಂತೆಂದನು.

೧೭೧. ಅಗಸ್ತ್ಯನು ಹೇಳಿದನು :—ಈಗ ನಾನು ಲೋಕಹಿತಕ್ಕೋಸ್ಕರ ಸಮುದ್ರವನ್ನು ಕುಡಿಯುತ್ತೇನೆ. ನೀವು ಮಾಡಿಕೊಳ್ಳಬೇಕಾದುದನ್ನು ಬೇಗ ಮಾಡಿಕೊಳ್ಳಿರಿ.

ಏತಾವದುಕ್ತ್ವಾ ವಚನಂ ಮೈತ್ರಾವರುಣಿರಗ್ರತಃ ।
ಸಮುದ್ರಮಪಿ ಚ ಕ್ರುದ್ಧಃ ಸರ್ವಲೋಕಸ್ಯ ಪಶ್ಯತಃ ॥ ೧೭೨ ॥

ಪೀಯಮಾನಂ ಸಮುದ್ರಂ ತು ದೃಷ್ಟ್ವಾ ದೇವಾಃ ಸವಾಸವಾಃ ।
ವಿಸ್ಮಯಂ ಪರಮಂ ಜಗ್ಮುಃ ಸ್ತುತಿಭಿಶ್ಚಾಪ್ಯಪೂಜಯನ್ ॥ ೧೭೩ ॥

ತ್ವಂ ನಸ್ತ್ರಾತಾ ವಿಧಾತಾ ಚ ಲೋಕಾನಾಂ ಲೋಕಭಾವನಃ ।
ತ್ವತ್ಪ್ರಸಾದಾತ್ಸಮುತ್ಸೇದಂ ನ ಗಚ್ಛೇತ್ಸಾಮರಂ ಜಗತ್ ॥ ೧೭೪ ॥

ಸಂಪೂಜ್ಯಮಾನಸ್ತ್ರಿದಶೈರ್ಮಹಾತ್ಮಾ
ಗಂಧರ್ವಮುಖ್ಯೇಷು ನದತ್ಸು ಚೈವ ।
ದಿವ್ಯೈಶ್ಚ ಪುಷ್ಪೈರವಕೀರ್ಯಮಾಣೋ
ಮಹಾರ್ಣವಂ ನಿಃಸಲಿಲಂ ಚಕಾರ ॥ ೧೭೫ ॥

ದೃಷ್ಟ್ವಾ ಕೃತಂ ನಿಃಸಲಿಲಂ ಮಹಾರ್ಣವಂ
ಸುರಾಃ ಸಮಸ್ತಾಃ ಪರಮಂ ಪ್ರಹೃಷ್ಟಾಃ ।
ಪ್ರಗೃಹ್ಯ ದಿವ್ಯಾನಿ ವರಾಯುಧಾನಿ
ತಾನ್ದಾನವಾನ್ ಜಘ್ನುರದೀನಸತ್ತ್ವಾಃ ॥ ೧೭೬ ॥

---

೧೭೨-೧೭೩. ಆ ಅಗಸ್ತ್ಯನು ಇಷ್ಟನ್ನು ಹೇಳಿ ಕೋಪಗೊಂಡು ಎಲ್ಲರೂ ನೋಡುತ್ತಿರುವಂತೆ ಕುಡಿಯಲು ಮೊದಲು ಮಾಡಿದನು. ಆತನು ಸಮುದ್ರವನ್ನು ಕುಡಿಯುತ್ತಿರುವುದನ್ನು ನೋಡಿ, ಇಂದ್ರನೇ ಮುಂತಾದವರು ಆಶ್ಚರ್ಯವನ್ನು ಹೊಂದಿದರು. ಮತ್ತು ಸ್ತೋತ್ರಮಾಡಲು ಮೊದಲು ಮಾಡಿದರು.

೧೭೪. ನೀನೇ ನಮಗೆ ರಕ್ಷಕನು, ನೀನೇ ನಮಗೆ ಸೃಷ್ಟಿಕರ್ತನು, ಲೋಕಕ್ಕೆ ಬೇಕಾದವನೂ ನೀನೆಯೇ. ನಿನ್ನ ಅನುಗ್ರಹದಿಂದ ಲೋಕವೆಲ್ಲವೂ ನಾಶವಾಗಬಾರದು.

೧೭೫. ದೇವತೆಗಳಿಂದ ಗೌರವಿಸಲ್ಪಡುತ್ತಲೂ, ಗಂಧರ್ವರಿಂದ ಹೊಗಳಲ್ಪಡುತ್ತಲೂ, ದೇವಲೋಕದಿಂದ ಹೂಗಳಿಂದ ಎರಚಲ್ಪಡುತ್ತಲೂ ಇರುವ ಆ ಅಗಸ್ತ್ಯನು ಸಮುದ್ರವನ್ನು ನೀರಿಲ್ಲದಂತೆ ಮಾಡಿದನು.

೧೭೬. ಸಮುದ್ರದಲ್ಲಿ ನೀರಿಲ್ಲದುದನ್ನು ನೋಡಿ, ಆ ದೇವತೆಗಳೆಲ್ಲರೂ ಸಂತೋಷದಿಂದ ಒಳ್ಳೊಳ್ಳೆಯ ಆಯುಧಗಳನ್ನು ತೆಗೆದುಕೊಂಡು ಆ ರಾಕ್ಷಸರೆಲ್ಲರನ್ನೂ ಹೊಡೆದರು.

ತೇ ವಧ್ಯಮಾನಾಸ್ತ್ರಿದಶೈರ್ಮಹಾತ್ಮಭಿ-
ರ್ಮಹಾಬಲೈರ್ವೇಗಯುತೈರ್ನದದ್ಭಿಃ ।
ನ ಸೇಹಿರೇ ವೇಗವತಾಂ ಮಹಾತ್ಮನಾಂ
ವೇಗಂ ತದಾ ಧಾರಯಿತುಂ ದಿವೌಕಸಾಂ ॥ ೧೨೭ ॥

ತೇ ವಧ್ಯಮಾನಾಸ್ತ್ರಿದಶೈರ್ದಾನವಾ ಭೀಮದರ್ಶನಾಃ ।
ಚಕ್ರುಃ ಸುತುಮುಲಂ ಯುದ್ಧಂ ಮುಹೂರ್ತಮಿವ ಭಾರತ ॥ ೧೨೮ ॥

ತೇ ಪೂರ್ವಂ ತಪಸಾ ದಗ್ಧಾ ಮುನಿಭಿರ್ಭಾವಿತಾತ್ಮಭಿಃ ।
ಯತಮಾನಾಃ ಪರಂ ಶಕ್ತ್ಯಾ ತ್ರಿದಶೈರ್ವಿನಿಷೂದಿತಾಃ ॥ ೧೨೯ ॥

ತೇ ಹೇಮನಿಷ್ಕಾಭರಣಾಃ ಕುಂಡಲಾಂಗದಧಾರಿಣಃ ।
ನಿಹತಾ ಬಹ್ವಶೋಭಂತ ಪುಷ್ಪಿತಾ ಇವ ಕಿಂಶುಕಾಃ ॥ ೧೩೦ ॥

ಹತಶಿಷ್ಟಾಸ್ತತಃ ಕೇಽಪಿ ಕಾಲೇಯಾ ದನುಜೋತ್ತಮಾಃ ।
ವಿದಾರ್ಯ ವಸುಧಾಂ ದೇವೀಂ ಪಾತಾಲತಲಮಾಶ್ರಿತಾಃ ॥ ೧೩೧ ॥

---

೧೨೭. ಮಹಾತ್ಮರಾದ ದೇವತೆಗಳಿಂದ ಕೊಲ್ಲಲ್ಪಡುತ್ತಿರುವ ಆ ರಾಕ್ಷಸರು ಆ ದೇವತೆಗಳ ವೇಗವನ್ನು ಸಹಿಸಲಾರದೇ ಹೋದರು.

೧೨೮. ಭಯಂಕರರಾದ ಆ ರಾಕ್ಷಸರನ್ನು ದೇವತೆಗಳು ಹೊಡೆಯುತ್ತಿರಲಾಗಿ ಒಂದು ಕ್ಷಣಕಾಲ ಅವರೆಲ್ಲರೂ ತುಮುಲ ಯುದ್ಧವನ್ನು ಮಾಡಿದರು.

೧೨೯. ಅವರೆಲ್ಲರೂ ಯೋಗ್ಯರಾದ ಋಷಿಗಳ ತಪಸ್ಸಿನಿಂದಲೇ ನಾಶವಾಗಿದ್ದರು. ಈಗ ಬಲದಿಂದ ಮಾತ್ರ ಯುದ್ಧಮಾಡುತ್ತ ದೇವತೆಗಳಿಂದ ಕೊಲ್ಲಲ್ಪಟ್ಟರು.

೧೩೦. ಅವರೆಲ್ಲರೂ ಚಿನ್ನದ ಆಭರಣಗಳನ್ನು ಧರಿಸಿದ್ದರು. ಕುಂಡಲಗಳನ್ನೂ ಭುಜಕೀರ್ತಿಗಳನ್ನೂ ತೊಟ್ಟಿದ್ದರು. ಇಂತಹವರನ್ನು ಕೊಲ್ಲುತ್ತಿದ್ದರೆ ಅವರು ಹೂಬಿಟ್ಟ ಮುತ್ತುಗದ ಮರದಂತೆ ಪ್ರಕಾಶಿಸಿದರು.

೧೩೧. ಕೊಂದ ಮೇಲೆ ಉಳಿದ ಕೆಲವು ಕಾಲೇಯರು ಭೂಮಿಯನ್ನು ಸೀಳಿ ಪಾತಾಳವನ್ನು ಹೊಕ್ಕರು.

ನಿಹತಾನ್ದಾನವಾನ್ದೃಷ್ಟ್ವಾ ತ್ರಿದಶಾ ಮುನಿಪುಂಗವಂ ।
ತುಷ್ಟುವುರ್ವಿವಿಧೈರ್ವಾಕ್ಯೈರಿದಂ ಚೈವಾಬ್ರುವನ್ವಚಃ ॥ ೧೮೨ ॥

॥ ದೇವಾ ಊಚುಃ ॥

ತ್ವತ್ಪ್ರಸಾದಾನ್ಮಹಾಭಾಗ ಲೋಕೈಃ ಪ್ರಾಪ್ತಂ ಮಹತ್ಸುಖಂ ।
ತ್ವತ್ತೇಜಸಾ ಚ ನಿಹತಾಃ ಕಾಲೇಯಾಃ ಕ್ರೂರವಿಕ್ರಮಾಃ ॥ ೧೮೩ ॥

ಪೂರಯಸ್ವ ಮಹಾವಿಪ್ರ ಸಮುದ್ರಂ ಲೋಕಭಾವನ ।
ಯತ್ತ್ವಯಾ ಸಲಿಲಂ ಪೀತಂ ತದಸ್ಮಿನ್ಸರ್ವಮುತ್ಸೃಜ ॥ ೧೮೪ ॥

ಏವಮುಕ್ತಃ ಪ್ರತ್ಯುವಾಚ ಭಗವಾನ್ಮುನಿಪುಂಗವಃ ॥ ೧೮೫ ॥

॥ ಅಗಸ್ತ್ಯ ಉವಾಚ ॥

ಜೀರ್ಣಂ ತದ್ಧಿ ಮಯಾ ತೋಯಮುಪಾಯೋಽನ್ಯೋ ವಿಚಿಂತ್ಯತಾಂ ।
ಪೂರಣಾರ್ಥಂ ಸಮುದ್ರಸ್ಯ ಭವದ್ಭಿರ್ಯತ್ನಮಾಸ್ಥಿತೈಃ ॥ ೧೮೬ ॥

---

೧೮೨. ಅನಂತರ ದೇವತೆಗಳು ಆ ರಾಕ್ಷಸರೆಲ್ಲರನ್ನೂ ಕೊಂದು ಋಷಿಯನ್ನು ನಾನಾಬಗೆಯಾದ ವಾಕ್ಯಗಳಿಂದ ಸ್ತೋತ್ರಮಾಡಿದರು.

೧೮೩. ದೇವತೆಗಳು ಹೇಳಿದರು :—ಎಲೈ ಮಹಾನುಭಾವನೇ, ನಿನ್ನ ಅನುಗ್ರಹದಿಂದ ಲೋಕವೆಲ್ಲವೂ ಬಹು ಸುಖವನ್ನು ಹೊಂದಿದುವು. ನಿನ್ನ ಬಲದಿಂದಲೇ ಕ್ರೂರರಾದ ಕಾಲೇಯರನ್ನು ಕೊಂದೆವು.

೧೮೪-೧೮೫. ಎಲೈ ಮಹಾನುಭಾವನೇ, ಸಮುದ್ರವನ್ನು ಮತ್ತೆ ತುಂಬು. ನೀನು ಕುಡಿದ ನೀರನ್ನೆಲ್ಲಾ ಇದರಲ್ಲಿ ಬಿಡು. ಹೀಗೆ ಹೇಳಲು, ಆ ಋಷಿಶ್ರೇಷ್ಠನು ಪ್ರತ್ಯುತ್ತರವನ್ನು ಕೊಟ್ಟನು.

೧೮೬. ಅಗಸ್ತ್ಯನು ಹೇಳಿದನು:—ನನ್ನ ಉದರದಲ್ಲಿ ಆ ನೀರು ಜೀರ್ಣವಾಗಿ ಹೋಗಿದೆ. ಬೇರೆ ಉಪಾಯವನ್ನು ಯೋಚಿಸಿ, ನೀವು ಯತ್ನಮಾಡಿ ಇದನ್ನು ತುಂಬಲು ಬೇರೆ ಉಪಾಯವನ್ನು ಹುಡುಕಿರಿ.

**॥ ಪುಲಸ್ತ್ಯ ಉವಾಚ ॥**

**ಏತಚ್ಛ್ರುತ್ವಾ ತು ವಚನಂ ಮಹರ್ಷೇರ್ಭಾವಿತಾತ್ಮನಃ ।**
**ವಿಸ್ಮಿತಾಶ್ಚ ವಿಷಣ್ಣಾಶ್ಚ ಬಭೂವುಃ ಸಹಿತಾಃ ಸುರಾಃ ॥ ೧೮೭ ॥**

**ಪರಸ್ಪರಮನುಜ್ಞಾಪ್ಯ ಪ್ರಣಮ್ಯ ಮುನಿಪುಂಗವಂ ।**
**ಪ್ರಜಾಃ ಸರ್ವಾ ಮಹಾಭಾಗ ವಿಪ್ರಜಗ್ಮುರ್ಯಥಾಗತಂ ॥ ೧೮೮ ॥**

**ತ್ರಿದಶಾ ವಿಷ್ಣುನಾ ಸಾರ್ಧಮನುಜಗ್ಮುಃ ಪಿತಾಮಹಂ ।**
**ಪೂರಣಾರ್ಥಂ ಸಮುದ್ರಸ್ಯ ಮಂತ್ರಯಂತಃ ಪರಸ್ಪರಂ ॥ ೧೮೯ ॥**

**ಊಚುಃ ಪ್ರಾಂಜಲಯಃ ಸರ್ವೇ ಸಾಗರಸ್ಯಾಭಿಪೂರಣಂ ।**
**ತಾನುವಾಚ ಸಮೇತಾಂಸ್ತು ಬ್ರಹ್ಮಾ ಲೋಕಪಿತಾಮಹಃ ॥ ೧೯೦ ॥**

**॥ ಬ್ರಹ್ಮೋವಾಚ ॥**

**ಗಚ್ಛಧ್ವಂ ವಿಬುಧಾಃ ಸರ್ವೇ ಯಥಾಕಾಮಂ ಯಥೇಪ್ಸಿತಂ ।**
**ಮಹತಾ ಕಾಲಯೋಗೇನ ಪ್ರಕೃತಿಂ ಯಾಸ್ಯತೇಽರ್ಣವಃ ॥ ೧೯೧ ॥**

---

೧೮೭. ಪುಲಸ್ತ್ಯನು ಹೇಳಿದನು :—ಯೋಗಿಯಾದ ಆ ಮಹರ್ಷಿಯ ಮಾತನ್ನು ಕೇಳಿ ಆಶ್ಚರ್ಯವನ್ನೂ, ದುಃಖವನ್ನೂ ಹೊಂದಿದರು.

೧೮೮. ಒಬ್ಬರಿಗೊಬ್ಬರು ಮಾತನಾಡಿಕೊಂಡು ಆ ಋಷಿಗೆ ನಮಸ್ಕರಿಸಿ, ಅವರೆಲ್ಲರೂ ಬಂದಂತೆ ಹೊರಟುಹೋದರು.

೧೮೯. ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ ಅವನೊಡನೆ ಸಮುದ್ರವನ್ನು ತುಂಬುವ, ವಿಷಯದಲ್ಲಿ ಮಾತನಾಡುತ್ತ ಬ್ರಹ್ಮನ ಬಳಿಗೆ ಹೋದರು.

೧೯೦. ಅವರೆಲ್ಲರೂ ಕೈಮುಗಿದುಕೊಂಡು ಸಮುದ್ರದ ತುಂಬುವಿಕೆಯನ್ನು ಹೇಳಿದರು. ಆಗ ಬ್ರಹ್ಮನು ಅವರೆಲ್ಲರಿಗೂ ಇಂತೆಂದನು.

೧೯೧. ಬ್ರಹ್ಮನು ಹೇಳಿದನು :—ಎಲೈ ದೇವತೆಗಳಿರಾ, ನೀವೆಲ್ಲರೂ ಯೋಚನೆಮಾಡದೆ ಹೋಗಿರಿ. ಬಹುಕಾಲದ ಮೇಲೆ ಸಮುದ್ರವು ಮೊದಲಿನ ಸ್ಥಿತಿಗೆ ಬರುತ್ತದೆ.

ಜ್ಞಾತೀಸ್ತು ಕಾರಣಂ ಕೃತ್ವಾ ಮಹಾರಾಜೋ ಭಗೀರಥಃ ।
ಗಂಗೌಘೇನ ಸಮುದ್ರಂ ಚ ಪುನಃ ಸಂಪೂರಯಿಷ್ಯತಿ ॥ ೧೯೨ ॥

ಏವಂ ತೇ ಬ್ರಹ್ಮಣಾ ದೇವಾಃ ಪ್ರೇಷಿತಾ ಋಷಿಸತ್ತಮಾಃ ।
ಉವಾಚ ಭಗವಾಂಸ್ತುಷ್ಟಸ್ತ್ವಗಸ್ತ್ಯಮೃಷಿಸತ್ತಮಂ ॥ ೧೯೩ ॥

॥ ಬ್ರಹ್ಮೋವಾಚ ॥

ದೇವಕಾರ್ಯಂ ತು ಭವತಾ ದಾನವಾನಾಂ ವಿನಾಶನಂ ।
ಯತ್ತ್ವಯಾ ಕಾರಿತಂ ದೇವ ತೇನ ತುಷ್ಟೋಽಸ್ಮಿ ತೇ ಮುನೇ ॥ ೧೯೪ ॥

ಅಭಿಪ್ರೇತೋ ವರೋ ಯಸ್ತೇ ಯಾಚಯಸ್ವ ದದಾಮಿ ತಂ ।
ಏವಮುಕ್ತಸ್ತದಾಽಗಸ್ತ್ಯಃ ಪ್ರಣಿಪಾತಪುರಃಸರಂ ॥ ೧೯೫ ॥

ಇಹಸ್ಥೇನ ಮಯಾ ದೇವ ದೇವಕಾರ್ಯಮಿದಂ ಕೃತಂ ।
ಸರ್ವಾಶ್ರಮಾಣಾಂ ಪ್ರವರೋ ಭವತ್ವೇಷ ಮಮಾಶ್ರಮಃ । ॥ ೧೯೬ ॥

ತ್ವಯಾ ಚೋಕ್ತಸ್ತು ಭಗವನ್ಭವಿತಾ ನಾತ್ರ ಸಂಶಯಃ ॥ ೧೯೭ ॥

---

೧೯೨. ಜ್ಞಾತಿಗಳಿಗೋಸ್ಕರ ಭಗೀರಥನು ಗಂಗೆಯನ್ನು ತರುವನು. ಆಗ ಆ ಗಂಗೆಯಿಂದ ಸಮುದ್ರವು ತುಂಬಿಕೊಳ್ಳುತ್ತದೆ.

೧೯೩. ಈರೀತಿ ಬ್ರಹ್ಮನು ಹೇಳಿ ಆ ದೇವತೆಗಳನ್ನು ಕಳುಹಿಸಿಬಿಟ್ಟನು. ಆಗ ಬ್ರಹ್ಮನು ಸಂತೋಷಪಟ್ಟು ಅಗಸ್ತ್ಯನಿಗಿಂತೆಂದನು.

೧೯೪ ಬ್ರಹ್ಮನು ಹೇಳಿದನು :—ಎಲೈ ಋಷಿಯೇ, ದೇವಕಾರ್ಯವನ್ನೂ, ದಾನವರ ನಾಶವನ್ನೂ, ನೀನು ಮಾಡಿದೆ. ಅದರಿಂದ ಸಂತೋಷಗೊಂಡಿದ್ದೇನೆ.

೧೯೫—೧೯೭. ಎಲೈ ಋಷಿಯೇ, ನಿನಗೆ ಬೇಕಾದ ವರವನ್ನು ಕೇಳಿಕೋ, ಕೊಡುತ್ತೇನೆ. ಎನ್ನಲು ಅಗಸ್ತ್ಯನು ನಮಸ್ಕರಿಸಿ ಸ್ವಾಮಿ, ಇಲ್ಲಿದ್ದುಕೊಂಡು ನಾನು ದೇವಕಾರ್ಯವನ್ನು ಮಾಡಿದೆನು. ಆದ್ದರಿಂದ ಈ ನನ್ನ ಆಶ್ರಮವು ಎಲ್ಲಾ ಆಶ್ರಮಗಳಿಗೂ ಶ್ರೇಷ್ಠವಾದುದಾಗಲಿ. ಸ್ವಾಮಿ, ನೀನು ಹೇಳಿದರೆ ಅದು ಹಾಗಾಗುವುದರಲ್ಲಿ ಸಂಶಯವಿಲ್ಲ.

॥ ಬ್ರಹ್ಮೋವಾಚ ॥

**ಯಾತ್ರಾಂ ತು ಪುಷ್ಕರೇ ಕೃತ್ವಾ ಇಹಾಗತ್ಯ ನರಾಸ್ತು ಯೇ ।**
**ಇಹ ಕುಂಡೇ ತು ಯೇ ಸ್ನಾನಂ ತರ್ಪಣಂ ಪಿತೃದೇವಯೋಃ ॥ ೧೯೮ ॥**

**ಅರ್ಚನಂ ಚೈವ ದೇವೇಷು ಸರ್ವಮಕ್ಷಯಕಾರಕಂ ।**
**ಅನ್ನಂ ಚೋಚ್ಚಾವಚಂ ಗೃಹ್ಯ ಶಷ್ಕುಲೀಃ ಪೂಪಕಾಂಸ್ತಥಾ ॥ ೧೯೯ ॥**

**ದಾಸ್ಯಂತಿ ದ್ವಿಜಮುಖ್ಯೇಭ್ಯಸ್ತೇಷಾಂ ವಾಸಸ್ತ್ರಿವಿಷ್ಟಪೇ ।**
**ಶ್ರಾದ್ಧೇನ ಪಿತರಸ್ತುಷ್ಟಾ ಯಾವದಾಭೂತಸಂಪ್ಲವಂ ॥ ೨೦೦ ॥**

**ಕಂದಮೂಲಫಲೈರ್ವಾಽಪಿ ತರ್ಪಯಿಷ್ಯಂತಿ ಯೇ ಮುನಿಂ ।**
**ಸಪ್ತರ್ಷಿಸ್ಥಾನಮಾಸಾದ್ಯ ಸ್ಥಾಸ್ಯಂತಿ ಶಾಶ್ವತೀಃ ಸಮಾಃ ॥ ೨೦೧ ॥**

**ಯಜ್ಞಪರ್ವತಮಾರೂಢೋ ದೃಷ್ಟ್ವಾ ಗಂಗಾವಿನಿರ್ಮಿತಂ ।**
**ಉದಙ್ಮುಖೀ ದೇವನದೀ ನಿರ್ಗತಾ ಪುಷ್ಕರಂ ಪ್ರತಿ ॥ ೨೦೨ ॥**

---

೧೯೮. ಬ್ರಹ್ಮನು ಹೇಳಿದನು:—ಪುಷ್ಕರ ಯಾತ್ರೆಯನ್ನು ಮಾಡಿ, ಇಲ್ಲಿಗೆ ಬಂದು ಯಾರು ಈ ಕುಂಡದಲ್ಲಿ ಸ್ನಾನಮಾಡಿ, ದೇವಪಿತೃತರ್ಪಣವನ್ನು ಮಾಡಿ ಪೂಜೆಮಾಡುತ್ತಾರೆಯೋ, ಅದೆಲ್ಲವೂ ಅಕ್ಷಯವಾಗುತ್ತದೆ.

೧೯೯–೨೦೦. ಬಗೆಬಗೆಯಾದ ಅನ್ನವನ್ನೂ, ಚಕ್ಕುಲಿಯನ್ನೂ, ಸಿಹಿ ತಿಂಡಿಗಳನ್ನೂ ಬ್ರಾಹ್ಮಣರಿಗೆ ಕೊಡುತ್ತಾರೆಯೋ ಅವರು ಸ್ವರ್ಗವನ್ನು ಹೊಂದುತ್ತಾರೆ ಅಲ್ಲಿ ಶ್ರಾದ್ಧ ಮಾಡುವುದರಿಂದ ಪಿತೃಗಳು ಸಂತೋಷಗೊಂಡು ಪ್ರಪಂಚವಿರುವವರೆವಿಗೂ ಸ್ವರ್ಗದಲ್ಲಿ ಸುಖಿಸುತ್ತಾರೆ.

೨೦೧. ಯಾರು ಗೆಡ್ಡೆ, ಗೆಣಸುಗಳಿಂದ ಅಲ್ಲಿರುವ ಮುನಿಗಳಿಗೆ ತೃಪ್ತಿಯನ್ನುಂಟುಮಾಡುತ್ತಾರೋ ಅವರು ಸಪ್ತರ್ಷಿಗಳ ಸ್ಥಾನವನ್ನು ಹೊಂದಿ ಶಾಶ್ವತವಾಗಿರುತ್ತಾರೆ.

೨೦೨-೨೦೩. ಯಜ್ಞಪರ್ವತವನ್ನು ಹತ್ತಿ ಗಂಗೆಯು ಹೊರಡುವ ಜಾಗವನ್ನು ನೋಡಬೇಕು. ಅಲ್ಲಿ ಆ ಗಂಗೆಯು ಉತ್ತರಮುಖವಾಗಿ ಪುಷ್ಕರಕ್ಕೆ ಹೋಗುತ್ತದೆ.

ಅತ್ರಾಭಿಷೇಕಂ ಯಃ ಕುರ್ಯಾತ್ಪಿತೃದೇವಾರ್ಚನೇ ರತಃ ।
ಅಶ್ವಮೇಧಫಲಂ ತಸ್ಯ ಭವೇದತ್ರ ನ ಸಂಶಯಃ ॥ ೨೦೩ ॥

ಯಸ್ತ್ವೇಕಂ ಭೋಜಯೇದ್ವಿಪ್ರಂ ಕೋಟಿರ್ಭವತಿ ಭೋಜಿತಾ ।
ಅಕ್ಷಯಂ ತ್ವನ್ನಪಾನಂ ಚ ಅತ್ರ ದತ್ತಂ ಮುನೀಶ್ವರ ॥ ೨೦೪ ॥

ಯಂ ಯಮಿಚ್ಛತಿ ಕಾಮಂ ತು ಸರ್ವಸ್ತಸ್ಯ ಚ ಸಿಧ್ಯತಿ ।
ನ ವಿಯೋನಿಂ ವ್ರಜತ್ಯತ್ರ ಸ್ನಾತಮಾತ್ರೋ ನರೋ ಭುವಿ ॥ ೨೦೫ ॥

ಸ್ಥಾನಾನಾಂ ಪರಮಂ ಸ್ಥಾನಂ ತೀರ್ಥಾನಾಂ ತೀರ್ಥಮುತ್ತಮಂ ।
ಮಯಾ ದತ್ತಂ ಮುನಿಶ್ರೇಷ್ಠ ಭವಿಷ್ಯತಿ ನ ಸಂಶಯಃ ॥ ೨೦೬ ॥

ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷಸ್ಯ ಚ ।
ಅತ್ರೈವ ಸ್ನಾತಮಾತ್ರಸ್ಯ ಸರ್ವಮೇತತ್ಪ್ರಣಶ್ಯತಿ ॥ ೨೦೭ ॥

---

ಈ ನದಿಯಲ್ಲಿ ಸ್ನಾನಮಾಡಿ, ಪಿತೃದೇವತೆಗಳಿಗೆ ಪೂಜೆಮಾಡಿದರೆ, ಅಶ್ವಮೇಧಫಲ ಬರುತ್ತದೆ. ಸಂಶಯವಿಲ್ಲ.

೨೦೪. ಅಲ್ಲಿ ಯಾವನು ಒಬ್ಬನನ್ನಾದರೂ ಊಟಮಾಡಿಸಿದರೆ ಕೋಟಿ ಜನಕ್ಕೆ ಅನ್ನಹಾಕಿದ ಫಲವು ಬರುತ್ತದೆ. ಅಲ್ಲಿ ಕೊಟ್ಟ ಅನ್ನ, ನೀರುಗಳು ಅಕ್ಷಯವಾಗುತ್ತದೆ.

೨೦೫. ಅವನು ಯಾವಯಾವುದನ್ನು ಅಪೇಕ್ಷಿಸುತ್ತಾನೆಯೋ ಅವನಿಗೆ ಅವೆಲ್ಲವೂ ಸಿದ್ಧಿಸುತ್ತವೆ. ಅಲ್ಲಿ ಸ್ನಾನಮಾಡಿದರೆ ಮುಂದೆ ಕೆಟ್ಟ ಜನ್ಮವನ್ನು ಹೊಂದುವುದಿಲ್ಲ.

೨೦೬. ಸ್ಥಾನಗಳಿಗೆಲ್ಲಾ ಇದು ಉತ್ತಮ ಸ್ಥಾನವು. ತೀರ್ಥಗಳಿಗೆಲ್ಲಾ ಉತ್ತಮ ತೀರ್ಥವು. ನಾನು ಹೇಗೆ ವರವನ್ನು ಕೊಟ್ಟಿದ್ದೇನೆಯೋ ಹಾಗೆಯೇ ಆಗುತ್ತದೆ. ಸಂಶಯವಿಲ್ಲ.

೨೦೭. ಹೆಂಗಸಿಗಾಗಲಿ, ಗಂಡಸಿಗಾಗಲಿ, ಹುಟ್ಟಿದ ಮೊದಲುಗೊಂಡು ಮಾಡಿದ ಪಾಪವು ಇಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ನಾಶವಾಗುತ್ತದೆ.

ಏವಮುಕ್ತ್ವಾ ತು ಭಗವಾನ್ಬ್ರಹ್ಮಾ ಲೋಕಪಿತಾಮಹಃ ।
ಜಗಾಮಾಮಂತ್ರ್ಯ ಸ ಮುನಿಮಗಸ್ತ್ಯಂ ಮುನಿಸತ್ತಮಂ ॥ ೨೦೮ ॥

ಅಗಸ್ತ್ಯೋಽಪಿ ಸ್ಥಿತಸ್ತತ್ರ ಆಶ್ರಮೇ ಸ್ವೇ ಪರಂತಪಃ ।
ಅಗಸ್ತ್ಯಸ್ಯಾಶ್ರಮೋತ್ಪತ್ತಿರ್ಮಯಾ ತೇ ಪರಿಕೀರ್ತಿತಾ ॥ ೨೦೯ ॥

ಸಪ್ತರ್ಷೀಣಾಮಾಶ್ರಮಂ ತೇ ಕೀರ್ತಯಿಷ್ಯೇ ಕುರೂದ್ವಹ ।
ಅತ್ರಿರ್ವಸಿಷ್ಠೋ ಭಗವಾನ್ಪುಲಸ್ತ್ಯಃ ಪುಲಹಃ ಕ್ರತುಃ ॥ ೨೧೦ ॥

ಅಂಗಿರಾ ಗೌತಮಶ್ಚೈವ ಸುಮತಿಃ ಸುಮುಖಸ್ತಥಾ ।
ವಿಶ್ವಾಮಿತ್ರಃ ಸ್ಥೂಲಶಿರಾಃ ಸಂವರ್ತಶ್ಚ ಪ್ರತರ್ದನಃ ॥ ೨೧೧ ॥

ರೈಭ್ಯೋ ಬೃಹಸ್ಪತಿಶ್ಚೈವ ಚ್ಯವನಃ ಕಶ್ಯಪೋ ಭೃಗುಃ ।
ದುರ್ವಾಸಾ ಜಮದಗ್ನಿಶ್ಚ ಮಾರ್ಕಂಡೇಯೋಽಥ ಗಾಲವಃ ॥ ೨೧೨ ॥

ಉಶನಾ ಚ ಭರದ್ವಾಜೋ ಯವಕ್ರೀತಮುನಿಸ್ತಥಾ ।
ಸ್ಥೂಲಾಕ್ಷೋ ಮಕರಾಕ್ಷಶ್ಚ ಕಣ್ವೋ ಮೇಧಾತಿಥಿಸ್ತಥಾ ॥ ೨೧೩ ॥

ನಾರದಃ ಪರ್ವತಶ್ಚೈವ ಸ್ವಗಂಧೀ ಚ್ಯವನೋ ದ್ವಿಜಃ ।
ತೃಣಾಂಬುಃ ಸವಲೋ ಧೌಮ್ಯಃ ಶತಾನಂದೋಽಕೃತವ್ರಣಃ ॥ ೨೧೪ ॥

---

೨೦೮. ಹೀಗೆಂದು ಲೋಕಕ್ಕೆ ಪಿತಾಮಹನಾದ ಬ್ರಹ್ಮನು ಆ ಅಗಸ್ತ್ಯನಿಗೆ ಹೇಳಿ ಹೊರಟುಹೋದನು.

೨೦೯. ಅಗಸ್ತ್ಯನೂ ಕೂಡ ಆ ಆಶ್ರಮದಲ್ಲಿಯೇ ಇದ್ದುಕೊಂಡಿದ್ದನು. ಅಗಸ್ತ್ಯಾಶ್ರಮದ ಉತ್ಪತ್ತಿಯನ್ನು ನಿನಗೆ ಹೇಳಿದ್ದೇನೆ.

೨೧೦—೨೧೬. ಸಪ್ತರ್ಷಿಗಳ ಆಶ್ರಮವನ್ನು ಹೇಳುತ್ತೇನೆ ಕೇಳು. ಅತ್ರಿ, ವಸಿಷ್ಠ, ಪುಲಸ್ತ್ಯ, ಪುಲಹ, ಕ್ರತು, ಅಂಗೀರಸ, ಗೌತಮ, ಸುಮತಿ, ಸುಮುಖ, ವಿಶ್ವಾಮಿತ್ರ, ಸ್ಥೂಲಶಿರ, ಸಂವರ್ತ, ಪ್ರತರ್ದನ, ರೈಭ್ಯ, ಬೃಹಸ್ಪತಿ, ಚ್ಯವನ, ಕಶ್ಯಪ, ಭೃಗು, ದೂರ್ವಾಸ, ಜಮದಗ್ನಿ, ಮಾರ್ಕಂಡೇಯ, ಗಾಲವ, ಉಶನಾ, ಭರದ್ವಾಜ, ಯವಕ್ರೀತ, ಸ್ಥೂಲಾಕ್ಷ, ಮಕರಾಕ್ಷ, ಕಣ್ವ, ಮೇಧಾತಿಥಿ, ನಾರದ, ಪರ್ವತ, ಸ್ವಗಂಧೀ, ಚ್ಯವನ, ತೃಣಾಂಬು, ಸವಲ, ಧೌಮ್ಯ, ಶತಾನಂದ, ಅಕೃತವ್ರಣ,

ಜಾಮದಗ್ನಿಸ್ತಥಾ ರಾಮೋ ಹ್ಯಷ್ಟಕಶ್ಚೈವಮಾದಯಃ ।
ಕೃಷ್ಣದ್ವೈಪಾಯನಶ್ಚೈವ ಪುತ್ರಶಿಷ್ಯೈಃ ಸಮನ್ವಿತಃ ॥ ೨೧೫ ॥

ಏತೇ ತು ಪುಷ್ಕರಂ ಪ್ರಾಪ್ಯ ಸಪ್ತರ್ಷೀಣಾಂ ತಥಾಶ್ರಮೇ ।
ಚೇಷ್ಟಿತಾ ನಿಯಮೈರ್ಯುಕ್ತಾ ದಮಯುಕ್ತಾಸ್ತಪಸ್ವಿನಃ ॥ ೨೧೬ ॥

ಇಂದ್ರಿಯಾಭಿಜಯೋ ಧೈರ್ಯಂ ತಪಃ ಸತ್ಯಂ ಕ್ಷಮಾರ್ಜವಂ ।
ದಯಾ ದಾನಂ ತಪಶ್ಚೈವ ಸರ್ವೇಷಾಂ ತತ್ಪ್ರತಿಷ್ಠಿತಂ ॥ ೨೧೭ ॥

ಇಹ ಯತ್ಕ್ರಿಯತೇ ಕರ್ಮ ತತ್ಪರತ್ರೋಪಭುಜ್ಯತೇ ।
ಜ್ಞಾತ್ವಾ ತದಿತ್ಥಂ ಮುನಯಃ ಪರಮಾರ್ಥಪರಾಯಣಾಃ ॥ ೨೧೮ ॥

ನ ತತ್ರ ನಾಸ್ತಿಕಾ ಯಾಂತಿ ನ ಸ್ತೇನಾ ನಾಜಿತೇಂದ್ರಿಯಾಃ ।
ನ ನೃಶಂಸಾ ನ ಪಿಶುನಾ ನ ಕೃತಘ್ನಾ ನ ಮಾನಿನಃ ॥ ೨೧೯ ॥

ಸತ್ಯಾಸ್ತಪಸ್ವಿನಃ ಶೂರಾ ದಯಾವಂತಃ ಕ್ಷಮಾನ್ವಿತಾಃ ।
ಯಜ್ವಾನೋ ಯಜ್ಞಶೀಲಾಶ್ಚ ತತ್ರ ಗಚ್ಛಂತಿ ಪುಷ್ಕರಂ ॥ ೨೨೦ ॥

---

ಜಾಮದಗ್ನಿ, ರಾಮ, ಅಷ್ಟಕ, ವ್ಯಾಸ, ಪರಾಶರ, ಅವನ ಶಿಷ್ಯರು ಇವರೆಲ್ಲರೂ ಪುಷ್ಕರಕ್ಕೆ ಬಂದು, ಸಪ್ತರ್ಷಿಗಳ ಆಶ್ರಮದಲ್ಲಿ ನಿಯಮದಿಂದಲೂ ಇಂದ್ರಿಯನಿಗ್ರಹದಿಂದಲೂ ಇರುತ್ತಾರೆ.

೨೧೭. ಇಂದ್ರಿಯನಿಗ್ರಹ, ಧೈರ್ಯ, ತಪಸ್ಸು, ಸತ್ಯ, ಋಜುತೆ, ದಯೆ, ದಾನ ಇವು ಅವರೆಲ್ಲರಲ್ಲಿಯೂ ಇರುತ್ತವೆ.

೨೧೮. ಇಲ್ಲಿ ಯಾವ ಕೆಲಸವನ್ನು ಮಾಡಿದರೂ ಅದನ್ನು ಪರದಲ್ಲಿ ಅನುಭವಿಸುತ್ತಾರೆ. ಇದನ್ನು ತಿಳಿದು ಆ ಋಷಿಗಳು ಪರಮಾರ್ಥದಲ್ಲಿ ಆಸಕ್ತರಾಗುತ್ತಾರೆ.

೨೧೯. ನಾಸ್ತಿಕರು, ಕಳ್ಳರು, ಜಿತೇಂದ್ರಿಯರಲ್ಲದವರು, ಘಾತುಕರು, ಚಾಡಿಕೋರರು, ಉಪಕಾರಸ್ಮರಣೆಯಿಲ್ಲದವರು, ಹೆಮ್ಮೆಯುಳ್ಳವರು, ಅಲ್ಲಿಗೆ ಹೋಗಲಾರರು.

೨೨೦. ಸತ್ಯವಂತರು, ತಪಸ್ವಿಗಳು, ಶೂರರು, ದಯೆ, ಕ್ಷಮೆಯುಳ್ಳವರು, ಯಾಗಮಾಡಿದವರು, ಯಾಗಮಾಡುವವರು ಇವರು ಆ ಪುಷ್ಕರಕ್ಕೆ ಹೋಗುತ್ತಾರೆ.

ನ ರೋಗೋ ನ ಜರಾ ಮೃತ್ಯುರ್ಭವಿತಾ ತು ಮಹಾತ್ಮನಾಂ ।
ನ ಕ್ಷುತ್ಪಿಪಾಸೇ ನ ಗ್ಲಾನಿಃ ಸರ್ವೇಷಾಂ ತು ದ್ವಿಜನ್ಮನಾಂ ॥ ೨೨೧ ॥

ನ ತತ್ರ ಮೂಢಾ ವಿಶಂತಿ ಪುರುಷಾ ವಿಷಯಾತ್ಮಕಾಃ ।
ದಂಭಲೋಭಮದದ್ರೋಹಕ್ರೋಧಮೋಹೈರಭಿದ್ರುತಾಃ ॥ ೨೨೨ ॥

ನಿರ್ಮಮಾ ನಿರಹಂಕಾರಾಸ್ತತ್ರ ಗಚ್ಛಂತಿ ಪುಷ್ಕರೇ ।
ತುಲ್ಯಮಾನಾಪಮಾನಾಶ್ಚ ನಿರ್ದ್ವಂದ್ವಾಃ ಸಂಯತೇಂದ್ರಿಯಾ ॥ ೨೨೩ ॥

ಧ್ಯಾನಯೋಗಪರಾಶ್ಚೈವ ತೇ ತು ಗಚ್ಛಂತಿ ಪುಷ್ಕರಂ ।
ಆಶ್ರಮೇಷು ಯಥೋಕ್ತೇಷು ಯಥೋಕ್ತಂ ವೈ ದ್ವಿಜಾತಯಃ ॥ ೨೨೪ ॥

ಯೇ ವರ್ತಂತೇಽಪಮಂತ್ರಾಸ್ತು ತೇಷಾಂ ಲೋಕಾ ಮಹೋದಯಾಃ ।
ಯೇ ನ ಹಿಂಸಂತಿ ಭೂತಾನಿ ಕರ್ಮಣಾ ಮನಸಾ ಗಿರಾ ॥ ೨೨೫ ॥

---

೨೨೧. ಅಲ್ಲಿರುವವರಿಗೆ ರೋಗ, ಮುಪ್ಪು, ಸಾವುಗಳು ಬರುವುದೇ ಇಲ್ಲ. ಹಸಿವು ಬಾಯಾರಿಕೆಗಳು, ತೇಜೋಹಾನಿ (ಬಳಲಿಕೆ) ಗಳು ಉಂಟಾಗುವುದೇ ಇಲ್ಲ.

೨೨೨. ಅಲ್ಲಿಗೆ ಮೂಢರು, ವಿಷಯಲಂಪಟರು, ದಂಭ, ಲೋಭ, ಮದ, ದ್ರೋಹ, ಕ್ರೋಧ, ಮೋಹಗಳುಳ್ಳವರು ಹೋಗಲಾರರು.

೨೨೩. ಮಮತೆಯಿಲ್ಲದವರೂ, ಅಹಂಕಾರವಿಲ್ಲದವರೂ ಪುಷ್ಕರಕ್ಕೆ ಹೋಗುತ್ತಾರೆ. ಮಾನಾವಮಾನಗಳೂ, ಶೀತೋಷ್ಣಾದಿದ್ವಂದ್ವಗಳು ಒಂದೇ ಸಮವಾಗಿ ಉಳ್ಳವರು, ಜಿತೇಂದ್ರಿಯರು, ಧ್ಯಾನಪರರು, ಯೋಗಪರರು ಈ ಪುಷ್ಕರಕ್ಕೆ ಹೋಗುತ್ತಾರೆ.

೨೨೪. ಯಾರು ತಮ್ಮ ತಮ್ಮ ಆಶ್ರಮಗಳ ಕರ್ಮಗಳನ್ನು ಸರಿಯಾದ ಸ್ಥಿತಿಯಲ್ಲಿ ಮಾಡುತ್ತಾರೆಯೋ, ಯೋಚನೆಯಿಲ್ಲದೆ ಯಾರಿರುವರೋ ಅವರಿಗೆ ಉತ್ತಮವಾದ ಲೋಕಗಳುಂಟು.

೨೨೫—೨೨೬. ಯಾರು ಪ್ರಾಣಿಗಳನ್ನು ಹಿಂಸಿಸುವುದಿಲ್ಲವೋ, ಮನೋವಾಕ್ಕಾಯಗಳಿಂದ ಯಾರು ಘಾತಕರಾಗಿರುವುದಿಲ್ಲವೋ, ಯಾವಾಗಲೂ ಒಳ್ಳೆಯ

ಅನೃಶಂಸತರಾಃ ಸಂತಃ ಸರ್ವದಾ ಚ ಪ್ರಿಯಂವದಾಃ ।
ಅಗ್ನಿಹೋತ್ರರತಾ ನಿತ್ಯಂ ನಿತ್ಯಂ ಚಾತಿಥಿಪೂಜಕಾಃ ॥ ೨೨೬ ॥

ನಿತ್ಯಂ ಸ್ವಾಧ್ಯಾಯಶೀಲಾಶ್ಚ ನಿತ್ಯಂ ಸ್ನಾನಪರಾಯಣಾಃ ।
ಮಾತೃವತ್ಸ್ವಸೃವಚ್ಚೈವ ತಥಾ ದುಹಿತೃವಚ್ಚ ಹ ॥ ೨೨೭ ॥

ಪರದಾರಾಂಶ್ಚ ಪಶ್ಯಂತಿ ಪರದ್ರವ್ಯಾಣಿ ಲೋಷ್ಟವತ್ ।
ಯೇಽಧಿಕ್ಷಿಪ್ತಾ ನ ಕುಪ್ಯಂತಿ ನ ಹಿಂಸಂತಿ ಚ ಹಿಂಸಿತಾಃ ॥ ೨೨೮ ॥

ಸಮದುಃಖಸುಖಾ ದಾಂತಾ ಮಹಾತ್ಮಾನೋ ಜಿತೇಂದ್ರಿಯಾಃ ।
ತೇ ಹಿ ಸರ್ವೇ ಪ್ರಪಶ್ಯಂತಃ ಪುರಾ ಚೇರುರ್ಮಹೀಮಿಮಾಂ ॥ ೨೨೯ ॥

ಸಮಾಧಿನಾ ಜಿಗೀಷಂತೋ ಬ್ರಹ್ಮಲೋಕಂ ಸನಾತನಂ ।
ಅಥಾಭವದನಾವೃಷ್ಟಿಃ ಕದಾಚಿನ್ಮಹತೀ ತದಾ ॥ ೨೩೦ ॥

ಕೃಚ್ಛ್ರಪ್ರಾಯೋ ಹ್ಯಭೂತ್ತತ್ರ ಸರ್ವಲೋಕಃ ಕ್ಷುಧಾರ್ದಿತಃ
ತತೋ ನಿರನ್ನೇ ಲೋಕೇಽಸ್ಮಿಂಶ್ಚಾತ್ಮಾನಂ ತೇ ಪರೀಪ್ಸವಃ ॥ ೨೩೧ ॥

---

ಮಾತನ್ನು ಆಡುತ್ತಾರೆಯೋ, ಯಾರು ನಿತ್ಯವೂ ಅಗ್ನಿಹೋತ್ರವನ್ನು ಮಾಡುತ್ತಾರೆಯೋ, ನಿತ್ಯವೂ ಯಾರು ಸ್ನಾನಮಾಡುತ್ತಾರೆಯೋ, ಯಾರು ಪರರ ಹೆಂಡತಿಯನ್ನು ತಾಯಿ, ಸೋದರಿಯರು, ಹೆಣ್ಣುಮಕ್ಕಳಂತೆ ಕಾಣುತ್ತಾರೆಯೋ, ಪರದ್ರವ್ಯವನ್ನು ಮಣ್ಣುಹೆಂಟೆಯಂತೆ ಕಾಣುತ್ತಾರೆಯೋ, ಇಂತಹವರು ಪುಷ್ಕರಕ್ಕೆ ಹೋಗುತ್ತಾರೆ.

೨೨೮-೨೨೯. ಯಾರು ತಮ್ಮನ್ನು ಬೈದರೂ, ಕೋಪಿಸಿಕೊಳ್ಳುವುದಿಲ್ಲವೋ ಹಿಂಸೆಮಾಡಿದರೂ ತಾವು ಹಿಂಸಿಸುವುದಿಲ್ಲವೋ, ಸುಖ, ದುಃಖಗಳೂ ಒಂದೇಸಮನಾಗಿವೆಯೋ, ದಮನರಾಗಿ ಜಿತೇಂದ್ರಿಯರಾಗಿದ್ದಾರೆಯೋ, ಅವರು ಈ ಪುಷ್ಕರವನ್ನು ಹೊಂದಿ ಸಂಚರಿಸಿದರು.

೨೩೦-೨೩೧. ಸಮಾಧಿಯಿಂದ ಬ್ರಹ್ಮಲೋಕವನ್ನು ಹೊಂದುವಂಥ ಅವರುಗಳು ಭೂಮಿಯನ್ನು ಸುತ್ತುತ್ತಿದ್ದರು. ಒಂದುಸಾರಿ ಮಳೆಯಿಲ್ಲದೆ ಕ್ಷಾಮವು ಉಂಟಾಗಿ ಲೋಕವೆಲ್ಲ ಹಸಿವಿನಿಂದ ಕೂಡಿ ಕಷ್ಟಗೊಂಡಿತು. ಆಗ ಈ ಲೋಕವು ಅನ್ನವಿಲ್ಲದೆ ಕಷ್ಟಪಡುತ್ತಿರಲು ತಮ್ಮನ್ನು ಪರೀಕ್ಷೆ ಮಾಡಿಕೊಳ್ಳಲು ಇಚ್ಛೆಪಟ್ಟರು.

**ಮೃತಂ ಕುಮಾರಮಾದಾಯ ಕೃಚ್ಛ್ರಪ್ರಾಯಾಸ್ತದಾಽಪಚನ್ ।**
**ಅಥ ಪರ್ಯಟಚರತ್ತತ್ರ ಕ್ಲಿಶ್ಯಮಾನಾನ್ಷೀ ತಾನೃಷೀನ್ ।**
**ದೃಷ್ಟ್ವಾ ರಾಜಾ ವಿಷಾದಾರ್ತಃ ಪ್ರೋವಾಚೇದಂ ವಚಸ್ತದಾ　　॥ ೨೩೨ ॥**

**॥ ರಾಜೋವಾಚ ॥**

**ಪ್ರತಿಗ್ರಹೋ ಬ್ರಾಹ್ಮಣಾನಾಂ ಸೃಷ್ಟಾ ವೃತ್ತಿರನಿಂದಿತಾ ।**
**ತಸ್ಮಾತ್ಪ್ರತಿಗ್ರಹಾನ್ಮತ್ತೋ ಗೃಹ್ಣೀಧ್ವಂ ಮುನಿಸತ್ತಮಾಃ　　॥ ೨೩೩ ॥**

**ವರಾನ್ಗ್ರಾಮಾನ್ವ್ರೀಹಿಯವಾನ್ರಸಾನ್ರತ್ನಾನಿ ಕಾಂಚನಂ ।**
**ಗಾಶ್ಚ ಧೇನುಂ ತತಸ್ಸರ್ವಂ ಮಾ ಮಾಂಸಂ ಪಚತ ದ್ವಿಜಾಃ　　॥ ೨೩೪ ॥**

**॥ ಋಷಯಃ ಊಚುಃ ॥**

**ರಾಜನ್ಪ್ರತಿಗ್ರಹೋ ಘೋರೋ ಮಧ್ವಾಸ್ವಾದೋ ವಿಷೋಪಮಃ ।**
**ತಜ್ಜಾನಮಾನಃ ಕಸ್ಮಾತ್ತ್ವಂ ಕುರುಷೇಽಸ್ಮತ್ಪ್ರಲೋಭನಂ　॥ ೨೩೫ ॥**

---

೨೩೨. ಇಂತಹವರು ಸತ್ತ ಒಬ್ಬ ಹುಡುಗನನ್ನು ತಂದು ಕಷ್ಟದಲ್ಲಿದ್ದುಕೊಂಡು ಅದನ್ನು ಬೇಯಿಸಿದರು. ಅದರಿಂದ ಅಲ್ಲಿ ಕಷ್ಟಪಡುತ್ತಿರುವ ಆ ಋಷಿಗಳನ್ನು ಸಂತೋಷಪಡಿಸಿದರು. ಇದನ್ನು ನೋಡಿ ಅಲ್ಲಿಯ ರಾಜನು ದುಃಖಪಟ್ಟು ಈ ಮಾತನ್ನು ಹೇಳಿದನು.

೨೩೩-೨೩೪. ರಾಜನು ಹೇಳಿದನು :—ದಾನ ತೆಗೆದುಕೊಳ್ಳುವುದು ಬ್ರಾಹ್ಮಣರಿಗೆ ಒಳ್ಳೆಯ ವೃತ್ತಿಯಷ್ಟೆ? ಆದ್ದರಿಂದ ಎಲೈ ಮುನಿಗಳಿರ, ನನ್ನಿಂದ ದಾನ ತೆಗೆದುಕೊಳ್ಳಿರಿ. ನಾನು ನಿಮಗೆ ಗ್ರಾಮಗಳನ್ನೂ, ಬತ್ತ, ಯವ, ರಸ, ರತ್ನ, ಚಿನ್ನ, ಹಸು, ಎಲ್ಲವನ್ನೂ ಕೊಡುತ್ತೇನೆ. ನೀವು ಮಾತ್ರ ಮಾಂಸವನ್ನು ಬೇಯಿಸಬೇಡಿರಿ.

೨೩೫. ಋಷಿಗಳು ಹೇಳಿದರು :—ಎಲೈ ರಾಜನೇ, ದಾನ ತೆಗೆದುಕೊಳ್ಳುವುದು ಜೇನಿನಂತೆ ರುಚಿಯಾಗಿದ್ದರೂ ವಿಷಕ್ಕೆ ಸಮಾನವು. ಅದು ನಿನಗೆ ಗೊತ್ತಿದ್ದರೂ ನಮಗೇಕೆ ಆಸೆ ಹುಟ್ಟಿಸುತ್ತೀಯೆ ?

ದಶಸೂನಾಸಮಶ್ಚಕ್ರೀ ದಶಚಕ್ರೀ ಸಮೋ ಧ್ವಜಃ ।
ದಶಧ್ವಜಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ ॥ ೨೩೬ ॥

ದಶಸೂನಾಸಹಸ್ರಾಣಿ ಯೋ ವಾಹಯತಿ ಶೌಂಡಿಕಃ ।
ತೇನ ತುಲ್ಯಸ್ತತೋ ರಾಜಾ ಘೋರಸ್ತಸ್ಯ ಪ್ರತಿಗ್ರಹಃ ॥ ೨೩೭ ॥

ಯೋ ರಾಜ್ಞಃ ಪ್ರತಿಗೃಹ್ಣಾತಿ ಬ್ರಾಹ್ಮಣೋ ಲೋಭಮೋಹಿತಃ ।
ತಾಮಿಸ್ರಾದಿಷು ಘೋರೇಷು ನರಕೇಷು ಸ ಪಚ್ಯತೇ ॥ ೨೩೮ ॥

ತದ್ಗಚ್ಛ ಕುಶಲಂ ತೇಽಸ್ತು ಸಹ ದಾನೇನ ಪಾರ್ಥಿವ ।
ಅನ್ಯೇಷಾಂ ದೀಯತಾಮೇತದಿತ್ಯುಕ್ತ್ವಾ ತೇ ವನಂ ಯಯುಃ ॥ ೨೩೯ ॥

---

೨೩೬-೨೩೭. ಕತ್ತರಿಸುವುದು, ಅರೆಯುವುದು, ಬೇಯಿಸುವುದು, ನೆನೆಸುವುದು, (ಕದಡುವುದು) ಕಸಬಳಿವುದು ಇವನ್ನು ನಿತ್ಯವೂ ಮಾಡುವುದು ಪಾಪ. ಇವಕ್ಕೆ ಪಂಚಸೂನವೆಂದು ಹೆಸರು. ಇಂತಹ ಪಾಪವನ್ನು ಮಾಡಿದ ಹತ್ತುಜನರಿಗೆ (ಹತ್ತುಜನ ಕಟುಕರಿಗೆ) ಒಬ್ಬ ಗಾಣಿಗನು ಸಮಾನನು. ಅಂತಹ ಹತ್ತುಜನ ಗಾಣಿಗರಿಗೆ ಒಬ್ಬ ಕಪಟಸನ್ಯಾಸಿಯು ಸಮನು. ಅಂತಹ ಹತ್ತು ಕಪಟಸನ್ಯಾಸಿಗಳಿಗೆ ಒಬ್ಬ ವೇಶ್ಯೆಯು ಸಮಳು. ಅಂತಹ ಹತ್ತುಜನ ವೇಶ್ಯೆಯರಿಗೆ ಒಬ್ಬ ರಾಜನು ಸಮನು. ಸೂನ ಎಂದರೆ ದನಗಳನ್ನು ಕತ್ತರಿಸುವ ಜಾಗ. ಅಂತಹ ಸಾವಿರ ಜಾಗಗಳಿಗೆ ಅಧಿಕಾರಿಯಾದವನು ಕಟುಕನು. ಒಂದುಲಕ್ಷ ಕಟುಕರಿಗೆ ಸಮನಾದವನು ರಾಜನು. ಆದ್ದರಿಂದ ರಾಜನು ಅಷ್ಟು ಪಾಪಿ ಎನ್ನಿಸಿಕೊಳ್ಳುವನು.

೨೩೮. ಯಾವನು ರಾಜನಿಂದ ದಾನ ತೆಗೆದುಕೊಳ್ಳುತ್ತಾನೆಯೋ ಆ ಆಶೆಯುಳ್ಳ ಬ್ರಾಹ್ಮಣನು ತಾಮಿಸ್ರವೇ ಮುಂತಾದ ಘೋರನರಕಗಳಲ್ಲಿ ಯಾತನೆಯನ್ನು ಹೊಂದುತ್ತಾನೆ.

೨೩೯. ನೀನು ಹೊರಡು. ನಿನಗೆ ಮಂಗಳವಾಗಲಿ. ನಿನ್ನ ದಾನಕ್ಕೂ ಮಂಗಳವಿರಲಿ. ಬೇರೆ ಯಾರಿಗಾದರೂ ಕೊಡು. ಹೀಗೆಂದು ಹೇಳಿ ಅವರು ಕಾಡಿಗೆ ಹೋದರು.

ಅಥ ರಾಜಸಮಾದೇಶಾತ್ತತ್ರ ಗತ್ವಾಥ ಮಂತ್ರಿಣಃ ।
ಉದುಂಬರಾಣಿ ವ್ಯಕಿರನ್ ಹೇಮಗರ್ಭಾಣಿ ಭೂತಲೇ　　॥ ೨೪೦ ॥

ತತೋ ಹ್ಯನ್ನಂ ವಿಚಿನ್ವಂತೋ ಹ್ಯಗೃಹ್ಣಂಸ್ತತ್ರ ತಾನ್ಯಪಿ ।
ಗುರೂಣೀಹ ವಿದಿತ್ವಾ ತು ನ ಗ್ರಾಹ್ಯಾಣ್ಯತ್ರಿರಬ್ರವೀತ್　　॥ ೨೪೧ ॥

॥ ಅತ್ರಿರುವಾಚ ॥

ನಾಸ್ಮಹೇ ಮೂಢವಿಜ್ಞಾನಾ ನಾಸ್ಮಹೇ ಮಂದಬುದ್ಧಯಃ ।
ಹೈಮಾನೀಮಾನಿ ಜಾನೀಮಃ ಪ್ರತಿಬುದ್ಧಾಃ ಸ್ಮ ಜ್ಞಾನಿನಃ　　॥ ೨೪೨ ॥

ಇಹೈವಾತ್ತಂ ವಸು ಪ್ರೀತ್ಯೈ ಪ್ರೇತ್ಯ ವೈ ಕಟುಕೋದಯಂ ।
ತಸ್ಮಾನ್ನ ಗ್ರಾಹ್ಯಮೇವೈತತ್ಸುಖಮಾನನ್ತ್ಯಮಿಚ್ಛತಾ　　॥ ೨೪೩ ॥

---

೨೪೦. ರಾಜನ ಅಪ್ಪಣೆಯಂತೆ ಮಂತ್ರಿಗಳು ಅಲ್ಲಿಗೆ ಹೋಗಿ ಅತ್ತಿಯ ಹಣ್ಣಿನೊಳಕ್ಕೆ ಚಿನ್ನದ ಚೂರುಗಳನ್ನು ಸೇರಿಸಿ ಅವನ್ನು ಅವರಿರುವ ಜಾಗದಲ್ಲಿ ಆ ಮರದ ಕೆಳಗೆ ಹಾಕಿದರು.

೨೪೧. ಅನಂತರ ಆಹಾರವನ್ನು ಹುಡುಕುತ್ತ ಅವರೆಲ್ಲರೂ ಅಲ್ಲಿಗೆ ಬಂದು ಈ ಹಣ್ಣುಗಳನ್ನು ನೋಡಿ ತೆಗೆದುಕೊಳ್ಳಲು ಅವು ಭಾರವಾಗಿದ್ದುವು. ಅತ್ರಿಯು ತೆಗೆದುಕೊಳ್ಳಬೇಡಿರೆಂದನು.

೨೪೨. ಅತ್ರಿಯು ಹೇಳಿದನು :—ನಾವು ವಿಮರ್ಶೆಯಿಲ್ಲದ ವಿಜ್ಞಾನಿಗಳಾಗ ಬಾರದು. ಬುದ್ಧಿವಂತರಲ್ಲದೆ ಇರಲೂ ಬಾರದು. ಇವುಗಳೊಳಗೆ ಚಿನ್ನವಿರಬೇಕು. ಜ್ಞಾನದಿಂದ ನೋಡಿದರೆ ಗೊತ್ತಾಗುವುದು.

೨೪೩. ತೆಗೆದುಕೊಂಡ ಹಣವು ಅಲ್ಲಿ ಪ್ರೀತಿ (ಸುಖ) ಯನ್ನೇನೋ ಉಂಟು ಮಾಡುತ್ತದೆ. ಸತ್ತನಂತರ ಕೆಟ್ಟದ್ದನ್ನು ಕೊಡುತ್ತವೆ. ಹೆಚ್ಚಾದ ಸುಖವು ಬೇಕಾದರೆ ಇದನ್ನು ತೆಗೆದುಕೊಳ್ಳಬಾರದು.

ಶತೇನ ಗುಣಿತಂ ನಿಷ್ಕಂ ಸಹಸ್ರೇಣ ಸಮನ್ವಿತಂ ।
ಯಶ್ಚಾನ್ಯತಃ ಪ್ರತೀಚ್ಛೇತ್ಸ ಪಾಪಿಷ್ಠಾಂ ಲಭತೇ ಗತಿಂ ॥ ೨೪೪ ॥

ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ವಾಸಸೀ ಸ್ತ್ರಿಯಃ ।
ನ ನೂನಂ ಕಸ್ಯ ಪರ್ಯಾಪ್ತಮಿತಿ ಮತ್ವಾ ಶಮಂ ವ್ರಜೇತ್ ॥ ೨೪೫ ॥

॥ ವಸಿಷ್ಠೋವಾಚ ॥

ಧರ್ಮಾರ್ಥಂ ಸಂಚಯೋ ಯಸ್ಯ ದ್ರವ್ಯಾಣಾಂ ಚ ನ ಶಸ್ಯತೇ ।
ತಪಸ್ಸಂಚಯ ಏವೇಹ ವಿಶಿಷ್ಟೋ ಧನಸಂಚಯಾತ್ ॥ ೨೪೬ ॥

ತ್ಯಜತಸ್ಸಂಚಯಾನ್ಸರ್ವಾನ್ಯಾಂತಿ ನಾಶಮುಪದ್ರವಾಃ ।
ನ ಹಿ ಸಂಚವಾನ್ಕಶ್ಚಿತ್ಸುಖೀ ಭವತಿ ಮಾನದ ॥ ೨೪೭ ॥

ಯಥಾ ಯಥಾ ನ ಗೃಹ್ಣಾತಿ ಬ್ರಾಹ್ಮಣಸ್ಸಂಪ್ರತಿಗ್ರಹಂ ।
ತಥಾ ತಥಾ ಹಿ ಸಂತೋಷಾದ್ಬ್ರಹ್ಮತೇಜೋವಿವರ್ಧತೇ ॥ ೨೪೮ ॥

---

೨೪೪. ನಾವು ತೆಗೆದುಕೊಂಡ ಚಿನ್ನಕ್ಕೆ ಪ್ರತಿಯಾಗಿ ಒಂದು ಲಕ್ಷದಷ್ಟನ್ನು ಕೊಡಬೇಕಾಗುತ್ತದೆ. ಅದನ್ನು ಬೇರೆಯವನಿಂದ ತೆಗೆದುಕೊಂಡರೆ ಅವನಿಗೆ ಪಾಪಿಷ್ಠ ಗತಿ ಬರುತ್ತದೆ.

೨೪೫. ಪ್ರಪಂಚದಲ್ಲಿ ಅಕ್ಕಿ, ಬತ್ತ, ಯವ, ಚಿನ್ನ, ಬಟ್ಟೆ, ಹೆಂಗಸರು ಮುಂತಾದುವು ಎಷ್ಟು ಕೊಟ್ಟರೂ ಯಾವನಿಗೂ ಸಾಕಾಗುವುದೇ ಇಲ್ಲ. ಅದನ್ನು ತಿಳಿದು ಶಾಂತನಾಗಿರಬೇಕು.

೨೪೬. ವಸಿಷ್ಠನು ಹೇಳಿದನು:—ಯಾವನು ಹಣವನ್ನು ಧರ್ಮಕ್ಕೋಸ್ಕರ ತೆಗೆದುಕೊಳ್ಳುತ್ತಾನೆಯೋ ಅದು ಉತ್ತಮವಲ್ಲ. ದುಡ್ಡನ್ನು ಕೂಡಿಹಾಕುವುದಕ್ಕಿಂತಲೂ ತಪಸ್ಸನ್ನು ಕೂಡಿಹಾಕಿಕೊಳ್ಳುವುದು ಮೇಲಾಗಿರುತ್ತದೆ.

೨೪೭. ದುಡ್ಡನ್ನು ಕೊಡುತ್ತಿರುವವನಿಗೆ ತೊಂದರೆಗಳೆಲ್ಲಾ ನಾಶಹೊಂದುತ್ತವೆ. ಹಣವನ್ನು ಕೂಡಿಹಾಕಿದವನೊಬ್ಬನೂ ಸುಖಿಯಾಗುವುದಿಲ್ಲ.

೨೪೮. ಬ್ರಾಹ್ಮಣನು ದಾನವನ್ನು ತೆಗೆದುಕೊಳ್ಳುವುದನ್ನು ಬಿಟ್ಟಹಾಗೆಲ್ಲಾ ಸಂತೋಷದಿಂದ ಬ್ರಹ್ಮತೇಜಸ್ಸು ಹೆಚ್ಚುತ್ತದೆ.

**ಅಕಿಂಚನತ್ವಂ ರಾಜ್ಯಂ ಚ ತುಲಯಾ ಸಮತೋಲಯನ್ ।**
**ಅಕಿಂಚನತ್ವಮಧಿಕಂ ರಾಜ್ಯಾದಪಿ ಜಿತಾತ್ಮನಃ ॥ ೨೪೯ ॥**

**॥ ಕಶ್ಯಪ ಉವಾಚ ॥**

**ಅನರ್ಥೋ ಬ್ರಾಹ್ಮಣಸ್ಯೈಷ ಯದರ್ಥನಿಚಯೋ ಮಹಾನ್ ।**
**ಅರ್ಥೈಶ್ವರ್ಯವಿಮೂಢೋ ಹಿ ಶ್ರೇಯಸೋ ಭ್ರಶ್ಯತೇ ದ್ವಿಜಃ ॥ ೨೫೦ ॥**

**ಅರ್ಥಸಂಪದ್ವಿಮೋಹಾಯ ವಿಮೋಹೋ ನರಕಾಯ ಚ ।**
**ತಸ್ಮಾದರ್ಥಮನರ್ಥಾಯ ಶ್ರೇಯೋರ್ಥೀ ದೂರತಸ್ತ್ಯಜೇತ್ ॥ ೨೫೧ ॥**

**ಯಸ್ಯ ಧರ್ಮಾರ್ಥಮರ್ಥೇಹಾ ತಸ್ಯಾನೀಹಾ ಗರೀಯಸೀ ।**
**ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ॥ ೨೫೨ ॥**

**ಯೋಽರ್ಥೇನ ಸಾಧ್ಯತೇ ಧರ್ಮಃ ಕ್ಷಯಿಷ್ಣುಸ್ಸ ಪ್ರಕೀರ್ತಿತಃ ।**
**ಯಃ ಪರಾರ್ಥೇ ಪರಿತ್ಯಾಗಃ ಸೋಽಕ್ಷಯೋ ಮುಕ್ತಿಲಕ್ಷಣಂ ॥ ೨೫೩ ॥**

---

೨೪೯. ಬಡತನವನ್ನೂ, ರಾಜ್ಯವನ್ನೂ ತಕ್ಕಡಿಯಲ್ಲಿ ಹಾಕಿ ತೂಗಿದರೆ ಜಿತೇಂದ್ರಿಯನಿಗೆ ರಾಜ್ಯಕ್ಕಿಂತಲೂ ಬಡತನವೇ ಮೇಲು.

೨೫೦. ಕಶ್ಯಪನು ಹೇಳಿದನು :—ಹಣವನ್ನು ಕೂಡಿಹಾಕಿಕೊಳ್ಳುವುದು ಬ್ರಾಹ್ಮಣನಿಗೆ ಅನರ್ಥವನ್ನು ಉಂಟುಮಾಡುತ್ತದೆ. ಹಣದ ಐಶ್ವರ್ಯದಿಂದ ಮೂಢನಾಗಿ ಆತನು ಶ್ರೇಯಸ್ಸನ್ನು ಹಾಳುಮಾಡಿಕೊಳ್ಳುತ್ತಾನೆ.

೨೫೧. ಹಣದ ಸಂಪತ್ತು ಅಜ್ಞಾನವನ್ನುಂಟುಮಾಡುತ್ತದೆ. ಅಜ್ಞಾನದಿಂದ ನರಕ ಬರುತ್ತದೆ. ಆದ್ದರಿಂದ ಹಣವು ಅನರ್ಥವನ್ನುಂಟುಮಾಡುತ್ತದೆ. ಶ್ರೇಯಸ್ಕಾಮಿಯು ಆ ಹಣವನ್ನು ದೂರದಲ್ಲಿಯೇ ಬಿಟ್ಟುಬಿಡಬೇಕು.

೨೫೨. ಯಾವನಿಗೆ ಧರ್ಮಕ್ಕೋಸ್ಕರ ಹಣದ ಅಪೇಕ್ಷೆಯೋ ಅವನಿಗೆ ಆ ಅಪೇಕ್ಷೆಯಿಲ್ಲದಿರುವಿಕೆಯೇ ಉತ್ತಮವು. ಕೆಸರನ್ನು ತುಳಿದು ಕಾಲು ತೊಳೆದುಕೊಳ್ಳುವುದಕ್ಕಿಂತಲೂ ಅದನ್ನು ತುಳಿಯದಿರುವುದೇ ಉತ್ತಮವು.

೨೫೩. ಹಣದಿಂದ ಸಾಧಿಸುವ ಧರ್ಮವು ನಾಶವಾಗತಕ್ಕದ್ದೆಂದು ಹೇಳಲ್ಪಟ್ಟಿದೆ. ಪರರ ಉಪಕಾರಕ್ಕೋಸ್ಕರ ಯಾರು ತ್ಯಾಗಮಾಡುತ್ತಾರೆಯೋ ಅದು ಅಕ್ಷಯವಾದ ಮುಕ್ತಿಯನ್ನು ಕೊಡುತ್ತದೆ.

॥ ಭಾರದ್ವಾಜ ಉವಾಚ ॥

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।
ಜೀವಿತಾಶಾ ಧನಾಶಾ ಚ ಜೀರ್ಯತೋಽಪಿ ನ ಜೀರ್ಯತಿ ॥ ೨೫೪ ॥

ಚಕ್ಷುಃಶ್ರೋತ್ರಾಣಿ ಜೀರ್ಯಂತಿ ತೃಷ್ಣೈಕಾ ತರುಣಾಯತೇ ।
ಸೂಚ್ಯಾ ಸೂತ್ರಂ ಯಥಾ ವಸ್ತ್ರೇ ಸಂಸೂಚಯತಿ ಸೂಚಕಃ ॥ ೨೫೫ ॥

ತದ್ವತ್ಸಂಸಾರಸೂತ್ರಂ ಹಿ ತೃಷ್ಣಾಸೂಚ್ಯೋಪನೀಯತೇ ।
ಯಥಾ ಶೃಂಗಂ ರುರೋಃ ಕಾಯೇ ವರ್ಧಮಾನೇ ಚ ವರ್ಧತೇ ॥ ೨೫೬ ॥

ತಥೈವ ತೃಷ್ಣಾ ವಿತ್ತೇನ ವರ್ಧಮಾನೇನ ವರ್ಧತೇ ।
ಅನಂತಪಾರಾ ದುಷ್ಪೂರಾ ತೃಷ್ಣಾ ದೋಷಶತಾವಹಾ ।
ಅಧರ್ಮಬಹುಳಾ ಚೈವ ತಸ್ಮಾತ್ತಾಂ ಪರಿವರ್ಜಯೇತ್ ॥ ೨೫೭ ॥

---

೨೫೪. ಭಾರದ್ವಾಜನು ಹೇಳಿದನು :—ಮುದುಕನಾದವನಿಗೆ ಹಲ್ಲುಗಳೂ ಕೂದಲುಗಳೂ ಹಣ್ಣಾಗುತ್ತವೆ. ಜೀವದ ಆಸೆ ಹಣದ ಆಶೆಗಳು ಮಾತ್ರ ಜೀರ್ಣವಾಗುವುದಿಲ್ಲ. ಕಣ್ಣು ಕಿವಿಗಳು ಹಣ್ಣಾಗಿ ನಾಶವಾಗುತ್ತವೆ. ಆಶೆ ಮಾತ್ರ ಹೆಚ್ಚುತ್ತದೆ.

೨೫೫-೨೫೬. ಚಿಪ್ಪಿಗನು ಸೂಜಿಯಿಂದ ಬಟ್ಟೆಯನ್ನು ಹೊಲೆಯುವಂತೆ ಸಂಸಾರವೆಂಬ ನೂಲನ್ನು ಆಶೆಯೆಂಬ ಸೂಜಿಯಿಂದ ಹೊಲಿಯುತ್ತಾನೆ. ಜಿಂಕೆಯ ಕೊಂಬು ಜಿಂಕೆ ಬೆಳೆಯುವಾಗ ಹೇಗೆ ಬೆಳೆಯುತ್ತದೆಯೋ ಹಾಗೆ ಬೆಳೆಯುತ್ತಿರುವಾಗ ಆಸೆಯೂ ಬೆಳೆಯುತ್ತದೆ.

೨೫೭. ಆ ಆಸೆಯು ಬಹು ದೊಡ್ಡದು. ದಾಟಲಸಾಧ್ಯವಾದುದು. ಅನೇಕ ದೋಷಗಳುಳ್ಳದು. ಅಧರ್ಮವೇ ಹೆಚ್ಚಾಗಿ ಉಳ್ಳದ್ದು. ಆದ್ದರಿಂದ ಅದನ್ನು ಬಿಟ್ಟುಬಿಡಬೇಕು.

॥ ಗೌತಮ ಉವಾಚ ॥

ಸಂತುಷ್ಟಃ ಕೋ ನ ಶಕ್ನೋತಿ ಫಲೈಶ್ಚಾಪ್ಯನುವರ್ತಿತುಂ ।
ಸರ್ವಸ್ತ್ವಿಂದ್ರಿಯಲೋಭೇನ ಸಂಕಟಾನ್ಯವಗಾಹತೇ ॥ ೨೫೮ ॥

ಸರ್ವತ್ರ ಸಂಪದಸ್ತಸ್ಯ ಸಂತುಷ್ಟಂ ಯಸ್ಯ ಮಾನಸಂ ।
ಉಪಾನದ್ಗೂಢಪಾದಸ್ಯ ನ ನು ಚರ್ಮಾವೃತೇವ ಭೂಃ ॥ ೨೫೯ ॥

ಸಂತೋಷಾಮೃತತೃಪ್ತಾನಾಂ ಯತ್ಸುಖಂ ಶಾಂತಚೇತಸಾಂ ।
ಕುತಸ್ತದ್ಧನಲುಬ್ಧಾನಾಮಿತಶ್ಚೇತಶ್ಚ ಧಾವತಾಂ ॥ ೨೬೦ ॥

ಅಸಂತೋಷಃ ಪರಂ ದುಃಖಂ ಸಂತೋಷಃ ಪರಮಂ ಸುಖಂ ।
ಸುಖಾರ್ಥೀ ಪುರುಷಸ್ತಸ್ಮಾತ್ಸಂತುಷ್ಟಸ್ಸತತಂ ಭವೇತ್ ॥ ೨೬೧ ॥

---

೨೫೮. ಗೌತಮನು ಹೇಳಿದನು :—ಸಂತೋಷವುಳ್ಳವನಿಗೆ ಯಾವನಿಗೆ ತಾನೇ ಫಲವು ಸಿಕ್ಕುವುದಿಲ್ಲ? ಪ್ರತಿಯೊಬ್ಬನೂ ಇಂದ್ರಿಯದ ಆಸೆಯಿಂದ ಕಷ್ಟವನ್ನನುಭವಿಸುತ್ತಾನೆ.

೨೫೯. ಯಾವನ ಮನಸ್ಸು ಸಂತೋಷಗೊಂಡಿದೆಯೋ ಅವನಿಗೆ ಎಲ್ಲಾ ಕಡೆಯಲ್ಲಿಯೂ ಸಂತೋಷವೇ ಇರುತ್ತದೆ. ಜೋಡು ಹಾಕಿಕೊಂಡು ಕಾಲನ್ನು ಮುಚ್ಚಿಕೊಂಡಿರುವವನಿಗೆ ಭೂಮಿಯೆಲ್ಲವೂ ಚರ್ಮದಿಂದ ಮುಚ್ಚಿದಂತೆ ಇರುತ್ತದೆ ಯಷ್ಟೇ !

೨೬೦. ಸಂತೋಷವೆಂಬ ಅಮೃತದಿಂದ ತೃಪ್ತರಾದ, ಶಾಂತವಾದ ಮನಸ್ಸುಳ್ಳವರಿಗೆ ಯಾವ ಸುಖವಿರುತ್ತದೆಯೋ ಆ ಸುಖವು ಹಣದ ಆಸೆಯುಳ್ಳ, ಇಲ್ಲಿ ಅಲ್ಲಿ ಓಡಾಡುತ್ತಿರುವವರಿಗೆಲ್ಲಿ ಬರುತ್ತದೆ ?

೨೬೧. ಸಂತೋಷವಿಲ್ಲದಿರುವುದೇ ಬಹು ದುಃಖವು. ಸಂತೋಷವೇ ಪರಮ ಸುಖವು. ಆದ್ದರಿಂದ ಸುಖವನ್ನಪೇಕ್ಷಿಸುವವನು ಯಾವಾಗಲೂ ಸಂತೋಷದಿಂದ ಕೂಡಿದವನಾಗಿರಬೇಕು.

॥ ವಿಶ್ವಾಮಿತ್ರ ಉವಾಚ ॥

**ಕಾಮಂ ಕಾಮಯಮಾನಸ್ಯ ಯದಿ ಕಾಮಸ್ಸಮೃಧ್ಯತಿ ।**
**ಅಥೈನಮಪರಃ ಕಾಮೋ ಭೂಯೋ ವಿಧ್ಯತಿ ಬಾಣವತ್ ॥ ೨೬೨ ॥**

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೨೬೩ ॥**

**ಕಾಮಾನಭಿಲಷನ್ಮೋಹಾನ್ನ ನರಃ ಸುಖಮೇಧತೇ ।**
**ಶ್ಯೇನಾಲಯತರುಚ್ಛಾಯಾಂ ವ್ರಜನ್ನಿವ ಕಪಿಂಜಲಃ ॥ ೨೬೪ ॥**

**ಚತುಸ್ಸಾಗರಪರ್ಯಂತಂ ಯೋ ಭುಂಕ್ತೇ ಪೃಥಿವೀಮಿಮಾಂ ।**
**ತುಲ್ಯಾಶ್ಮಕಾಂಚನೋ ಯಶ್ಚ ಸ ಕೃತಾರ್ಥೋ ನ ಪಾರ್ಥಿವಃ ॥ ೨೬೫ ॥**

॥ ಜಮದಗ್ನಿರುವಾಚ ॥

**ಪ್ರತಿಗ್ರಹಸಮರ್ಥೋಽಪಿ ನಾದತ್ತೇ ಯಃ ಪ್ರತಿಗ್ರಹಂ ।**
**ಯೇ ಲೋಕಾ ದಾನಶೀಲಾನಾಂ ಸ ತಾನಾಪ್ನೋತಿ ಶಾಶ್ವತಾನ್ ॥ ೨೬೬ ॥**

---

೨೬೨. ವಿಶ್ವಾಮಿತ್ರನು ಹೇಳಿದನು :—ಯಾವುದಾದರೂ ಒಂದು ಅಪೇಕ್ಷೆ ಪಡುತ್ತಿದ್ದ ಅದು ಅವನಿಗೆ ಪೂರ್ತಿಯಾದರೆ ಮತ್ತೊಂದು ಕಾಮವು ಅವನನ್ನು ಬಾಣದಿಂದ ಚುಚ್ಚಿದಂತೆ ಚುಚ್ಚುತ್ತದೆ.

೨೬೩. ಆಸೆಯು ಆಸೆಯನ್ನನುಭವಿಸುವುದರಿಂದ ಶಾಂತವಾಗುವುದಿಲ್ಲ. ಅದು ಹವಿಸ್ಸನ್ನು ಹೋಮಮಾಡುವುದರಿಂದ ಬೆಂಕಿಯು ಹೆಚ್ಚುವಂತೆ ಹೆಚ್ಚುತ್ತದೆ.

೨೬೪. ಅಜ್ಞಾನದಿಂದ ಕಾಮಗಳನ್ನು ಅಪೇಕ್ಷಿಸಿದರೆ ಅವನು ಗಿಡಗಗಳು ಮನೆ ಮಾಡಿಕೊಂಡಿರುವ ಮರದ ನೆರಳಿಗೆ ಹೋದ ಗುಬ್ಬಚ್ಚಿಯಂತೆ ಸುಖವನ್ನು ಹೊಂದಲಾರನು.

೨೬೫. ನಾಲ್ಕು ಸಮುದ್ರಗಳೂ ಎಲ್ಲೆಗಳಾಗಿರುವ ಭೂಮಿಯನ್ನು ಅನುಭವಿಸಿದರೂ ರಾಜನು ಸುಖಿಯಲ್ಲ. ಕಲ್ಲು ಚಿನ್ನಗಳನ್ನು ಸಮನಾಗಿ ಕಾಣುವವನು ಸುಖಿಯು.

೨೬೬. ಜಮದಗ್ನಿಯು ಹೇಳಿದನು :—ದಾನ ತೆಗೆದುಕೊಳ್ಳಲು ಯೋಗ್ಯತೆಯಿದ್ದರೂ ಅದನ್ನು ತೆಗೆದುಕೊಳ್ಳದಿದ್ದರೆ, ದಾನಿಗಳಿಗೆ ಬರತಕ್ಕ ಲೋಕವು ಅವನಿಗೆ ಬರುತ್ತದೆ.

ಯೋಽರ್ಥಾನ್ಪ್ರಾಪ್ಯ ನೃಪಾದ್ವಿಪ್ರಶ್ಶೋಚಿತವ್ಯೋ ಮಹರ್ಷಿಭಿಃ ।
ನ ಸ ಪಶ್ಯತಿ ಮೂಢಾತ್ಮಾ ನರಕೇ ಯಾತನಾಭಯಂ ॥ ೨೬೭ ॥

ಪ್ರತಿಗ್ರಹಸಮರ್ಥೋಽಪಿ ನ ಪ್ರಸಜ್ಯೇತ್ಪ್ರತಿಗ್ರಹೇ ।
ಪ್ರತಿಗ್ರಹೇಣ ವಿಪ್ರಾಣಾಂ ಬ್ರಹ್ಮತೇಜಶ್ಚ ಹೀಯತೇ ॥ ೨೬೮ ॥

ಪ್ರತಿಗ್ರಹಸಮರ್ಥಾನಾಂ ನಿವೃತ್ತಾನಾಂ ಪ್ರತಿಗ್ರಹಾತ್ ।
ಯ ಏವ ದದತಾಂ ಲೋಕಃ ಸ ಏವಾಪ್ರತಿಗೃಹ್ಣತಾಂ ॥ ೨೬೯ ॥

॥ ಅರುಂಧತ್ಯುವಾಚ ॥

ಬಿಸತಂತುರ್ಯಥಾ ನಿತ್ಯಮಂಭಸ್ಥಸ್ಸತತಂ ವಿಶೇತ್ ।
ತೃಷ್ಣಾ ಚೈವಮನಾದ್ಯಂತಾ ತಥಾ ದೇಹಗತಾ ಸದಾ ॥ ೨೭೦ ॥

ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।
ಯೋಽಸೌ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಸ್ಸುಖಂ ॥೨೭೧॥

---

೨೬೭. ರಾಜನಿಂದ ಹಣವನ್ನು ತೆಗೆದುಕೊಂಡರೆ ಆ ಬ್ರಾಹ್ಮಣನನ್ನು ಕುರಿತು ಋಷಿಗಳು ದುಃಖಿಸುತ್ತಾರೆ. ಅವನು ದಡ್ಡನಾಗಿ ನರಕದ ಯಾತನೆಯನ್ನು ಯೋಚಿಸುವುದೇ ಇಲ್ಲ.

೨೬೮. ದಾನ ತೆಗೆದುಕೊಳ್ಳುವ ಯೋಗ್ಯತೆಯಿದ್ದರೂ ಅದನ್ನು ತೆಗೆದುಕೊಳ್ಳಬಾರದು. ದಾನ ತೆಗೆದುಕೊಳ್ಳುವುದರಿಂದ ಬ್ರಾಹ್ಮಣರ ಬ್ರಹ್ಮತೇಜಸ್ಸು ಹೋಗುತ್ತದೆ.

೨೬೯. ದಾನ ತೆಗೆದುಕೊಳ್ಳಲು ಸಮರ್ಥರಾಗಿದ್ದು ಅದನ್ನು ತೆಗೆದುಕೊಳ್ಳದಿದ್ದರೆ ದಾನಿಗಳ ಲೋಕವು ಅವರಿಗೆ ಬರುತ್ತದೆ.

೨೭೦. ಅರುಂಧತಿಯು ಹೇಳಿದಳು :—ಮೃಣಾಳದ ತಂತುವು ಹೇಗೆ ನೀರಿನಲ್ಲಿಯೇ ಇದ್ದು ನಿತ್ಯವೂ ಮುಳುಗುತ್ತಿರುತ್ತದೋ ಹಾಗೆ ಆಸೆಯು ದೇಹದಲ್ಲಿದ್ದುಕೊಂಡು ಕೊನೆಮೊದಲಿಲ್ಲದಿರುತ್ತದೆ.

೨೭೧. ದುಷ್ಟಬುದ್ಧಿಯುಳ್ಳವರಿಂದ ಯಾವುದು ಬಿಡಲಸಾಧ್ಯವೋ, ನಾವು ಮುದುಕರಾದರೂ ಯಾವುದು ಮುಪ್ಪನ್ನು ಹೊಂದುವುದಿಲ್ಲವೋ, ಯಾವುದು ಪ್ರಾಣ ಹೋಗುವವರೆಗೂ ಇರುವ ರೋಗವೋ ಅಂತಹ ಆಸೆಯನ್ನು ಬಿಟ್ಟವನಿಗೆ ಸುಖವುಂಟು.

॥ ಷಂಢೋವಾಚ ॥

ಉಗ್ರಾದ್ಯತೋ ಭಯಾದಸ್ಮಾದ್ವಿಭ್ಯತೀಮೇ ಮಹೇಶ್ವರಾಃ ।
ಬಲೀಯಾಂಸೋ ದುರ್ಬಲವತ್ತಸ್ಮಾಚ್ಚೈವ ಬಿಭೇಮ್ಯಹಂ ॥ ೨೭೨ ॥

॥ ಪಶುಸಖ ಉವಾಚ ॥

ಯದಾಚರಂತಿ ವಿದ್ವಾಂಸಸ್ಸದಾ ಧರ್ಮಪರಾಯಣಾಃ ।
ತದೇವ ವಿದುಷಾ ಕಾರ್ಯಮಾತ್ಮನೋ ಹಿತಮಿಚ್ಛತಾ ॥ ೨೭೩ ॥

ಇತ್ಯುಕ್ತ್ವಾ ಹೇಮಗರ್ಭಾಣಿ ತ್ಯಕ್ತ್ವಾ ತಾನಿ ಫಲಾನಿ ಚ ।
ಋಷಯೋ ಜಗ್ಮುರನ್ಯತ್ರ ಸರ್ವ ಏವ ದೃಢವ್ರತಾಃ ॥ ೨೭೪ ॥

ತತಸ್ತೇ ವಿಚರಂತೋ ವೈ ಮಧ್ಯಮೇ ಪುಷ್ಕರೇ ಗತಾಃ ।
ದದೃಶುಸ್ಸಹಸಾ ಪ್ರಾಪ್ತಂ ಪರಿವ್ರಾಜಂ ಶುನಸ್ಸಖಂ ॥ ೨೭೫ ॥

ತೇನ ತೇ ಸಹಿತಾಸ್ತತ್ರ ಗತ್ವಾ ಕಿಂಚಿದ್ವನಾಂತರಂ ।
ಸರಃ ಪರಮಪಶ್ಯಂತ ವೃತಂ ಪದ್ಮೈರ್ಜಲಾಶಯಂ ॥ ೨೭೬ ॥

---

೨೭೨. ಷಂಢನು ಹೇಳಿದನು :—ಇವೆಲ್ಲವೂ ಕೆಟ್ಟವನಿಗೆ ಭಯಪಡುತ್ತವೆ. ಬಲಿಷ್ಠವಾದ ಇವುಗಳಿಗೆ ದುರ್ಬಲನಾದ ನಾನು ಹೆದರುತ್ತೇನೆ.

೨೭೩. ಪಶುಸಖನು ಹೇಳಿದನು :—ಯಾವಾಗಲೂ ಧರ್ಮಿಷ್ಠರಾದ ವಿದ್ವಾಂಸರು ಯಾವುದನ್ನು ಆಚರಿಸುತ್ತಾರೆಯೋ ಅದನ್ನೇ ತನಗೆ ಹಿತಕಾಂಕ್ಷಿಯು ಮಾಡಬೇಕು.

೨೭೪. ಹೀಗೆಂದು ಹೇಳಿ ಆ ಚಿನ್ನವನ್ನು ತುಂಬಿದ್ದ ಹಣ್ಣುಗಳನ್ನು ಆ ಋಷಿಗಳು ಬಿಟ್ಟು ಬೇರೆಕಡೆಗೆ ಹೊರಟು ಹೋದರು.

೨೭೫. ಅನಂತರ ಅವರು ಸಂಚರಿಸುತ್ತ ಮಧ್ಯಮ ಪುಷ್ಕರಕ್ಕೆ ಹೋಗಿ ಅಲ್ಲಿ ಬಂದಿದ್ದ ಒಬ್ಬ ಶುನಸ್ಸಖನೆಂಬ ಸನ್ಯಾಸಿಯನ್ನು ನೋಡಿದರು.

೨೭೬. ಆ ಋಷಿಗಳು ಅವನೊಡನೆ ಸ್ವಲ್ಪದೂರ ಕಾಡಿನೊಳಗೆ ಹೋಗಿ ಪದ್ಮಗಳು ಬೆಳೆದಿರುವ ಒಂದು ಸರೋವರವನ್ನು ನೋಡಿದರು.

ನಿವಿಷ್ಟಾಸ್ಸರಸಸ್ತೀರೇ ಚಿಂತಯಂತೋ ಗತಿಂ ಶುಭಾಂ ।
ಶುನಸ್ಸಖೋ ಮುನೀನ್ಸರ್ವಾನುವಾಚ ಕ್ಷುಧಿತಾಂಸ್ತದಾ ॥ ೨೭೭ ॥

॥ ಶುನಸ್ಸಖ ಉವಾಚ ॥

ಸರ್ವೇ ವದಂತು ಸಹಿತಾಃ ಕೀದೃಶೀ ಕ್ಷುತ್ಪ್ರವೇದನಾ ।
ತಮೂಚುಸ್ಸಹಿತಾಸ್ತೇ ತು ಪರಿವ್ರಾಜಂ ಶುನಸ್ಸಖಂ ॥ ೨೭೮ ॥

॥ ಋಷಯ ಊಚುಃ ॥

ಶಕ್ತಿಖಡ್ಗಗದಾಭಿಶ್ಚ ಚಕ್ರತೋಮರಸಾಯಕೈಃ ।
ವ್ಯಥಿತೋ ವೇದನಾ ಯಾ ತು ಕ್ಷುಧಯಾ ಸಾಪಿ ನಿರ್ಜಿತಾ ॥ ೨೭೯ ॥

ಶ್ವಾಸಕಾಸಕ್ಷಯಾದೀನಾಂ ಜ್ವರಾಪಸ್ಮಾರ ಏವಚ ।
ವ್ಯಾಧಿಭಿರ್ನಿರ್ಜಿತಸ್ಯಾಪಿ ಕ್ಷುಧಾ ತೇಭ್ಯೋಽಧಿಕಾ ಭವೇತ್ ॥ ೨೮೦ ॥

ಹಿರಣ್ಯಾಂಗದಕೇಯೂರೈರ್ಮುಕುಟೋಜ್ವಲಕುಂಡಲೈಃ ।
ಮಂಡಿತಾ ನ ವಿರಾಜಂತೇ ತತ್ರ ಯೇ ಸಂಸ್ಥಿತಾ ನರಾಃ ॥ ೨೮೧ ॥

---

೨೭೭. ಆ ಸರೋವರದ ದಡದಲ್ಲಿ ಕೂತುಕೊಂಡು ಉತ್ತಮಗತಿಯನ್ನು ಯೋಚಿಸುತ್ತಿರುವ ಆ ಋಷಿಗಳನ್ನು ಕುರಿತು ಅವರು ಹಸಿದಿರುವುದನ್ನು ನೋಡಿ ಶುನಸ್ಸಖನಿಂತೆಂದನು.

೨೭೮. ಶುನಸ್ಸಖನು ಹೇಳಿದನು:—ನೀವೆಲ್ಲರೂ ಹೇಳಿ, ಹಸಿವಿನಿಂದ ಉಂಟಾಗುವ ತೊಂದರೆ ಎಂಥಾದ್ದು ? ಎನ್ನಲು, ಆತನನ್ನು ಕುರಿತು ಅವರು ಇಂತೆಂದರು.

೨೭೯. ಋಷಿಗಳು ಹೇಳಿದರು :—ಶಕ್ತಿ, ಖಡ್ಗ, ಗದೆ, ಚಕ್ರ, ತೋಮರ, ಬಾಣಗಳಿಂದ ಹೊಡೆದರೆ ಆಗುವ ಯಾತನೆಯನ್ನೂ ಹಸುವಿನ ಯಾತನೆಯು ಜಯಿಸುತ್ತದೆ.

೨೮೦. ಶ್ವಾಸ, ಕೆಮ್ಮು, ಕ್ಷಯ, ಜ್ವರ, ಅಪಸ್ಮಾರ ಮುಂತಾದ ರೋಗಗಳಿಂದ ಕೂಡಿದವನ ವ್ಯಥೆಗಿಂತಲೂ ಹಸಿವಿನಿಂದಾದ ತೊಂದರೆಯು ಹೆಚ್ಚಾಗಿರುತ್ತದೆ.

೨೮೧. ಚಿನ್ನದ ಭುಜಕೀರ್ತಿ, ಕಿರೀಟ, ಪ್ರಕಾಶಮಾನವಾದ ಕರ್ಣಾಭರಣ, ಇವುಗಳಿಂದ ಅಲಂಕೃತರಾಗಿದ್ದರೂ ಹಸಿವಿನಿಂದ ಕೂಡಿದ್ದರೆ ಅವರು ಪ್ರಕಾಶಿಸುವುದಿಲ್ಲ.

ಯಥಾ ಭೂಮಿಗತಂ ತೋಯಂ ಕೃಷ್ಯತೇ ರವಿರಶ್ಮಿಭಿಃ ।
ತದ್ವಚ್ಛರೀರಜಾ ನಾಡ್ಯಶ್ಶೋಷ್ಯಂತೇ ಜಠರಾಗ್ನಿನಾ ॥ ೨೮೨ ॥

ನ ಶೃಣೋತಿ ನ ಚಾಘ್ರಾತಿ ಚಕ್ಷುಷಾ ನ ಚ ಪಶ್ಯತಿ ।
ದಹ್ಯತೇ ವೇಪತೇ ಮೂಢಃ ಶುಷ್ಯತೇ ಚ ಕ್ಷುಧಾರ್ದಿತಃ ॥ ೨೮೩ ॥

ನ ಪೂರ್ವಾಂ ದಕ್ಷಿಣಾಂ ವಾಪಿ ಪಶ್ಚಿಮಾಂ ನೋತ್ತರಾಂ ತಥಾ ।
ನ ಚೈವಾಧೋ ನ ಚೋರ್ಧ್ವಂ ವಾ ಕ್ಷುದಾವಿಷ್ಟೋ ಹಿ ವಿಂದತಿ ॥ ೨೮೪ ॥

ಮೂಕತ್ವಂ ಬಧಿರತ್ವಂ ಚ ಜಡತ್ವಮಥ ಪಂಗುತಾ ।
ಭೈರವತ್ವಮಮರ್ಯಾದಾ ಕ್ಷುಧಾಯಾಂ ಸಂಪ್ರವರ್ತತೇ ॥ ೨೮೫ ॥

ಜನಿತಾ ಜನನೀ ಪುತ್ರಾ ಭಾರ್ಯಾ ದುಹಿತರಸ್ತಥಾ ।
ಭ್ರಾತರಸ್ಸ್ವಜನೋ ವಾಪಿ ತ್ಯಜ್ಯತೇ ಕ್ಷುಧಯಾ ದ್ವಿಜ ॥ ೨೮೬ ॥

ನ ಪಿತ್ನ್ಯನ್ಪೂಜಯೇತ್ಸಮ್ಯಗ್ದೇವಾನ್ವಾಪಿ ಗುರೂಂಸ್ತಥಾ ।
ಋಷೀನಭ್ಯಗತಾನ್ವಾಪಿ ಕ್ಷುಧಾವಿಷ್ಟೋ ನ ವಿದಂತಿ ॥ ೨೮೭ ॥

---

೨೮೨. ಭೂಮಿಯಲ್ಲಿನ ನೀರು ಸೂರ್ಯಕಿರಣಗಳಿಂದ ಹೇಗೆ ಒಣಗುತ್ತದೆಯೋ ಹಾಗೆ ಶರೀರದಲ್ಲಿರುವ ನರಗಳು ಹಸಿವಿನಿಂದ ಶೋಷಿಸುತ್ತವೆ.

೨೮೩. ಹಸಿವಿನಿಂದ ಕೂಡಿದವನಿಗೆ ಕಿವಿ ಕೇಳುವುದಿಲ್ಲ. ವಾಸನೆ ತೋರುವುದಿಲ್ಲ. ಕಣ್ಣು ಕಾಣುವುದಿಲ್ಲ. ಸುಡಲ್ಪಡುತ್ತಿರುತ್ತಾನೆ. ನಡಗುತ್ತಾನೆ. ಒಣಗುತ್ತಿರುತ್ತಾನೆ.

೨೮೪. ಹಸಿವುಗೊಂಡವನು ಪೂರ್ವ ದಕ್ಷಿಣ ಪಶ್ಚಿಮೋತ್ತರಗಳನ್ನು ಮೇಲು ಕೆಳಗುಗಳನ್ನು ತಿಳಿಯಲಾರನು.

೨೮೫. ಹಸಿವುಗೊಂಡವನಲ್ಲಿ ಮೂಗುತನ, ಕಿವುಡತನ, ದಡ್ಡತನ, ಕುಂಟತನ, ಹೆದರಿಕೆ, ಗೌರವಿಸದಿರುವುದು ಇಷ್ಟೂ ಇರುತ್ತವೆ.

೨೮೬. ತಾಯಿ, ತಂದೆ, ಮಕ್ಕಳು, ಹೆಂಡತಿ, ಹೆಣ್ಣುಮಕ್ಕಳು, ಅಣ್ಣ ತಮ್ಮಂದಿರು, ಬಂಧುಗಳು, ಸ್ವಜನರು ಇವರೆಲ್ಲರನ್ನೂ ಹಸಿದವನು ಬಿಟ್ಟುಬಿಡುತ್ತಾನೆ.

೨೮೭. ಹಸಿದವನು ಪಿತೃಗಳನ್ನಾಗಲೀ, ಗುರುಗಳನ್ನಾಗಲೀ, ಗಮನಿಸುವುದಿಲ್ಲ. ಋಷಿ ಅಭ್ಯಾಗತರನ್ನು ಪೂಜಿಸುವುದಿಲ್ಲ.

ಏವಮನ್ನವಿಹೀನಸ್ಯ ಭವಂತ್ಯೇತಾನಿ ದೇಹಿನಃ ।
ತದೇವ ವಿಪರೀತಾನಿ ತೃಪ್ತಸ್ಯೈತಾನಿ ನೈ ಭವೇತ್ ॥ ೨೮೮ ॥

ಅನ್ನಾತ್ಪರಮತೋ ಲೋಕೇ ನ ಭೂತಂ ನ ಭವಿಷ್ಯತಿ ।
ಅನ್ನಮೂಲಂ ಜಗತ್ಸರ್ವಮನ್ನೇ ಚೈವ ಪ್ರತಿಷ್ಠಿತಂ ॥ ೨೮೯ ॥

ಪಿತರೋ ದೇವದೈತ್ಯಾಶ್ಚ ಯಕ್ಷರಾಕ್ಷಸಕಿನ್ನರಾಃ ।
ಮನುಷ್ಯಾಶ್ಚ ಪಿಶಾಚಾಶ್ಚ ಸರ್ವೇ ಚಾನ್ನಮಯಾಸ್ಸ್ಮೃತಾಃ ॥ ೨೯೦ ॥

ಕುಕ್ಕುಟಾ ವಾಯಸಾಃ ಶ್ವಾನ ಆಖುರ್ಬಿಲೇಶಯಾಸ್ತಥಾ ।
ಮತ್ಸ್ಯಾಃ ಕೀಟಾಃ ಪಿಪೀಲಾಶ್ಚ ಸರ್ವೇ ಚಾನಾಶಯಾಸ್ಸ್ಮೃತಾಃ ॥ ೨೯೧ ॥

ತಸ್ಮಾತ್ಸರ್ವಪ್ರಯತ್ನೇನ ಅನ್ನಂ ದದ ಜುಷಸ್ವ ಚ ।
ಅನ್ನದಸ್ತೃಪ್ತಿಮಾಪ್ನೋತಿ ಶಾಶ್ವತೀಂ ಸ್ಥಿತಿಮಕ್ಷಯಾಂ ॥ ೨೯೨ ॥

---

೨೮೮. ಅನ್ನವಿಲ್ಲದೆ ಹಸಿದವನಿಗೆ ಈ ವಿಷಯಗಳೆಲ್ಲವೂ ಆಗುತ್ತವೆ. ಅನ್ನ ವಿದ್ದ ತೃಪ್ತನಾದವನಿಗೆ ಇವೇ ಅದಕ್ಕೆ ವಿರುದ್ಧವಾಗಿ ತೋರುತ್ತದೆ.

೨೮೯. ಲೋಕದಲ್ಲಿ ಅನ್ನಕ್ಕಿಂತಲೂ ಉತ್ತಮವಾದುದು ಮತ್ತೊಂದಿಲ್ಲ. ಹಿಂದೂ ಇಲ್ಲ, ಮುಂದೂ ಇಲ್ಲ. ಅನ್ನವನ್ನು ಮುಖ್ಯವಾಗಿ ಉಳ್ಳದು ಪ್ರಪಂಚವು. ಎಲ್ಲವೂ ಅನ್ನದಲ್ಲಿಯೇ ನಿಂತಿದೆ.

೨೯೦. ಪಿತೃಗಳು, ದೇವತೆಗಳು, ದೈತ್ಯರು, ಯಕ್ಷರು, ರಾಕ್ಷಸರು, ಕಿನ್ನರರು, ಮನುಷ್ಯರು, ಪಿಶಾಚರು ಇವರೆಲ್ಲರೂ ಅನ್ನದಿಂದಲೇ ಜೀವಿಸುವರು.

೨೯೧. ಕೋಳಿ, ಕಾಗೆ, ನಾಯಿ, ಇಲಿ, ಹಾವು, ಮೀನು, ಹುಳು, ಇರುವೆ, ಇವೆಲ್ಲವೂ ಅನ್ನದಿಂದಲೇ ಕೂಡಿವೆ.

೨೯೨. ಆದ್ದರಿಂದ ಅನ್ನವನ್ನು ಪ್ರಯತ್ನಪಟ್ಟು ದಾನಮಾಡು. ಊಟ ವನ್ನು ಮಾಡು. ಅನ್ನವನ್ನು ದಾನಮಾಡುವವನು ತೃಪ್ತಿಹೊಂದುತ್ತಾನೆ. ನಾಶ ರಹಿತವಾದ ಸ್ಥಿತಿಯನ್ನು ಹೊಂದುತ್ತಾನೆ.

ತಪಸ್ಸತ್ಯಂ ಜಪೋ ಹೋಮೋ ಧ್ಯಾನಂ ಯೋಗಃ ಪರಾ ಗತಿಃ ।
ಸ್ವರ್ಗಶ್ಚೈವ ಸುಖಪ್ರಾಪ್ತಿಸ್ಸರ್ವಮನ್ನಾತ್ಪ್ರವರ್ತತೇ ॥ ೨೯೩ ॥

ಚಾಂದ್ರೋ ವರುಣಲೋಕಶ್ಚ ಯಾಮ್ಯೋ ಕೌಬೇರಕಸ್ತಥಾ ।
ಗೋಲೋಕೋ ಬ್ರಾಹ್ಮಲೋಕೋ ವಾ ಸರ್ವೇ ಚಾನ್ನೇ ಪ್ರತಿಷ್ಠಿತಾಃ ॥ ೨೯೪ ॥

ಚಂದನಾಗರುಧೂಪಾನಿ ಶಿಶಿರೇಷ್ವಿಂಧನಾನಿ ಚ ।
ಅನ್ನದಾನಸ್ಯ ವೈ ರಾಜನ್ಕಲಾಂ ನಾರ್ಹಂತಿ ಷೋಡಶೀಂ ॥ ೨೯೫ ॥

ಕೂಪಾರಾಮವೃಷೋತ್ಸರ್ಗವಾಪೀರಾಯತನಾನಿ ಚ ।
ಅನ್ನದಾನಸ್ಯ ಚೈತಾನಿ ಕಲಾಂ ನಾರ್ಹಂತಿ ಷೋಡಶೀಂ ॥ ೨೯೬ ॥

ಪಾನೀಯಂ ಭೂಮಿಗಾವಶ್ಚ ಅನ್ನಂ ಚ ತುಲಯಾ ಧೃತಂ ।
ದೇವೈರಪಿ ಪುರಾ ತಾತ ತೇಷಾಮನ್ನಂ ವಿಶಿಷ್ಯತೇ ॥ ೨೯೭ ॥

---

೨೯೩. ತಪಸ್ಸು, ಸತ್ಯ, ಜಪ, ಹೋಮ, ಧ್ಯಾನ, ಯೋಗ, ಉತ್ತಮಗತಿ, ಸ್ವರ್ಗ, ಸುಖ ಇವೆಲ್ಲವೂ ಅನ್ನದಿಂದಲೇ ಸಿಕ್ಕತಕ್ಕವುಗಳು.

೨೯೪. ಚಂದ್ರ, ವರುಣ, ಯಮ, ಕುಬೇರ, ಗೋವು, ಬ್ರಹ್ಮ ಈ ಎಲ್ಲ ಲೋಕಗಳು ಅನ್ನಂದಲೇ ಸಿಕ್ಕುವುವು.

೨೯೫. ಚಂದನ, ಅಗುರು, ಧೂಪ, ಚಳಿಗಾಲದಲ್ಲಿ ಸೌದೆಯನ್ನು ದಾನ ಮಾಡುವುದು. ಇವು ಅನ್ನದಾನಕ್ಕೆ ಹದಿನಾರನೆಯ ಒಂದುಭಾಗವನ್ನು ಹೋಲಲಾರವು.

೨೯೬. ಭಾವಿ, ಉದ್ಯಾನ, ವೃಷೋತ್ಸರ್ಗ, ಇಳಿಯುವ ಭಾವಿ, ಮನೆಗಳು, ಇವುಗಳ ದಾನಗಳು ಅನ್ನದಾನಕ್ಕೆ ಹದಿನಾರನೆಯ ಒಂದುಭಾಗವನ್ನು ಹೋಲಲಾರವು.

೨೯೭. ಉದಕದಾನ, ಭೂಮಿದಾನ, ಗೋದಾನ ಇವನ್ನೂ ಅನ್ನದಾನವನ್ನೂ ದೇವತೆಗಳು ತಕ್ಕಡಿಯಲ್ಲಿ ತೂಗಲು ಅನ್ನದಾನವೇ ಹೆಚ್ಚಾಗಿದ್ದಿತು.

**ಅನ್ನಂ ಪ್ರಾಣೋ ಬಲಂ ತೇಜೋ ಹ್ಯನ್ನಂ ಚೈವ ಪರಾಕ್ರಮಃ ।**
**ಅನ್ನಾತ್ಸಂಭವತೇ ತೇಜೋ ಹ್ಯನ್ನೇನೈವ ವಿವರ್ಧತೇ ॥ ೨೯೮ ॥**

**ಪೌಂಡರೀಕೋಽಶ್ವಮೇಧಶ್ಚ ಉಕ್ತಷ್ಷೋಡಶಿಕಃ ಕ್ರತುಃ ।**
**ಅಗ್ನಿಷ್ಟೋಮಸ್ತ್ರಿರಾತ್ರಶ್ಚ ರಾಜಸೂಯೋ ಮಹಾಧನಃ ॥ ೨೯೯ ॥**

**ಸೌತ್ರಾಮಣಿರ್ವಾಜಪೇಯೋ ಮಾನುಷೋಽಥ ಪಶುಸ್ತಥಾ ।**
**ಅನ್ನಮೂಲಾತ್ಪ್ರವರ್ತಂತೇ ಸರ್ವೇ ಯಜ್ಞಾಸ್ಸವಿಸ್ತರಾಃ ॥ ೩೦೦ ॥**

**ಸಪರ್ವತನದೀ ವಾಪಿ ಪೃಥವೀ ಸರ್ವಕಾನನಾ ।**
**ವಿಧಿನಾ ತೇನ ಸಾ ದತ್ತಾ ಯೋಽನ್ನಂ ದದಾತಿ ಸರ್ವದಾ ॥ ೩೦೧ ॥**

**ತ್ವಂ ಚಾದ್ಯ ಶ್ರಾವಿತಸ್ಸಮ್ಯ ವಿಕಾರಂ ರಕ್ತದತ್ತಯೋಃ ।**
**ಕ್ಷುಧಿತೇ ನಿತ್ಯಮನ್ನಂ ವೈ ದದಚ್ಛ್ರದ್ಧಾಸಮನ್ವಿತಃ ॥ ೩೦೨ ॥**

---

೨೯೮. ಅನ್ನವೇ ಪ್ರಾಣ, ಬಲ, ತೇಜಸ್ಸು, ಆಗಿರುತ್ತದೆ. ಅನ್ನವೇ ಪರಾಕ್ರಮವು. ಅನ್ನದಿಂದಲೇ ತೇಜಸ್ಸೂ ಹುಟ್ಟುತ್ತದೆ. ಅನ್ನದಿಂದಲೇ ಪ್ರಾಣಿಯು ಬದುಕುವುದು.

೨೯೯-೩೦೦. ಪೌಂಡರೀಕ, ಅಶ್ವಮೇಧ, ಷೋಡಶಿಕ, ಅಗ್ನಿಷ್ಟೋಮ, ತ್ರಿರಾತ್ರ, ರಾಜಸೂಯ, ಸೌತ್ರಾಮಣಿ, ವಾಜಪೇಯ, ಮಾನುಷಯಾಗ ಇವೆಲ್ಲವೂ ಕೂಡ ಅನ್ನದಿಂದಲೇ ಆಗತಕ್ಕವುಗಳು. ಅನ್ನವಿದ್ದರೆ ವಿಸ್ತಾರವಾಗಿ ಈ ಯಜ್ಞಗಳು ನಡೆಯುತ್ತವೆ.

೩೦೧. ಪರ್ವತ, ನದಿ, ಕಾಡು, ಬಾವಿ, ಇವುಗಳೊಡನೆ ಕೂಡಿದ ಭೂಮಿಯನ್ನು ಅನ್ನದಾನಮಾಡಿದವನು ದಾನಮಾಡಿದಂತಾಗುತ್ತದೆ.

೩೦೨. ಎಲೈ ಭೀಷ್ಮನೇ, ರಕ್ತದ ವಿಕಾರವನ್ನು ಕೊಡತಕ್ಕ ಅನ್ನದ ವಿಚಾರವನ್ನು ಹೇಳಿದ್ದೇನೆ. ಆದ್ದರಿಂದ ಹಸಿದವನಿಗೆ ಶ್ರದ್ಧೆಯಿಂದ ಅನ್ನವನ್ನು ಹಾಕಬೇಕು.

ಬ್ರಹ್ಮಹತ್ಯಾದಿಕಂ ಪಾಪಮನ್ನದಶ್ಚಾಪಕರ್ಷತಿ ।
ಕಿಮುಚ್ಛಾನಂ ತು ತೇ ಸೌಮ್ಯ ಯೇನಾಸ್ಮಾನ್ಪರಿಪೃಚ್ಛಸಿ ॥ ೩೦೩ ॥

ಬ್ರಾಹ್ಮಣೇಭ್ಯೋ ಮಹಾಪ್ರಾಜ್ಞ ಕ್ಷುಧಿತೇಭ್ಯೋ ವಿಶೇಷತಃ ।
ಸರ್ವದಾನಾನಿ ದತ್ತಾನಿ ಸರ್ವೇ ಯಜ್ಞಾಸ್ಸದಕ್ಷಿಣಾಃ ॥ ೩೦೪ ॥

ದೇವತಾ ಪೂಜಿತಾಸ್ಸರ್ವಾ ಯೋಽನ್ನಂ ದದಾತಿ ನಿತ್ಯಶಃ ।
ಸ ಸ್ನಾತಸ್ಸರ್ವತೀರ್ಥೇಷು ಸ ಸರ್ವವ್ರತಪಾರಗಃ ॥ ೩೦೫ ॥

ಕ್ಷುಧಿತೇ ಯಃ ಪ್ರಯಚ್ಛೇತ ಅನ್ನಂ ಶ್ರದ್ಧಾಸಮನ್ವಿತಃ ।
ಬ್ರಹ್ಮಭೂತಸ್ತತಸ್ಸೋಽಥ ಬ್ರಹ್ಮಣಾ ಸಹ ಮೋದತೇ ॥ ೩೦೬ ॥

ಸುಸಂಸ್ಕೃತಂ ಚ ಯೋಽಪ್ಯನ್ನಂ ದದ್ಯಾದಹರಹದ್ವಿಜೇ ।
ಯಃ ಪಠೇದನ್ನದಾನಂ ವೈ ಶ್ರಾದ್ಧೇ ಚೈವ ವಿಶೇಷತಃ ॥ ೩೦೭ ॥

---

೩೦೩. ಅನ್ನ ಹಾಕುವವನು ಬ್ರಹ್ಮಹತ್ಯ ಪಾಪವನ್ನು ನಾಶಮಾಡಿಕೊಳ್ಳುತ್ತಾನೆ. ಅಜ್ಞಾನವನ್ನು ಹಾಳುಮಾಡಿಕೊಳ್ಳುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಇದನ್ನು ಕೇಳಬೇಕಾದ್ದೇ ಇಲ್ಲ.

೩೦೪. ಹಸಿದುಬಂದ ಬ್ರಾಹ್ಮಣರಿಗೆ ಅನ್ನವನ್ನು ಹಾಕಿದರೆ ಸರ್ವದಾನಗಳನ್ನು ದಕ್ಷಿಣೆಯೊಡನೆ ಕೊಟ್ಟಂತಾಗುತ್ತದೆ.

೩೦೫. ನಿತ್ಯವೂ ಅನ್ನದಾನಮಾಡುತ್ತಿದ್ದರೆ ದೇವತೆಗಳೆಲ್ಲವನ್ನೂ ಪೂಜೆ ಮಾಡಿದಂತಾಗುತ್ತದೆ. ಎಲ್ಲಾ ತೀರ್ಥದಲ್ಲಿಯೂ ಸ್ನಾನಮಾಡಿದಂತೆ ಆಗುತ್ತದೆ. ಎಲ್ಲಾ ವ್ರತಗಳನ್ನೂ ಮಾಡಿದಂತಾಗುತ್ತದೆ.

೩೦೬. ಹಸಿದವನಿಗೆ ಶ್ರದ್ಧೆಯಿಂದ ಅನ್ನವನ್ನು ಕೊಟ್ಟರೆ ಅವನು ಬ್ರಹ್ಮನಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನೊಡನೆ ಸುಖಿಸುತ್ತಾನೆ.

೩೦೭-೩೦೮. ಚೆನ್ನಾಗಿರುವ ಅನ್ನವನ್ನು ಪ್ರತಿದಿನವೂ ಬ್ರಾಹ್ಮಣರಿಗೆ ದಾನ ಮಾಡಬೇಕು. ಶ್ರಾದ್ಧದಲ್ಲಿಯೂ ಅಮಾವಾಸ್ಯೆಯಲ್ಲಿಯೂ ಚಂದ್ರಗ್ರಹಣಗಳಲ್ಲಿಯೂ

**ಏಕಾಗ್ರಮಾನಸೋ ಭೂತ್ವಾ ಅಮಾವಾಸ್ಯೇಂದುಸಂಕ್ಷಯೇ ।**
**ಭೂತೋಪಘಾತಸಂಪೂರ್ಣೇ ಶ್ರಾದ್ಧೇ ಶ್ರಾವಯತೇ ಸದಾ ॥ ೩೦೮ ॥**

**ಪಿತರಸ್ತಸ್ಯ ತುಷ್ಯಂತಿ ಯಾವಜ್ಜೀವಂ ನ ಸಂಶಯಃ ।**
**ದೇವದ್ವಿಜಸಮೀಪಸ್ಥೋ ನ ಸಮೀಪಸ್ಥಿತೋಽಪಿ ವಾ ॥ ೩೦೯ ॥**

**ಪ್ರಬುದ್ಧೋ ವಾ ಪ್ರಮತ್ತೋ ವಾ ಪ್ರಮಾದಾದಾಗತೋಽಪಿ ವಾ ।**
**ಭಕ್ತ್ಯಾ ವಿರಹಿತೋ ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೩೧೦ ॥**

**ದಮೇನ ಸಂಯುತಾ ವಿಪ್ರಾಸ್ಸುಖಿನೋ ಧರ್ಮಭಾಗಿನಃ ।**
**ದಮೋ ದಾನಂ ಯಮೋ ಯಸ್ತುಪ್ರೋಕ್ತಸ್ತತ್ತ್ವಾರ್ಥದರ್ಶಿಭಿಃ ॥ ೩೧೧ ॥**

**ಬ್ರಾಹ್ಮಣಾನಾಂ ವಿಶೇಷೇಣ ದಮೋ ಧರ್ಮಸ್ಸನಾತನಃ ।**
**ದಮಸ್ತೇಜೋ ವರ್ಧಯತಿ ಪವಿತ್ರೋ ದಮ ಉತ್ತಮಃ ॥ ೩೧೨ ॥**

---

ಸಿಡಿಲುಬಡಿತ ಭೂಕಂಪಗಳಾದಾಗಲೂ ಶ್ರದ್ಧೆಯಿಂದ ಅನ್ನದಾನವನ್ನು (ಪ್ರಕರಣವನ್ನು) ಒಂದೇ ಮನಸ್ಸಿನಿಂದ ಓದಬೇಕು. ಹಾಗಾದರೆ ಅವನ ಪಿತೃಗಳು ಅವರಿರುವವರೆಗೂ ತೃಪ್ತಿಪಡುತ್ತಾರೆ. ಸಂಶಯವಿಲ್ಲ.

೩೦೯-೩೧೦. ದೇವರು ಬ್ರಾಹ್ಮಣರ ಹತ್ತಿರವಿದ್ದುಕೊಂಡಾಗಲೀ ಹತ್ತಿರವಿಲ್ಲದಿದ್ದುಕೊಂಡಾಗಲೀ, ಎಚ್ಚತ್ತಿರಲೀ, ಎಚ್ಚತ್ತದಿರಲೀ, ಪ್ರಮಾದದಿಂದ ಬಂದಿರಲೀ, ಭಕ್ತಿಯಿಲ್ಲದಿರಲೀ ಪಠಿಸಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

೩೧೧. ಇಂದ್ರಿಯನಿಗ್ರಹದಿಂದ ಕೂಡಿದ ಬ್ರಾಹ್ಮಣರು ಸುಖಿಗಳೂ ಧರ್ಮಭಾಗಿಗಳೂ ಆಗುತ್ತಾರೆ. ದಮವೇ (ಇಂದ್ರಿಯನಿಗ್ರಹವೇ) ದಾನವು. ಅದೇ ಯಮವು, ಎಂದು ತಿಳಿದವರು ಹೇಳುತ್ತಾರೆ.

೩೧೨. ಬ್ರಾಹ್ಮಣರು ಈ ಧರ್ಮವನ್ನು ಅತಿಶಯದಿಂದ ಆಚರಿಸಬೇಕು. ಹಿಂದಿನಿಂದಲೂ ಬಂದುದು. ದಮವೇ ತೇಜಸ್ಸನ್ನು ಹೆಚ್ಚಿಸುತ್ತದೆ. ದಮವೇ ಪವಿತ್ರವಾದುದು.

ವಿಪಾಪ್ಮಾ ತೇನ ತೇಜಸ್ವೀ ಪುರುಷೋ ದಮತೋ ಭವೇತ್ ।
ಯೇ ಕೇಚಿನ್ನಿಯಮಾ ಲೋಕೇ ಯೇ ಚ ಧರ್ಮಾಶ್ಶುಭಕ್ರಿಯಾಃ
॥ ೩೧೩ ॥

ಸರ್ವಯಜ್ಞಫಲಂ ವಾಪಿ ದಮಸ್ತೇಭ್ಯೋ ವಿಶಿಷ್ಯತೇ ।
ನ ದಾನಸ್ಯ ಕ್ರಿಯಾಸಿದ್ಧಿರ್ಯಥಾವದುಪಲಭ್ಯತೇ ॥ ೩೧೪ ॥

ತತೋ ಯಜ್ಞಸ್ತತೋ ದಾನಂ ದಮಾದೇವ ಪ್ರವರ್ತತೇ ।
ಕಿಮರಣ್ಯೇ ತ್ವದಾಂತಸ್ಯ ದಾಂತಸ್ಯಾಪಿ ಕಿಮಾಶ್ರಮೇ ॥ ೩೧೫ ॥

ಯತ್ರ ಯತ್ರ ವಸೇದ್ದಾಂತಸ್ತದರಣ್ಯಂ ಮಹಾಶ್ರಮಃ ।
ಶೀಲವೃತ್ತಿನಿಯುಕ್ತಸ್ಯ ನಿಗೃಹೀತೇಂದ್ರಿಯಸ್ಯ ಚ ॥
ಆರ್ಜವೇ ವರ್ತಮಾನಸ್ಯ ಆಶ್ರಮೈಃ ಕಿಂ ಪ್ರಯೋಜನಂ ॥ ೩೧೬ ॥

ವನೇಽಪಿ ದೋಷಾಃ ಪ್ರಭವಂತಿ ರಾಗಿಣಾಂ
ಗೃಹೇಽಪಿ ಪಂಚೇಂದ್ರಿಯನಿಗ್ರಹಸ್ತಪಃ ।

---

೩೧೩. ದಮವುಳ್ಳವನು ಪಾಪರಹಿತನಾಗಿಯೂ ತೇಜಸ್ವಿಯಾಗಿಯೂ ಆಗುವನು. ಲೋಕದಲ್ಲಿರುವ ನಿಯಮಗಳೂ ಶುಭಕ್ರಿಯೆಗಳೂ ದಮವಿದ್ದರೆ ಹೆಚ್ಚಿಗೆ ಫಲವನ್ನು ಕೊಡುತ್ತವೆ.

೩೧೪. ಸರ್ವಯಜ್ಞಫಲಗಳೂ ದಮವಿದ್ದರೆ ಹೆಚ್ಚುತ್ತವೆ. ಆ ದಮವಿಲ್ಲದಿದ್ದರೆ ದಾನಸಿದ್ಧಿಯೂ ಉಂಟಾಗುವುದಿಲ್ಲ.

೩೧೫. ದಮದಿಂದಲೇ ಯಜ್ಞವೂ ದಾನವೂ ನಡೆಯುತ್ತದೆ. ದಮಾಗಣವಿಲ್ಲದವನು ಅರಣ್ಯದಲ್ಲಿದ್ದರೇನು? ದಮಾಗುಣವಿರುವವನು ಅರಣ್ಯಕ್ಕೆ ಹೋಗಬೇಕಾದುದಿಲ್ಲ.

೩೧೬. ದಾಂತನು ವಾಸಮಾಡುವ ಸ್ಥಳವೆಲ್ಲವೂ ಆಶ್ರಮಗಳೇ. ಶೀಲ ತನ್ನ ವೃತ್ತಿ ಇವುಗಳಲ್ಲಿದ್ದುಕೊಂಡು ಇಂದ್ರಿಯನಿಗ್ರಹವನ್ನು ಹೊಂದಿ, ಋಜು ಮಾರ್ಗದಲ್ಲಿರುವವನಿಗೆ ಆಶ್ರಮಗಳು ಬೇಕಿಲ್ಲ.

೩೧೭. ಆಸೆಯುಳ್ಳವರಿಗೆ ಕಾಡಿನಲ್ಲಿಯೂ ದೋಷಗಳಿವೆ. ಪಂಚೇಂದ್ರಿಯ

ಅಕುತ್ಸಿತೇ ಕರ್ಮಣಿ ಯಃ ಪ್ರವರ್ತತೇ
ನಿವೃತ್ತರಾಗಸ್ಯ ಗೃಹಂ ತಪೋವನಂ　　॥ ೩೧೭ ॥

ಸ್ವಕರ್ಮಧರ್ಮಾರ್ಜಿತಜೀವಿತಾನಾಂ
ಸ್ವೇಷ್ವೇವ ದಾರೇಷು ಸದಾ ರತಾನಾಂ ।
ಜಿತೇಂದ್ರಿಯಾಣಾಮತಿಥಿಪ್ರಿಯಾಣಾಂ
ಗೃಹೇಽಪಿ ಮೋಕ್ಷಃ ಪುರುಷೋತ್ತಮಾನಾಂ　　॥ ೩೧೮ ॥

ನ ಶಬ್ದಶಾಸ್ತ್ರೇ ನಿರತಸ್ಯ ಮೋಕ್ಷೋ
ನ ವರ್ಣಸಂಗೇ ನಿರತಸ್ಯ ಚೈವ ।
ನ ಭೋಜನಾಚ್ಛಾದನತತ್ಪರಸ್ಯ
ನ ಲೋಕಚಿತ್ತಗ್ರಹಣೇ ರತಸ್ಯ　　॥ ೩೧೯ ॥

ಏಕಾಂತಶೀಲಸ್ಯ ದೃಢವ್ರತಸ್ಯ
ಸರ್ವೇಂದ್ರಿಯಪ್ರೀತಿನಿವರ್ತಕಸ್ಯ ।
ಅಧ್ಯಾತ್ಮಯೋಗೇ ಗತಮಾನಸಸ್ಯ
ಮೋಕ್ಷೋ ಧ್ರುವಂ ನಿತ್ಯಮಹಿಂಸಕಸ್ಯ　　॥ ೩೨೦ ॥

---

ಗಳನ್ನು ನಿಗ್ರಹಿಸಿದವನು ಮನೆಯಲ್ಲಿದ್ದರೂ ತಪಸ್ಸು ಹೆಚ್ಚುತ್ತದೆ. ಅಯೋಗ್ಯವಾದ ಕೆಲಸವನ್ನು ಮಾಡದೆ ಆಸೆಯನ್ನು ಬಿಟ್ಟಿದ್ದವನಿಗೆ ಮನೆಯೇ ತಪೋವನವು.

೩೧೮. ತಮ್ಮ ಧರ್ಮದಿಂದಲೇ ಸಂಪಾದಿಸಿದ ಜೀವನವುಳ್ಳ, ತಮ್ಮ ಹೆಂಡಿರಲ್ಲಿಯೇ ಆಸಕ್ತರಾಗಿರುವ, ಜಿತೇಂದ್ರಿಯರಾದ, ಅತಿಥಿಯಲ್ಲಿ ಆಸಕ್ತರಾದ ಉತ್ತಮ ಪುರುಷರಿಗೆ ಮನೆಯಲ್ಲಿದ್ದರೂ ಮೋಕ್ಷವು ಲಭಿಸುತ್ತದೆ.

೩೧೯-೩೨೦. ಶಬ್ದಶಾಸ್ತ್ರ, ವರ್ಣಶಾಸ್ತ್ರಗಳಲ್ಲಿ ಆಸಕ್ತನಿಗೆ ಮೋಕ್ಷವಿಲ್ಲ. ಊಟ ಉಡಿಗೆಗಳಲ್ಲಿ ಆಸಕ್ತನಿಗೂ ಜನರ ಮನಸ್ಸಿನಂತೆ ನಡೆಯುವವನಿಗೂ ಮೋಕ್ಷವಿಲ್ಲ. ಯಾವಾಗಲೂ ಏಕಾಂತದಲ್ಲಿರುತ್ತ ಹಿಡಿದ ವ್ರತವನ್ನು ಬಿಡದೇ ಇಂದ್ರಿಯ ನಿಗ್ರಹಮಾಡಿಕೊಂಡು ಆತ್ಮನಲ್ಲಿ ಮನಸ್ಸಿಟ್ಟು ಹಿಂಸೆಮಾಡದವನಿಗೆ ಮೋಕ್ಷವು ಖಂಡಿತ ಸಿಕ್ಕುತ್ತದೆ.

**ಸುಖೇನ ದಾಂತಸ್ಸ್ವಪಿತಿ ಸುಖಂ ಚ ಪ್ರತಿಬುಧ್ಯತೇ ।**
**ಸಮಸ್ಸರ್ವೇಷು ಭೂತೇಷು ಮನೋ ಯಸ್ಯ ಪ್ರಹೃಷ್ಯತಿ ॥ ೩೨೧ ॥**

**ನ ರಥೇನ ಸುಖಂ ಯಾತಿ ನ ಹಯೇನ ನ ದಂತಿನಾ ।**
**ಯಥಾತ್ಮನಾ ವಿನೀತೇನ ಸುಖಂ ಯಾತಿ ಮಹಾಪಥಂ ॥ ೩೨೨ ॥**

**ನ ತತ್ಕುರ್ಯಾದ್ಧರಿಸ್ಸ್ಪೃಷ್ಟಃ ಸರ್ಪೋ ವಾಪ್ಯತಿರೋಷಿತಃ ।**
**ಅರಿರ್ವಾ ನಿತ್ಯಸಂಕ್ರುದ್ಧೋ ಯಥಾತ್ಮಾ ದಮವರ್ಜಿತಃ ॥ ೩೨೩ ॥**

**ನ ಯಮಂ ಯಮಮಿತ್ಯಾಹುರಾತ್ಮಾ ವೈ ಯಮ ಉಚ್ಯತೇ ।**
**ಆತ್ಮಾ ವೈ ಯಮಿತೋ ಯೇನ ಸ ಯಮಸ್ತು ವಿಶಿಷ್ಯತೇ ॥ ೩೨೪ ॥**

**ಯಮೋ ಯಮ ಇತಿ ಪ್ರೋಕ್ತೋ ವೃಥಾ ತೂದ್ವಿಜತೇ ಜನಃ ।**
**ಆತ್ಮಾ ವೈ ಯಮಿತೋ ಯೇನ ಯಮಸ್ತಸ್ಯ ಕರೋತಿ ಕಿಂ ॥ ೩೨೫ ॥**

---

೩೨೧. ಇಂದ್ರಿಯನಿಗ್ರಹವುಳ್ಳವನು ಸುಖವಾಗಿ ಮಲಗುತ್ತಾನೆ. ಸುಖವಾಗಿ ಏಳುತ್ತಾನೆ. ಎಲ್ಲಾ ಪ್ರಾಣಿಗಳಲ್ಲಿಯೂ ಸಂತೋಷವಾಗಿರುವವನಿಗೆ ಸುಖನಿದ್ರೆಯೂ ಸುಖದಿಂದ ಏಳುವಿಕೆಯೂ ಉಂಟಾಗುತ್ತವೆ.

೩೨೨. ಅಂತಹ ಇಂದ್ರಿಯನಿಗ್ರಹವುಳ್ಳವನು ಸುಖವಾಗಿ ದಾರಿಯಲ್ಲಿ ಹೋಗುವಂತೆ ನಿಗ್ರಹವಿಲ್ಲದವನು ರಥದಲ್ಲಿಯಾಗಲೀ ಕುದುರೆ ಆನೆಗಳಲ್ಲಿಯಾಗಲೀ ಸುಖವಾಗಿ ಹೋಗಲಾರನು.

೩೨೩. ಸಿಂಹವಾಗಲೀ, ಸರ್ಪವಾಗಲೀ, ಕೋಪಗೊಳ್ಳುವ ಕೆಲಸವನ್ನು ಮಾಡಬಾರದು. ಶತ್ರುವು ಯಾವಾಗಲೂ ಕೋಪಿಸಿಕೊಳ್ಳುವುದನ್ನು ಮಾಡಬಾರದು. ಹಾಗೆಯೇ ಇಂದ್ರಿಯನಿಗ್ರಹವಿಲ್ಲದ ಕೆಲಸವನ್ನು ಮಾಡಬಾರದು.

೩೨೪. ಯಮನನ್ನು ಯಮನೆನ್ನುವುದಿಲ್ಲ. ಆತ್ಮನೇ ಯಮನು. ಯಾವನು ಆತ್ಮನನ್ನು ನಿಗ್ರಹಿಸುತ್ತಾನೋ ಅವನಿಗೆ ಯಮನು ಸೋಲುತ್ತಾನೆ.

೩೨೫. ಯಮ ಯಮ ಎಂದರೆ ಜನರು ವ್ಯರ್ಥವಾಗಿ ಹೆದರುತ್ತಾರೆ. ಯಾವನು ಆತ್ಮನನ್ನು ನಿಗ್ರಹಿಸುತ್ತಾನೋ ಅವನನ್ನು ಯಮನು ಏನು ಮಾಡಿಯಾನು ?

**ಕ್ರವ್ಯಾದೇಭ್ಯಶ್ಚ ಭೂತೇಭ್ಯೋಽದಾಂತೇಭ್ಯಶ್ಚ ಸದಾ ಭಯಂ ।**
**ತೇಷಾಂ ವಿಪ್ರತಿಷೇಧಾರ್ಥಂ ದಂಡಸ್ಸೃಷ್ಟಸ್ಸ್ವಯಂಭುವಾ ॥ ೩೨೬ ॥**

**ದಂಡೋ ರಕ್ಷತಿ ಭೂತಾನಿ ದಂಡಃ ಪಾಲಯತೇ ಪ್ರಜಾಃ ।**
**ನಿವಾರಯತಿ ಪಾಪಿಷ್ಠಾನ್ದಂಡೋ ದುರ್ಜಯ ಏವ ವಾ ॥ ೩೨೭ ॥**

**ಶ್ಯಾಮೋ ಯುವಾ ಲೋಹಿತಾಕ್ಷಸ್ಸರ್ವಭೂತಭಯಾವಹಃ ।**
**ದಂಡಶ್ಯಾಸ್ತಾ ಮನುಷ್ಯಾಣಾಂ ಯಸ್ಮಿನ್ಧರ್ಮಃ ಪ್ರತಿಷ್ಠಿತಃ ॥ ೩೨೮ ॥**

**ಅಥಾಶ್ರಮೇಷು ಭೂತೇಷು ದಮ ಏವೋತ್ತಮಂ ವ್ರತಂ ।**
**ತಾನಿ ಲಿಂಗಾನಿ ವಕ್ಷ್ಯಾಮಿ ಯೈಶ್ಚಾಪಿ ಸ ಚ ಧಾರ್ಯತೇ ॥ ೩೨೯ ॥**

**ಅಕಾರ್ಪಣ್ಯಮಪಾರುಷ್ಯಂ ಸಂತೋಷಶ್ಶ್ರದ್ಧಧಾನತಾ ।**
**ಅನಸೂಯಾ ಗುರೋಃ ಪೂಜಾ ದಯಾ ಭೂತೇಷ್ವಪೈಶುನಂ ॥ ೩೩೦ ॥**

---

೩೨೬. ಇಂದ್ರಿಯನಿಗ್ರಹವಿಲ್ಲದವರಿಗೆ ಭೂತಗಳಿಂದಲೂ ಪ್ರಾಣಿಗಳಿಂದಲೂ ಹೆದರಿಕೆ ಇರುತ್ತದೆ. ಅವರಿಗೆ ಬುದ್ಧಿ ಕಲಿಸುವುದಕ್ಕೆ ಬ್ರಹ್ಮನು ಶಿಕ್ಷೆಯನ್ನು ನಿರ್ಮಿಸಿರುವನು.

೩೨೭. ದಂಡವು ಭೂತಗಳನ್ನೂ ಪ್ರಜೆಗಳನ್ನೂ ಕಾಪಾಡುತ್ತದೆ. ಪಾಪಿಗಳನ್ನು ತಡೆಗಟ್ಟುತ್ತದೆ. ದಂಡವನ್ನು ತಡೆವುದು ಅಸಾಧ್ಯ.

೩೨೮. ಕಪ್ಪಾಗಿ ಯುವಕನಾಗಿ ಕೆಂಪಾಗಿರುವ ಕಣ್ಣುಳ್ಳವನು ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟುಮಾಡುತ್ತಾನೆ. ದಂಡವಾದರೋ ಮನುಷ್ಯರಿಗೆ ಶಿಕ್ಷೆಯನ್ನು ಕೊಡುತ್ತದೆ. ಅದರಲ್ಲಿಯೇ ಧರ್ಮವು ನಿಂತಿರುವುದು.

೩೨೯. ಆಶ್ರಮದಲ್ಲಿರುವ ಪ್ರಾಣಿಗಳಿಗೆ ದಮವೆ ಉತ್ತಮವಾದ ವ್ರತವು. ಆ ದಮವನ್ನು ಧರಿಸಿರುವವರ ಗುರುತನ್ನು ಹೇಳುತ್ತೇನೆ.

೩೩೦. ಕೃಪಣತೆಯಿಲ್ಲದಿರುವಿಕೆ, ಕಠಿಣವಾಗಿಲ್ಲದಿರುವಿಕೆ, ಸಂತೋಷ, ಶ್ರದ್ಧೆ, ಅಸೂಯೆಯಿಲ್ಲದಿರುವುದು, ಗುರುಪೂಜೆ, ಪ್ರಾಣಿಗಳಲ್ಲಿ ದಯೆ, ಸುಳ್ಳು ಹೇಳದಿರುವಿಕೆ ಇವುಗಳನ್ನು ಶಾಂತಬುದ್ಧಿಯುಳ್ಳ ಋಷಿಗಳು ದಮದ ಚಿಹ್ನೆಗಳೆನ್ನುತ್ತಾರೆ.

ಸದ್ಭಿರೇಷ ದಮಃ ಪ್ರೋಕ್ತೋ ಋಷಿಭಿಶ್ಶಾಂತಬುದ್ಧಿಭಿಃ ।
ದಯಾಧೀನೌ ಧರ್ಮಮೋಕ್ಷೌ ತಥಾ ಸ್ವರ್ಗಶ್ಚ ಪಾರ್ಥಿವ ॥ ೩೩೧ ॥

ಅವಮಾನೇ ನ ಕುಪ್ಯೇತ ಸನ್ಮಾನೇ ನ ಪ್ರಹೃಷ್ಯತಿ ।
ಸಮದುಃಖಸುಖೋ ಧೀರಃ ಪ್ರಶಾಂತ ಇತಿ ಕೀರ್ತ್ಯತೇ ॥ ೩೩೨ ॥

ಸುಖಂ ಹ್ಯವಮತಶ್ಶೇತೇ ಸುಖಂ ಚೈವ ಪ್ರಬುಧ್ಯತಿ ।
ಶ್ರೇಯಸ್ತರಮತಿಸ್ತಿಷ್ಠೇದವಮಂತಾ ವಿನಶ್ಯತಿ ॥ ೩೩೩ ॥

ಅಪಮಾನೀ ತು ನ ಧ್ಯಾಯೇತ್ತಸ್ಯ ಪಾಪಂ ಕದಾಚನ ।
ಸ್ವಧರ್ಮಮಪಿ ಚಾವೇಕ್ಷ್ಯ ಪರಧರ್ಮಂ ನ ದೂಷಯೇತ್ ॥ ೩೩೪ ॥

ಆತ್ಮಾನಮಪಿ ಜಾನೀಯಾತ್ಪರಂ ದೋಷೈಸ್ತು ನಾಕ್ಷಿಪೇತ್ ।
ಮಂತ್ರಹೀನಂ ಕ್ರಿಯಾಭಿರ್ವಾ ಜನ್ಮನಾಪ್ಯಥವಾ ಪುನಃ ॥ ೩೩೫ ॥

---

೩೩೧-೩೩೨. ಧರ್ಮ, ಮೋಕ್ಷ, ಸ್ವರ್ಗಗಳು ದಯೆಗೆ ಅಧೀನವಾಗಿವೆ. ಅವನಿಗೆ ಅವಮಾನವಾದರೆ ಕೋಪಬರುವಂತೆಯೂ ಇಲ್ಲ. ಗೌರವಿಸಿದರೆ ಸಂತೋಷ ಪಡುವಂತೆಯೂ ಇಲ್ಲ. ಸುಖದುಃಖಗಳು ಸಮವಾಗಿದ್ದರೆ ಅವನೇ ಶಾಂತನೆಂದು ಹೇಳುತ್ತಾರೆ.

೩೩೩. ಅವಮಾನಮಾಡಿದರೂ ಸುಖದಿಂದಿರುತ್ತಾನೆ. ಸುಖವಾಗಿ ಏಳುತ್ತಾನೆ. ಆದ್ದರಿಂದ ಶ್ರೇಯಸ್ಸಿಗೆ ಬೇಕಾದ ಬುದ್ಧಿಯನ್ನು ನೋಡಿಕೊಳ್ಳಬೇಕು. ಅವಮಾನಮಾಡುವವನು ನಾಶವಾಗುತ್ತಾನೆ.

೩೩೪. ಅಪಮಾನವಾದರೆ ಯೋಚಿಸಲೇಬಾರದು. ಅವನಿಗೆ ಪಾಪವೇ ಇರುವುದಿಲ್ಲ. ತನ್ನ ಧರ್ಮವನ್ನು ಮಾಡುತ್ತಾ ಪರಧರ್ಮವನ್ನು ದೂಷಿಸಬಾರದು.

೩೩೫. ತನ್ನನ್ನು ಧರ್ಮವಂತನೆಂದೇ ತಿಳಿಯಬೇಕು. ಬೇರೆಯ ದೋಷದಿಂದ ತಿರಸ್ಕರಿಸಿಕೊಳ್ಳಬಾರದು. ಮಂತ್ರಕ್ರಿಯೆಗಳಿಂದ ಅಥವಾ ಜನ್ಮದಿಂದಲಾಗಲೀ ತಿರಸ್ಕರಿಸಿಕೊಳ್ಳಬಾರದು.

**ದಮಶ್ಚಾದಯತೇ ಸರ್ವಂ ಹೀನಮಂಗಂ ಪಟೋ ಯಥಾ ।**
**ತೇ ನಿರರ್ಥಮಧೀಯತೇ ನಾಭಿಜಾನಂತಿ ಯೇ ದಮಂ ॥ ೩೩೬ ॥**

**ಶ್ರುತಸ್ಯ ಹಿ ದಮೋ ಮೂಲಂ ದಮೋ ಧರ್ಮಸ್ಸನಾತನಃ ।**
**ಯೋ ಹ್ಯಾತ್ಮಾನಂ ತುಲಯತೇ ಸುವರ್ಣತುಲಯಾ ಧೃತಂ ॥ ೩೩೭ ॥**

**ಸ ತೇನ ಧೃತಿಮಾನ್ಖ್ಯಾತಸ್ಸ ತದರ್ಥೇನ ಮೋಹಿತಃ ।**
**ವ್ರತಾನಾಮಪಿ ಸರ್ವೇಷಾಂ ದಮ ಏವ ಪರಾಯಣಂ ॥ ೩೩೮ ॥**

**ಯದ್ಯಧೀತೇ ಷಡಂಗಾನಿ ವೇದತತ್ತ್ವಾರ್ಥವಿದ್ದ್ವಿಜಃ ।**
**ದಮೇನ ತು ವಿಹೀನಶ್ಚ ಪೂಜಾಂ ನೈವೇಹ ಗಚ್ಛತಿ ॥ ೩೩೯ ॥**

**ದಮೇನ ಹೀನಂ ನ ಪುನಂತಿ ವೇದಾ**
**ಯದ್ಯಪ್ಯಧೀತಾಸ್ಸಹ ಷಡ್ಭಿರಂಗೈಃ ।**
**ಸಾಂಖ್ಯಂ ಚ ಯೋಗಶ್ಚ ಕುಲಂ ಚ ಜನ್ಮ**
**ತೀರ್ಥಾಭಿಷೇಕಶ್ಚ ನಿರರ್ಥಕಾನಿ ॥ ೩೪೦ ॥**

---

೩೩೬. ಕೆಟ್ಟುಹೋದ ಅಂಗವನ್ನು ಬಟ್ಟೆಯು ಮುಚ್ಚುವಂತೆ ದಮವು ಎಲ್ಲವನ್ನೂ ಮುಚ್ಚುತ್ತದೆ. ದಮವಿಲ್ಲದೇ ಅಧ್ಯಯನಮಾಡುವುದು ವ್ಯರ್ಥವು. ಅವರು ದಮದ ವಿಷಯವನ್ನು ತಿಳಿಯರು.

೩೩೭. ಜ್ಞಾನಕ್ಕೆ ದಮವೇ ಕಾರಣವು. ದಮವೇ ಪುರಾತನವಾದ ಧರ್ಮವು. ಯಾವನು ತನ್ನನ್ನು ಅದರಿಂದ ತೂಗಿಕೊಳ್ಳುತ್ತಾನೋ ಅವನು ಚಿನ್ನದ ತಕ್ಕಡಿಯಲ್ಲಿ ತೂಗಿಕೊಂಡಂತೆ ಆಗುವನು. ಅವನು ಅದರಿಂದಲೇ ಧೈರ್ಯವಂತನೆಂದು ಎನಿಸಿಕೊಳ್ಳುತ್ತಾನೆ. ಅವನು ಅದಕ್ಕೆ ಮೋಹಗೊಂಡಿರುವನು.

೩೩೮-೩೩೯. ಎಲ್ಲಾ ವ್ರತಗಳಿಗೂ ದಮವೇ ಕಾರಣವು. ವೇದತತ್ತ್ವವನ್ನು ಬಲ್ಲ ಬ್ರಾಹ್ಮಣನು ವೇದದ ಆರು ಅಂಗಗಳನ್ನೂ ಓದಿದರೂ ದಮವಿಲ್ಲದಿದ್ದರೆ ಅವನಿಗೆ ಗೌರವವೇ ಇರುವುದಿಲ್ಲ.

೩೪೦. ದಮವಿಲ್ಲದವನನ್ನು ಅವನು ಷಡಂಗಗಳನ್ನು ಓದಿದ್ದರೂ ಅವುಗಳು ಅವನನ್ನು ಪವಿತ್ರನನ್ನಾಗಿ ಮಾಡುವುದಿಲ್ಲ. ಅವನ ಸಾಂಖ್ಯ, ಯೋಗ, ಕುಲ, ಜನ್ಮ, ತೀರ್ಥಸ್ನಾನಗಳು ಒಂದೂ ಸಾರ್ಥಕವಿಲ್ಲದೇ ನಿರರ್ಥಕವಾಗುತ್ತವೆ.

ಅಮೃತಸ್ಯೇವ ತೃಪ್ಯೇತ ಅಪಮಾನಸ್ಯ ಯೋಗವಿತ್ ।
ವಿಷವಚ್ಚ ಜಗುಪ್ಸೇತ ಸಮ್ಮಾನಸ್ಯ ಸದಾ ದ್ವಿಜಃ ॥ ೩೪೧ ॥

ಅಪಮಾನಾತ್ತಪೋವೃದ್ಧಿಸ್ಸಮ್ಮಾನಾಚ್ಚ ತಪಃಕ್ಷಯಃ ।
ಅರ್ಚಿತಃ ಪೂಜಿತೋ ವಿಪ್ರೋ ದುಗ್ಧಾ ಗೌರಿವ ಗಚ್ಛತಿ ॥ ೩೪೨ ॥

ಪುನರಾಪ್ಯಾಯತೇ ಧೇನುಃ ಸತೃಣೈಸ್ಸಲಿಲೈರ್ಯಥಾ ।
ಏವಂ ಜಪೈಶ್ಚ ಹೋಮೈಶ್ಚ ಪುನರಾಪ್ಯಾಯತೇ ದ್ವಿಜಃ ॥ ೩೪೩ ॥

ಆಕ್ರೋಶಕಸಮೋ ಲೋಕೇ ಸುಹೃದನ್ಯೋ ನ ವಿದ್ಯತೇ ।
ಯಸ್ತು ದುಷ್ಕೃತಮಾದಾಯ ಸುಕೃತಂ ಸ್ವಂ ಪ್ರಯಚ್ಛತಿ ॥ ೩೪೪ ॥

ಆಕ್ರೋಶಮಾನಾನ್ನಾಕ್ರೋಶೇನ್ಮನಸ್ಸ್ವಂ ವಿನಿವರ್ತಯೇತ್ ।
ಸನ್ನಿಯಮ್ಯ ತದಾತ್ಮಾನಮಮೃತೇನಾಭಿಷಿಂಚತಿ ॥ ೩೪೫ ॥

---

೩೪೧. ಬ್ರಾಹ್ಮಣನು, ಅಪಮಾನವಾಯಿತೆಂದರೆ ಅಮೃತವನ್ನು ಕುಡಿದಂತೆ ತೃಪ್ತಿಪಡಬೇಕು. ಬಹುಮಾನದಿಂದ ವಿಷವನ್ನು ಕುಡಿದಂತೆ ಅಸಹ್ಯಪಡಬೇಕು.

೩೪೨. ಅವಮಾನಹೊಂದೋಣವರಿಂದ ತಪಸ್ಸಿನ ವೃದ್ಧಿಯೂ, ಸಮ್ಮಾನದಿಂದ ತಪಸ್ಸಿನ ನಾಶವೂ ಉಂಟಾಗುತ್ತದೆ. ಗೌರವಿಸಿ ಪೂಜಿಸಲ್ಪಟ್ಟ ಬ್ರಾಹ್ಮಣನು ಕರೆದ ಹಸುವಿನಂತೆ ಬರಿದಾಗುತ್ತಾನೆ.

೩೪೩. ಅನಂತರ ಆ ಹಸುವಿಗೆ ಹುಲ್ಲನ್ನೂ ನೀರನ್ನೂ ಹಾಕಿ ಸಮಾಧಾನ ಮಾಡುವಂತೆ ಇವನು ಜಪದಿಂದಲೂ ಹೋಮದಿಂದಲೂ ಮತ್ತೆ ಮೊದಲಿನ ತಪಸ್ಸನ್ನು ಹೊಂದಬೇಕು.

೩೪೪. ನಮ್ಮ ಮೇಲೆ ಕೋಪಮಾಡಿ ಬಯ್ಯುವವನು ನಮ್ಮ ಪಾಪವನ್ನು ತೆಗೆದುಕೊಂಡು ಅವನ ಪುಣ್ಯವನ್ನು ಕೊಡುವುದರಿಂದ ಇವನಂತಹ ಸ್ನೇಹಿತನೇ ಇಲ್ಲವೆಂದು ಹೇಳಬೇಕು.

೩೪೫. ಬೈದವರನ್ನು ಬೈಯದೆ ತನ್ನ ಮನಸ್ಸನ್ನು ಬೈಯ್ಯುವಿಕೆಯಿಂದ ಹಿಂತಿರುಗಿಸಬೇಕು. ಹಾಗೆ ತಿರುಗಿಸಿದರೆ ತನ್ನ ಆತ್ಮನನ್ನು ಆತನು ಅಮೃತದಿಂದ ಚುಮುಕಿಸಿಕೊಳ್ಳುತ್ತಾನೆ.

ಕಪಾಲಂ ವೃಕ್ಷಮೂಲಾನಿ ಕುಚೇಲಮಸಹಾಯತಾ ।
ಅನಪೇಕ್ಷಾ ಬ್ರಹ್ಮಚರ್ಯಂ ನಯಂತಿ ಪರಮಾಂ ಗತಿಂ ॥ ೩೪೬ ॥

ಕಾಮಕ್ರೋಧೌ ವಿನಿರ್ಜಿತ್ಯ ಕಿಮರಣ್ಯೈಃ ಕರಿಷ್ಯತಿ ।
ಅನ್ನೇನ ಧಾರ್ಯತೇ ದೇಹಃ ಕುಲಂ ಶೀಲೇನ ಧಾರ್ಯತೇ ॥ ೩೪೭ ॥

ಪ್ರಾಣಾ ಮಿತ್ರೇಣ ಧಾರ್ಯಂತೇ ಕ್ರೋಧಸ್ಸತ್ಯೇನ ಧಾರ್ಯತೇ ।
ಯಸ್ತು ಕ್ರೋಧಂ ಸಮುತ್ಪನ್ನಂ ಸಂಧಾರಯತಿ ಚಾತ್ಮನಃ ॥ ೩೪೮ ॥

ಅಕ್ರೋಧೇನ ಜಯೇದ್ವೀರಃ ಕ ಸ್ತೇನ ಸದೃಶೋ ಭಾವಿ ।
ಯಶ್ಚ ಕ್ರೋಧಂ ಸಮುತ್ಪನ್ನಂ ಭಯಂ ಸಂಯಮ್ಯ ತಿಷ್ಠತಿ ॥ ೩೪೯ ॥

ಉತ್ತಮಂ ಸಾರಥಿಂ ಮನ್ಯೇ ಯೋಽ ರಾಗೇ ನ ವಿಲಂಬತೇ ।
ಏಷ ಪೈತಾಮಹೋ ಗುಹ್ಯೋ ಬ್ರಹ್ಮರಾಶಿಸ್ಸನಾತನಃ ॥ ೩೫೦ ॥

---

೩೪೬. ಕಪಾಲವನ್ನು ಹಿಡಿದಿರುವುದು. ಮರದ ಬುಡದಲ್ಲಿರುವುದು, ಹರಕು ಬಟ್ಟೆ ಹೊದೆಯುವುದು, ಒಬ್ಬಂಟಿಗನಾಗಿರುವುದು, ಆಶೆಪಡದಿರುವುದು, ಬ್ರಹ್ಮ ಚರ್ಯದಿಂದಿರುವುದು, ಇವು ಉತ್ತಮಗತಿಯನ್ನು ಕೊಡುತ್ತವೆ.

೩೪೭. ಕಾಮಕ್ರೋಧಗಳನ್ನು ಜಯಿಸಿದರೆ ಅರಣ್ಯಕ್ಕೇಕೆ ಹೋಗಬೇಕು? ಅನ್ನದಿಂದ ದೇಹವನ್ನು ಪೋಷಿಸಿಕೊಳ್ಳುತ್ತೇವೆ. ಕುಲವು ಶೀಲದಿಂದ ಪ್ರಕಾಶಿ ಸುತ್ತದೆ.

೩೪೮. ಪ್ರಾಣಗಳನ್ನು ಮಿತ್ರನು ರಕ್ಷಿಸಿ ಹಿಡಿಯುತ್ತಾನೆ. ಕ್ರೋಧವನ್ನು ಸತ್ಯವು ಹಿಡಿಯುತ್ತದೆ. ಯಾವನು ಹುಟ್ಟಿದ ಕೋಪವನ್ನು ತಡೆಯುತ್ತಾನೆಯೋ ಅವನು ಆ ಕೋಪ ಹಿಡಿವುದರಿಂದ (ಶಾಂತಿಯಿಂದ) ಲೇ ಜಯಿಸಿದರೆ ಆ ವೀರನಿಗೆ ಸಮನು ಲೋಕದಲ್ಲಿ ಯಾವನಿದ್ದಾನೆ?

೩೪೯-೩೫೦. ತನ್ನಲ್ಲಿ ಹುಟ್ಟಿದ ಕೋಪವನ್ನು ಯಾವನು ಭಯಪಟ್ಟು ಹಿಡಿಯುತ್ತಾನೆಯೋ ಅವನು ಉತ್ತಮನಾದ ಸಾರಥಿಯೆಂದು ತಿಳಿಯುತ್ತೇನೆ. ಅವನು ಆಶೆಯಲ್ಲಿ ಸಾವಕಾಶಪಡುವುದಿಲ್ಲ. ಇದೇ ಬ್ರಹ್ಮನ ಗುಟ್ಟು. ಹಿಂದಿನಿಂದಲೂ ಬಂದ ಬ್ರಹ್ಮದ ರಾಶಿಯು.

ಧರ್ಮಸ್ಯ ಯೋಽಸ್ತಿ ಹೃದಯಂ ಮಯಾ ತೇ ಕಥಿತೋಽನಘ ।
ಅನ್ಯೇ ಚ ಯಜ್ವಿನಾಂ ಲೋಕಾ ಅನ್ಯೇ ಚಾಪಿ ತಪಸ್ವಿನಾಂ ॥ ೩೫೧ ॥

ಅನ್ಯೇ ದಮವತಾಂ ಲೋಕಾಸ್ಸರ್ವೇ ಪರಮಪೂಜಿತಾಃ ।
ಏಷ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಪದ್ಯತೇ ॥ ೩೫೨ ॥

ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ।
ನ ಚೈಷ ದೋಷೋ ಮಂತವ್ಯಃ ಕ್ಷಮಾ ಪ್ರಜ್ಞಾವತಾಂ ಬಲಂ ॥ ೩೫೩ ॥

ಪ್ರಶಮಂ ಯೋ ನ ಜಾನಾತಿ ಇಷ್ಟಾಪೂರ್ತಾತ್ಸ ಹೀಯತೇ ।
ಯತ್ಕ್ರೋಧಯುಕ್ತೋ ಜಪತಿ ಜುಹೋತಿ ಚ ಯದರ್ಚತಿ ॥ ೩೫೪ ॥

ಸರ್ವಂ ಕ್ಷರತಿ ತತ್ತಸ್ಯ ಭಿನ್ನಭಾಂಡಾದಿವೋದಕಂ ।
ದಮಾಧ್ಯಾಯಮಿದಂ ಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್ ॥ ೩೫೫ ॥

ಸ ಧರ್ಮನಾವಮಾರುಹ್ಯ ದುರ್ಗಾಣ್ಯತಿತರಿಷ್ಯತಿ ।
ಧರ್ಮಾಧ್ಯಾಯಮಿಮಂ ಪುಣ್ಯಂ ಸತತಂ ಶ್ರಾವಯೇದ್ದ್ವಿಜಃ ॥ ೩೫೬ ॥

---

೩೫೧. ಧರ್ಮದ ಹೃದಯವನ್ನೀ ನಿನಗೆ ಹೇಳಿದ್ದೇನೆ. ಯಾಗಮಾಡಿದವರು, ತಪಸ್ವಿಗಳು, ದಯವಂತರು, ಇವರ ಲೋಕಗಳು ಬೇರೆ ಬೇರೆ ಇವೆ. ಇವೆಲ್ಲವೂ ಉತ್ಕೃಷ್ಟವಾದುವುಗಳೇ.

೩೫೨-೩೫೩. ಕ್ಷಮೆಯಿಂದ ಕೂಡಿದವನನ್ನು ಜನರು ಅಶಕ್ತನೆಂದು ತಿಳಿಯುತ್ತಾರೆ. ಇದೊಂದೇ ಕ್ಷಮಾವಂತರಿಗಿರುವ ದೋಷವು. ಮತ್ತೊಂದಿಲ್ಲ. ಇದೂ ಒಂದು ದೋಷವಲ್ಲ. ಕ್ಷಮೆಯು ಜ್ಞಾನಿಗಳಿಗೆ ಬಲವು.

೩೫೪. ಶಮೆಯನ್ನು ತಿಳಿಯದವನು ಇಷ್ಟಾರ್ಥಗಳನ್ನು ಹೊಂದುವುದೇ ಇಲ್ಲ. ಕೋಪಿಷ್ಠನಾಗಿ ಮಾಡುವ ಜಪ, ಹೋಮ, ಪೂಜೆ ಇವೆಲ್ಲವೂ ತೂತು ಮಡಕೆಯಿಂದ ನೀರು ಸೋರಿಹೋಗುವಂತೆ ಅದೆಲ್ಲವೂ ಹೋಗುತ್ತದೆ.

೩೫೫-೩೫೬. ಈ ಧರ್ಮಾಧ್ಯಾಯವನ್ನು ಬೆಳಗ್ಗೆ ಎದ್ದು ಓದುವವನು ಧರ್ಮದ ಹಡಗನ್ನು ಹತ್ತಿ ಕಷ್ಟಗಳಿಂದ ಪಾರಾಗುತ್ತಾನೆ. ಈ ಧರ್ಮಾಧ್ಯಾಯವನ್ನು ಕೇಳಿಸುವವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಲ್ಲಿಂದ ಬೀಳುವುದೇ ಇಲ್ಲ.

ಸ ಬ್ರಹ್ಮಲೋಕಮಾಪ್ನೋತಿ ತಸ್ಮಾನ್ನ ಚ್ಯವತೇ ಪುನಃ ।
ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ॥ ೩೫೭ ॥

ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ।
ಮಾತೃವತ್ಪರದಾರಾಂಶ್ಚ ಪರದ್ರವ್ಯಾಣಿ ಲೋಷ್ಟವತ್ ॥ ೩೫೮ ॥

ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ।
ಪಚನಂ ವೈಶ್ವದೇವಾರ್ಥೇ ಸತ್ಯಾರ್ಥೇ ಯಸ್ಯ ಜೀವಿತಂ ॥ ೩೫೯ ॥

ಪುತ್ರಾರ್ಥಂ ಮೈಥುನಂ ಯಸ್ಯ ಸ್ವರ್ಗಾರ್ಥಂ ತಸ್ಯ ಜೀವಿತಂ ।
ಏತದ್ಭವೇಚ್ಚ ಸರ್ವಸ್ವಂ ಧಾತೂನಾಮಿವ ಕಾಂಚನಂ ॥ ೩೬೦ ॥

ಸರ್ವಭೂತಹಿತಂ ರಾಜನ್ನಧೀತ್ಯಾಮೃತಮಶ್ನುತೇ ।

॥ ಪುಲಸ್ತ್ಯೋವಾಚ ॥

ಏವಂ ವೈ ಧರ್ಮಸರ್ವಸ್ವಮುಕ್ತ್ವಾ ತೇ ತು ಶುನಸ್ಸಖಂ ॥ ೩೬೧ ॥

---

೩೫೭. ಈ ಧರ್ಮಸರ್ವಸ್ವವನ್ನು ಕೇಳು. ಕೇಳಿ ಮನಸ್ಸಿನಲ್ಲಿಟ್ಟುಕೊ. ತನಗೆ ಕೆಟ್ಟದಾಗಿರುವುದನ್ನು ಇತರರಿಗೆ ಮಾಡಬಾರದು.

೩೫೮. ಪರರ ಹೆಂಡಿರನ್ನು ತಾಯಿಯಂತೆಯೂ, ಪರರ ಪದಾರ್ಥವನ್ನು ಮಣ್ಣುಹೆಂಟೆಯಂತೆಯೂ, ಎಲ್ಲಾ ಪ್ರಾಣಿಗಳನ್ನೂ ತನ್ನಂತೆಯೂ ನೋಡತಕ್ಕವನೇ ನೋಡತಕ್ಕವನು. ಅಂದರೆ ಜ್ಞಾನಿಯು.

೩೫೯. ಯಾವನ ಅಡಿಗೆಯು ವೈಶ್ವದೇವಕ್ಕೋಸ್ಕರವೋ, ಯಾವನ ಜೀವಿತವು ಸತ್ಯಕ್ಕೋಸ್ಕರವೋ, ಯಾವನ ರತಿಯು ಮಕ್ಕಳನ್ನು ಹುಟ್ಟಿಸುವುದಕ್ಕೋಸ್ಕರವೋ ಅವನ ಜೀವನವು ಸ್ವರ್ಗಕ್ಕೆಂದು ತಿಳಿಯಬೇಕು.

೩೬೦. ಧಾತುಗಳಿಗೆ ಚಿನ್ನವು ಹೇಗೆ ಉತ್ತಮವೋ ಹಾಗೆ ಇದೇ ಎಲ್ಲಕ್ಕೂ ಸಾರವು. ಇದು ಸರ್ವಭೂತಗಳಿಗೂ ಹಿತವಾದುದು. ಓದಿದರೆ ಅಮೃತವನ್ನು ಕುಡಿಯುತ್ತಾನೆ.

೩೬೧-೩೬೨. ಪುಲಸ್ತ್ಯನು ಹೇಳಿದನು :—ಈರೀತಿ ಧರ್ಮದ ಗುಟ್ಟನ್ನೆಲ್ಲಾ

ತೇನೈವ ಸಹಿತಾಸ್ಸರ್ವೇ ಗತ್ವಾ ಕಿಂಚಿದ್ವನಾಂತರಂ ।
ಸರೋಽಪಶ್ಯನ್ಸುವಿಸ್ತೀರ್ಣಂ ಪದ್ಮೋತ್ಪಲಜಲಾವೃತಂ ॥ ೩೬೨ ॥

ತತ್ರಾವತಾರಂ ಕೃತ್ವಾ ತೇ ಬಿಸಾನಿ ಚ ಕಲಾಪಶಃ ।
ತೀರೇ ನಿಕ್ಷಿಪ್ಯ ಸರಸಶ್ಚಕ್ರುಃ ಪುಣ್ಯಾಂ ಜಲಕ್ರಿಯಾಂ ॥ ೩೬೩ ॥

ಅಥೋತ್ತೀರ್ಯ ಜಲಾತ್ತಸ್ಮಾತ್ತೇ ಸಮೇತ್ಯ ಪರಸ್ಪರಂ ।
ಬಿಸಾನಿ ತಾನ್ಯಪಶ್ಯಂತ ಇದಂ ವಚನಮಬ್ರುವನ್ ॥ ೩೬೪ ॥

॥ ಋಷಯ ಊಚುಃ ॥

ಕೇನ ಕ್ಷುಧಾಭಿತಪ್ತಾನಾಮಸ್ಮಾಕಂ ಪಾಪಕರ್ಮಣಾ ।
ನೃಶಂಸೇನಾಪನೀತಾನಿ ಬಿಸಾನ್ಯಾಹಾರಕಾಂಕ್ಷಿಣಾ ॥ ೩೬೫ ॥

ತೇ ಶಂಕಮಾನಾಸ್ತ್ವನ್ಯೋಽನ್ಯಂ ಪರ್ಯಪೃಚ್ಛನ್ದ್ವಿಜೋತ್ತಮಾಃ ।
ಚಕ್ರುಶ್ಚ ನಿಶ್ಚಯಂ ಸರ್ವೇ ಶಪಥಂ ಪಥಿ ಪಾರ್ಥಿವ ॥ ೩೬೬ ॥

---

ಆ ಶುನಸ್ಸಖನಿಗೆ ಹೇಳಿ ಅವನೊಡನೆಯೇ ಅವರೆಲ್ಲರೂ ಸ್ವಲ್ಪ ದೂರ ಕಾಡಿನೊಳಗೆ ಹೋಗಿ ಒಂದು ದೊಡ್ಡದಾದ ಕಮಲದಿಂದ ಕೂಡಿದ ಸರೋವರವನ್ನು ನೋಡಿದರು.

೩೬೩. ಅವರು ಆಗ ಕೆಳಗೆ ಇಳಿದು ಆ ಮೃಣಾಲನಾಳವನ್ನು ಕಿತ್ತು ದಡದಲ್ಲಿಟ್ಟುಕೊಂಡು ನೀರಿನಲ್ಲಿ ಮಾಡಬೇಕಾದ ಸಂಧ್ಯಾವಂದನಾದಿ ಕರ್ಮಗಳೆಲ್ಲವನ್ನೂ ಮಾಡಿದರು.

೩೬೪. ಆ ನೀರಿನಿಂದ ಮೇಲಕ್ಕೆ ಬಂದು ಎಲ್ಲರೂ ಸೇರಿ ಆ ಮೃಣಾಳಗಳನ್ನು ಅಲ್ಲಿ ಕಾಣದೆ ಇಂತೆಂದುಕೊಂಡರು.

೩೬೫. ಋಷಿಗಳು ಹೇಳಿದರು :—ಹಸಿವಿನಿಂದ ಕೂಡಿದ ನಮ್ಮಗಳ ಆಹಾರವಾದ ಈ ಮೃಣಾಳಗಳನ್ನು ಆಹಾರವನ್ನಪೇಕ್ಷಿಸುವ ಯಾವ ಪಾಪಿಯು ತೆಗೆದುಕೊಂಡು ಹೋದನು ?

೩೬೬. ಅವರು ಒಬ್ಬರಿಗೊಬ್ಬರು ಸಂದೇಹಪಡುತ್ತ ಯಾರು ತೆಗೆದುಕೊಂಡಿರೆಂದು ಕೇಳಿದರು? ಆಗ ಆ ದಾರಿಯಲ್ಲಿ ಅವರು ಒಬ್ಬರಿಗೊಬ್ಬರು ಪ್ರತಿಜ್ಞೆಗಳನ್ನು ಮಾಡಿದರು.

॥ ಕಾತ್ಯಾಯನ ಉವಾಚ ॥

**ಸರ್ವತ್ರ ಸರ್ವಂ ಹರತು ನ್ಯಾಸೇ ಲೋಭಂ ಕರೋತು ಸಃ ।**
**ಕೂಟಸಾಕ್ಷಿತ್ವಮಭ್ಯೇತು ಬಿಸಸ್ತೈನ್ಯಂ ಕರೋತಿ ಯಃ ॥ ೩೬೭ ॥**

**ದಂಭೇನ ಧರ್ಮಂ ಚರತು ರಾಜಾನಂ ಚೋಪಸೇವತಾಂ ।**
**ಮಧುಮಾಂಸಂ ಸಮಶ್ನಾತು ಬಿಸಸ್ತೈನ್ಯಂ ಕರೋತಿ ಯಃ ॥ ೩೬೮ ॥**

**ಅನೃತಂ ಭಾಷತು ಸದಾ ವಾರ್ಧಿಕ್ಯಂ ಚೋಪಜೀವತು ।**
**ದದಾತು ಕನ್ಯಾ ಶುಲ್ಕೇನ ಬಿಸಸ್ತೈನ್ಯಂ ಕರೋತಿ ಯಃ ॥ ೩೬೯ ॥**

॥ ವಸಿಷ್ಠ ಉವಾಚ ॥

**ಅನೃತೌ ಮೈಥುನಂ ಯಾತು ದಿವಾಸ್ವಪ್ನಂ ನಿಷೇವತು ।**
**ಅನ್ಯೋನ್ಯಾತಿಥಿತಾಮೇತು ಬಿಸಸ್ತೈನ್ಯಂ ಕರೋತಿ ಯಃ ॥ ೩೭೦ ॥**

**ಏಕಕೂಪೇ ವಸೇದ್ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ ।**
**ತಸ್ಯ ಸಾಲೋಕ್ಯತಾಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥ ೩೭೧ ॥**

---

೩೬೭. ಕಾತ್ಯಾಯನನು ಹೇಳಿದನು :—ಯಾವನು ನ್ಯಾಸದಲ್ಲಿ ಆಸೆಪಡುತ್ತಾನೋ ಅವನು ಎಲ್ಲ ಕಡೆಯಲ್ಲೂ ಎಲ್ಲವನ್ನೂ ಕದಿಯಲಿ. ಯಾವನು ಈ ಮೃಣಾಳವನ್ನು ಕದಿಯುವನೋ ಅವನು ಸುಳ್ಳುಸಾಕ್ಷಿಯನ್ನು ಹೇಳುವವನಾಗಲಿ.

೩೬೮. ಈ ಮೃಣಾಳಗಳನ್ನು ಕದ್ದವನು ದಂಭದಿಂದ ಎಲ್ಲವನ್ನೂ ಮಾಡಲಿ. ರಾಜನನ್ನು ಸೇವಿಸಲಿ. ಮಧುವನ್ನು ಮಾಂಸವನ್ನು ತಿನ್ನಲಿ.

೩೬೯. ಈ ಬಿಸಗಳನ್ನು ಕದ್ದವನು ಯಾವಾಗಲೂ ಸುಳ್ಳಾಡುವವನಾಗಲಿ. ಮುಪ್ಪಿನಲ್ಲಿಯೂ ಬದುಕಿರಲಿ. ಹೆಣ್ಣುಮಗಳನ್ನು ಹಣವನ್ನು ತೆಗೆದುಕೊಂಡು ಮದುವೆಮಾಡಿಕೊಡಲಿ,

೩೭೦-೩೭೧. ವಸಿಷ್ಠನು ಹೇಳಿದನು :—ಬಿಸವನ್ನು ಕದ್ದವನು ಋತುಕಾಲವಲ್ಲದಿದ್ದಾಗ ಮೈಥುನವನ್ನು ಮಾಡಿದ ದೋಷವನ್ನು ಹೊಂದಲಿ. ಹಗಲು ನಿದ್ದೆ ಮಾಡಿದ ದೋಷವನ್ನು ಪಡೆಯಲಿ. ತಮ್ಮತಮ್ಮಲ್ಲಿಯೇ ಊಟಉಪಚಾರಗಳಿಗೆ ಹೇಳಿಕೊಂಡ ದೋಷವನ್ನು ಹೊಂದಲಿ. ಒಂಟಿಯಾಗಿರುವ ಗ್ರಾಮದಲ್ಲಿ ಶೂದ್ರಿತಿಗೆ ಗಂಡನಾಗಿರುವವನ ದೋಷವನ್ನು ಹೊಂದಲಿ.

॥ ಭರದ್ವಾಜ ಉವಾಚ ॥

ನೃಶಂಸಸ್ತೇಷು ಸರ್ವೇಷು ಸಮೃದ್ಧ್ಯಾ ಚಾಪ್ಯಹಂಕೃತಃ ।
ಮತ್ಸರೀ ಪಿಶುನಶ್ಚೈವ ಬಿಸಸ್ತೈನ್ಯಂ ಕರೋತಿ ಯಃ ॥ ೩೭೨ ॥

ಪ್ರತ್ಯಾಕ್ರೋಶತ್ವವಾಕ್ಕೃಷ್ಟಸ್ತಾಡಯತ್ವನ್ಯತಾಡಿತಃ ।
ವಿಕ್ರೀಣಾತು ರಸಾಂಶ್ಚೈವ ಬಿಸಸ್ತೈನ್ಯಂ ಕರೋತಿ ಯಃ ॥ ೩೭೩ ॥

॥ ಗೌತಮ ಉವಾಚ ॥

ಅತಿಥಿಂ ಚ ಸದಾ ಪ್ರಾಪ್ಯ ಪಾಕಭೇದಂ ಕರೋತು ಸಃ ।
ಶೂದ್ರಾನ್ನಂ ವಾ ಸದಾಶ್ನಾತು ಬಿಸಸ್ತೈನ್ಯಂ ಕರೋತಿ ಯಃ ॥ ೩೭೪ ॥

ದತ್ವಾ ದಾನಂ ಕೀರ್ತಯತು ಪರಭಾರ್ಯಾಂ ಸ ಗಚ್ಛತು ।
ಏಕಾಕೀ ಮಿಷ್ಟಮಶ್ನಾತು ಬಿಸಸ್ತೈನ್ಯಂ ಕರೋತಿ ಯಃ ॥ ೩೭೫ ॥

॥ ವಿಶ್ವಾಮಿತ್ರ ಉವಾಚ ॥

ನಿತ್ಯಂ ಕಾಮಪರಸ್ಸೋಽಸ್ತು ದಿವಾ ಸೇವತು ಮೈಥುನಂ ।
ನಿತ್ಯಂ ತು ಪಾತಕೀ ಚೈವ ಬಿಸಸ್ತೈನ್ಯಂ ಕರೋತಿ ಯಃ ॥ ೩೭೬ ॥

---

೩೭೨-೩೭೩. ಭಾರದ್ವಾಜನು ಹೇಳಿದನು :—ಎಲ್ಲರಲ್ಲಿಯೂ ಕ್ರೂರ, ಐಶ್ವರ್ಯದಿಂದ ಉಂಟಾದ ಅಹಂಕಾರವುಳ್ಳವನು, ಅನ್ಯರ ಶುಭವನ್ನು ನೋಡಿ ದ್ವೇಷಿಸುವವನು, ಚಾಡಿಕೋರ, ಮಾತಿಗೆ ಬದಲು ಮಾತಾಡುವಾಗ ಕೋಪದಿಂದ ಮಾತಾಡುವುದು, ಇತರರು ಹೊಡೆದರೆ ಕೋಪಗೊಂಡು ಅವರನ್ನು ಮತ್ತೆ ಹೊಡೆವುದು, ರಸಗಳನ್ನು ಮಾರುವುದು ಇಂತಹವನಾಗಿ ಬಿಸಗಳನ್ನು ಕದ್ದವನು ಆಗಲಿ.

೩೭೪. ಗೌತಮನು ಹೇಳಿದನು :—ಬಿಸವನ್ನು ಕದ್ದವನು ಯಾವಾಗಲೂ ಅತಿಥಿಯನ್ನು ಹೊಂದಿ ಪಾಕವನ್ನು ಮಾಡಿ ಅವರಿಗೊಂದು ತಾನೊಂದು ಊಟಮಾಡಿದ ಪಾಪವನ್ನು ಹೊಂದಲಿ. ಶೂದ್ರಾನ್ನವನ್ನು ತಿಂದ ದೋಷ ಆತನಿಗೆ ಬರಲಿ. ದಾನವನ್ನು ಕೊಟ್ಟು ಅದನ್ನು ಹೊಗಳಿಕೊಂಡವನ ದೋಷವು ಬರಲಿ. ತಾನೊಬ್ಬನೇ ಮೃಷ್ಟಾನ್ನವನ್ನು ಊಟಮಾಡುವವನ ದೋಷವೂ ಬರಲಿ.

೩೭೫—೩೭೬. ಬಿಸವನ್ನು ಕದ್ದವನು ಯಾವಾಗಲೂ ಪಾಪಿಯಾಗಿರಲಿ. ಹಗಲಿನಲ್ಲಿ ಮೈಥುನವನ್ನಾಚರಿಸಲಿ. ನಿತ್ಯವೂ ಪಾಪಮಾಡುತ್ತಿರಲಿ. ಇತರರು ಮಾಡಿದ

**ಪರಪಾಕಂ ಸದಾಶ್ನಾತು ಪರದಾರಾಂಶ್ಚ ಸೇವತು ।**
**ಪರನಿಂದಾರತಶ್ಚಾಸ್ತು ಬಿಸಸ್ತೈನ್ಯಂ ಕರೋತಿ ಯಃ** ॥ ೩೭೭ ॥

**॥ ಜಮದಗ್ನಿರುವಾಚ ॥**

**ಮಾತರಂ ಪಿತರಂ ಚೈವ ಅವಮನ್ಯ ತು ದುರ್ಮತಿಃ ।**
**ಸ್ವಸುತಾದತ್ತವೃತ್ತಿಃ ಸ್ಯಾತ್ ಬಿಸಸ್ತೈನ್ಯಂ ಕರೋತಿ ಯಃ** ॥ ೩೭೮ ॥

**ಪರಪಾಕಂ ಸದಾಶ್ನಾತು ಪರನಾರೀ ಚ ಸೇವತು ।**
**ಗವಾಂ ವಿಕ್ರಯಕಸ್ಸೋಽಸ್ತು ಬಿಸಸ್ತೈನ್ಯಂ ಕರೋತಿ ಯಃ** ॥ ೩೭೯ ॥

**॥ ಪರಾಶರ ಉವಾಚ ॥**

**ಪರಸ್ಯ ಯಾತು ಪ್ರೇಷ್ಯತ್ವಂ ಕ್ರೋಧೀ ಜನ್ಮನಿ ಜನ್ಮನಿ ।**
**ಸರ್ವಧರ್ಮಕ್ರಿಯಾಹೀನೋ ಬಿಸಸ್ತೈನ್ಯಂ ಕರೋತಿ ಯಃ** ॥ ೩೮೦ ॥

**॥ ಶುನಸ್ಸಖ ಉವಾಚ ॥**

**ನ್ಯಾಯೇನ ವೇದಾಧ್ಯಯನಂ ಗೃಹಸ್ಥೋಽಸ್ತು ಪ್ರಿಯಾತಿಥಿಃ ।**
**ಸತ್ಯಂ ವದತು ವಾಜಸ್ರಂ ಬಿಸಸ್ತೈನ್ಯಂ ಕರೋತಿ ಯಃ** ॥ ೩೮೧ ॥

---

ಅನ್ನವನ್ನು ತಿನ್ನುತ್ತಿರಲಿ. ಇತರರ ಹೆಂಡಿರನ್ನೇ ಸೇವಿಸುತ್ತಿರಲಿ. ಪರರನ್ನು ಬಯ್ಯುತ್ತಲೇ ಇರಲಿ. (ಇವರಿಗೆ ಬರುವ ಪಾಪವು ಬಿಸವನ್ನು ಕದ್ದವನಿಗೆ ಬರಲಿ).

೩೭೮-೩೭೯. ಜಮದಗ್ನಿಯು ಹೇಳಿದನು :—ಬಿಸವನ್ನು ಕದ್ದವನಿಗೆ ತಾಯಿ ತಂದೆಗಳನ್ನು ಅಪಮಾನಮಾಡಿದ ಪಾಪವು ಬರಲಿ. ತನ್ನ ಮಗಳಿಂದ ಜೀವಿಸುವವನ ಪಾಪವು ಬರಲಿ. ಪರಪಾಕವನ್ನೇ ತಿನ್ನುತ್ತಿರುವವನ ಪಾಪವು ಬರಲಿ. ಪರರ ಹೆಂಗಸರನ್ನು ಸೇವಿಸಿದ ಪಾಪವು ಬರಲಿ. ಗೋವನ್ನು ಮಾರಿದ ಪಾಪವು ಬರಲಿ.

೩೮೦. ಪರಾಶರನು ಹೇಳಿದನು :—ಬಿಸವನ್ನು ಕದ್ದವನು ಮತ್ತೊಬ್ಬನಿಗೆ ಆಳಾಗಲಿ. ಜನ್ಮಜನ್ಮದಲ್ಲಿಯೂ ಕ್ರೋಧವುಳ್ಳವನಾಗಲಿ. ಧರ್ಮಗಳನ್ನೆಲ್ಲಾ ಬಿಟ್ಟು ಕ್ರಿಯಾಹೀನನಾಗಲಿ.

೩೮೧. ಶುನಸ್ಸಖನು ಹೇಳಿದನು :—ಬಿಸವನ್ನು ಕದ್ದವನು ನ್ಯಾಯದಿಂದ ಪವೇದಾಧ್ಯಯನ ಮಾಡಿದ ಗೃಹಸ್ಥನಾಗಿ ಅತಿಥಿಗಳಲ್ಲಿ ಪ್ರಿಯನಾಗಿರಲಿ. ಯಾವಾಗಲ ಸತ್ಯವನ್ನೇ ಹೇಳಲಿ.

ಅಗ್ನಿಂ ಜುಹೋತು ವಿಧಿವದ್ಯಜ್ಞಂ ಯಜತು ನಿತ್ಯಶಃ ।
ಬ್ರಹ್ಮಣಸ್ಸದನಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥ ೩೮೨ ॥

॥ ಋಷಯ ಊಚುಃ ॥

ಇಷ್ಟಮೇತದ್ದ್ವಿಜಾತೀನಾಂ ಯೋಽಯಂ ತೇ ಶಪಥಃ ಕೃತಃ ।
ತ್ವಯಾ ಕೃತಂ ಬಿಸಸ್ತೈನ್ಯಂ ಸರ್ವೇಷಾಂ ನಃ ಶುನಸ್ಸಖ ॥ ೩೮೩ ॥

॥ ಶುನಸ್ಸಖ ಉವಾಚ ॥

ಮಯಾ ಹ್ಯಂತರ್ಹಿತಾನ್ಯಾಸನ್ಬಿಸಾನೀಮಾನಿ ವೋ ದ್ವಿಜಾಃ ।
ಧರ್ಮಂ ವೈ ಶ್ರೋತುಕಾಮೇನ ಜಾನೀಧ್ವಂ ಮಾಂ ಚ ವಾಸವಂ ॥ ೩೮೪ ॥

ಅಲೋಭಾದಕ್ಷಯಾ ಲೋಕಾ ಜಿತಾ ವೋ ಮುನಿಸತ್ತಮಾಃ ।
ವಿಮಾನಮಧಿತಿಷ್ಠಧ್ವಂ ಗಚ್ಛಾಮಸ್ತ್ರಿದಶಾಲಯಂ ॥ ೩೮೫ ॥

---

೩೮೨. ವಿಧಿವತ್ತಾಗಿ ಅಗ್ನಿಯಲ್ಲಿ ಹೋಮಮಾಡಲಿ. ಯಾವಾಗಲೂ ಯಜ್ಞ ಮಾಡುತ್ತಿರಲಿ. ಬ್ರಹ್ಮಲೋಕವನ್ನು ಹೊಂದಲಿ. ಬಿಸವನ್ನು ಕದ್ದವನಿಗೆ ಇಷ್ಟು ಆಗಲಿ.

೩೮೩. ಋಷಿಗಳು ಹೇಳಿದರು :—ಎಲೈ ಶುನಸ್ಸಖನೇ, ನೀನು ಹೇಳಿದುವು ದ್ವಿಜರಿಗೆ ಇಷ್ಟವಾಗಿರುವುವು. ಆದ್ದರಿಂದ ನೀನೇ ಈ ಬಿಸನಾಳಗಳನ್ನು ಕದ್ದಿರಬೇಕು.

೩೮೪. ಶುನಸ್ಸಖನು ಹೇಳಿದನು :—ಎಲೈ ಋಷಿಗಳಿರ, ನಾನೇ ನಿಮ್ಮ ಮೃಣಾಳಗಳನ್ನು, ನಿಮ್ಮಿಂದ ಧರ್ಮವನ್ನು ಕೇಳಬೇಕೆಂಬ ಇಚ್ಛೆಯಿಂದ ಮುಚ್ಚಿಟ್ಟಿರುವೆನು. ನಾನು ಇಂದ್ರನೆಂಬುದಾಗಿ ತಿಳಿಯಿರಿ.

೩೮೫. ಆಶೆಯನ್ನು ಜಯಿಸಿರುವುದರಿಂದ ಎಲ್ಲಾ ಲೋಕಗಳನ್ನೂ ನಿಮ್ಮ ಸ್ವಾಧೀನವನ್ನಾಗಿ ಮಾಡಿಕೊಂಡಿರುವಿರಿ. ಎಲೈ ಋಷಿಶ್ರೇಷ್ಠರಿರ, ವಿಮಾನದಲ್ಲಿ ಕೂತುಕೊಳ್ಳಿರಿ. ದೇವಲೋಕಕ್ಕೆ ಹೋಗೋಣ.

**ತತೋ ಮಹರ್ಷಯಸ್ತೇ ತು ವಿಜ್ಞಾಯಾಥ ಪುರಂದರಂ ।**
**ಊಚುಃ ಪುರಂದರಂ ಚೇದಂ ವಾಕ್ಯಂ ವಾಕ್ಯವಿಶಾರದಾಃ ॥ ೩೮೬ ॥**

**॥ ಋಷಯ ಊಚುಃ ॥**

**ಇಹಾಗತ್ಯ ನರೋ ಯಸ್ತು ಮಧ್ಯಮಂ ಪುಷ್ಕರಂ ವಿಶೇತ್ ।**
**ತ್ರಿರಾತ್ರೋಪೋಷಿತೋ ಭೂತ್ವಾ ಲಭೇದಾನಂತಕಂ ಫಲಂ ॥ ೩೮೭ ॥**

**ದ್ವಾದಶವಾರ್ಷಿಕೀ ದೀಕ್ಷಾ ಸ್ಮೃತಾ ಯಾ ತು ವನೌಕಸಾಂ ।**
**ತಸ್ಯಾಃ ಫಲಂ ಸಮಗ್ರಂ ಸ ಲಭೇದಿಹ ನ ಸಂಶಯಃ ॥ ೩೮೮ ॥**

**ನಾಸೌ ದುರ್ಗತಿಮಾಪ್ನೋತಿ ಸ್ವಕುಲೈಸ್ಸಹ ಮೋದತೇ ।**
**ವಿರಿಂಚೇಃ ಸ್ಥಾನಮಾಸಾದ್ಯ ತಿಷ್ಠತಿ ಬ್ರಹ್ಮಣೋ ದಿನಂ ॥ ೩೮೯ ॥**

**॥ ಪುಲಸ್ತ್ಯ ಉವಾಚ ॥**

**ಇಂದ್ರೇಣ ಸಹ ಸುಪ್ರೀತಾಸ್ತದಾ ಜಗ್ಮುಸ್ತ್ರಿವಿಷ್ಟಪಂ ।**
**ಏವಂ ವಿಲೋಭ್ಯಮಾನಾಸ್ತೇ ಭೋಗೈರ್ಬಹುವಿಧೈರಪಿ ॥ ೩೯೦ ॥**

---

೩೮೬. ಆಮೇಲೆ ಮಹರ್ಷಿಗಳಿಗೆ ಈತನು ಇಂದ್ರನೆಂದು ತಿಳಿಯಿತು. ಆಗ ಅವನನ್ನು ಕುರಿತು ಇವರು ಇಂತೆಂದರು.

೩೮೭. ಋಷಿಗಳು ಹೇಳಿದರು :—ಯಾವ ಮನುಷ್ಯನು ಇಲ್ಲಿಗೆ ಬಂದು ಮಧ್ಯಮಪುಷ್ಕರದಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸಮಾಡುತ್ತಾನೆಯೋ ಅವನು ಅನಂತ ಫಲವನ್ನು ಹೊಂದಲಿ.

೩೮೮. ಕಾಡಿನಲ್ಲಿರುವವರಿಗೆ ಹನ್ನೆರಡು ವರ್ಷಗಳ ದೀಕ್ಷೆಯೆಂಬುದು ಯಾವುದಿದೆಯೋ ಅದರ ಫಲವನ್ನು ಇಲ್ಲಿಗೆ ಬಂದವನು ಹೊಂದುತ್ತಾನೆ. ಸಂಶಯವಿಲ್ಲ.

೩೮೯. ಇವನಿಗೆ ಕೆಟ್ಟ ಸ್ಥಿತಿಯೇ ಬರುವುದಿಲ್ಲ. ತನ್ನ ಜನಗಳೊಡನೆ ಸುಖಿಸುತ್ತಾನೆ. ಬ್ರಹ್ಮನ ಲೋಕವನ್ನು ಹೊಂದಿ ಬ್ರಹ್ಮನ ದಿನವಿರುವವರೆಗೂ ಇರುತ್ತಾನೆ.

೩೯೦. ಪುಲಸ್ತ್ಯನು ಹೇಳಿದನು :—ಅವರೆಲ್ಲರೂ ಸಂತೋಷಪಟ್ಟು ಇಂದ್ರ

ನೈವ ಲೋಭ್ಯಂ ತದಾ ಚಕ್ರುಸ್ತೇನ ಜಗ್ಮುಸ್ತ್ರಿವಿಷ್ಟಪಂ ।
ಯ ಇದಂ ಶೃಣುಯಾನ್ನಿತ್ಯಮೃಷೀಣಾಂ ಚರಿತಂ ಮಹತ್ ।
ವಿಮುಕ್ತಸ್ಸರ್ವಪಾಪೇಭ್ಯೋ ಸ್ವರ್ಗಲೋಕೇ ಮಹೀಯತೇ ॥ ೩೯೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಸಪ್ತರ್ಷಿಸಂವಾದೋ ನಾಮ ಏಕೋನವಿಂಶೋಽಧ್ಯಾಯಃ



---

ನೊಡನೆ ದೇವಲೋಕ್ಕೆ ಹೋದರು. ಈರೀತಿ ಅನೇಕಬಗೆಯ ಭೋಗಗಳಿಂದ ಆಸೆ ತೋರಿಸಿದರೂ ಅವರು ಆಸೆಪಡದೆ, ಅದರಿಂದಲೇ ಸ್ವರ್ಗಕ್ಕೆ ಹೋದರು.

೩೯೧. ಈ ಋಷಿಗಳ ಮಹತ್ವವಾದ ಚರಿತ್ರೆಯನ್ನು ಕೇಳಿದವನು ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸಪ್ತರ್ಷಿಗಳ ಸಂವಾದವೆಂಬ
ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ವಿಂಶೋऽಧ್ಯಾಯಃ

॥ ಭೀಷ್ಮ ಉವಾಚ ॥

ಅತ್ಯಾಶ್ಚರ್ಯವತೀ ರಮ್ಯಾ ಕಥೇಯಂ ಪಾಪನಾಶಿನೀ ।
ವಿಸ್ತರೇಣ ಚ ಮೇ ಬ್ರೂಹಿ ಯಾಥಾತಥ್ಯೇನ ಪೃಚ್ಛತಃ ॥ ೧ ॥

ಮಾಹಾತ್ಮ್ಯಂ ಮಧ್ಯಮಸ್ಯಾಪಿ ಋಷಿಭಿಃ ಪರಿಕೀರ್ತಿತಂ ।
ಫಲಂ ಚಾನ್ನಸ್ಯ ಕಥಿತಂ ಮಾಹಾತ್ಮ್ಯಂ ಚ ದಮಸ್ಯ ತು ॥ ೨ ॥

ವಿಷ್ಣುನಾ ಚ ಪದನ್ಯಾಸಃ ಕೃತೋ ಯತ್ರ ಮಹಾಮುನೇ ।
ಕನೀಯಸಸ್ತಥೋತ್ಪತ್ತಿರ್ಯಥಾ ಭೂತಾ ವದಸ್ವ ಮೇ ॥ ೩ ॥

---

## ಇಪ್ಪತ್ತನೆಯ ಅಧ್ಯಾಯವು.

೧. ಭೀಷ್ಮನು ಹೇಳಿದನು :—ಈ ಕಥೆಯು ಅತ್ಯಾಶ್ಚರ್ಯಕರವಾಗಿಯೂ ಪಾಪನಾಶಕವಾಗಿಯೂ ಇದೆ. ಸರಿಯಾಗಿ ವಿಸ್ತಾರವಾಗಿ ಎಲ್ಲವನ್ನೂ ನನಗೆ ಹೇಳು.

೨. ಮಧ್ಯಮಪುಷ್ಕರದ ಮಹಿಮೆಯು ಋಷಿಗಳಿಂದ ಹೇಳಲ್ಪಟ್ಟಿತು. ಅನ್ನದ ಮಹಿಮೆಯನ್ನೂ, ಫಲವನ್ನೂ, ದಮದ ಮಹಿಮೆಯನ್ನೂ ಹೇಳಿದನು.

೩. ವಿಷ್ಣುವು ಪದನ್ಯಾಸವನ್ನು ಮಾಡಿದುದು ಹೇಗೆ? ಎಲ್ಲಿ? ಚಿಕ್ಕ ಪುಷ್ಕರಣಿಯ ಉತ್ಪತ್ತಿಯು ಹೇಗಾಯಿತೆಂಬುದನ್ನು ತಿಳಿಸು.

॥ ಪುಲಸ್ತ್ಯ ಉವಾಚ ॥

ಪುರಾ ರಥಂತರೇ ಕಲ್ಪೇ ರಾಜಾಸೀತ್ಪುಷ್ಪವಾಹನಃ ।
ನಾಮ್ನಾ ಲೋಕೇಷು ವಿಖ್ಯಾತಸ್ತೇಜಸಾ ಸೂರ್ಯಸನ್ನಿಭಃ ॥ ೪ ॥

ತಪಸಾ ತಸ್ಯ ತುಷ್ಟೇನ ಚತುರ್ವಕ್ತ್ರೇಣ ಭಾರತ ।
ಕಮಲಂ ಕಾಂಚನಂ ದತ್ತಂ ತಥಾ ವೈ ಕಾಮಗಂ ನೃಪ ॥ ೫ ॥

ಲೋಕೇ ತು ಸಪ್ತದ್ವೀಪೇಽಪಿ ಋಷಿಭಿಸ್ಸಹಿತೋ ನೃಪ ।
ದ್ವೀಪಾನಿ ನರಲೋಕಂ ಚ ಯಥೇಷ್ಟಂ ವ್ಯಚರತ್ತದಾ ॥ ೬ ॥

ಕಲ್ಪಾದೌ ತು ಸಮಂ ದ್ವೀಪಂ ತಸ್ಯ ಪುಷ್ಕರವಾಸಿನಾ ।
ಲೋಕೇನ ಪೂಜಿತಂ ತಸ್ಮಾತ್ಪುಷ್ಕರದ್ವೀಪಮುಚ್ಯತೇ ॥ ೭ ॥

ತದೇವ ಬ್ರಹ್ಮಣಾ ದತ್ತಂ ಯಾನಮಸ್ಯ ತತೋಽಂಬುಜಂ ।
ಪುಷ್ಪವಾಹನ ಇತ್ಯಾಹುಸ್ತಸ್ಮಾತ್ತಂ ದೇವದಾನವಾಃ ॥ ೮ ॥

---

೪. ಪುಲಸ್ತ್ಯನು ಹೇಳಿದನು:—ಪೂರ್ವದಲ್ಲಿ ರಥಂತರ ಕಲ್ಪದಲ್ಲಿ ಸೂರ್ಯನಿಗೆ ಸಮನಾದ ಪುಷ್ಪವಾಹನನೆಂಬ ಪ್ರಸಿದ್ಧನಾದ ರಾಜನೊಬ್ಬನಿದ್ದನು.

೫. ಆತನ ತಪಸ್ಸಿಗೆ ತುಷ್ಟನಾದ ಬ್ರಹ್ಮನು ಒಂದು ಚಿನ್ನದ ಕಮಲವನ್ನು ಕೊಟ್ಟನು. ಮತ್ತು ಬೇಕಾದ ಕಡೆಗೆ ಹೋಗುವಂತೆ ವರವನ್ನು ಕೊಟ್ಟನು.

೬. ಲೋಕದಲ್ಲಿ ಏಳು ದ್ವೀಪಗಳಲ್ಲಿಯೂ ಮತ್ತು ಉಳಿದ ದ್ವೀಪಗಳಲ್ಲಿಯೂ ನರಲೋಕದಲ್ಲಿ ಎಲ್ಲಾ ಕಡೆಯಲ್ಲೂ ಬೇಕಾದಂತೆ ಸಂಚರಿಸುತ್ತಿದ್ದನು.

೭. ಕಲ್ಪದ ಆದಿಯಲ್ಲಿ ಪುಷ್ಕರದಲ್ಲಿದ್ದುಕೊಂಡು ಜನಗಳಿಂದ ಪೂಜಿತವಾದುದರಿಂದ ಅದಕ್ಕೆ ಪುಷ್ಕರದ್ವೀಪವೆಂದು ಹೆಸರಾಯಿತು.

೮. ಆ ಪುಷ್ಕರದಲ್ಲಿ ಕುಳಿತು ಅವನು ಎಲ್ಲಾ ಕಡೆಯಲ್ಲೂ ಸಂಚರಿಸುತ್ತಿರುವುದರಿಂದ ಅವನಿಗೆ ಪುಷ್ಪವಾಹನನೆಂದು ಹೆಸರು ಬಂದಿತು.

ನೌಪಮ್ಯಮಪ್ಯಸ್ತಿ ಜಗತ್ತ್ರಯೇಽಪಿ
ಬ್ರಹ್ಮಾಂಬುಜಸ್ಯಾಸ್ಯ ಚ ತಸ್ಯ ರಾಜ್ಞಃ ।
ತಪೋಽನುಭಾವಾದಥ ತಸ್ಯ ರಾಜ್ಞೀ
ಜನೈಸ್ಸಮಸ್ತೈರಭಿವಂದ್ಯಮಾನಾ ॥ ೯ ॥

ನಾಮ್ನಾ ಚ ಲಾವಣ್ಯವತೀ ಬಭೂವ
ಯಾ ಪಾರ್ವತೀವೇಷ್ಟತಮಾ ಭವಸ್ಯ ।
ತಸ್ಯಾತ್ಮಜಾನಾಮಯುತಂ ಬಭೂವ
ಧರ್ಮಾತ್ಮನಾಮುಗ್ರ್ಯಧನುರ್ಧರಾಣಾಂ ॥ ೧೦ ॥

ತದಾತ್ಮಜಾಂಸ್ತಾನಥ ವೀಕ್ಷ್ಯ ರಾಜಾ
ಮುಹುರ್ಮುಹುರ್ವಿಸ್ಮಯಮಾಸಸಾದ ।
ಸೋಽಭ್ಯಾಗತಂ ಪೂಜ್ಯ ಮುನಿಪ್ರವೀರಂ
ಪ್ರಚೇತಸಂ ವಾಚಮಿಮಾಂ ಬಭಾಷೇ ॥ ೧೧ ॥

॥ ರಾಜೋವಾಚ ॥

ಕಸ್ಮಾದ್ವಿಭೂತಿರಚಲಾಮರಮರ್ತ್ಯಪೂಜ್ಯಾ
ಜಾತಾ ಚ ಸ್ವರ್ಗೇ ವಿಜಿತಾ ಚ ಸುಂದರೀ ।

---

೯. ಈ ಬ್ರಹ್ಮನು ಕೊಟ್ಟ ಕಮಲಕ್ಕೂ ಆ ರಾಜನಿಗೂ ಪ್ರಪಂಚದಲ್ಲಿ ಯಾವುದೂ ಉಪಮಾನವೇ ಇಲ್ಲ. ಅವನ ಹೆಂಡತಿಯೂ ತಪಸ್ಸಿನಿಂದ ಎಲ್ಲ ಜನರಿಂದಲೂ ನಮಸ್ಕರಿಸಿಕೊಳ್ಳುತ್ತಿದ್ದಳು.

೧೦. ಅವಳ ಹೆಸರು ಲಾವಣ್ಯವತಿಯೆಂದು. ಅವಳು, ಪಾರ್ವತಿಯು ಈಶ್ವರನಿಗೆ ಹೇಗೆ ಪ್ರೀತಿಪಾತ್ರಳೋ ಹಾಗೆ ಗಂಡನಿಗೆ ಪ್ರೀತಿಪಾತ್ರಳಾಗಿದ್ದಳು ಅವನಿಗೆ ಸಾವಿರ ಜನ ಮಕ್ಕಳಾದರು. ಅವರೆಲ್ಲರೂ ಉತ್ತಮರಾದ ಧನುರ್ಧರರು.

೧೧. ಆಗ ಅಂತಹ ಮಕ್ಕಳನ್ನು ನೋಡಿ ರಾಜನು ಪದೇ ಪದೇ ಆಶ್ಚರ್ಯ ಪಡುತ್ತಿದ್ದನು. ಒಂದುಸಾರಿ ಪ್ರಚೇತಸಮುನಿಯು ಬರಲು ಆತನನ್ನು ಪೂಜಿಸಿ ಇತೆಂದನು.

೧೨. ರಾಜನು ಹೇಳಿದನು :—ದೇವಮನುಷ್ಯರಿಂದಲೂ ಪೂಜ್ಯನಾದ ಎಲೈ ಪ್ರಚೇತಸನೇ, ನಾನು ಸ್ವರ್ಗವನ್ನು ಕೂಡ ಜಯಿಸಿದೆನು. ಸುಂದರಿಯಾದ

ಭಾರ್ಯಾ ಮಯಾಲ್ಪತಪಸಾ ಪರಿತೋಷಿತೇನ
ದತ್ತಂ ಮಮಾಂಬುಜಗೃಹಂ ಚ ಮುನೀಂದ್ರ ಧಾತ್ರಾ ॥ ೧೨ ॥

ಯಸ್ಮಿನ್ಪ್ರವಿಷ್ಟಮಪಿ ಕೋಟಿಶತಂ ನೃಪಾಣಾಂ
ಸಾಮಾತ್ಯಕುಂಜರರಥೌಘಜನಾವೃತಾನಾಂ ।
ನೋ ಲಭ್ಯತೇ ಕ್ವ ಗತಮಂಬರಗಾಮಿಭಿಶ್ಚ
ತಾರಾಗಣೇಂದುರವಿರಶ್ಮಿಭಿರಪ್ಯಗಮ್ಯಂ ॥ ೧೩ ॥

ತಸ್ಮಾತ್ಕಿಮನ್ಯಜನನೀಜಠರೋದ್ಭವೇನ
ಧರ್ಮಾದಿಕಂ ಕೃತಮಶೇಷಜನಾತಿಗಂ ಸ್ಯಾತ್ ।
ಸರ್ವೈರ್ಮಯಾಪಿ ತನಯೈರಥವಾನಯಾಪಿ
ಸದ್ಭಾರ್ಯಯಾ ತದಖಿಲಂ ಕಥಯ ಪ್ರಚೇತಃ ॥ ೧೪ ॥

॥ ಪುಲಸ್ತ್ಯ ಉವಾಚ ॥

ಸೋಽಪ್ಯಭ್ಯಧಾದಥ ಭವಾಂತರಿತಂ ನಿರೀಕ್ಷ್ಯ
ಪೃಥ್ವೀಪತೇ ಶೃಣು ತದದ್ಭುತಹೇತುವೃತ್ತಂ ।

---

ಹೆಂಡತಿಯು ನನಗೆ ಸಿಕ್ಕಿದಳು. ಸ್ವಲ್ಪ ತಪಸ್ಸಿನಿಂದಲೇ ಬ್ರಹ್ಮನು ಸಂತೋಷಪಟ್ಟು ನನಗೆ ಕಮಲದ ಈ ಮನೆಯನ್ನೂ ಸರ್ವಲೋಕಗಳಲ್ಲಿಯೂ ಸಂಚರಿಸುವಿಕೆಯನ್ನೂ ಕೊಟ್ಟನು. ಇದಕ್ಕೆ ಕಾರಣವೇನು ?

೧೩. ಮಂತ್ರಿ, ಆನೆ, ರಥ, ಜನಗಳಿಂದ ಕೂಡಿರುವ ರಾಜರು ನೂರು ಕೋಟಿ ಜನ ಬಂದರೂ ಈ ವಿಮಾನವು ಎಲ್ಲಿ ಹೋಯಿತು. ಎಂದು ಗೊತ್ತಾಗುವುದಿಲ್ಲ. ನಕ್ಷತ್ರಗಳು ಸೂರ್ಯ ಚಂದ್ರರಶ್ಮಿಗಳೂ ಕೂಡ ಒಳಗೆ ಹೋಗದ, ಅಂತರಿಕ್ಷದಲ್ಲಿ ಸಂಚರಿಸುವವರಿಗೂ ಕೂಡ ಈ ವಿಮಾನವು ಎಲ್ಲಿ ಹೋಯಿತೆಂದು ಗೊತ್ತಾಗದಿರುವುದು. ಈ ವಿಮಾನವು ನನಗೆ ಅಲ್ಪ ತಪಸ್ಸಿನಿಂದ ಹೇಗೆ ಬಂದಿತು ?

೧೪. ಆದ್ದರಿಂದ ಬೇರೆಯ ಜನ್ಮದಲ್ಲಿ ಯಾವ ತಾಯಿಯ ಹೊಟ್ಟೆಯಲ್ಲಿ ಹುಟ್ಟಿ ಎಲ್ಲ ಜನಗಳಿಗಿಂತಲೂ ಉತ್ಕೃಷ್ಟವಾದ ಯಾವ ಧರ್ಮವನ್ನು ಮಾಡಿದ್ದೆನು ? ಈ ಮಕ್ಕಳು ಈ ಒಳ್ಳೆಯ ಹೆಂಡತಿ ಇವರುಗಳು ತಾನೇ ಏನು ಪುಣ್ಯಮಾಡಿದ್ದರು ?

೧೫. ಪುಲಸ್ತ್ಯನು ಹೇಳಿದನು :—ಆಗ ಅವನು ಜನ್ಮಾಂತರದ ವಿಷಯ

ಜನ್ಮಾಭವತ್ತವ ತು ಲುಬ್ಧಕುಲೇಽಪಿ ಘೋರಂ
ಜಾತಸ್ತ್ವಮಪ್ಯನುದಿನಂ ಕಿಲ ಪಾಪಕಾರೀ ॥ ೧೫ ॥

ವಪುರಪ್ಯಭೂತ್ತವ ಪುನಃ ಪರುಷಾಂಗಸಂಧಿ
ದುರ್ಗಂಧಸತ್ತ್ವಕುನಖಾಭರಣಂ ಸಮಂತಾತ್ ।
ನ ಚ ತೇ ಸುಹೃನ್ನ ಸುತಬಂಧುಜನೋ ನ ತಾದೃ-
ಙ್ನೈವ ಸ್ವಸಾ ನ ಜನನೀ ಚ ತದಾಭಿಶಸ್ತಾ ॥ ೧೬ ॥

ಅತಿಸಮ್ಮತಾ ಪರಮಭೀಷ್ಟತಮಾಭಿಮುಖೀ
ಜಾತಾ ಮಹೀಶ ತವ ಯೋಷಿದಿಯಂ ಸುರೂಪಾ ।
ಅಭೂದನಾವೃಷ್ಟಿರತೀವ ರೌದ್ರಾ
ಕದಾಚನಾಹಾರನಿಮಿತ್ತಮಸ್ಮಿನ್ ॥ ೧೭ ॥

ಕ್ಷುತ್ಪೀಡಿತೇನ ಭವತಾ ತು ಯದಾ ನ ಕಿಂಚಿ-
ದಾಸಾದಿತಂ ವನ್ಯಫಲಾದಿ ಖಾದ್ಯಂ ।
ಅಥಾಭಿದೃಷ್ಟಂ ಮಹದಂಬುಜಾಢ್ಯಂ
ಸರೋವರಂ ಪಂಕಜಖಂಡಮಂಡಿತಂ ॥ ೧೮ ॥

---

ವನ್ನು ಜ್ಞಾನದೃಷ್ಟಿಯಿಂದ ನೋಡಿ ಎಲ್ಲೈ ದೊರೆಯೇ, ಆ ಅದ್ಭುತವನ್ನು ಹೇಳು ತ್ತೇನೆ ಕೇಳು. ನಿನ್ನ ಜನ್ಮವು ಬೇಡರಕುಲದಲ್ಲಿ ಆಗಿದ್ದಿತು. ಅದೂ ಘೋರವಾಗಿದ್ದಿತು. ನೀನೂ ಕೂಡ ಪ್ರತಿದಿನವೂ ಪಾಪಕೆಲಸವನ್ನು ಮಾಡುತ್ತಿದ್ದಿ.

೧೬. ನಿನ್ನ ಅವಯವಗಳು ಕಠಿಣವಾಗಿದ್ದುವು. ಮೈ ದುರ್ಗಂಧವಾಗಿದ್ದಿತು. ಉಗುರು ಕೆಟ್ಟುಹೋಗಿದ್ದಿತು. ಮೈಯೆಲ್ಲವೂ ವಿಕಾರವಾಗಿದ್ದಿತು. ನಿನಗೆ ಸ್ನೇಹಿತ, ಮಗ, ಬಂಧುಜನ, ಅಕ್ಕತಂಗಿಯರು, ತಾಯಿ ಇವರೊಬ್ಬರೂ ಉತ್ತಮರಾಗಿಯಾಗಲೀ ಯೋಗ್ಯರಾಗಿಯಾಗಲೀ ಇರಲಿಲ್ಲ.

೧೭-೧೮. ಆದರೆ ನಿನಗೆ ಸುರೂಪಳಾದ ಎದುರಿಗಿರುವಈ ಹೆಂಡತಿಯು ಮಾತ್ರ ಪೂರ್ವದಲ್ಲಿ ಸಮ್ಮತಳಾಗಿಯೂ ಇಷ್ಟಳಾಗಿಯೂ ಇದ್ದಳು. ಹೀಗಿರಲು ಒಂದುಸಾರಿ ಬಹು ಭಯಂಕರವಾದ ಅನಾವೃಷ್ಟಿಯುಂಟಾಯಿತು. ಆಗ ಅಲ್ಲಿ ಹಸಿವುಗೊಂಡ ನೀನು ಅಲ್ಲೆಲ್ಲಾ ಹುಡುಕಲು ನಿನಗೇನೂ ಸಿಕ್ಕಲಿಲ್ಲ. ಮುಂದೆ ಹೋಗುತ್ತಿರಲು ಬಹು ಕಮಲಗಳಿದ್ದ ಮನೋಹರವಾದ ಸರೋವರವೊಂದನ್ನು ನೋಡಿದೆ.

ಪದ್ಮಾನ್ಯಥಾದಾಯ ತತೋ ಬಹೂನಿ
ಗತಃ ಪುರಂ ವೈದಿಶನಾಮಧೇಯಂ ।
ತನ್ಮೂಲ್ಯಲಾಭಾಯ ಪುರಂ ಸಮಸ್ತಂ
ಭ್ರಾಂತಂ ತ್ವಯಾಶೇಷಮಹಸ್ತ್ವದಾಸೀತ್ ।
ಕ್ರೇತಾ ನ ಕಶ್ಚಿತ್ಕಮಲೇಷು ಜಾತಃ
ಕ್ಲಾಂತೋ ಭೃಶಂ ಕ್ಷುತ್ಪರೀಪೀಡಿತಶ್ಚ ॥ ೧೯ ॥

ಉಪವಿಷ್ಟಸ್ತ್ವಮೇಕಸ್ಮಿನ್ಸಭಾರ್ಯೋ ಭವನಾಂಗಣೇ ।
ತತೋ ರಾತ್ರೌ ಭವಾಂಸ್ತತ್ರ ಅಶ್ರೌಷೀನ್ಮಂಗಳಧ್ವನಿಂ ॥ ೨೦ ॥

ಸಭಾರ್ಯಸ್ತತ್ರ ಭಗವಾನ್ಯತ್ರಾಸೌ ಮಂಗಳಧ್ವನಿಃ ।
ತತ್ರ ಮಂಡಲಮಧ್ಯಸ್ಥಾ ವಿಷ್ಣೋರರ್ಚಾ ವಿಲೋಕಿಕಾ ॥ ೨೧ ॥

ವೇಶ್ಯಾನಂಗವತೀ ನಾಮ ವಿಭೂತಿದ್ವಾದಶೀವ್ರತಂ ।
ಸಮಾಪ್ಯ ಮಾಘಮಾಸಸ್ಯ ದ್ವಾದಶ್ಯಾಂ ಲವಣಾಚಲಂ ॥ ೨೨ ॥

---

೧೯. ಬಹಳ ಪದ್ಮಗಳನ್ನು ಅಲ್ಲಿ ಕಿತ್ತುಕೊಂಡು ವೈದಿಶವೆಂಬ ಪಟ್ಟಣಕ್ಕೆ ನೀನು ಹೋದೆ. ಪದ್ಮದ ಬುಡವನ್ನು ತೆಗೆದುಕೊಂಡು ಹಗಲೆಲ್ಲ ಆ ಊರಿನಲ್ಲಿ ಮಾರಲು ಸುತ್ತಿದೆ. ಆ ಕಮಲಗಳನ್ನು ತೆಗೆದುಕೊಳ್ಳತಕ್ಕವನು ಒಬ್ಬನೂ ಸಿಕ್ಕಲಿಲ್ಲ. ಆಗ ನೀನು ಬಳಲಿ ಹಸಿವಿನಿಂದ ತೊಂದರೆಪಡುತ್ತಿದ್ದೆ.

೨೦. ಆಗ ನೀನು ಬಳಲಿ ಹೆಂಡತಿಯೊಡನೆ ಬಂದು ಮನೆಯ ಅಂಗಳದಲ್ಲಿ ಕೂತುಕೊಂಡೆ. ಆ ರಾತ್ರಿಯಲ್ಲಿ ಅಲ್ಲಿ ಒಂದು ಮಂಗಳಧ್ವನಿಯನ್ನು ಕೇಳಿದೆ.

೨೧. ಆ ಮಂಗಳಧ್ವನಿಯಾಗುವ ಬಳಿಗೆ ನೀನು ಹೆಂಡತಿಯೊಡನೆ ಹೋಗಿ ಅಲ್ಲಿರುವ ಜನಗಳ ಮಧ್ಯದಲ್ಲಿ ಕುಳಿತು ಅಲ್ಲಿ ನಡೆಯುತ್ತಿದ್ದ ವಿಷ್ಣುವಿನ ಪೂಜೆಯನ್ನು ನೋಡಿದೆ.

೨೨-೨೩. ಆ ಮನೆಯಲ್ಲಿ ಅನಂಗವತಿಯೆಂಬ ಸೂಳೆಯಿದ್ದಳು. ಆಕೆಯು ಆ ದಿನ ಮಾಘ ಮಾಸದ ದ್ವಾದಶಿಯಾದ್ದರಿಂದ ವಿಭೂತಿದ್ವಾದಶಿ ವ್ರತವನ್ನು ಮಾಡಿ

**ನಿವೇದಯಂತೀ ಗುರವೇ ಶಯ್ಯಾಂ ಚೋಪಸ್ಕರಾನ್ವಿತಾಂ ।**
**ಅಲಂಕೃತ್ಯ ಹೃಷೀಕೇಶಂ ಸೌವರ್ಣಂ ಸಮುಮಾದರಾತ್ ॥ ೨೩ ॥**

**ಸಾ ಚ ದೃಷ್ಟ್ವಾ ತತಸ್ತಾಭ್ಯಾಮಿದಂ ಚ ಪರಿಚಿಂತಿತಂ ।**
**ಕಿಮೇಭಿಃ ಕಮಲೈಃ ಕಾರ್ಯಂ ವರಂ ವಿಷ್ಣುರಲಂಕೃತಃ ॥ ೨೪ ॥**

**ಇತಿ ಭಕ್ತಿಸ್ತದಾ ಜಾತಾ ದಂಪತ್ಯೋಸ್ತು ನರೇಶ್ವರ ।**
**ತತ್ಪ್ರಸಂಗಾತ್ಸಮಭ್ಯರ್ಚ್ಯ ಕೇಶವಂ ಲವಣಾಚಲಂ ॥ ೨೫ ॥**

**ಶಯ್ಯಾ ಚ ಪುಷ್ಪಪ್ರಕರೈಃ ಪೂಜಿತಾಭೂಚ್ಚ ಸರ್ವತಃ ।**
**ಅಥಾನಂಗವತೀ ತುಷ್ಟಾ ತಯೋರ್ಧಾನ್ಯಶತತ್ರಯಂ ॥ ೨೬ ॥**

**ದೀಯತಾಮಾದಿದೇಶಾಥ ಕಲಧೌತಂ ಪಲತ್ರಯಂ ।**
**ನ ಗೃಹೀತಂ ತತಸ್ತಾಭ್ಯಾಂ ಮಹಾಸತ್ತ್ವಾವಲಂಬನಾತ್ ॥ ೨೭ ॥**

---

ದ್ದಳು ಆಗ ಬೇಕಾದಷ್ಟು ಉಪ್ಪನ್ನೂ, ಹಾಸಿಗೆ ಅದಕ್ಕೆ ಬೇಕಾದ ಸಾಮಾನು ಗಳನ್ನೂ, ಗುರುವಿಗೆ ಕೊಡಲು ವಿಷ್ಣುವಿನ ಪ್ರತಿಮೆಯನ್ನು ಚಿನ್ನದಲ್ಲಿ ಆದರದಿಂದ ಮಾಡಿಸಿದ್ದಳು. ಅದನ್ನು ಅಲಂಕರಿಸಿದ್ದಳು.

೨೪. ಆಗ ನಿಮ್ಮಿಬ್ಬರಿಂದಲೂ ಆ ಪ್ರತಿಮೆಯು ನೋಡಲ್ಪಟ್ಟಿತು. ಮತ್ತು ನಾವು ತಂದಿರುವ ಈ ಕಮಲಗಳನ್ನೇನು ಮಾಡಬೇಕು ? ಈ ವಿಷ್ಣುವನ್ನು ಅಲಂ ಕರಿಸಿದರೆ ಉತ್ತಮ ಎಂಬ ಬುದ್ಧಿ ಹುಟ್ಟಿತು.

೨೫. ಆಗ ಆ ನಿಮ್ಮಿಬ್ಬರಿಗೂ ಭಕ್ತಿಯುಂಟಾಯಿತು. ಆ ಭಕ್ತಿಯಿಂದ ಲವಣದ (ಉಪ್ಪಿನ) ಬೆಟ್ಟದ ಮೇಲಿರುವ ಆ ಕೇಶವನನ್ನೂ ಆ ಹಾಸಿಗೆಯನ್ನೂ ಆ ಅನೇಕ ಪುಷ್ಪಗಳಿಂದ ಎಲ್ಲಾ ಕಡೆಯಲ್ಲಿಯೂ ಅಲಂಕರಿಸಿದಿರಿ.

೨೬-೨೭. ಆಗ ಆ ಅನಂಗವತಿಯು ಸಂತೋಷಗೊಂಡು ಅವರಿಗೆ ಮುನ್ನೂರು ಧಾನ್ಯಗಳನ್ನೂ ಕೊಡೆಂದು ಅಪ್ಪಣೆಮಾಡಿದಳು. (ಧಾನ್ಯ ನಾಣ್ಯವಿಶೇಷ) ಮತ್ತು ಮೂರು ಪಲ ಚಿನ್ನವನ್ನು ಕೊಡೆಂದು ಅಪ್ಪಣೆಮಾಡಿದಳು. ಅವರು ಆಗ ಮನಸ್ಸನ್ನು ಒಳ್ಳೆಯತನದಲ್ಲಿಟ್ಟುಕೊಂಡು ಅದನ್ನು ತೆಗೆದುಕೊಳ್ಳಲಿಲ್ಲ.

ಅನಂಗವತ್ಯಾ ಚ ಪುನಸ್ತಯೋರನ್ನಂ ಚತುರ್ವಿಧಂ ।
ಆನೀಯ ವ್ಯಾಹೃತಂ ತೇನ ಭುಜ್ಯತಾಮಿತಿ ಭೂಪತೇ ॥ ೨೮ ॥

ತಾಭ್ಯಾಂ ಚ ತದಪಿ ತ್ಯಕ್ತಂ ಭೋಕ್ಷ್ಯಾವಶ್ವೋ ವರಾನನೇ ।
ಪ್ರಸಂಗಾದುಪವಾಸೋ ನೌ ತವಾದ್ಯಾಸ್ತು ಶುಭಾವಹಃ ॥ ೨೯ ॥

ಜನ್ಮಪ್ರಭೃತಿ ಪಾಪಿಷ್ಠಾ ವಯಂ ದೇವಿ ದೃಢವ್ರತೇ ।
ಪ್ರಸಂಗಾತ್ತವ ಸುಶ್ರೋಣಿ ಧರ್ಮಲೇಶೋಽಸ್ತು ನಾವಿಹ ॥ ೩೦ ॥

ಇತಿ ಜಾಗರಣಂ ತಾಭ್ಯಾಂ ತತ್ಪ್ರಸಂಗಾದನುಷ್ಠಿತಂ ।
ಪ್ರಭಾತೇ ಚ ತಯಾ ದತ್ತಾ ಶಯ್ಯಾ ಸಲವಣಾಚಲಾ ॥ ೩೧ ॥

ಗ್ರಾಮಶ್ಚ ಗುರವೇ ಭಕ್ತ್ಯಾ ವಿಪ್ರೇಭ್ಯೋ ದ್ವಾದಶೈವ ತು ।
ವಸ್ತ್ರಾಲಂಕಾರಸಂಯುಕ್ತಾ ಗಾವಶ್ಚ ಕನಕಾನ್ವಿತಾಃ ॥ ೩೨ ॥

ಭೋಜನಂ ಚ ಸುಹೃನ್ಮಿತ್ರದೀನಾಂಧಕೃಪಣೈಸ್ಸಮಂ ।
ತಚ್ಚ ಲುಬ್ಧಕದಾಂಪತ್ಯಂ ಪೂಜಯಿತ್ವಾ ವಿಸರ್ಜಿತಂ ॥ ೩೩ ॥

---

೨೮. ಆಗ ಅನಂಗವತಿಯು ನಾಲ್ಕುಬಗೆಯ ಅನ್ನವನ್ನು ತಂದು ಇದನ್ನು ಊಟಮಾಡಿರೆಂದು ಹೇಳಿದಳು.

೨೯-೩೦. ಅಮ್ಮಾ, ನಾವು ನಾಳೆ ಊಟಮಾಡುತ್ತೇವೆಂದು ಅದನ್ನು ಬಿಟ್ಟು ಬಿಟ್ಟರಿ. ನಿನ್ನ ಸಂಬಂಧದಿಂದ ಇಂದು ನಮಗೂ ಒಳ್ಳೆಯ ಕೆಲಸದ ಉಪವಾಸ ವಾಗಲಿ. ಅಮ್ಮ, ನಾವು ಹುಟ್ಟಿದ ಮೊದಲುಗೊಂಡು ಪಾಪಿಷ್ಠರು ನಿನ್ನ ಸಂಬಂಧ ದಿಂದ ನಾವೂ ಇಲ್ಲಿಗೆ ಬಂದ ಪ್ರಸಂಗದಿಂದ ನಮಗೂ ಸ್ವಲ್ಪ ಧರ್ಮ ಬರಲಿ.

೩೧-೩೨. ಎಂಬುದಾಗಿ ನೀವಿಬ್ಬರೂ ಅವರ ಜೊತೆಯಲ್ಲಿಯೇ ಜಾಗರಣ ವನ್ನು ಮಾಡಿದಿರಿ. ಬೆಳಗಾದ ಮೇಲೆ ಆ ಲವಣದ ರಾಶಿಯೂ ಅದರ ಪರಿಕರಣ ಗಳೂ ಗುರುವಿಗೆ ಕೊಡಲ್ಪಟ್ಟವು. ಹನ್ನೆರಡು ಜನ ಬ್ರಾಹ್ಮಣರಿಗೆ ವಸ್ತ್ರಾಲಂಕಾರ ದಿಂದಲಂಕರಿಸಿ ಚಿನ್ನದಿಂದ ಅಲಂಕರಿಸಿದ ಹಸುಗಳನ್ನು ಅವರಿಗೆ ಕೊಟ್ಟಳು.

೩೩. ಸ್ನೇಹಿತರು, ಮಿತ್ರರು, ದೀನರು, ಅಂಧರು, ಕರುಣೆಗೆ ಪಾತ್ರರು, ಇವರೊಡನೆ ಆ ಬೇಡರ ದಂಪತಿಗಳಿಗೂ ಅನ್ನ ಹಾಕಿ ಗೌರವಿಸಿ ಕಳುಹಿಸಿದಳು.

**ಸ ಭವಾಂಲ್ಲುಬ್ಧಕೋ ಜಾತಸ್ಸಪತ್ನೀಕೋ ನೃಪೇಶ್ವರಃ ।**
**ಪುಷ್ಕರಪ್ರಕರಾತ್ತಸ್ಮಾತ್ಕೇಶವಸ್ಯ ತು ಪೂಜನಾತ್ ॥ ೩೪ ॥**

**ವಿನಷ್ಟಾಶೇಷಪಾಪಸ್ಯ ತವ ಪುಷ್ಕರಮಂದಿರಂ ।**
**ತಸ್ಯ ತಸ್ಯ ಚ ಮಾಹಾತ್ಮ್ಯಾದಲೋಭತಪಸಾ ನೃಪ ॥ ೩೫ ॥**

**ಪ್ರಾದಾತ್ತು ಕಾಮಗಂ ಯಾನಂ ಲೋಕನಾಥಶ್ಚತುರ್ಮುಖಃ ।**
**ಸಂತುಷ್ಟಸ್ತ್ವಂ ರಾಜೇಂದ್ರ ಪುಷ್ಕರಂ ತ್ವಂ ಸಮಾಶ್ರಯ ॥ ೩೬ ॥**

**ಕಲ್ಪಸ್ಸ ತ್ವಂ ಸಮಾಸಾದ್ಯ ವಿಭೂತಿದ್ವಾದಶೀವ್ರತಂ ।**
**ಕುರು ರಾಜೇಂದ್ರ ನಿರ್ವಾಣಮವಶ್ಯಂ ಸಮವಾಪ್ಸ್ಯಸಿ ॥ ೩೭ ॥**

**ಏತದುಕ್ತ್ವಾ ಸ ತು ಮುನಿಸ್ತತ್ರೈವಾಂತರಧೀಯತ ।**
**ರಾಜಾ ಯಥೋಕ್ತಂ ಚ ಪುನರಕರೋತ್ಪುಷ್ಪವಾಹನಃ ॥ ೩೮ ॥**

**ಇದಮಾಚರರೋ ರಾಜನ್ನಖಂಡವ್ರತತಾ ಭವೇತ್ ।**
**ಯಥಾ ಕಥಂಚಿತ್ಕಾಲೇನ ದ್ವಾದಶದ್ವಾದಶೀ ನೃಪ ॥ ೩೯ ॥**

---

೩೪. ಆ ಕಮಲಗಳನ್ನು ಕೇಶವನಿಗೆ ಅರ್ಪಿಸಿ ಪೂಜಿಸಿದುದರಿಂದ ನೀವು ಗಂಡಹೆಂಡಿರಿಬ್ಬರೂ ರಾಜರಾಣಿಯರಾದಿರಿ.

೩೫-೩೬. ನಿನ್ನ ಪಾಪಗಳೆಲ್ಲವೂ ಹೋಗುತ್ತಲೂ ನಿನಗೆ ಪುಷ್ಕರವು ಮನೆ ಯಾಯಿತು. ಅದರ ಮಹಿಮೆಯಿಂದಲೂ, ಆಶೆಬಿಟ್ಟ ತಪಸ್ಸಿನಿಂದಲೂ ಇಚ್ಛೆ ಬಂದಂತೆ ಹೋಗುವ ಯಾನವನ್ನು ಬ್ರಹ್ಮನು ಕೊಟ್ಟನು. ಈರೀತಿ ಸಂತೋಷಪಟ್ಟು ನೀನು ಪುಷ್ಕರಕ್ಕೆ ಹೋಗು.

೩೭. ಎಲ್ಲೈ ದೊರೆಯೇ, ನೀನು ಈ ವಿಭೂತಿದ್ವಾದಶೀವ್ರತವನ್ನು ಮಾಡು. ಹಾಗೆ ಮಾಡಿದರೆ ಸ್ವರ್ಗವನ್ನು ಹೊಂದುತ್ತೀಯೆ

೩೮. ಇಷ್ಟನ್ನು ಹೇಳಿ ಆ ಪ್ರಚೇತಸಮುನಿಯು ಹೊರಟುಹೋದನು. ಪುಷ್ಪ ವಾಹನನೆಂಬ ರಾಜನು ಅವನು ಹೇಳಿದಂತೆ ಎಲ್ಲವನ್ನೂ ಮಾಡಿದನು.

೩೯-೪೦. ಈ ವಿಭೂತಿದ್ವಾದಶೀವ್ರತವನ್ನು ಹನ್ನೆರಡನ್ನು ಮಾಡಿದರೆ ಅಲ್ಲಿಗೆ ವ್ರತವು ಪೂರ್ತಿಯಾಗುತ್ತದೆ. ಆಗ ಬ್ರಾಹ್ಮಣರಿಗೆ ಶಕ್ತ್ಯನುಗುಣವಾಗಿ ದಕ್ಷಿಣೆ

ಕರ್ತವ್ಯಾ ಶಕ್ತಿತೋ ದೇಯಾ ವಿಪ್ರೇಭ್ಯೋ ದಕ್ಷಿಣಾನಘ ।
ಜ್ಯೇಷ್ಠೇ ಗಾಸ್ತು ಪ್ರದಾತವ್ಯಾ ಮಧ್ಯಮೇ ಭೂಮಿರುತ್ತಮಾ ॥ ೪೦ ॥

ಕನಿಷ್ಠೇ ಕಾಂಚನಂ ದೇಯಮಿತ್ಯೇಷಾ ದಕ್ಷಿಣಾ ಸ್ಮೃತಾ ।
ಪ್ರಥಮಂ ಬ್ರಹ್ಮದೈವತ್ಯಂ ದ್ವಿತೀಯಂ ವೈಷ್ಣವಂ ತಥಾ ।
ತೃತೀಯಂ ರುದ್ರದೈವತ್ಯಂ ತ್ರಯೋ ದೇವಾಃ ಪೃಥಕ್ಸ್ಥಿತಾಃ ॥ ೪೧ ॥

ಇತಿ ಕಲುಷವಿದಾರಣಂ ಜನಾನಾ-
ಮಪಿ ಪಠತಿ ಶೃಣೋತಿ ಚಾತಿಭಕ್ತ್ಯಾ ।
ಮತಿಮಪಿ ಚ ದದಾತಿ ದೇವಲೋಕೇ
ಸ ವಸತಿ ರೋಮಸಮಾನಿ ವತ್ಸರಾಣಿ ॥ ೪೨ ॥

ಅಥಾತಸ್ಸಂಪ್ರವಕ್ಷ್ಯಾಮಿ ವ್ರತಾನಾಮುತ್ತಮಂ ವ್ರತಂ ।
ಕಥಿತಂ ತೇನ ರುದ್ರೇಣ ಮಹಾಪಾತಕನಾಶನಂ ॥ ೪೩ ॥

---

ಯನ್ನು ಕೊಡಬೇಕು. ಮೊದಲನೆಯದರಲ್ಲಿ ಹಸುವನ್ನೂ ಮಧ್ಯದ್ವಾದಶಿಯಲ್ಲಿ ಭೂಮಿಯನ್ನೂ ಕೊನೆಯದರಲ್ಲಿ ಚಿನ್ನವನ್ನೂ ದಾನಮಾಡಬೇಕು. ಇದು ದಕ್ಷಿಣೆಯ ವಿಷಯವು.

೪೧. ಮೊದಲನೆಯ ಭಾಗವು ಬ್ರಹ್ಮನೇ ದೇವರಾಗಿ ಉಳ್ಳದ್ದು. ಎರಡನೆಯದು ವಿಷ್ಣುವೇ ದೇವರಾಗಿ ಉಳ್ಳದ್ದು. ಮೂರನೆಯ ಭಾಗಕ್ಕೆ ರುದ್ರನು ದೇವರು. ಈರೀತಿ ಈ ತ್ರಿಮೂರ್ತಿಗಳೂ ಪ್ರತ್ಯೇಕಪ್ರತ್ಯೇಕವಾಗಿದ್ದಾರೆ.

೪೨. ಇದನ್ನು ಭಕ್ತಿಯಿಂದ ಕೇಳಿದರೆ ಹೇಳಿದರೆ, ಪಾಪವು ಹೋಗುತ್ತದೆ. ಬುದ್ಧಿಯನ್ನು ಕೊಡುತ್ತದೆ. ಸ್ವರ್ಗಲೋಕದಲ್ಲಿ ಅವನ ಮೈಯಲ್ಲಿರುವ ಕೂದಲಿನಷ್ಟು ವರ್ಷಗಳವರೆಗೆ ಸುಖಿಸುತ್ತಾನೆ.

೪೩. ಇನ್ನು ಮುಂದೆ ವ್ರತಗಳೊಳಗೆಲ್ಲಾ ಉತ್ತಮವಾದ ವ್ರತವನ್ನು ಹೇಳುತ್ತೇನೆ. ಮಹಾಪಾಪಗಳನ್ನೆಲ್ಲಾ ನಾಶಮಾಡುವ ಆ ವ್ರತವನ್ನು ರುದ್ರನೇ ಹೇಳಿದ್ದಾನೆ.

**ನಕ್ತಮನ್ನಂ ಚರಿತ್ವಾ ತು ಗವಾ ಸಾರ್ಧಂ ಕುಟುಂಬಿನೇ ।**
**ಹೇಮಚಕ್ರಂ ತ್ರಿಶೂಲಂ ಚ ದದ್ಯಾದ್ವಿಪ್ರಾಯ ವಾಸಸೀ ॥ ೪೪ ॥**

**ಏವಂ ಯಃ ಕುರುತೇ ಪುಣ್ಯಂ ಶಿವಲೋಕೇ ಸ ಮೋದತೇ ।**
**ಏತದೇವ ವ್ರತಂ ನಾಮ ಮಹಾಪಾತಕನಾಶನಂ ॥ ೪೫ ॥**

**ಯಸ್ತ್ವೇಕಭುಕ್ತೇನ ಕ್ಷಿಪೇದ್ಧೇನುಂ ವೃಷಸಮನ್ವಿತಾಂ ।**
**ಧೇನುಂ ತಿಲಮಯೀಂ ದದ್ಯಾತ್ಸ ಪದಂ ಯಾತಿ ಶಾಂಕರಂ ॥ ೪೬ ॥**

**ಏತದ್ರುದ್ರವ್ರತಂ ನಾಮ ಪಾಪಶೋಕವಿನಾಶನಂ ।**
**ಯಸ್ತು ನೀಲೋತ್ಪಲಂ ಹೈಮಂ ಶರ್ಕರಾಪಾತ್ರಸಂಯುತಂ ॥ ೪೭ ॥**

**ಏಕಾಂತರಿತನಕ್ತಾಶೀ ಸಮಾಂತೇ ವೃಷಸಂಯುತಂ ।**
**ವೈಷ್ಣವಂ ಸ ಪದಂ ಯಾತಿ ನೀಲವ್ರತಮಿಹ ಸ್ಮೃತಂ ॥ ೪೮ ॥**

---

೪೪. ಹಗಲು ಉಪವಾಸವಿದ್ದು ರಾತ್ರಿ ಊಟಮಾಡುತ್ತಾ ಹೀಗೆ ಒಂದು ಮಂಡಲಮಾಡಿ ಅನಂತರ ಹಸು, ಚಿನ್ನದ ಚಕ್ರ, ಚಿನ್ನದ ತ್ರಿಶೂಲ, ಬಟ್ಟೆಗಳನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೪೫. ಈರೀತಿ ಯಾವನು ಪುಣ್ಯವನ್ನು ಸಂಪಾದಿಸಿಕೊಳ್ಳುತ್ತಾನೋ ಅವನು ಶಿವಲೋಕದಲ್ಲಿ ಸುಖಿಸುತ್ತಾನೆ. ಮಹಾಪಾತಕನಾಶಕವಾದುದು ಈ ವ್ರತವು.

೪೬. ಒಂದು ಹೊತ್ತು ಊಟಮಾಡುತ್ತಾ, ಕರುವನ್ನೂ ಹಸುವನ್ನೂ ಸೇವಿಸುತ್ತಿರಬೇಕು. ಹೀಗೆ ಒಂದು ತಿಂಗಳು ಮಾಡಬೇಕು. ಅನಂತರ ಎಳ್ಳಿನಲ್ಲಿ ಹಸುವನ್ನು ಮಾಡಿ ದಾನಮಾಡಬೇಕು. ಹೀಗೆ ಮಾಡಿದರೆ ಶಂಕರನ ಲೋಕವು ಆತನಿಗೆ ಸಿಕ್ಕುತ್ತದೆ. ಇದಕ್ಕೆ ರುದ್ರವ್ರತವೆಂದು ಹೆಸರು. ಪಾಪಗಳೂ ಶೋಕಗಳೂ ಹೋಗುತ್ತವೆ.

೪೭-೪೮. ಒಂದು ವರ್ಷದವರೆಗೂ ದಿನ ಬಿಟ್ಟು ದಿನ ಊಟಮಾಡಿ ದಿನ ಬಿಟ್ಟು ದಿನ ಉಪವಾಸವಿರಬೇಕು. ರಾತ್ರಿಯಲ್ಲಿ ಊಟಮಾಡಬೇಕು. ಹೀಗೆ ಒಂದು ವರ್ಷಕಾಲ ಮಾಡಿ ಕೊನೆಯಲ್ಲಿ ಚಿನ್ನದಲ್ಲಿ ಕಮಲವನ್ನು ಮಾಡಿ ಸಕ್ಕರೆ ತುಂಬಿದ ಪಾತ್ರೆಯಲ್ಲಿಟ್ಟು ಜೊತೆಯಲ್ಲಿ ಒಂದು ಹೋರಿಗರುವನ್ನು ಸೇರಿಸಿ ದಾನ ಮಾಡಬೇಕು. ಇದಕ್ಕೆ ನೀಲವ್ರತವೆಂದು ಹೆಸರು. ಇಂತಹವರು ವೈಕುಂಠಕ್ಕೆ ಹೋಗುತ್ತಾರೆ.

ಆಷಾಢಾದಿಚತುರ್ಮಾಸಮಭ್ಯಂಗಂ ವರ್ಜಯೇನ್ನರಃ ।
ಭೋಜನೋಪಸ್ಕರಂ ದದ್ಯಾತ್ಸ ಯಾತಿ ಭವನಂ ಹರೇಃ ॥ ೪೯ ॥

ಜನಪ್ರೀತಿಕರಂ ನೄಣಾಂ ಪ್ರೀತಿವ್ರತಮಿಹೋಚ್ಯತೇ ।
ವರ್ಜಯಿತ್ವಾ ಮಧೌ ಯಸ್ತು ದಧಿಕ್ಷೀರಘೃತೈಕ್ಷವಂ ॥ ೫೦ ॥

ದದ್ಯಾದ್ವಸ್ತ್ರಾಣಿ ಸೂಕ್ಷ್ಮಾಣಿ ರಸಪಾತ್ರೈಶ್ಚ ಸಂಯುತಂ ।
ಸಂಪೂಜ್ಯ ವಿಪ್ರಮಿಥುನಂ ಗೌರೀ ಮೇ ಪ್ರೀಯತಾಮಿತಿ ॥ ೫೧ ॥

ಏವಂ ಗೌರೀವ್ರತಂ ನಾಮ ಭವಾನೀಲೋಕದಾಯಕಂ ।
ಪುಷ್ಯಾದೌ ಯಸ್ತ್ರಯೋದಶ್ಯಾಂ ಕೃತ್ವಾ ನಕ್ತಮಥೋ ಪುನಃ ॥ ೫೨ ॥

ಅಶೋಕಂ ಕಾಂಚನಂ ದದ್ಯಾದಿಕ್ಷುಯುಕ್ತಂ ದಶಾಂಗುಲಂ ।
ವಿಪ್ರಾಯ ವಸ್ತ್ರಸಂಯುಕ್ತಂ ಪ್ರದ್ಯುಮ್ನಃ ಪ್ರೀಯತಾಮಿತಿ ॥ ೫೩ ॥

---

೪೯. ಆಷಾಢ ಮೊದಲುಗೊಂಡು ನಾಲ್ಕು ತಿಂಗಳೂ ಯಾವನು ಅಭ್ಯಂಜನವನ್ನು ಬಿಟ್ಟು ಕೊನೆಯಲ್ಲಿ ಊಟದ ಪದಾರ್ಥಗಳನ್ನು ದಾನಮಾಡುವನೋ ಅವನು ವೈಕುಂಠವನ್ನು ಹೊಂದುತ್ತಾನೆ.

೫೦-೫೧. ಮುಂದೆ ಹೇಳುವ ವ್ರತಗಳೆಲ್ಲವೂ ಜನಗಳಿಗೆ ಪ್ರೀತಿಯನ್ನುಂಟುಮಾಡುವುದರಿಂದ ಪ್ರೀತಿ ವ್ರತಗಳು ಎನ್ನಿಸಿಕೊಳ್ಳುತ್ತವೆ. ಯಾರು ವೈಶಾಖ ಮಾಸದಲ್ಲಿ ಹಾಲು ಮೊಸರು ತುಪ್ಪ ಸಕ್ಕರೆ ಬೆಲ್ಲಗಳನ್ನೂ ಬಿಟ್ಟು ಆ ವ್ರತ ಪೂರ್ತಿಯಾದ ಮೇಲೆ ಬ್ರಾಹ್ಮಣದಂಪತಿಗಳನ್ನು ಕರೆದು ಅವರನ್ನು ಪೂಜಿಸಿ ಒಳ್ಳೆಯ ಬಟ್ಟೆಗಳನ್ನೂ, ಹಾಲು ಮೊಸರು ತುಪ್ಪ ಸಕ್ಕರೆಗಳಿಂದ ತುಂಬಿದ ಪಾತ್ರೆಗಳನ್ನೂ, ಗೌರಿಯು ಪ್ರೀತಳಾಗಲಿ ಎಂದು ದಾನಮಾಡಬೇಕು. ಇದಕ್ಕೆ ಗೌರೀವ್ರತವೆಂದು ಹೆಸರು. ಭವಾನಿಯ ಲೋಕವನ್ನು ಕೊಡುತ್ತದೆ.

೫೨-೫೪. ಪುಷ್ಯ ಶುದ್ಧ ತ್ರಯೋದಶಿಯ ದಿನ ಉಪವಾಸಮಾಡಿ ಹತ್ತು ಅಂಗುಲ ಉದ್ದವಿರುವ ಒಂದು ಕಬ್ಬಿನ ತುಂಡಿನೊಳಕ್ಕೆ ಹತ್ತು ಅಂಗುಲವಿರುವ ಚಿನ್ನದ ಸಲಾಕಿಯನ್ನು ಚುಚ್ಚಿ ಬ್ರಾಹ್ಮಣನಿಗೆ ಪೂಜಿಸಿ ಬಟ್ಟೆಗಳೊಡನೆ ಆ ಕಬ್ಬಿನ ತುಂಡನ್ನು ಪ್ರದ್ಯುಮ್ನನು ಸಂತೋಷಪಡಲೆಂದು ಕೊಡಬೇಕು. ಅವನು ಒಂದು

**ಕಲ್ಪಂ ವಿಷ್ಣುಪುರೇ ಸ್ಥಿತ್ವಾ ವಿಶೋಕಸ್ಸ್ಯಾತ್ಪುನರ್ನೃಪ ।**
**ಏತತ್ಕಾಮವ್ರತಂ ನಾಮ ಸದಾ ಶೋಕವಿನಾಶನಂ ॥ ೫೪ ॥**

**ಆಷಾಢಾದಿವ್ರತೇ ಯಸ್ತು ವರ್ಜಯೇತ್ತು ಫಲಾಶನಂ ।**
**ಚಾತುರ್ಮಾಸ್ಯೇ ನಿವೃತ್ತೇ ತು ಘಟಂ ಸರ್ಪಿರ್ಗುಡಾನ್ವಿತಂ ॥ ೫೫ ॥**

**ಕಾರ್ತಿಕ್ಯಾಂ ತತ್ಪುನರ್ಹೈಮಂ ಬ್ರಾಹ್ಮಣಾಯ ನಿವೇದಯೇತ್ ।**
**ಸ ರುದ್ರಲೋಕಮಾಪ್ನೋತಿ ಶಿವವ್ರತಮಿದಂ ಸ್ಮೃತಂ ॥ ೫೬ ॥**

**ವರ್ಜಯೇದ್ಯಸ್ತು ಪುಷ್ಪಾಣಿ ಹೇಮಂತೇ ಶಿಶಿರಾವೃತೇ ।**
**ಪುಷ್ಪತ್ರಯಂ ಚ ಫಾಲ್ಗುಣ್ಯಾಂ ಶಕ್ತ್ಯಾ ಕೃತ್ವಾ ಚ ಕಾಂಚನಂ ॥ ೫೭ ॥**

**ದದ್ಯಾದ್ದ್ವಿಕಾಲವೇಲಾಯಾಂ ಪ್ರೀಯೇತಾಂ ಶಿವಕೇಶವೌ ।**
**ದತ್ವಾ ಪರಂ ಪದಂ ಯಾತಿ ಸೌಮ್ಯವ್ರತಮಿದಂ ಸ್ಮೃತಂ ॥ ೫೮ ॥**

**ಫಾಲ್ಗುಣಾದಿತೃತೀಯಾಯಾಂ ಲವಣಂ ಯಸ್ತು ವರ್ಜಯೇತ್ ।**
**ಸಮಾಪ್ತೇ ಶಯನಂ ದತ್ವಾ ಗೃಹಂ ಚೋಪಸ್ಕರಾನ್ವಿತಂ ॥ ೫೯ ॥**

---

ಕಲ್ಪದವರೆಗೂ ವೈಕುಂಠದಲ್ಲಿದ್ದು ಮತ್ತೆ ದುಃಖರಹಿತನಾಗಿ ಹುಟ್ಟುವನು. ಇದು ಕಾಮವ್ರತವೆನ್ನಿಸಿಕೊಳ್ಳುತ್ತದೆ ಶೋಕವನ್ನು ನಾಶಮಾಡುತ್ತದೆ.

೫೫-೫೬. ಆಷಾಢವೇ ಮೊದಲಾದ ಚಾತುರ್ಮಾಸ್ಯವ್ರತದಲ್ಲಿ ಹಣ್ಣುಗಳನ್ನು ತಿನ್ನಬಾರದು. ನಾಲ್ಕು ತಿಂಗಳು ಕಳೆದ ನಂತರ ತುಪ್ಪ ಬೆಲ್ಲದಿಂದ ಕೂಡಿದ ಚಿನ್ನದ ಬಿಂದಿಗೆಯನ್ನು ಕಾರ್ತೀಕಮಾಸದಲ್ಲಿ ಬ್ರಾಹ್ಮಣನನ್ನು ಪೂಜಿಸಿ ದಾನಮಾಡಬೇಕು. ಅವನಿಗೆ ರುದ್ರಲೋಕ ಪ್ರಾಪ್ತವಾಗುತ್ತದೆ. ಇದಕ್ಕೆ ಶಿವವ್ರತವೆಂದು ಹೆಸರು.

೫೭-೫೮. ಹೇಮಂತದಲ್ಲೂ ಶಿಶಿರಋತುವಿನ ಆದಿಯಲ್ಲೂ (ಮಾರ್ಗಶೀರ್ಷ ಪುಷ್ಯ, ಮಾಘ) ಹೂಗಳನ್ನು ಬಿಟ್ಟುಬಿಡಬೇಕು. ಫಾಲ್ಗುಣದಲ್ಲಿ ಯಾವುದಾದರೂ ಮೂರು ಹೂಗಳನ್ನು ಶಕ್ತ್ಯನುಸಾರವಾಗಿ ಚಿನ್ನದಲ್ಲಿ ಮಾಡಿಸಿ ಸಾಯಂಕಾಲದಲ್ಲಿ ದಾನಮಾಡಬೇಕು. ಆಗ ಶಿವಕೇಶವರಿಗೆ ಪ್ರೀತಿಯಾಗಲೆಂದು ಹೇಳಬೇಕು. ಹೀಗೆ ಮಾಡಿದರೆ ಉತ್ತಮಗತಿಯೂ ಸಿಕ್ಕುತ್ತದೆ. ಇದಕ್ಕೆ ಸೌಮ್ಯವ್ರತವೆಂದು ಹೆಸರು.

೫೯-೬೦. ಫಾಲ್ಗುಣ ಶುದ್ಧ ತದಿಗೆ ಮೊದಲುಗೊಂಡು ಉಪ್ಪನ್ನು ಬಿಡಬೇಕು. ಇದೊಂದು ಮಂಡಲ. ಇದು ಮುಗಿಯುತ್ತಲೂ ಹಾಸಿಗೆಯನ್ನೂ, ಅದಕ್ಕೆ ಬೇಕಾದ

**ಸಂಪೂಜ್ಯ ವಿಪ್ರಮಿಥುನಂ ಭವಾನೀ ಪ್ರೀಯತಾಮಿತಿ ।**
**ಗೌರೀಲೋಕೇ ವಸೇತ್ಕಲ್ಪಂ ಸೌಭಾಗ್ಯವ್ರತಮುಚ್ಯತೇ ॥ ೬೦**

**ಸಂಧ್ಯಾಮೌನಂ ನರಃ ಕೃತ್ವಾ ಸಮಾಪ್ತೇ ಘೃತಕುಂಭವತ್ ।**
**ವಸ್ತ್ರಯುಗ್ಮಂ ತಿಲಾನ್ಘಂಟಾಂ ಬ್ರಾಹ್ಮಣಾಯ ನಿವೇದಯೇತ್ ॥ ೬೧ ॥**

**ಲೋಕಂ ಸಾರಸ್ವತಂ ಯಾತಿ ಪುನರಾವೃತ್ತಿದುರ್ಲಭಂ ।**
**ಏತತ್ಸಾರಸ್ವತಂ ನಾಮ ರೂಪವಿದ್ಯಾಪ್ರದಂ ವ್ರತಂ ॥ ೬೨ ॥**

**ಲಕ್ಷ್ಮೀಮಭ್ಯರ್ಚ್ಯ ಪಂಚಮ್ಯಾಮುಪವಾಸೀ ಭವೇನ್ನರಃ ।**
**ಸಮಾಪ್ತೇ ಹೇಮಕಮಲಂ ದದ್ಯಾದ್ಧೇನುಸಮನ್ವಿತಂ ॥ ೬೩ ॥**

**ಸ ವೈ ವಿಷ್ಣುಪದಂ ಯಾತಿ ಲಕ್ಷ್ಮೀಸ್ಸ್ಯಾಜ್ಜನ್ಮಜನ್ಮನಿ ।**
**ಏತಲ್ಲಕ್ಷ್ಮೀವ್ರತಂ ನಾಮ ದುಃಖಶೋಕವಿನಾಶನಂ ॥ ೬೪ ॥**

---

ದಿಂಬು ಮುಂತಾದುವನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು. ಮತ್ತು ಮನೆಯನ್ನೂ ಸಂಸಾರಕ್ಕೆ ಬೇಕಾದ ಸಾಮಾನುಗಳನ್ನೂ ಕೊಡಬೇಕು. ಭವಾನಿಗೆ ಪ್ರೀತಿಯಾಗಲೆಂದು ಹೇಳಬೇಕು. ಹಾಗೆ ಮಾಡಿದರೆ ಗೌರೀಲೋಕದಲ್ಲಿ ಸುಖಿಸುತ್ತಾನೆ. ಇದಕ್ಕೆ ಸೌಭಾಗ್ಯಗೌರೀವ್ರತವೆಂದು ಹೆಸರು.

೬೧-೬೨. ಸಂಧ್ಯಾಕಾಲದಲ್ಲಿ ಮೌನದಿಂದಿರುತ್ತಾ ಒಂದು ವರ್ಷದವರೆಗೂ ಈ ವ್ರತವನ್ನು ಮಾಡಿ ಮುಗಿದ ನಂತರ ತುಪ್ಪದ ಕೊಡವನ್ನು, ಒಂದುಜೊತೆ ಬಟ್ಟೆಯನ್ನೂ, ಎಳ್ಳನ್ನೂ, ಘಂಟೆಯನ್ನೂ ಬ್ರಾಹ್ಮಣರಿಗೆ ಕೊಡಬೇಕು. ಹೀಗೆ ಕೊಟ್ಟರೆ ಸರಸ್ವತಿಯ ಲೋಕವನ್ನು ಹೊಂದುತ್ತಾನೆ. ಅಲ್ಲಿಂದ ಮತ್ತೆ ಹಿಂತಿರುಗುವುದಿಲ್ಲ. ಇದಕ್ಕೆ ಸಾರಸ್ವತವ್ರತವೆಂದು ಹೆಸರು. ಇದೇ ಮನುಷ್ಯನಿಗೆ ರೂಪವನ್ನೂ ವಿದ್ಯೆಯನ್ನೂ ಕೊಡುತ್ತದೆ.

೬೩-೬೪. ಪಂಚಮಿಯ ದಿವಸ ಲಕ್ಷ್ಮಿಯನ್ನು ಪೂಜಿಸಬೇಕು. ಆ ದಿವಸ ಉಪವಾಸವಿರಬೇಕು. ಹೀಗೆ ಒಂದುವರ್ಷ ಕಾಲ ಮಾಡಬೇಕು. ಮುಗಿದ ನಂತರ ಚಿನ್ನದ ಕಮಲವನ್ನು ಶಕ್ತ್ಯನುಸಾರ ಮಾಡಿಸಿ, ಅದನ್ನೂ ಗೋವನ್ನೂ ದಾನ ಕೊಡಬೇಕು. ಅವನು ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ. ಹುಟ್ಟಿದರೆ ಜನ್ಮ ಜನ್ಮಕ್ಕೂ ಐಶ್ವರ್ಯವಂತನಾಗಿ ಹುಟ್ಟುತ್ತಾನೆ. ಇದಕ್ಕೆ ಲಕ್ಷ್ಮೀವ್ರತವೆಂದು ಹೆಸರು. ದುಃಖಶೋಕಗಳು ಹೋಗುತ್ತವೆ.

ಕೃತ್ವೋಪಲೇಪನಂ ಶಂಭೋರಗ್ರತಃ ಕೇಶವಸ್ಯ ಚ ।
ಯಾವದಬ್ದಂ ಪುನಸ್ತತ್ರ ದೇಯಾ ಧೇನುರ್ಘಟಸ್ತಥಾ ॥ ೬೫ ॥

ಜನ್ಮಾಯುತಂ ಸ ರಾಜಾ ಸ್ಯಾತ್ತತಶ್ಶಿವಪುರಂ ವ್ರಜೇತ್ ।
ಏತದಾಯುರ್ವ್ರತಂ ನಾಮ ಸರ್ವಕಾಮಪ್ರದಾಯಕಂ ॥ ೬೬ ॥

ಅಶ್ವತ್ಥಂ ಭಾಸ್ಕರಂ ಗಂಗಾಂ ಪ್ರಣಮ್ಯೈಕತ್ರ ವಾಗ್ಯತಃ ।
ಏಕಭುಕ್ತಂ ನರಃ ಕುರ್ಯಾದಬ್ದಮೇಕಂ ವಿಮತ್ಸರಃ ॥ ೬೭ ॥

ವ್ರತಾಂತೇ ವಿಪ್ರಮಿಥುನಂ ಪೂಜ್ಯ ಧೇನುತ್ರಯಾನ್ವಿತಂ ।
ವೃಕ್ಷಂ ಹಿರಣ್ಮಯಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ॥ ೬೮ ॥

ಏತತ್ಕೀರ್ತಿವ್ರತಂ ನಾಮ ಭೂತಿಕೀರ್ತಿಫಲಪ್ರದಂ ।
ಘೃತೇನ ಸ್ನಪನಂ ಕೃತ್ವಾ ಶಂಭೋರ್ವಾ ಕೇಶವಸ್ಯ ವಾ ॥ ೬೯ ॥

---

೬೫-೬೬. ಶಂಭುವಿನ ಮುಂದೆಯೂ, ಕೇಶವನ ಮುಂದೆಯೂ ನಿತ್ಯವೂ ಸಾರಿಸಿ ಗುಡಿಸುತ್ತ ಒಂದು ವರ್ಷದವರೆಗೂ ಮಾಡಿ ಒಂದು ಗೋವನ್ನೂ, ಅದಕ್ಕೆ ಕರೆಯುವ ಚಂಬನ್ನೂ ಕೊಡಬೇಕು. ಹೀಗೆ ಕೊಟ್ಟರೆ ಒಂದುಸಾವಿರ ಜನ್ಮಗಳ ವರೆಗೆ ಅವನು ರಾಜನಾಗಿ ಹುಟ್ಟುತ್ತಿದ್ದು ಕಡೆಗೆ ಶಿವಸಾನ್ನಿಧ್ಯವನ್ನು ಹೊಂದುತ್ತಾನೆ. ಇದಕ್ಕೆ ಆಯುರ್ವ್ರತವೆಂದು ಹೆಸರು. ಸಕಲೇಷ್ಟಗಳನ್ನೂ ಕೊಡುತ್ತದೆ.

೬೭-೬೮. ಅರಳೀಮರ, ಸೂರ್ಯ, ಗಂಗೆಗಳನ್ನು ಪ್ರತಿದಿನವೂ ಸೇವಿಸುತ್ತ ಮಾತನಾಡದೇ ಇರಬೇಕು. ಮತ್ತು ಒಪ್ಪತ್ತು ಊಟಮಾಡಬೇಕು. ಈರೀತಿ ಒಂದು ವರ್ಷಕಾಲ ಮಾಡಬೇಕು. ವ್ರತ ಮುಗಿದ ಮೇಲೆ ದಂಪತಿಗಳನ್ನು ಪೂಜಿಸಿ ಮೂರು ಗೋಗಳನ್ನೂ ಚಿನ್ನದ ಅರಳೀಮರವನ್ನೂ ದಾನಮಾಡಿದರೆ ಅವನಿಗೆ ಅಶ್ವಮೇಧ ಫಲವು ಬರುತ್ತದೆ. ಇದಕ್ಕೆ ಕೀರ್ತಿವ್ರತವೆಂದು ಹೆಸರು. ಐಶ್ವರ್ಯ ಕೀರ್ತಿಗಳನ್ನು ಕೊಡುತ್ತದೆ.

೬೯—೭೧. ಅಭ್ಯಂಜನಸ್ನಾನಮಾಡಿ ಶಿವನ ಮುಂದಾಗಲೀ ವಿಷ್ಣುವಿನ ಮುಂದಾಗಲೀ ಅಕ್ಷತೆಗಳಿಂದಲೂ ಸಗಣಿಯಿಂದಲೂ ಗೋಪದ್ಮವನ್ನು ಬರೆಯಬೇಕು. ಹೀಗೆ ಒಂದು ವರ್ಷ ಮಾಡಬೇಕು. ಮುಗಿದ ನಂತರ ಎಳ್ಳು ಗೋವುಗಳನ್ನೂ, ಎಂಟು ಅಂಗುಲದ ಚಿನ್ನದ ಕಮಲವನ್ನೂ ಕೊಡಬೇಕು. ಇಂತಹವನು ಶಿವಲೋಕ

**ಅಕ್ಷತಾಭಿಸ್ಸಮಂ ಕುರ್ಯಾತ್ಪದ್ಮಂ ಗೋಮಯಮಂಡಲಂ ।**
**ಸಮಾಪ್ತೇ ಹೇಮಕಮಲಂ ತಿಲಧೇನುಸಮನ್ವಿತಂ ॥ ೭೦ ॥**

**ಶುದ್ಧಮಷ್ಟಾಂಗುಲಂ ದದ್ಯಾಚ್ಛಿವಲೋಕೇ ಮಹೀಯತೇ ।**
**ಸಾಮ ಗಾಯಯತಶ್ಚೈವ ಸಾಮವ್ರತಮಿಹೋಚ್ಯತೇ ॥ ೭೧ ॥**

**ನವಮ್ಯಾಮೇಕಭುಕ್ತಂ ತು ಕೃತ್ವಾ ಕನ್ಯಾಶ್ಚ ಭಕ್ತಿತಃ ।**
**ಭೋಜಯಿತ್ವಾ ಚ ಗಾಂ ದದ್ಯಾದ್ಧೇಮಕಂಚುಕವಾಸಸೀ ॥ ೭೨ ॥**

**ಹೈಮಂ ಸಿಂಹಂ ಚ ವಿಪ್ರಾಯ ದತ್ವಾ ಶಿವಪುರಂ ವ್ರಜೇತ್ ।**
**ಜನ್ಮಾರ್ಬುದಂ ಸುರೂಪಸ್ಸ್ಯಾಚ್ಛತ್ರುಭಿಶ್ಚಾಪರಾಜಿತಃ ॥ ೭೩ ॥**

**ಏತದ್ವೀರವ್ರತಂ ನಾಮ ನಾರೀಣಾಂ ಚ ಸುಖಪ್ರದಂ ।**
**ಯಾವತ್ಸಮಾಪಯೇದ್ಯಸ್ತು ಪಂಚದಶ್ಯಾಂ ಪಯೋವ್ರತಂ ॥ ೭೪ ॥**

**ಸಮಾಪ್ತೇ ತು ಸಕೃದ್ದದ್ಯಾದ್ಗಾಶ್ಚ ಪಂಚ ಪಯಸ್ವಿನೀಃ ।**
**ವಾಸಾಂಸಿ ಚಾಪಿ ಶಂಗಾನಿ ಜಲಕುಂಭಯುತಾನಿ ಚ ॥ ೭೫ ॥**

---

ದಲ್ಲಿ ರಮಿಸುತ್ತಾನೆ. ಇದನ್ನು ಮಾಡುವಾಗ ಸಾಮವೇದವನ್ನು ಗಾನಮಾಡುತ್ತಿರಬೇಕು. ಆದ್ದರಿಂದ ಇದಕ್ಕೆ ಸಾಮವ್ರತವೆಂದು ಹೆಸರು.

೭೨-೭೩. ನವಮಿಯ ದಿನ ಒಂದು ಹೊತ್ತು ಊಟಮಾಡಿ ಸಾಧ್ಯವಾದಷ್ಟು ಜನ ಕನ್ಯೆಯರನ್ನು ಆ ದಿನ ಭೋಜನಮಾಡಿಸುತ್ತಿರಬೇಕು. ಹೀಗೆ ಒಂದು ವರ್ಷ ಕಾಲ ಮಾಡಿ ಕೊನೆಯಲ್ಲಿ ಸುವರ್ಣ, ಕುಪ್ಪಸ, ಶೀರೆಗಳನ್ನೂ, ಚಿನ್ನದಲ್ಲಿ ಸಿಂಹವನ್ನು ಮಾಡಿ ಅದನ್ನೂ ದಾನಮಾಡಿದರೆ ಶಿವನ ಸ್ಥಾನವನ್ನು ಹೊಂದುತ್ತಾನೆ. ಒಂದು ಅರ್ಬುದ ಜನ್ಮಗಳವರೆಗೆ ಒಳ್ಳೆಯ ರೂಪವನ್ನೂ ಹೊಂದುತ್ತಾನೆ. ಶತ್ರುಗಳಿಗೆ ತಲೆಬಾಗುವುದಿಲ್ಲ. ಇದಕ್ಕೆ ವೀರವ್ರತವೆಂದು ಹೆಸರು. ಇದು ಹೆಂಗಸರಿಗೆ ಸುಖವನ್ನು ಕೊಡುತ್ತದೆ.

೭೪—೭೬. ಪಯೋವ್ರತವನ್ನು ಹದಿನೈದು ದಿನಗಳವರೆಗೆ ಮಾಡಬೇಕು. ಹದಿನೈದು ದಿನಗಳವರೆಗೆ ಗೋಸಂಬಂಧವಾದುದೊಂದನ್ನೂ ಮುಟ್ಟದಿರಬೇಕು. ಹದಿನೈದು ದಿನಗಳು ಕಳೆದ ಮೇಲೆ ಐದು ಕರೆಯತಕ್ಕ ಹಸುಗಳನ್ನೂ, ಬಟ್ಟೆಗಳನ್ನೂ

ಸ ಯಾತಿ ವೈಷ್ಣವಂ ಲೋಕಂ ಪಿತೄಣಾಂ ತಾರಯೇಚ್ಛತಂ ।
ಕಲ್ಪಾಂತೇ ರಾಜರಾಜೇಂದ್ರಃ ಪಿತೃವ್ರತಮಿದಂ ಸ್ಮೃತಂ ॥ ೭೬ ॥

ಚೈತ್ರಾದಿಚತುರೋ ಮಾಸಾನ್ಜಲಂ ದದ್ಯಾದಯಾಚಿತಂ ।
ವ್ರತಾಂತೇ ಮಣಿಕಂ ದದ್ಯಾದನ್ನವಸ್ತ್ರಸಮನ್ವಿತಂ ॥ ೭೭ ॥

ತಿಲಪಾತ್ರಂ ಹಿರಣ್ಯಂ ಚ ಬ್ರಹ್ಮಲೋಕೇ ಮಹೀಯತೇ ।
ಕಲ್ಪಾಂತೇ ಭೂತಿಜನನಂ ಸಾನಂದವ್ರತಮುತ್ತಮಂ ॥ ೭೮ ॥

ಪಂಚಾಮೃತೇನ ಸ್ನಪನಂ ಕೃತ್ವಾ ಸಂವತ್ಸರಂ ವಿಭೋ ।
ವತ್ಸರಾಂತೇ ಪುನರ್ದದ್ಯಾದ್ಧೇನುಂ ಪಂಚಾಮೃತೈರ್ಯುತಾಂ ॥ ೭೯ ॥

ವಿಪ್ರಾಯ ದದ್ಯಾಚ್ಛಂಖಂ ಚ ಸ ಪದಂ ಯಾತಿ ಶಾಂಕರಂ ।
ರಾಜಾ ಭವತಿ ಕಲ್ಪಾಂತೇ ಧೃತಿವ್ರತಮಿದಂ ಸ್ಮೃತಂ ॥ ೮೦ ॥

---

ಚಿನ್ನದ ಪಾತ್ರೆಗಳನ್ನೂ ಕೊಡಬೇಕು. ಅವನು ವೈಕುಂಠಕ್ಕೆ ಹೋಗುತ್ತಾನೆ. ಅಲ್ಲದೆ ಪಿತೃಗಳನ್ನೂ ಉದ್ಧಾರಮಾಡುತ್ತಾನೆ. ಕಲ್ಪಾಂತರದಲ್ಲಿ ಚಕ್ರವರ್ತಿಯಾಗಿ ಹುಟ್ಟು ತ್ತಾನೆ. ಇದಕ್ಕೆ ಪಿತೃವ್ರತವೆಂದು ಹೆಸರು.

೭೭-೭೮. ಚೈತ್ರಮಾಸ ಮೊದಲುಗೊಂಡು ನಾಲ್ಕು ತಿಂಗಳಕಾಲ ಎಲ್ಲರಿಗೂ ನೀರನ್ನು ಕೊಡಬೇಕು. ಅವರು ಕೇಳದಿದ್ದರೂ ತಾನೇ ಮುಂದುವರಿದು ಕೊಡ ಬೇಕು. ನಾಲ್ಕು ತಿಂಗಳು ಕಳೆದು ವ್ರತ ಮುಗಿದ ಮೇಲೆ ಬ್ರಾಹ್ಮಣದಂಪತಿಗೆ ಭೋಜನ ಮಾಡಿಸಿ ವಸ್ತ್ರಗಳನ್ನೂ ಎಳ್ಳಿನ ಪಾತ್ರೆಯನ್ನೂ ಗೋವನ್ನೂ ದಾನ ಮಾಡಬೇಕು. ಅದು ಕೊನೆಯಲ್ಲಿ ಐಶ್ವರ್ಯವನ್ನು ಕೊಡತಕ್ಕ ವ್ರತವು. ಇದಕ್ಕೆ ಸಾನಂದವ್ರತವೆಂದು ಹೆಸರು.

೭೯-೮೦. ಒಂದು ವರ್ಷದವರೆಗೆ ಪಂಚಾಮೃತದಿಂದ ಸ್ನಾನಮಾಡಬೇಕು. ವರ್ಷ ತುಂಬಿದ ಮೇಲೆ ಪಂಚಾಮೃತದಿಂದ ತುಂಬಿದ ಪಾತ್ರೆಯನ್ನೂ ಗೋವನ್ನೂ ಶಂಖವನ್ನೂ ಬ್ರಾಹ್ಮಣರಿಗೆ ದಾನಮಾಡಬೇಕು. ಅವನು ಶಂಕರನ ಸ್ಥಾನವನ್ನು ಹೊಂದುತ್ತಾನೆ. ಕಲ್ಪದ ಕೊನೆಯಲ್ಲಿ ರಾಜನಾಗುತ್ತಾನೆ. ಇದಕ್ಕೆ ಧೃತಿವ್ರತ ವೆಂದು ಹೆಸರು.

ವರ್ಜಯಿತ್ವಾ ಪುನರ್ಮಾಂಸಂ ವ್ರತಾಂತೇ ಗೋಪ್ರದೋ ಭವೇತ್ ।
ತದ್ವದ್ಧೇಮಮೃಗಂ ದದ್ಯಾತ್ಸೋಽಶ್ವಮೇಧಫಲಂ ಲಭೇತ್ ॥ ೮೧ ॥

ಅಹಿಂಸಾವ್ರತಮಿತ್ಯುಕ್ತಂ ಕಲ್ಪಾಂತೇ ಭೂಪತಿರ್ಭವೇತ್ ।
ಮಾಘಮಾಸ್ಯುಷಸಿ ಸ್ನಾನಂ ಕೃತ್ವಾ ದಾಂಪತ್ಯಮರ್ಚಯೇತ್ ॥ ೮೨ ॥

ಭೋಜಯಿತ್ವಾ ಯಥಾಶಕ್ತ್ಯಾ ನರೋ ವಸ್ತ್ರವಿಭೂಷಣೈಃ ।
ಸೂರ್ಯಲೋಕೇ ವಸೇತ್ಕಲ್ಪಂ ಸೂರ್ಯವ್ರತಮಿದಂ ಸ್ಮೃತಂ ।
ಆಷಾಢಾದಿಚತುರ್ಮಾಸಂ ಪ್ರಾತಸ್ಸ್ನಾಯೀ ಭವೇನ್ನರಃ ॥ ೮೩ ॥

ವಿಪ್ರೇಷು ಭೋಜನಂ ದದ್ಯಾತ್ಕಾರ್ತಿಕ್ಯಾಂ ಗೋಪ್ರದೋ ಭವೇತ್ ।
ಸ ವೈಷ್ಣವಂ ಪದಂ ಯಾತಿ ವಿಷ್ಣುವ್ರತಮಿದಂ ಸ್ಮೃತಂ ॥ ೮೪ ॥

ಅಯನಾದಯನಂ ಯಾವದ್ವರ್ಜಯೇತ್ಪುಷ್ಪಸರ್ಪಿಷೀ ।
ತದಂತೇ ಪುಷ್ಪದಾಮಾನಿ ದತ್ವಾ ತಚ್ಚ ದ್ವಿಜಾತಯೇ ॥ ೮೫ ॥

---

೮೧. ಮನುಷ್ಯನು ಒಂದು ವರ್ಷದವರೆಗೂ ಮಾಂಸವನ್ನು ತಿನ್ನದೇ ಬಿಡಬೇಕು. ವರ್ಷ ತುಂಬಿದ ಮೇಲೆ ಗೋವನ್ನೂ ಚಿನ್ನದ ಮೃಗವನ್ನೂ ದಾನ ಕೊಡಬೇಕು. ಇವನು ಅಶ್ವಮೇಧಫಲವನ್ನು ಹೊಂದುತ್ತಾನೆ. ಇದಕ್ಕೆ ಅಹಿಂಸಾ ವ್ರತವೆಂದು ಹೆಸರು. ಕಲ್ಪದ ಕೊನೆಯಲ್ಲಿ ರಾಜನಾಗುತ್ತಾನೆ.

೮೨-೮೩. ಮಾಘಮಾಸದಲ್ಲಿ ಉಷಃಕಾಲದಲ್ಲಿ ಸ್ನಾನವನ್ನು ಮಾಡಬೇಕು. ಆ ಒಂದು ತಿಂಗಳು ಸ್ನಾನಮಾಡಿ ಕೊನೆಯಲ್ಲಿ ದಂಪತಿಗಳಿಗೆ ಪೂಜೆಮಾಡಿ ಭೋಜನ ಮಾಡಿಸಿ ಶಕ್ತಿಗನುಗುಣವಾಗಿ ಒಡವೆಗಳಿಂದಲೂ ವಸ್ತ್ರದಿಂದಲೂ ತೃಪ್ತಿಪಡಿಸಬೇಕು. ಅವನು ಸೂರ್ಯಲೋಕವನ್ನು ಹೊಂದುತ್ತಾನೆ. ಇದು ಸೂರ್ಯವ್ರತವೆನ್ನಿಸಿಕೊಳ್ಳುತ್ತದೆ.

೮೪. ಆಷಾಢ ಮೊದಲ್ಗೊಂಡು ನಾಲ್ಕು ತಿಂಗಳು ಪ್ರಾತಸ್ಸ್ನಾನಮಾಡಬೇಕು. ಕಾರ್ತಿಕಮಾಸದಲ್ಲಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಗೋದಾನಮಾಡಬೇಕು. ಅವನು ವೈಕುಂಠವನ್ನು ಹೊಂದುತ್ತಾನೆ. ಇದಕ್ಕೆ ವಿಷ್ಣುವ್ರತವೆಂದು ಹೆಸರು.

೮೫-೮೬. ಒಂದು ಅಯನವು ಪ್ರಾರಂಭವಾಗುವ ಮೊದಲನೆಯ ದಿನ ಹೂವನ್ನೂ ತುಪ್ಪವನ್ನೂ ಮತ್ತೊಂದು ಅಯನ ಹುಟ್ಟುವವರೆಗೆ ಬಿಟ್ಟುಬಿಡಬೇಕು.

**ದದ್ಯಾದ್ದ್ವಿಜಾತಯೇ ರಾಜನ್ಘೃತಂ ಧೇನ್ವಾ ಸಹೈವ ಚ ।**
**ದತ್ವಾ ಶಿವಪದಂ ಯಾತಿ ವಿಪ್ರಾಯ ಘೃತಪಾಯಸಂ ॥ ೮೬ ॥**

**ಏತಚ್ಛೀಲವ್ರತಂ ನಾಮ ಶೀಲಾರೋಗ್ಯಪ್ರದಾಯಕಂ ।**
**ಸಂಧ್ಯಾದೀಪಪ್ರದೋ ಯಸ್ತು ಘೃತಂ ತೈಲಂ ಚ ವರ್ಜಯೇತ್ ॥ ೮೭ ॥**

**ಸಮಾಪ್ತೇ ದೀಪಕಂ ದದ್ಯಾಚ್ಚಕ್ರಂ ಶೂಲಂ ಚ ಕಾಂಚನಂ ।**
**ವಸ್ತ್ರಯುಗ್ಮಂ ಚ ವಿಪ್ರಾಯ ಸ ತೇಜಸ್ವೀ ಭವೇದಿಹ ॥ ೮೮ ॥**

**ರುದ್ರಲೋಕಮವಾಪ್ನೋತಿ ದೀಪ್ತಿವ್ರತಮನುತ್ತಮಂ ।**
**ಕಾರ್ತಿಕಾದಿತೃತೀಯಾಯಾಂ ಪ್ರಾಶ್ಯ ಗೋಮೂತ್ರಯಾವಕಂ ॥ ೮೯ ॥**

---

ಆ ಕೊನೆಯಲ್ಲಿ ಹೂಮಾಲೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಮತ್ತು ತುಪ್ಪ ತುಂಬಿದ ಪಾತ್ರೆಯನ್ನೂ ಗೋವನ್ನೂ ಪಾಯಸವನ್ನೂ ದಾನಮಾಡಬೇಕು ಹೀಗೆ ಮಾಡಿದರೆ ಶಿವನಸ್ಥಾನವನ್ನು ಹೊಂದುತ್ತಾನೆ. ಇದಕ್ಕೆ ಶೀಲವ್ರತವೆಂದು ಹೆಸರು. ಇದು ಶೀಲವನ್ನೂ ಆರೋಗ್ಯವನ್ನೂ ಕೊಡುತ್ತದೆ.

೮೭-೮೮. ಸಾಯಂಕಾಲದ ಹೊತ್ತಿನಲ್ಲಿ ನಿತ್ಯವೂ ದೀಪ ಹಚ್ಚುತ್ತಿರಬೇಕು. ಆ ವ್ರತಕಾಲದಲ್ಲಿ ತುಪ್ಪವನ್ನಾಗಲೀ ಎಣ್ಣೆಯನ್ನಾಗಲೀ ತಾನು ಉಪಯೋಗಿಸಬಾರದು. ವರ್ಷದ ಕೊನೆಯಲ್ಲಿ ಬ್ರಾಹ್ಮಣನಿಗೆ ದೀಪವನ್ನೂ ಚಿನ್ನದ ಚಕ್ರ ತ್ರಿಶೂಲಗಳನ್ನೂ ದಾನಮಾಡಬೇಕು. ಮತ್ತು ಬಟ್ಟೆಗಳನ್ನೂ ಕೊಡಬೇಕು. ಇವನು ಒಳ್ಳೆಯ ತೇಜಸ್ಸನ್ನು ಹೊಂದುತ್ತಾನೆ. ಮತ್ತು ರುದ್ರಲೋಕವನ್ನೂ ಹೊಂದುತ್ತಾನೆ. ಇದಕ್ಕೆ ದೀಪ್ತಿವ್ರತವೆಂದು ಹೆಸರು.

೮೯-೯೦. ಕಾರ್ತೀಕಮಾಸದ ತದಿಗೆಯ ದಿನ ಗೋಮೂತ್ರವನ್ನೂ ಯವವೆಂಬ ಧಾನ್ಯದ ಅನ್ನವನ್ನೂ ಊಟಮಾಡಬೇಕು. ಅನಂತರ ಒಪ್ಪತ್ತು ಪ್ರತಿದಿನವೂ ಆ ಗೋಮೂತ್ರ ಮತ್ತು ಯವದ ಅನ್ನವನ್ನೇ ತಿನ್ನುತ್ತ ಮತ್ತೊಂದು ಪೊತ್ತು ಉಪವಾಸಮಾಡುತ್ತಿರಬೇಕು. ವರ್ಷವಾದ ಮೇಲೆ ಬ್ರಾಹ್ಮಣದಂಪತಿಗಳನ್ನು ಪೂಜಿಸಿ ಗೋದಾನಮಾಡಬೇಕು. ಇವನು ಒಂದು ಕಲ್ಪದವರೆಗೆ ಗೌರೀಲೋಕದಲ್ಲಿರುತ್ತಾನೆ.

ನಕ್ತಂ ಚರೇದಬ್ದಮೇಕಮಬ್ದಾಂತೇ ಗೋಪ್ರದೋ ಭವೇತ್ ।
ಗೌರೀಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ॥ ೯೦ ॥

ಏತದ್ರುದ್ರವ್ರತಂ ನಾಮ ಸದಾ ಕಲ್ಯಾಣಕಾರಕಂ ।
ವರ್ಜಯೇಚ್ಚತುರೋ ಮಾಸಾನ್ಯಸ್ತು ಗಂಧಾನುಲೇಪನಂ ॥ ೯೧ ॥

ಶುಕ್ತಿಗಂಧಾಕ್ಷತಾನ್ದದ್ಯಾದ್ವಿಪ್ರಾಯ ಸಿತವಾಸಸೀ ।
ವಾರುಣಂ ಪದಮಾಪ್ನೋತಿ ದೃಢವ್ರತಮಿದಂ ಸ್ಮೃತಂ ॥ ೯೨ ॥

ವೈಶಾಖೇ ಪುಷ್ಪಲವಣಂ ವರ್ಜಯೇದಥ ಗೋಪ್ರದಃ ।
ಭೂತ್ವಾ ವಿಷ್ಣುಪದೇ ಕಲ್ಪಂ ಸ್ಥಿತ್ವಾ ರಾಜಾ ಭವೇದಿಹ ॥ ೯೩ ॥

ಏತಚ್ಛಾಂತಿವ್ರತಂ ನಾಮ ಕೀರ್ತಿಕಾಮಫಲಪ್ರದಂ ।
ಬ್ರಹ್ಮಾಂಡಂ ಕಾಂಚನಂ ಕೃತ್ವಾ ತಿಲರಾಶಿಸಮನ್ವಿತಂ ॥ ೯೪ ॥

---

ಅನಂತರ ರಾಜನಾಗಿ ಹುಟ್ಟುತ್ತಾನೆ. ಇದಕ್ಕೆ ರುದ್ರವ್ರತವೆಂದು ಹೆಸರು. ಮಂಗಳವನ್ನು ಯಾವಾಗಲೂ ಮಾಡುತ್ತದೆ.

೯೧-೯೨. ನಾಲ್ಕು ತಿಂಗಳ ಕಾಲ ಗಂಧ ತೊಡೆದುಕೊಳ್ಳುವುದನ್ನು ಬಿಡಬೇಕು. ಆ ವ್ರತ ಮುಗಿದನಂತರ ಮುತ್ತಿನಚಿಪ್ಪು, ಗಂಧ, ಅಕ್ಷತೆಗಳನ್ನು ದಾನ ಮಾಡಬೇಕು. ಶಕ್ತ್ಯನುಗುಣವಾಗಿ ಬಟ್ಟೆಗಳನ್ನೂ ಕೊಡಬೇಕು. ಅವನಿಗೆ ವರುಣ ಲೋಕವು ಬರುತ್ತದೆ. ಇದಕ್ಕೆ ದೃಢವ್ರತವೆಂದು ಹೆಸರು.

೯೩. ವೈಶಾಖಮಾಸದಲ್ಲಿ ಹೂವು ಉಡುಪುಗಳನ್ನು ಬಿಟ್ಟುಬಿಡಬೇಕು. ಕೊನೆಯಲ್ಲಿ ಬ್ರಾಹ್ಮಣದಂಪತಿಗಳಿಗೆ ಭೋಜನಮಾಡಿಸಿ ಬಟ್ಟೆಗಳನ್ನೂ ಗೋವನ್ನೂ ದಾನಮಾಡಬೇಕು. ಕೊನೆಯಲ್ಲಿ ವೈಕುಂಠದಲ್ಲಿ ಕಲ್ಪಕಾಲವಿದ್ದು ಕೊನೆಗೆ ರಾಜನಾಗಿ ಹುಟ್ಟುತ್ತಾನೆ. ಇದಕ್ಕೆ ಶಾಂತಿವ್ರತವೆಂದು ಹೆಸರು. ಇದು ಕೀರ್ತಿ ಕಾಮಗಳನ್ನು ಕೊಡುತ್ತದೆ.

೯೪—೯೬. ಚಿನ್ನದಲ್ಲಿ ಬ್ರಹ್ಮಾಂಡವನ್ನು ಮಾಡಿಸಬೇಕು. ಅದನ್ನು ಎಳ್ಳಿನ ರಾಶಿಯ ಮೇಲಿಡಬೇಕು. ಹೋಮಹವನಗಳನ್ನು ಮಾಡಿ ಬ್ರಾಹ್ಮಣಸಂತರ್ಪಣೆಯನ್ನು ಮಾಡಬೇಕು. ಬ್ರಾಹ್ಮಣದಂಪತಿಗಳನ್ನು ಕರೆಸಿ ಅವರನ್ನು ಪೂಜಿಸಿ

**ಅಹಂ ತಿಲಪ್ರದೋ ಭೂತ್ವಾ ವಹ್ನಿಂ ಸಂತರ್ಪ್ಯ ಸದ್ವಿಜಂ ।**
**ಸಂಪೂಜ್ಯ ವಿಪ್ರದಾಂಪತ್ಯಂ ಮಾಲ್ಯವಸ್ತ್ರವಿಭೂಷಣೈಃ ॥ ೯೫ ॥**

**ಶಕ್ತಿತಸ್ತ್ರಿಪಲಾದೂರ್ಧ್ವಂ ವಿಶ್ವಾತ್ಮಾ ಪ್ರಿಯತಾಮಿತಿ ।**
**ಪುಣ್ಯೇಽಹ್ನಿ ದದ್ಯಾದಪರೇ ಬ್ರಹ್ಮ ಯಾತ್ಯಪುನರ್ಭವಂ ॥ ೯೬ ॥**

**ಏತದ್ಬ್ರಹ್ಮವ್ರತಂ ನಾಮ ನಿರ್ವಾಣಫಲದಂ ನೃಣಾಂ ।**
**ಯಶ್ಚೋಭಯಮುಖೀಂ ದದ್ಯಾತ್ಪ್ರಭೂತಸಕಲಾನ್ವಿತಾಂ ॥ ೯೭ ॥**

**ದಿನಂ ಪಯೋವ್ರತಂ ತಿಷ್ಠೇತ್ಸ ಯಾತಿ ಪರಮಂ ಪದಂ ।**
**ಏತದ್ವೈ ಸುವ್ರತಂ ನಾಮ ಪುನರಾವೃತ್ತಿದುರ್ಲಭಂ ॥ ೯೮ ॥**

**ತ್ರ್ಯಹಂ ಪಯೋವ್ರತಃ ಸ್ಥಿತ್ವಾ ಕಾಂಚನಂ ಕಲ್ಪಪಾದಪಂ ।**
**ಪಲಾದೂರ್ಧ್ವಂ ಯಥಾಶಕ್ತಿ ತಂಡುಲಪ್ರಸ್ಥಸಂಯುತಂ ॥ ೯೯ ॥**

---

ಅವರಿಗೆ ವಸ್ತ್ರಭೂಷಣಗಳನ್ನು ಕೊಟ್ಟು ಈ ಬ್ರಹ್ಮಾಂಡವನ್ನೂ ಎಳ್ಳನ್ನೂ ವಿಶ್ವಾತ್ಮನು ಪ್ರೀತಿಹೊಂದಲೆಂದು ಕೊಡಬೇಕು. ಈ ಬ್ರಹ್ಮಾಂಡವು ಮೂರು ಪಲಗಳಿಗಿಂತ ಕಡಿಮೆಯಾಗಿರದೆ ಅವನ ಶಕ್ತ್ಯನುಗುಣವಾಗಿ ಹೆಚ್ಚಾಗಿರಬೇಕು. ಇವನು ಬ್ರಹ್ಮ ಲೋಕವನ್ನು ಹೊಂದುತ್ತಾನೆ. ಪುನರ್ಜನ್ಮವಿಲ್ಲ. ಇದಕ್ಕೆ ಬ್ರಹ್ಮವ್ರತವೆಂದು ಹೆಸರು. ಮೋಕ್ಷಫಲವನ್ನು ಕೊಡುತ್ತದೆ.

೯೭-೯೮. ಹಸುವು ಕರು ಹಾಕುವಾಗ ಅರ್ಧಕರುವು ಈಚೆಗೆ ಬಂದಾಗ ಅದು ಎರಡು ಕಡೆಯಲ್ಲಿಯೂ ಮುಖವುಳ್ಳದ್ದಾಗಿರುತ್ತದೆ. ಅಂತಹ ಉಭಯಮುಖಿಯನ್ನು ಎಲ್ಲಾ ಸಲಕರಣೆಗಳೊಂದಿಗೆ ಬ್ರಾಹ್ಮಣನಿಗೆ ದಾನಮಾಡಬೇಕು. ಆ ದಿನ ಹಾಲನ್ನು ಕುಡಿದುಕೊಂಡಿರಬೇಕು. ಅವನಿಗೆ ಉತ್ತಮಗತಿ ಬರುತ್ತದೆ. ಇದಕ್ಕೆ ಸುವ್ರತವೆಂದು ಹೆಸರು. ಪುನಃ ಹುಟ್ಟುವುದಿಲ್ಲ.

೯೯. ಮೂರು ದಿನ ಹಾಲುಕುಡಿದು ಇರುತ್ತ ನಾಲ್ಕನೆಯ ದಿನ ಒಂದು ಪಲಕ್ಕೆ ಕಡಿಮೆಯಿಲ್ಲದಂತೆ ಚಿನ್ನದಲ್ಲಿ ಕಲ್ಪವೃಕ್ಷವನ್ನು ಮಾಡಿಸಿ ಒಂದು ಕೊಳಗ ಅಕ್ಕಿಯನ್ನೂ ಅದನ್ನೂ ಬ್ರಾಹ್ಮಣನಿಗೆ ದಾನಮಾಡಿದರೆ ಬ್ರಹ್ಮಲೋಕಪ್ರಾಪ್ತಿಯಾಗುತ್ತದೆ. ಇದಕ್ಕೆ ಕಲ್ಪವೃಕ್ಷವ್ರತವೆಂದು ಹೆಸರು.

**ದತ್ವಾ ಬ್ರಹ್ಮಪದಂ ಯಾತಿ ಕಲ್ಪವೃಕ್ಷವ್ರತಂ ಸ್ಮೃತಂ ।**
**ಮಾಸೋಪವಾಸೀ ಯೋ ದದ್ಯಾದ್ಧೇನುಂ ವಿಪ್ರಾಯ ಶೋಭನಾಂ ॥ ೧೦೦ ॥**

**ಸ ವೈಷ್ಣವಪದಂ ಯಾತಿ ಭೀಮವ್ರತಮಿದಂ ಸ್ಮೃತಂ ।**
**ದದ್ಯಾದ್ವಿಂಶತ್ಪಲಾದೂರ್ಧ್ವಂ ಮಹೀಂ ಕೃತ್ವಾ ತು ಕಾಂಚನೀಂ ॥ ೧೦೧ ॥**

**ದಿನಂ ಪಯೋವ್ರತಸ್ತಿಷ್ಠೇದ್ರುದ್ರಲೋಕೇ ಮಹೀಯತೇ ।**
**ಧನಪ್ರದಮಿದಂ ಪ್ರೋಕ್ತಂ ಸಪ್ತಕಲ್ಪಶತಾನುಗಂ ॥ ೧೦೨ ॥**

**ಮಾಘೇ ಮಾಸ್ಯಥ ಚೈತ್ರೇ ವಾ ಗುಡಧೇನುಪ್ರದೋ ಭವೇತ್ ।**
**ಗುಡವ್ರತಂ ತೃತೀಯಾಯಾಂ ಗೌರೀಲೋಕೇ ಮಹೀಯತೇ ॥ ೧೦೩ ॥**

**ಮಹಾವ್ರತಮಿದಂ ನಾಮ ಪರಮಾನಂದಕಾರಕಂ ।**
**ಪಕ್ಷೋಪವಾಸೀ ಯೋ ದದ್ಯಾದ್ವಿಪ್ರಾಯ ಕಪಿಲಾದ್ವಯಂ ॥ ೧೦೪ ॥**

---

೧೦೦. ಹಾಲನ್ನು ಕುಡಿದುಕೊಂಡು ಒಂದು ತಿಂಗಳವರೆಗೆ ಉಪವಾಸ ಮಾಡುತ್ತಾ ಕೊನೆಗೆ ಬ್ರಾಹ್ಮಣನಿಗೆ ಗೋದಾನವನ್ನು ಮಾಡಿದರೆ ವೈಷ್ಣವಪದವನ್ನು ಹೊಂದುತ್ತಾನೆ. ಇದಕ್ಕೆ ಭೀಮವ್ರತವೆಂದು ಹೆಸರು.

೧೦೧-೧೦೨. ಒಂದು ದಿನವೆಲ್ಲವೂ ಹಾಲನ್ನು ಕುಡಿದಿದ್ದು ಮೂವತ್ತು ಪಲಕ್ಕಿಂತ ಮೇಲೆ ಚಿನ್ನದಲ್ಲಿ ಭೂಮಿಯನ್ನು ಮಾಡಿಸಿ ಬ್ರಾಹ್ಮಣನಿಗೆ ಅಲಂಕರಿಸಿ ಅದನ್ನು ದಾನಮಾಡಬೇಕು. ಹಾಗೆ ಮಾಡಿದರೆ ರುದ್ರಲೋಕದಲ್ಲಿ ಸುಖಿಸುತ್ತಾನೆ. ಇದು ಧನವನ್ನು ಕೊಡತ್ತದೆ. ಇದು ಏಳುನೂರು ಕಲ್ಪಗಳಿಂದಲೂ ಬಂದಿದೆ.

೧೦೩. ಮಾಘ ಅಥವಾ ಚೈತ್ರಮಾಸದಲ್ಲಿ ಬೆಲ್ಲವನ್ನೂ ಗೋವನ್ನೂ ದಾನ ಮಾಡಬೇಕು. ಆ ದ್ಧಿನ ತದಿಗೆಯಾಗಿರಬೇಕು. ಇದಕ್ಕೆ ಗುಡವ್ರತವೆಂದು ಹೆಸರು. ಅವನು ಗೌರೀಲೋಕದಲ್ಲಿ ಸುಖಿಸುತ್ತಾನೆ. ಈ ಮಹಾವ್ರತವು ಬಹು ಆನಂದವನ್ನುಂಟುಮಾಡುತ್ತದೆ.

೧೦೪-೧೦೫. ಒಂದು ಪಕ್ಷ ಉಪವಾಸವಿದ್ದು ಬ್ರಾಹ್ಮಣರಿಗೆ ಎರಡು ಕಪಿಲೆಯ ಹಸುಗಳನ್ನು ದಾನಮಾಡಬೇಕು. ಅವನು ದೇವದಾನವರಿಂದ ಪೂಜಿತನಾಗಿ ಬ್ರಹ್ಮ

**ಸ ಬ್ರಹ್ಮಲೋಕಮಾಪ್ನೋತಿ ದೇವಾಸುರಸುಪೂಜಿತಃ ।**
**ಕಲ್ಪಾಂತೇ ಸರ್ವರಾಜಾ ಸ್ಯಾತ್ಪ್ರಭಾವ್ರತಮಿದಂ ಸ್ಮೃತಂ ॥ ೧೦೫ ॥**

**ವತ್ಸರಂ ತ್ವೇಕಭಕ್ತಾಶೀ ಸಭಕ್ಷ್ಯಜಲಕುಂಭದಃ ।**
**ಶಿವಲೋಕೇ ವಸೇತ್ಕಲ್ಪಂ ಪ್ರಾಪ್ತಿವ್ರತಮಿದಂ ಸ್ಮೃತಂ ॥ ೧೦೬ ॥**

**ನಕ್ತಾಶೀ ತ್ವಷ್ಟಮೀಷು ಸ್ಯಾದ್ವತ್ಸರಾಂತೇಷು ಧೇನುದಃ ।**
**ಪೌರಂದರಂ ಪದಂ ಯಾತಿ ಸುಗತಿವ್ರತಮುತ್ತಮಂ ॥ ೧೦೭ ॥**

**ಇಂಧನಂ ಯೋ ದದೇದ್ವಿಪ್ರೇ ವರ್ಷಾದಿಚತುರ ಋತೂನ್ ।**
**ಘೃತಧೇನುಪ್ರದೋಽನ್ತೇ ಚ ಸ ಪರಂ ಬ್ರಹ್ಮ ಗಚ್ಛತಿ ॥ ೧೦೮ ॥**

**ವೈಶ್ವಾನರವ್ರತಂ ನಾಮ ಸರ್ವಪಾಪಪ್ರಣಾಶನಂ ।**
**ಏಕಾದಶ್ಯಾಂ ತು ನಕ್ತಾಶೀ ಯಶ್ಚಕ್ರಂ ವಿನಿವೇದಯೇತ್ ॥ ೧೦೯ ॥**

---

ಲೋಕವನ್ನು ಹೊಂದುತ್ತಾನೆ. ಅವನು ಕಲ್ಪದ ಕೊನೆಯಲ್ಲಿ ಚಕ್ರವರ್ತಿಯಾಗುತ್ತಾನೆ. ಇದು ಪ್ರಭಾವ್ರತವು.

೧೦೬. ಒಂದು ವರ್ಷಕಾಲ ಒಪ್ಪತ್ತು ಊಟಮಾಡುತ್ತಿದ್ದು ದಿನವೂ ಭಕ್ಷ್ಯದಿಂದ ಕೂಡಿದ ಉದಕುಂಭವನ್ನು ದಾನಮಾಡುತ್ತಿರಬೇಕು. ಇವನು ಶಿವಲೋಕದಲ್ಲಿ ವಾಸಿಸುತ್ತಾನೆ. ಇದು ಪ್ರಾಪ್ತಿವ್ರತವು.

೧೦೭. ಪ್ರತಿ ಅಷ್ಟಮಿಗಳಲ್ಲಿಯೂ ರಾತ್ರಿಯಲ್ಲಿ ಮಾತ್ರ ಊಟಮಾಡಬೇಕು. ವರ್ಷವಾದ ಮೇಲೆ ಹಸುವನ್ನು ದಾನಮಾಡಿದರೆ ಇಂದ್ರಲೋಕವನ್ನು ಹೊಂದುತ್ತಾನೆ. ಇದು ಸುಗತಿವ್ರತವು.

೧೦೮. ವರ್ಷರ್ತು, ಶರದೃತು, ಹೇಮಂತರ್ತು, ಶಿಶಿರರ್ತುಗಳಲ್ಲಿ ಬ್ರಾಹ್ಮಣನಿಗೆ ಸೌದೆಯನ್ನು ದಾನಮಾಡುತ್ತ ಕೊನೆಯಲ್ಲಿ ತುಪ್ಪ ತುಂಬಿದ ಪಾತ್ರೆಯನ್ನೂ ಗೋವನ್ನೂ ದಾನಮಾಡಬೇಕು. ಅವನು ಬ್ರಹ್ಮನ ಸಮೀಪಕ್ಕೆ ಹೋಗುತ್ತಾನೆ. ಇದಕ್ಕೆ ವೈಶ್ವಾನರ ವ್ರತವೆಂದು ಹೆಸರು. ಎಲ್ಲಾ ಪಾಪಗಳೂ ಹೋಗುತ್ತವೆ.

೧೦೯-೧೧೦. ಹತ್ತು ದಿನಗಳು ಉಪವಾಸವಿದ್ದು ಹನ್ನೊಂದನೆಯ ದಿನ ಆ ವ್ರತವನ್ನು ಸಮಾಪ್ತಿಮಾಡಿ ಗರುಡಚಕ್ರವನ್ನು ಚಿನ್ನದಿಂದ ಮಾಡಿಸಿ ಬ್ರಾಹ್ಮಣನಿಗೆ

ಕೃತ್ವಾ ಸಮಾಪ್ತೇ ಸೌಪರ್ಣಂ ಸ ವಿಷ್ಣೋಃ ಪದಮಾಪ್ನುಯಾತ್ ।
ಏತತ್ಸ್ವರ್ಣವ್ರತಂ ನಾಮ ಕಲ್ಪಾಂತೇ ರಾಜ್ಯಭಾಗ್ಭವೇತ್ ॥ ೧೧೦ ॥

ಪಾಯಸಾಶೀ ಸಮಾಪ್ತೇ ತು ದದ್ಯಾದ್ವಿಪ್ರಾಯ ಗೋಯುಗಂ ।
ಲಕ್ಷ್ಮೀಲೋಕೇ ವಸೇತ್ಕಲ್ಪಮೇತದ್ದೇವೀವ್ರತಂ ಸ್ಮೃತಂ ॥ ೧೧೧ ॥

ಸಪ್ತಮ್ಯಾಂ ನಕ್ತಭುಗ್ದದ್ಯಾತ್ಸಮಾಪ್ತೇ ಗಾಂ ಪಯಸ್ವಿನೀಂ ।
ಸೂರ್ಯಲೋಕಮವಾಪ್ನೋತಿ ಭಾನುವ್ರತಮಿದಂ ಸ್ಮೃತಂ ॥ ೧೧೨ ॥

ಚತುರ್ಥ್ಯಾಂ ನಕ್ತಭುಗ್ದದ್ಯಾದಬ್ದಾಂತೇ ಹೈಮವಾರಣಂ ।
ವ್ರತಂ ವೈನಾಯಕಂ ನಾಮ ಶಿವಲೋಕಫಲಪ್ರದಂ ॥ ೧೧೩ ॥

ಮಹಾಫಲಾನಿ ಯಸ್ತ್ಯಕ್ತ್ವಾ ಚಾತುರ್ಮಾಸ್ಯಂ ದ್ವಿಜಾತಯೇ ।
ಹೈಮಾನಿ ಕಾರ್ತಿಕೇ ದದ್ಯಾದ್ಧೋಮಾಂತೇ ಗೋಯುತಂ ತಥಾ ॥ ೧೧೪ ॥

---

ಕೊಟ್ಟರೆ ಅವನಿಗೆ ವಿಷ್ಣುಪದವು ಲಭಿಸುತ್ತದೆ. ಇದಕ್ಕೆ ಸ್ವರ್ಣವ್ರತವೆಂದು ಹೆಸರು. ಕಲ್ಪದ ಕೊನೆಯಲ್ಲಿ ರಾಜ್ಯವನ್ನು ಹೊಂದುತ್ತಾನೆ.

೧೧೧. ಒಂದು ತಿಂಗಳವರೆಗೂ ಪಾಯಸವನ್ನು ಕುಡಿಯುತ್ತಿದ್ದು ಅನಂತರ ಬ್ರಾಹ್ಮಣನಿಗೆ ಗೋಗಳನ್ನು ದಾನಮಾಡಬೇಕು. ಲಕ್ಷ್ಮೀಲೋಕದಲ್ಲಿ ವಾಸಿಸುತ್ತಾನೆ. ಇದು ದೇವೀವ್ರತವು.

೧೧೨. ಸಪ್ತಮಿಯ ದಿನ ರಾತ್ರಿಯ ಊಟವನ್ನು ಬಿಟ್ಟು ಒಂದು ವರ್ಷದ ವರೆಗೂ ಈ ರೀತಿಯಿದ್ದು ಕೊನೆಗೆ ಗೋದಾನಮಾಡಿದರೆ ಸೂರ್ಯಲೋಕವನ್ನು ಹೊಂದುತ್ತಾನೆ. ಇದು ಭಾನುವ್ರತವು.

೧೧೩. ಚತುರ್ಥಿಯ ದಿನ ಉಪವಾಸವನ್ನು ವರ್ಷಕಾಲ ಮಾಡಬೇಕು. ಕೊನೆಗೆ ಚಿನ್ನದ ಆನೆಯನ್ನು ಮಾಡಿಸಿ ದಾನಮಾಡಬೇಕು. ಇದು ವೈನಾಯಕ ವ್ರತವು. ಶಿವಲೋಕಪ್ರಾಪ್ತಿಯಾಗುವುದು.

೧೧೪. ಚಾತುರ್ಮಾಸ್ಯದಲ್ಲಿ ಪ್ರಸಿದ್ಧವಾದ ಫಲಗಳನ್ನು ತಿನ್ನದಿದ್ದು ಕಾರ್ತೀಕ ಮಾಸದಲ್ಲಿ ಚಿನ್ನದಿಂದ ಆ ಫಲಗಳನ್ನು ಮಾಡಿಸಿ ಹೋಮಮಾಡಿಸಿ ಅವನ್ನೂ ಗೋಗಳೆರಡನ್ನೂ ದಾನಮಾಡಬೇಕು. ಇದು ಸೌರವ್ರತವೆನ್ನಿಸಿಕೊಳ್ಳುತ್ತದೆ. ಸೂರ್ಯ ಲೋಕ ಪ್ರಾಪ್ತಿಯಾಗುವುದು.

**ಏತತ್ಸೌರವ್ರತಂ ನಾಮ ಸೂರ್ಯಲೋಕಫಲಪ್ರದಂ ।**
**ದ್ವಾದಶ ದ್ವಾದಶೀರ್ಯಸ್ತು ಸಮಾಪ್ಯೋಪೋಷಣೇ ಪುನಃ ॥ ೧೧೫ ॥**

**ಗೋವಸ್ತ್ರಕಾಂಚನೈರ್ವಿಪ್ರಾನ್ಪೂಜಯೇಚ್ಛಕ್ತಿತೋ ನರಃ ।**
**ಪರಂ ಪದಮವಾಪ್ನೋತಿ ವಿಷ್ಣುವ್ರತಮಿದಂ ಸ್ಮೃತಂ ॥ ೧೧೬ ॥**

**ಕಾರ್ತಿಕ್ಯಾಂ ಯೋ ವೃಷೋತ್ಸರ್ಗಂ ಕೃತ್ವಾ ನಕ್ತಂ ಸಮಾಚರೇತ್ ।**
**ಶೈವಂ ಪದಮವಾಪ್ನೋತಿ ವೃಷವ್ರತಮಿದಂ ಸ್ಮೃತಂ ॥ ೧೧೭ ॥**

**ಕೃಚ್ಛ್ರಾಂತೇ ಗೋಪ್ರದಃ ಕುರ್ಯಾದ್ಭೋಜನಂ ಶಕ್ತಿತಃ ಪದಂ ।**
**ವಿಪ್ರಾಣಾಂ ಶಾಂಕರಂ ಯಾತಿ ಪ್ರಾಜಾಪತ್ಯಮಿದಂ ಸ್ಮೃತಂ ॥ ೧೧೮ ॥**

**ಚತುರ್ದಶ್ಯಾಂ ತು ನಕ್ತಾಶೀ ಸಮಾಪ್ತೇ ಗೋಯುಗಪ್ರದಃ ।**
**ರೌದ್ರಂ ಪದಮವಾಪ್ನೋತಿ ತ್ರೈಯ್ಯಂಬಿಕಮಿದಂ ಸ್ಮೃತಂ ॥ ೧೧೯ ॥**

---

೧೧೫-೧೧೬. ಹನ್ನೆರಡು ದ್ವಾದಶಿಗಳು ಉಪವಾಸಮಾಡಿ ಬ್ರಾಹ್ಮಣನಿಗೆ ಗೋವು ವಸ್ತ್ರ ಸುವರ್ಣಗಳನ್ನು ಕೊಟ್ಟು ಪೂಜಿಸಿದರೆ ಉತ್ತಮಲೋಕವು ಬರುತ್ತದೆ. ಇದು ವಿಷ್ಣುವ್ರತವು.

೧೧೭. ಕಾರ್ತಿಕಮಾಸದಲ್ಲಿ ಉಪವಾಸದೂಡಿ ವೃಷೋತ್ಸರ್ಗವನ್ನು ಮಾಡಿದರೆ ಅವನು ಶಿವನ ಸ್ಥಾನವನ್ನು ಹೊಂದುತ್ತಾನೆ. ಇದಕ್ಕೆ ವೃಷವ್ರತವೆಂದು ಹೆಸರು.

೧೧೮. ಶಕ್ತ್ಯನುಗುಣವಾಗಿ ಕೃಚ್ಛ್ರವನ್ನು ಆಚರಿಸಿ ಕೊನೆಯಲ್ಲಿ ಬ್ರಾಹ್ಮಣರಿಗೆ ಸಮಾರಾಧನೆ ಮಾಡಿಸಿ ಬ್ರಾಹ್ಮಣರಿಗೆ ಗೋದಾನಮಾಡಬೇಕು. ಅವನು ಶಂಕರನ ಲೋಕವನ್ನು ಹೊಂದುತ್ತಾನೆ. ಇದಕ್ಕೆ ಪ್ರಾಜಾಪತ್ಯಕೃಚ್ಛ್ರವೆಂದು ಹೆಸರು.

೧೧೯ ಚತುರ್ದಶಿಗಳಲ್ಲಿ ಉಪವಾಸಮಾಡುತ್ತಾ ಒಂದು ವರ್ಷವಾದನಂತರ ಎರಡು ಗೋವುಗಳನ್ನು ದಾನಮಾಡಬೇಕು. ಅವನು ರುದ್ರನ ಸ್ಥಾನವನ್ನು ಹೊಂದುತ್ತಾನೆ. ಇದಕ್ಕೆ ತ್ರೈಯಂಬಕವ್ರತವೆಂದು ಹೆಸರು.

ಸಪ್ತರಾತ್ರೋಷಿತೋ ದದ್ಯಾದ್ಘೃತಕುಂಭಾ ದ್ವಿಜಾತಯೇ ।
ವರವ್ರತಮಿದಂ ಪ್ರಾಹುರ್ಬ್ರಹ್ಮಲೋಕಫಲಪ್ರದಂ ॥ ೧೨೦ ॥

ಅಸೌ ಕಾಶೀಂ ಸಮಾಸಾದ್ಯ ಧೇನುಂ ದತ್ತೇ ಪಯಸ್ವಿನೀಂ ।
ಶಕ್ರಲೋಕೇ ವಸೇತ್ಕಲ್ಪಮಿತಿ ಮಿತ್ರವ್ರತಂ ಸ್ಮೃತಂ ॥ ೧೨೧ ॥

ಅನಗ್ನಿಪಕ್ವಮಶ್ನಾತಿ ತೃತೀಯಾಯಾಂ ತು ಯೋ ನರಃ ।
ಗಾಂ ದತ್ವಾ ಶೈವಮಭ್ಯೇತಿ ಪುನರಾವೃತ್ತಿವರ್ಜಿತಂ ॥ ೧೨೨ ॥

ಬೃಹದಾನಂದಕೃತ್ಪುಂಸಾಂ ಶಿವವ್ರತಮಿದಂ ಸ್ಮೃತಂ ।
ಹೈಮಪಲದ್ವಯಾದೂರ್ಧ್ವಂ ರಥಮಶ್ವಯುಗಾನ್ವಿತಂ ॥ ೧೨೩ ॥

ದದಾತ್ಕೃತೋಪವಾಸಸ್ಸನ್ದಿವಿ ಕಲ್ಪಶತಂ ವಸೇತ್ ।
ತದಂತೇ ರಾಜರಾಜಸ್ಸ್ಯಾದಶ್ವವ್ರತಮಿದಂ ಸ್ಮೃತಂ ॥ ೧೨೪ ॥

---

೧೨೦. ಏಳು ರಾತ್ರಿಗಳು ಉಪವಾಸವಿದ್ದು ಅನಂತರ ತುಪ್ಪದ ಬಿಂದಿಗೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಇದು ವರವ್ರತವೆನ್ನಿಸಿಕೊಳ್ಳುತ್ತದೆ. ಬ್ರಹ್ಮ ಲೋಕ ಪ್ರಾಪ್ತಿಯಾಗುತ್ತದೆ.

೧೨೧. ಕಾಶಿಗೆ ಹೋಗಿ ಕರೆಯುವ ಹಸುವನ್ನು ದಾನಮಾಡಬೇಕು. ಅವನಿಗೆ ಇಂದ್ರಲೋಕವು ಲಭಿಸುತ್ತದೆ. ಇದು ಮಿತ್ರವ್ರತವು.

೧೨೨. ತದಿಗೆಯ ದಿನ ಬೆಂಕಿಯಿಂದ ಪಕ್ವವಾದುದನ್ನು ಒಂದನ್ನೂ ತಿನ್ನದೆ ವರ್ಷಕಾಲವಾಚರಿಸಿ ಕೊನೆಯಲ್ಲಿ ಗೋದಾನಮಾಡಿದರೆ ಶಿವಲೋಕವನ್ನು ಹೊಂದು ತ್ತಾನೆ. ಪುನರ್ಜನ್ಮವಿಲ್ಲ. ಬಹು ಆನಂದಕರವಾದುದು. ಇದಕ್ಕೆ ಶಿವವ್ರತವೆಂದು ಹೆಸರು.

೧೨೩-೧೨೪. ಎರಡು ಪಲ ಚಿನ್ನಕ್ಕಿಂತ ಹೆಚ್ಚಿಗೆ ಚಿನ್ನದಲ್ಲಿ ಒಂದು ರಥ ವನ್ನೂ ಕುದುರೆಯನ್ನೂ ಎರಡೂ ಮಾಡಿಸಿ ಉಪವಾಸಮಾಡಿ ದಾನಮಾಡಬೇಕು. ಸ್ವರ್ಗದಲ್ಲಿ ನೂರು ಕಲ್ಪಗಳವರೆಗೂ ಇರುತ್ತಾನೆ. ಕೊನೆಗೆ ಚಕ್ರವರ್ತಿಯಾಗಿ ಹುಟ್ಟು ತ್ತಾನೆ. ಇದು ಅಶ್ವವ್ರತವೆನಿಸುತ್ತದೆ.

**ತದ್ವತ್ಫಲದ್ವಯೋದೂರ್ಧ್ವಗಂ ಕರಿಭ್ಯಾಂ ಸಂಯುತಂ ಪುನಃ ।**
**ಹೈಮಂ ರಥಂ ನರಶ್ರೇಷ್ಠ ಸರ್ವೋಪಕರಣಾನ್ವಿತಂ ॥ ೧೨೫ ॥**

**ಸತ್ಯಲೋಕೇ ವಸೇತ್ಕಲ್ಪಂ ಸಹಸ್ರಮಪಿ ಭೂಮಿಪಃ ।**
**ಭವೇದುಪೋಷಿತೋ ಭೂತ್ವಾ ಕರಿವ್ರತಮಿದಂ ಸ್ಮೃತಂ ॥ ೧೨೬ ॥**

**ಮುಖವಾಸಂ ಪರಿತ್ಯಜ್ಯ ಸುಮಾಪ್ತೇ ಗೋಪ್ರದೋ ಭವೇತ್ ।**
**ಯಕ್ಷಾಧಿಪತ್ಯಮಾಪ್ನೋತಿ ಸುಮುಖವ್ರತಮುಚ್ಯತೇ ॥ ೧೨೭ ॥**

**ನಿಶಿ ಕೃತ್ವಾ ಜಲೇ ವಾಸಂ ಪ್ರಭಾತೇ ಗೋಪ್ರದೋ ಭವೇತ್ ।**
**ವಾರುಣಂ ಲೋಕಮಾಪ್ನೋತಿ ವಾರುಣವ್ರತಮುಚ್ಯತೇ ॥ ೧೨೮ ॥**

**ಚಾಂದ್ರಾಯಣಂ ಚ ಯಃ ಕುರ್ಯಾದ್ಧೈಮಂ ಚಂದ್ರಂ ನಿವೇದಯೇತ್ ।**
**ಚಂದ್ರವ್ರತಮಿದಂ ಪ್ರೋಕ್ತಂ ಚಂದ್ರಲೋಕಫಲಪ್ರದಂ ॥ ೧೨೯ ॥**

---

೧೨೫-೧೨೬. ಚಿನ್ನದಿಂದ ಎರಡು ಫಲಗಳಿಗೆ ಮೇಲೆ ಒಂದು ರಥವನ್ನೂ ಎರಡು ಆನೆಗಳನ್ನೂ ಮಾಡಿ ಅದರ ಉಪಕರಣಗಳೊಡನೆ ಬ್ರಾಹ್ಮಣನಿಗೆ ದಾನ ಮಾಡಿದರೆ ಸತ್ಯಲೋಕವನ್ನು ಹೊಂದಿ ಸಾವಿರ ಕಲ್ಪಗಳವರೆಗೂ ಇರುತ್ತಾನೆ. ಇದಕ್ಕೆ ಕರಿವ್ರತವೆಂದು ಹೆಸರು.

೧೨೭. ಮುಖವಾಸವೆಂದರೆ ಬಾಯನ್ನು ವಾಸನೆಮಾಡುವ ದ್ರವ್ಯಗಳು. ಏಲಕ್ಕಿ ಮುಂತಾದುವುಗಳು. ಇವುಗಳನ್ನು ಒಂದು ವರ್ಷಗಳ ವರೆಗೆ ಬಿಟ್ಟಿದ್ದು ಕೊನೆಯಲ್ಲಿ ಗೋವನ್ನು ದಾನಮಾಡಬೇಕು. ಹೀಗೆ ಮಾಡಿದರೆ ಯಕ್ಷರಿಗೆ ಅಧಿಪತಿ ಯಾಗುತ್ತಾನೆ. ಇದು ಸುಮುಖವ್ರತವೆನ್ನಿಸಿಕೊಳ್ಳುತ್ತದೆ.

೧೨೮. ರಾತ್ರಿಯಲ್ಲಿ ನೀರಿನಲ್ಲಿದ್ದು ಬೆಳಿಗ್ಗೆ ಗೋದಾನವನ್ನು ಮಾಡಬೇಕು. ಹೀಗೆ ಮಾಡಿದರೆ ವಾರುಣಲೋಕವನ್ನು ಹೊಂದುತ್ತಾನೆ. ಇದು ವಾರುಣವ್ರತವು.

೧೨೯. ಚಂದ್ರಾಯಣವತ್ರವನ್ನು ಆಚರಿಸಿ ಕೊನೆಗೆ ಚಿನ್ನದಲ್ಲಿ ಚಂದ್ರನನ್ನು ಮಾಡಿ ದಾನಮಾಡಬೇಕು. ಇದು ಚಂದ್ರವ್ರತವು. ಚಂದ್ರಲೋಕವನ್ನು ಕೊಡು ತ್ತದೆ.

ಜ್ಯೇಷ್ಠೇ ಪಂಚತಪಾ ಯೋಂತೇ ಹೇಮಧೇನುಪ್ರದೋ ದಿವಂ ।
ಯಾತ್ಯಷ್ಟಮೀಚತುರ್ದಶ್ಯೋ ರುದ್ರವ್ರತಮಿದಂ ಸ್ಮೃತಂ ॥ ೧೩೦ ॥

ಸಕೃತ್ಕರಪುಟಂ ಕುರ್ಯಾತ್ತೃತೀಯಾಯಾಂ ಶಿವಾಲಯೇ ।
ಸಮಾಪ್ತೇ ಧೇನುದೋ ಯಾತಿ ಭವಾನೀವ್ರತಮುಚ್ಯತೇ ॥ ೧೩೧ ॥

ಮಾಘೇಽಪಿ ಚಾರ್ದ್ರವಾಸಾಸ್ಸ್ಯಾತ್ಸಪ್ತಮ್ಯಾಂ ಗೋಪ್ರದೋ ಭವೇತ್ ।
ದಿವಿ ಕಲ್ಪಂ ವಸಿತ್ವೇಹ ರಾಜಾ ಸ್ಯಾತ್ತಾಪಕಂ ವ್ರತಂ ॥ ೧೩೨ ॥

ತ್ರಿರಾತ್ರೋಪೋಷಿತೋ ದದ್ಯಾತ್ಫಾಲ್ಗುನ್ಯಾಂ ಭವನಂ ಶುಭಂ ।
ಆದಿತ್ಯಲೋಕಮಾಪ್ನೋತಿ ಧಾಮವ್ರತಮಿದಂ ಸ್ಮೃತಂ ॥ ೧೩೩ ॥

ತ್ರಿಸಂಧ್ಯಂ ಪೂಜ್ಯ ದಾಂಪತ್ಯಮುಪವಾಸೀ ವಿಭೂಷಣೈಃ ।
ದದನ್ಮೋಕ್ಷಮವಾಪ್ನೋತಿ ಮೋಕ್ಷವ್ರತಮಿದಂ ಸ್ಮೃತಂ ॥ ೧೩೪ ॥

---

೧೩೦. ಜ್ಯೇಷ್ಠಮಾಸದಲ್ಲಿ ಪಂಚತಪಸ್ಸನ್ನು ಮಾಡಿ ಕೊನೆಗೆ ಹೇಮಧೇನುವನ್ನು ದಾನಮಾಡಿದರೆ ಸ್ವರ್ಗವನ್ನು ಹೊಂದುತ್ತಾನೆ. ಇದನ್ನು ಅಷ್ಟಮಿಯಿಂದ ಚತುರ್ದಶಿಯವರೆಗೆ ಮಾಡಬೇಕು. ಇದಕ್ಕೆ ರುದ್ರವ್ರತವೆಂದು ಹೆಸರು.

೧೩೧. ಪ್ರತಿ ತೃತೀಯೆಯಲ್ಲಿಯೂ ಶಿವಾಲಯಕ್ಕೆ ಹೋಗಿ ಕೈಮುಗಿಯುತ್ತಿದ್ದು ಒಂದು ವರ್ಷವಾಗುತ್ತಲೂ ಹಸುವನ್ನೂ ದಾನಮಾಡಬೇಕು. ಇದು ಭವಾನಿವ್ರತವೆನ್ನಿಸಿಕೊಳ್ಳುತ್ತದೆ.

೧೩೨. ಮಾಘಮಾಸದಲ್ಲಿ ಸ್ನಾನಮಾಡುತ್ತ ಒದ್ದೆ ಬಟ್ಟೆಯನ್ನುಟ್ಟಿರಬೇಕು. ಎಂದರೆ ಸ್ನಾನಮಾಡಿದಾಗ ನೆನಸಿದ ಬಟ್ಟೆಯು ತಾನಾಗಿಯೇ ಒಣಗಬೇಕು. ಸಪ್ತಮಿಯ ದಿನ ಗೋದಾನಮಾಡಬೇಕು. ಇಂತಹವನು ಸ್ವರ್ಗದಲ್ಲಿ ಕಲ್ಪಕಾಲವಿದ್ದು ರಾಜನಾಗಿ ಹುಟ್ಟುತ್ತಾನೆ. ಇದು ತಾಪಕವ್ರತವು.

೧೩೩. ಫಾಲ್ಗುಣಮಾಸದಲ್ಲಿ ಮೂರು ರಾತ್ರಿಯ ಉಪವಾಸವಿದ್ದು ಮನೆಯನ್ನು ದಾನಮಾಡಬೇಕು. ಆದಿತ್ಯಲೋಕವನ್ನು ಹೊಂದುತ್ತಾನೆ. ಇದು ಧಾಮವ್ರತವು.

೧೩೪. ಮೂರು ದಿನಗಳು ಉಪವಾಸಮಾಡುತ್ತ ಆ ಮೂರು ದಿನ ಸಾಯಂಕಾಲದಲ್ಲಿಯೂ ದಂಪತಿಗಳನ್ನು ಪೂಜೆಮಾಡಬೇಕು. ಅವರಿಗೆ ಒಡವೆ ಬಟ್ಟೆ

**ದತ್ವಾ ಸಿತದ್ವಿತೀಯಾಯಾಂ ವಿಪ್ರೇ ಲವಣಭಾಜನಂ ।**
**ಕಾಂಸ್ಯಂ ಸವಸ್ತ್ರಂ ರಾಜೇಂದ್ರ ದಕ್ಷಿಣಾಸಹಿತಂ ತಥಾ ॥ ೧೩೫ ॥**

**ಸಮಾಪ್ತೇ ಗೋಪ್ರದಾನಂ ಚ ಪ್ರಯಾತಿ ಶಿವಮಂದಿರಂ ।**
**ಕಲ್ಪಾಂತೇ ರಾಜರಾಜಸ್ಸ್ಯಾತ್ಸೋಮವ್ರತಮಿದಂ ಸ್ಮೃತಂ ॥ ೧೩೬ ॥**

**ಪ್ರತಿಪತ್ಸ್ವೇಕಭಕ್ತಾಶೀ ಸಮಾಪ್ತೇ ಕಮಲಪ್ರದಃ ।**
**ವೈಶ್ವಾನರಪದಂ ಯಾತಿ ಅಗ್ನಿವ್ರತಮಿದಂ ಸ್ಮೃತಂ ॥ ೧೩೭ ॥**

**ದಶಮ್ಯಾಮೇಕಭಕ್ತಾಶೀ ಸಮಾಪ್ತೇ ದಶಧೇನುದಃ ।**
**ದೀಪಂ ಚ ಕಾಂಚನಂ ದದ್ಯಾದ್ಬ್ರಹ್ಮಾಂಡಾಧಿಪತಿರ್ಭವೇತ್ ॥ ೧೩೮ ॥**

**ಏತದ್ವಿಶ್ವವ್ರತಂ ನಾಮ ಮಹಾಪಾತಕನಾಶನಂ ।**
**ಕನ್ಯಾದಾನಂ ತು ಯಃ ಕುರ್ಯಾದುದ್ವಾಹಂ ಕಾರಯೇಚ್ಚ ಯಃ ॥ ೧೩೯ ॥**

---

ಮೊದಲಾದುವುಗಳನ್ನು ಕೊಡಬೇಕು. ಇದನ್ನು ಮಾಡಿದರೆ ಮೋಕ್ಷವನ್ನು ಹೊಂದುತ್ತಾನೆ. ಇದು ಮೋಕ್ಷವ್ರತವು.

೧೩೫-೧೩೬. ಶುಕ್ಲ ದ್ವಿತೀಯೆಯ ದಿನ ಬ್ರಾಹ್ಮಣನಿಗೆ ಕಂಚಿನ ಪಾತ್ರೆಯಲ್ಲಿ ಉಪ್ಪನ್ನು ದಾನಮಾಡಬೇಕು. ಹೀಗೆ ಒಂದು ವರ್ಷಕಾಲ ಮಾಡಿ ಅನಂತರ ಗೋದಾನಮಾಡಬೇಕು. ಶಿವಲೋಕದಲ್ಲಿ ಒಂದು ಕಲ್ಪಕಾಲವಿರುತ್ತಾನೆ. ಅನಂತರ ಚಕ್ರವರ್ತಿಯಾಗುತ್ತಾನೆ. ಇದು ಸೋಮವ್ರತವು.

೧೩೭. ಪಾಡ್ಯದ ದಿನ ಒಪ್ಪತ್ತು ಊಟಮಾಡುತ್ತ ವರ್ಷಕಾಲ ಮುಗಿಯಲು ಕೊನೆಯಲ್ಲಿ ಚಿನ್ನದ ಕಮಲವನ್ನು ದಾನಮಾಡಬೇಕು. ಅವನು ವೈಶ್ವಾನರ ಲೋಕವನ್ನು ಹೊಂದುತ್ತಾನೆ. ಇದು ಅಗ್ನಿವ್ರತವು.

೧೩೮. ದಶಮಿಯ ದಿನ ಒಪ್ಪತ್ತು ಉಟಮಾಡುತ್ತಿರಬೇಕು. ಮುಗಿದ ನಂತರ ಹತ್ತು ಗೋವುಗಳನ್ನೂ ಚಿನ್ನದ ದೀಪವನ್ನೂ ಕೊಡಬೇಕು. ಹೀಗೆ ಮಾಡಿದರೆ ಬ್ರಹ್ಮಾಂಡಕ್ಕೆ ಒಡೆಯನಾಗುತ್ತಾನೆ. ಇದು ವಿಶ್ವವ್ರತವೆನ್ನಿಸಿಕೊಳ್ಳುತ್ತದೆ. ಮಹಾಪಾತಕಗಳೆಲ್ಲವೂ ಹೋಗುತ್ತವೆ.

೧೩೯-೧೪೦. ಕನ್ಯಾದಾನವನ್ನು ಮಾಡಿದವನೂ, ಮಾಡಿಸಿದವನೂ ಕೂಡ

ಏಕವಿಂಶತ್ಕುಲೋಪೇತೋ ಬ್ರಹ್ಮಲೋಕಂ ಗಮಿಷ್ಯತಿ ।
ಕನ್ಯಾದಾನಾತ್ಪರಂ ದಾನಂ ನ ವಾಸ್ತ್ಯಭ್ಯಧಿಕಂ ಕ್ವಚಿತ್ ॥ ೧೪೦ ॥

ಪುಷ್ಕರೇ ತು ವಿಶೇಷೇಣ ಕಾರ್ತಿಕ್ಯಾಂ ತು ವಿಶೇಷತಃ ।
ಯೇ ಕರಿಷ್ಯಂತಿ ನೃಪತೇ ತೇಷಾಂ ಲೋಕೋಽಕ್ಷಯೋ ದಿವಿ ॥ ೧೪೧ ॥

ತಿಲಪಿಷ್ಟಮಯಂ ಕೃತ್ವಾ ಗಜಂ ರತ್ನವಿಭೂಷಿತಂ ।
ವಿಪ್ರಾಯ ಯೇ ಪ್ರಯಚ್ಛಂತಿ ಜಲಮಧ್ಯೇ ಸ್ಥಿತಾ ನರಾಃ ॥ ೧೪೨ ॥

ತೇಷಾಂ ಪೌರಂದರೋ ಲೋಕೋ ಭವಿಷ್ಯತ್ಯಚ್ಯುತಸ್ತು ವಾ ।
ಯಃ ಪಠೇಚ್ಛೃಣುಯಾದ್ಭಕ್ತ್ಯಾ ವ್ರತಷಷ್ಟಿಮನುತ್ತಮಾಂ ।
ಮನ್ವಂತರಶತಂ ಸೋಽಪಿ ಗಂಧರ್ವಾಧಿಪತಿರ್ಭವೇತ್ ॥ ೧೪೩ ॥

ಷಷ್ಟಿವ್ರತಂ ಭಾರತ ಪುಣ್ಯಮೇತ-
ತ್ತವೋದಿತಂ ವಿಶ್ವಜನೀನಮದ್ಯ ।
ಶ್ರೋತುಂ ಯದೀಚ್ಛಾ ತವ ರಾಜರಾಜ
ಶೃಣು ದ್ವಿಜಾತೇಃ ಕರಣೀಯಮೇತತ್ ॥ ೧೪೪ ॥

---

ಇಪ್ಪತ್ತೊಂದು ಕುಲಗಳು ಪೂರ್ತಿ ಬ್ರಹ್ಮಲೋಕದಲ್ಲಿ ವಾಸಿಸುತ್ತಾನೆ. ಕನ್ಯಾದಾನಕ್ಕಿಂತಲೂ ಹೆಚ್ಚಾದ ದಾನವು ಮತ್ತೊಂದಿಲ್ಲ.

೧೪೧. ವ್ರತಗಳನ್ನು ಪುಷ್ಕರದಲ್ಲಿ ಮಾಡಿದರೆ ಬಹು ಆಧಿಕ್ಯವು. ಅದರಲ್ಲಿಯೂ ಕಾರ್ತಿಕಮಾಸದಲ್ಲಿ ಮಾಡಿದರೆ ಮತ್ತೂ ಆಧಿಕ್ಯವು. ಅವರಿಗೆ ಸ್ವರ್ಗಲೋಕವು ಅಕ್ಷಯವಾಗುತ್ತದೆ.

೧೪೨. ಎಳ್ಳನ್ನು ಸೇರಿಸಿ ಹಿಟ್ಟಿನಲ್ಲಿ ಆನೆಯನ್ನು ಮಾಡಿ ಅದನ್ನು ರತ್ನಭೂಷಣಗಳಿಂದಲಂಕರಿಸಿ ಬ್ರಾಹ್ಮಣನಿಗೆ ನೀರಿನ ಮಧ್ಯದಲ್ಲಿ ನಿಂತುಕೊಂಡು ದಾನಮಾಡಿದರೆ ಇಂದ್ರಲೋಕವು ಲಭಿಸುತ್ತದೆ.

೧೪೩. ಈ ಅರವತ್ತು ವ್ರತಗಳನ್ನೂ ಭಕ್ತಿಯಿಂದ ಹೇಳಿದವನೂ ಕೇಳಿದವನೂ ನೂರು ಮನ್ವಂತರಗಳವರೆಗೂ ಗಂಧರ್ವರಿಗೆ ಅಧಿಪತಿಯಾಗಿರುತ್ತಾನೆ.

೧೪೪. ಎಲೈ ಭೀಷ್ಮನೇ, ಪ್ರಪಂಚದಲ್ಲಿ ನಡೆಯತಕ್ಕ ಅರವತ್ತು ವ್ರತಗಳನ್ನೂ ನಿನಗೆ ಹೇಳಿದ್ದೇನೆ. ನಿನಗೆ ಕೇಳಬೇಕೆಂಬ ಇಚ್ಛೆಯಿದ್ದರೆ ಕೇಳು. ಇವೆಲ್ಲವೂ ದ್ವಿಜಾತಿಗಳು ಮಾಡತಕ್ಕವುಗಳು.

ನಿರ್ಮಲಾ ಭಾವಶುದ್ಧಿರ್ಹಿ ವಿನಾ ಸ್ನಾನಂ ನ ವಿದ್ಯತೇ ।
ತಸ್ಮಾನ್ಮನೋವಿಶುದ್ಧ್ಯರ್ಥಂ ಸ್ನಾನಮಾದೌ ವಿಧೀಯತೇ ॥ ೧೪೫ ॥

ಗೃಹಾಂಬುಭಿರುದ್ಧೃತೈರ್ವಾ ಜಲೈಸ್ಸ್ನಾನಂ ವಿಧೀಯತೇ ।
ತೀರ್ಥಂ ಪ್ರಕಲ್ಪಯೇದ್ವಿದ್ವಾನ್ಮೂಲಮಂತ್ರೇಣ ಮಂತ್ರವಿತ್ ॥ ೧೪೬ ॥

ನಮೋ ನಾರಾಯಣಾಯೇತಿ ಮಂತ್ರ ಏಷ ಉದಾಹೃತಃ ।
ದರ್ಭಪಾಣಿಸ್ತು ವಿಧಿನಾ ಆಚಾಂತಃ ಪ್ರಯತಶ್ಶುಚಿಃ ॥ ೧೪೭ ॥

ಚತುರ್ಹಸ್ತಸಮಾಯುಕ್ತಂ ಚತುರಶ್ರಂ ಸಮಂತತಃ ।
ಪ್ರಕಲ್ಪ್ಯ ಚಾಹ್ವಯೇದ್ಗಂಗಾಮೇಭಿರ್ಮಂತ್ರೈರ್ವಿಚಕ್ಷಣಃ ॥ ೧೪೮ ॥

ವಿಷ್ಣುಪಾದಪ್ರಸೂತಾಸಿ ವೈಷ್ಣವೀ ವಿಷ್ಣುಪೂಜಿತಾ ।
ಪಾಹಿ ನಸ್ತ್ವೇನಸಸ್ತಸ್ಮಾದಾಜನ್ಮಮರಣಾಂತಿಕಂ ॥ ೧೪೯ ॥

---

೧೪೫. ಮನಸ್ಸು ನಿರ್ಮಲವಾಗಿರಬೇಕಾದರೆ ಸ್ನಾನಮಾಡದಿದ್ದರೆ ಆಗುವುದಿಲ್ಲ. ಆದ್ದರಿಂದ ಮನಸ್ಸು ಶುದ್ಧಿಯಾಗಲು ಮೊದಲು ಸ್ನಾನವನ್ನು ಮಾಡಬೇಕು.

೧೪೬. ಇಳಿದು ಸ್ನಾನಮಾಡುವಂತಹ ನೀರಾಗಲೀ ಇಲ್ಲವೇ ಸೇದಿ ಸ್ನಾನಮಾಡುವ ನೀರೇ ಆಗಲಿ ಈ ನೀರುಗಳಿಂದ ಸ್ನಾನಮಾಡಬೇಕು. ತಿಳಿವಳಿಕೆಯುಳ್ಳವನು ಮೂಲಮಂತ್ರದಿಂದ ಆ ನೀರನ್ನು ತೀರ್ಥವನ್ನಾಗಿ ಮಾಡಿಕೊಳ್ಳಬೇಕು.

೧೪೭. ಓಂ ನಮೋ ನಾರಾಯಣಾಯ ಎಂಬುದೇ ಆ ಮೂಲಮಂತ್ರವು. ದರ್ಭೆಯ ಪವಿತ್ರವನ್ನು ಕೈಗೆ ಹಾಕಿಕೊಂಡು ಆಚಮನ ಮಾಡಿದರೆ ಶುಚಿಯಾಗುವನು.

೧೪೮. ಸುತ್ತಲೂ ನಾಲ್ಕು ತೋಳಷ್ಟು ನೀರನ್ನೂ ತೀರ್ಥವನ್ನಾಗಿ ಮಾಡಿಕೊಂಡು ಈ ಮುಂದೆ ಹೇಳುವ ಮಂತ್ರಗಳಿಂದ ಗಂಗೆಯನ್ನು ಆವಾಹಿಸಿಕೊಳ್ಳಬೇಕು.

೧೪೯. ಎಲೈ ಗಂಗೆಯೇ, ನೀನು ವಿಷ್ಣುವಿನ ಪಾದದಿಂದ ಹುಟ್ಟಿದ್ದೀಯೆ ವಿಷ್ಣುಭಕ್ತಳು. ವಿಷ್ಣುವಿನಿಂದಲೇ ಗೌರವಿಸಲ್ಪಟ್ಟಿದ್ದೀಯೆ. ಈ ಪಾಪದ ದೆಸೆಯಿಂದ ನನ್ನನ್ನು ಹುಟ್ಟಿದ ಮೊದಲುಗೊಂಡು ಸಾಯುವವರೆಗೂ ಕಾಪಾಡು.

ತಿಸ್ರಃ ಕೋಟ್ಯೋಽರ್ಧಕೋಟೇ ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭೂಮ್ಯಂತರೀಕ್ಷೇ ಚ ತಾನಿ ತೇ ಸಂತಿ ಜಾಹ್ನವೀ ॥ ೧೫೦ ॥

ನಂದಿನೀತ್ಯೇವ ತೇ ನಾಮ ದೇವೇಷು ನಳಿನೀತಿ ಚ ।
ದಕ್ಷಾ ಪೃಥ್ವೀ ಚ ಸುಭಗಾ ವಿಶ್ವಕಾಯಾ ಶಿವಾಮೃತಾ ॥ ೧೫೧ ॥

ವಿದ್ಯಾಧರೀ ಮಹಾದೇವೀ ತಥಾ ಲೋಕಪ್ರಸಾದಿನೀ ।
ಕ್ಷೇಮಾ ಚ ಜಾಹ್ನವೀ ಚೈವ ಶಾಂತಾ ಶಾಂತಿಪ್ರದಾಯಿನೀ ॥ ೧೫೨ ॥

ಏತಾನಿ ಪುಣ್ಯನಾಮಾನಿ ಸ್ನಾನಕಾಲೇ ಪ್ರಕೀರ್ತಯೇತ್ ।
ಭವೇತ್ಸನ್ನಿಹಿತಾ ತತ್ರ ಗಂಗಾ ತ್ರಿಪಥಗಾಮಿನೀ ॥ ೧೫೩ ॥

ಸಪ್ತವಾರಾಭಿಜಪ್ತೇನ ಕರಸಂಪುಟಯೋಜಿತಂ ।
ಮೂರ್ಧ್ನಿ ಕೃತ್ವಾ ಜಲಂ ಭೂಯಸ್ತ್ರಿಚತುಷ್ಪಂಚ ಸಪ್ತಧಾ ॥ ೧೫೪ ॥

ಸ್ನಾನಂ ಕೃತ್ವಾ ಮುದಾ ತದ್ವದಾಮಂತ್ರ್ಯ ತು ವಿಧಾನತಃ ।
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ॥ ೧೫೫ ॥

---

೧೫೦. ಆಕಾಶ ಭೂಮಿ ಸ್ವರ್ಗಗಳಲ್ಲಿ ಒಟ್ಟು ಮೂರುವರೆಕೋಟಿ ತೀರ್ಥಗಳಿವೆಯೆಂದೂ ಅವೆಲ್ಲವೂ ಗಂಗೆಯಲ್ಲಿವೆಯೆಂದೂ ವಾಯುವು ಹೇಳಿರುವನು.

೧೫೧-೧೫೨. ನಿನ್ನ ಹೆಸರು ನಂದಿನಿಯೆಂದು. ದೇವಲೋಕದಲ್ಲಿ ನಳಿನೀ ಎಂದು ಕರೆಯುತ್ತಾರೆ. ದಕ್ಷೆ, ಪೃಥ್ವಿ, ಸುಭಗೆ, ವಿಶ್ವಕಾಯೆ, ಶಿವೆ, ಅಮೃತೆ, ವಿದ್ಯಾಧರೀ, ಮಹಾದೇವಿ, ಲೋಕಪ್ರಸಾದಿನೀ, ಕ್ಷೇಮ, ಜಾಹ್ನವೀ, ಶಾಂತಾ, ಶಾಂತಿಪ್ರದಾಯಿನಿ ಇವು ಆ ಗಂಗೆಯ ಪವಿತ್ರವಾದ ಹೆಸರುಗಳು. ಇವನ್ನು ಸ್ನಾನಕಾಲದಲ್ಲಿ ಹೇಳಬೇಕು.

೧೫೩-೧೫೪. ಹಾಗೆ ಹೇಳಿದ ಸ್ಥಳದಲ್ಲಿ ತ್ರಿಪಥಗಾಮಿನಿಯಾದ ಗಂಗೆಯು ಬರುವಳು. ಏಳಾವರ್ತಿ ಜಪಿಸಿ ಕೈಮುಗಿದುಕೊಂಡು ತಲೆಯ ಮೇಲಿಟ್ಟುಕೊಂಡು ಮತ್ತೆ ನೀರಿನಲ್ಲಿ ಮೂರು ನಾಲ್ಕು ಐದು ಏಳು ಈರೀತಿ ಸ್ನಾನಮಾಡಬೇಕು.

೧೫೫—೧೫೭. "ಅಶ್ವಕ್ರಾಂತೇ ರಥಕ್ರಾಂತೇ" ಎಂಬ ಅಘಮರ್ಷಣಸೂಕ್ತ ಮಂತ್ರವನ್ನುಚ್ಚರಿಸುತ್ತಾ ಎಲೈ ಮೃತ್ತಿಕೆಯೇ, ನನ್ನ ಪಾಪವನ್ನು ಹಾಳುಮಾಡು.

ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ।
ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ॥ ೧೫೬ ॥

ನಮಸ್ತೇ ಸರ್ವಲೋಕಾನಾಂ ಪ್ರಭವಾರಿಣಿ ಸುವ್ರತೆ ।
ಏವಂ ಸ್ನಾತ್ವಾ ತತಃ ಪಶ್ಚಾದಾಚಮ್ಯ ತು ವಿಧಾನತಃ ॥ ೧೫೭ ॥

ಉತ್ಥಾಯ ವಾಸಸೀ ಶುಕ್ಲೇ ಶುದ್ಧೇ ವಿಪರಿಧಾಯ ಚ ।
ತತಸ್ತು ತರ್ಪಣಂ ಕುರ್ಯಾತ್ತ್ರೈಲೋಕ್ಯಾಪಾಯನಾಯ ಚ ॥ ೧೫೮ ॥

ಬ್ರಹ್ಮಾಣಂ ತರ್ಪಯೇತ್ಪೂರ್ವಂ ವಿಷ್ಣುಂ ರುದ್ರಂ ಪ್ರಜಾಪತಿಂ ।
ದೇವಾ ಯಕ್ಷಾಸ್ತಥಾ ನಾಗಾ ಗಂಧರ್ವಾಪ್ಸರಸೋಽಸುರಾಃ ॥ ೧೫೯ ॥

ಕ್ರೂರಾಸ್ಸರ್ಪಾಸ್ಸುಪರ್ಣಾಶ್ಚ ತರವೋ ಜಂಭಕಾದಯಃ ।
ವಿದ್ಯಾಧರಾ ಜಲಧರಾಸ್ತಥೈವಾಕಾಶಗಾಮಿನಃ ॥ ೧೬೦ ॥

ನಿರಾಧಾರಾಶ್ಚ ಯೇ ಜೀವಾಃ ಪಾಪೇ ಧರ್ಮೇ ರತಾಶ್ಚ ಯೇ ।
ತೇಷಾಮಾಪ್ಯಾಯನಂ ಚೈವ ದೀಯತೇ ಸಲಿಲಂ ಮಯಾ ॥ ೧೬೧ ॥

---

ನಾನು ಪಾಪಮಾಡಿದ್ದೇನೆ. ವರಾಹರೂಪಿಯಾದ ಕೃಷ್ಣನಿಂದ ನೂರು ತೋಳುಗಳಿಂದ ಎತ್ತಲ್ಪಟ್ಟಿದ್ದೀಯೆ. ಎಲ್ಲಾ ಜನಗಳೂ ಜನ್ಮವನ್ನು ಮತ್ತೆ ತಾಳದಂತೆ ಮಾಡುವ ಗಂಗೆಯೇ, ನಿನಗೆ ನಮಸ್ಕಾರವು. ಎಂದು ಹೇಳಿ ಸ್ನಾನಮಾಡಿ ವಿಧಿವತ್ತಾಗಿ ಆಚಮನಮಾಡಬೇಕು.

೧೫೮. ಸ್ನಾನಮಾಡಿ ಬಂದು ಶುದ್ಧವಾದ ಮತ್ತು ಬೆಳ್ಳಗಿರುವ ಮಡಿಬಟ್ಟೆಯನ್ನುಟ್ಟು, ಮೂರು ಲೋಕಗಳ ಶಾಂತ್ಯರ್ಥವಾಗಿ ತರ್ಪಣವನ್ನು ಕೊಡಬೇಕು.

೧೫೯—೧೬೧. ಮೊದಲು ಬ್ರಹ್ಮನಿಗೂ, ಅನಂತರ ವಿಷ್ಣು ರುದ್ರ ಪ್ರಜಾಪತಿಗಳಿಗೂ ತರ್ಪಣವನ್ನು ಕೊಡಬೇಕು. ಹೀಗೆಯೇ ದೇವತೆಗಳೂ, ಯಕ್ಷರೂ, ನಾಗರು, ಗಂಧರ್ವರು, ಅಪ್ಸರರು, ಅಸುರರು, ಕ್ರೂರಸರ್ಪಗಳು, ಸುಪರ್ಣರು, ತರುಗಳು, ಜಂಭಕಗಳು, ವಿದ್ಯಾಧರರು, ಜಲಧರರು, ಅಂತೆಯೇ ಆಕಾಶಗಾಮಿಗಳು, ನಿರಾಧಾರವಾದ ಜೀವಗಳು, ಪಾಪದಲ್ಲಿ ರತಿಯುಳ್ಳವರು, ಧರ್ಮದಲ್ಲಿ ರತಿಯುಳ್ಳವರು, ಅವರುಗಳ ಆಪ್ಯಾಯನಕ್ಕೋಸ್ಕರಲೂ ನಾನು ನೀರನ್ನು ಕೊಡುತ್ತೇನೆ. ಎಂದು ತರ್ಪಣ ಬಿಡಬೇಕು.

ಕೃತೋಪವೀತೀ ದೇವೇಭ್ಯೋ ನಿವೀತೀ ಚ ಭವೇತ್ತತಃ ।
ಮನುಷ್ಯಾಂಸ್ತರ್ಪಯೇದ್ಭಕ್ತ್ಯಾ ಋಷಿಪುತ್ರಾನೃಷೀಂಸ್ತಥಾ ॥ ೧೬೨ ॥

ಸನಕಶ್ಚ ಸನಂದಶ್ಚ ತೃತೀಯಶ್ಚ ಸನಾತನಃ ।
ಕಪಿಲಶ್ಚಾಸುರಶ್ಚೈವ ವೋಢುಃ ಪಂಚಶಿಖಸ್ತಥಾ ॥ ೧೬೩ ॥

ಸರ್ವೇ ತೇ ತೃಪ್ತಿಮಾಯಾಂತು ಮದ್ದತ್ತೇನಾಂಬುನಾ ಸದಾ ।
ಮರೀಚಿಮತ್ರ್ಯಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಂ ॥ ೧೬೪ ॥

ಪ್ರಚೇತಸಂ ವಸಿಷ್ಠಂ ಚ ಭೃಗುಂ ನಾರದಮೇವ ಚ ।
ದೇವಾನ್ಬ್ರಹ್ಮಋಷೀನ್ಸರ್ವಾಂಸ್ತರ್ಪಯೇತ್ಸಾಕ್ಷತೋದಕೈಃ ॥ ೧೬೫ ॥

ಅಪಸವ್ಯಂ ತತಃ ಕೃತ್ವಾ ಸವ್ಯಂ ಜಾನು ಚ ಭೂತಲೇ ।
ಅಗ್ನಿಷ್ವಾತ್ತಾಂಸ್ತಥಾ ಸೌಮ್ಯಾನ್ಹವಿಷ್ಮಂತಸ್ತಥೋಷ್ಮಪಾನ್ ॥ ೧೬೬ ॥

ಸುಕಾಲಿನೋ ಬರ್ಹಿಷದಸ್ತಥಾ ಚೈವಾಜ್ಯಪಾನ್ಪುನಃ ।
ತರ್ಪಯೇಚ್ಚ ಪಿತೄನ್ಭಕ್ತ್ಯಾ ಸತಿಲೋದಕಚಂದನೈಃ ॥ ೧೬೭ ॥

---

೧೬೨-೧೬೩. ಉಪವೀತಿಯನ್ನು ಹಾಕಿಕೊಂಡು ದೇವತೆಗಳಿಗೆ ತರ್ಪಣವನ್ನು ಕೊಡಬೇಕು. ಅನಂತರ ನಿವೀತಿಯನ್ನು ಹಾಕಿಕೊಂಡು ಮನುಷ್ಯರಿಗೆ ತರ್ಪಣ ಕೊಡಬೇಕು. ಮೊದಲು ಋಷಿಗಳಿಗೂ ಅನಂತರ ಋಷಿಪುತ್ರರಿಗೂ ಸನಕಸನಂದ ಸನಾತನರಿಗೂ ಕಪಿಲ ಆಸುರ ವೋಢು ಪಂಚಶಿಖ ಇವರೆಲ್ಲರಿಗೂ ಕೊಟ್ಟು, ಇವರೆಲ್ಲರೂ ನಾನು ಕೊಟ್ಟ ನೀರಿನಿಂದ ತೃಪ್ತಿಹೊಂದಲಿ ಎಂದು ಕೊಡಬೇಕು.

೧೬೪-೧೬೫. ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ಪ್ರಚೇತ, ವಸಿಷ್ಠ, ಭೃಗು, ನಾರದ, ಇವರುಗಳಿಗೆ ತರ್ಪಣಕೊಡಬೇಕು. ದೇವತೆಗಳಿಗೂ ಬ್ರಹ್ಮರ್ಷಿಗಳಿಗೂ ಅಕ್ಷತೆಯ ನೀರಿನಿಂದ ತರ್ಪಣಕೊಡಬೇಕು.

೧೬೬-೧೬೭. ಅನಂತರ ಅಪಸವ್ಯ (ಎಡಕ್ಕೆ) ಮಾಡಿಕೊಂಡು, ಎಡಮಂಡಿಯನ್ನು ನೆಲಕ್ಕೆ ಊರಿಕೊಂಡು, ಅಗ್ನಿಷ್ವಾತ್ತಾದಿ ಪಿತೃಗಳನ್ನೂ ಸೌಮ್ಯರನ್ನೂ ಹವಿಷ್ಮಂತರನ್ನೂ ಊಷ್ಮಪರನ್ನೂ ಸುಕಾಲಿಗಳನ್ನೂ ಬರ್ಹಿಷದರನ್ನೂ ಆಜ್ಯಪರನ್ನೂ ಕುರಿತು ತರ್ಪಣಮಾಡಬೇಕು. ಇವರ ತರ್ಪಣದಲ್ಲಿ ಚಂದನ ಎಳ್ಳು ನೀರು ಇರಬೇಕು.

**ದರ್ಭಪಾಣಿಸ್ತು ಪ್ರಯತಃ ಪ್ರೇತಾಂಸ್ತಾಂಸ್ತರ್ಪಯೇತ್ತತಃ ।**
**ಪಿತ್ರಾದೀನ್ನಾಮಗೋತ್ರೇಣ ತಥಾ ಮಾತಾಮಹಾನಪಿ ॥ ೧೬೮ ॥**

**ಸಂತರ್ಪ್ಯ ವಿಧಿವದ್ಭಕ್ತ್ಯಾ ಇಮಂ ಮಂತ್ರಮುದೀರಯೇತ್ ।**
**ಯೇಽಬಾಂಧವಾ ಬಾಂಧವಾ ಯೇ ಯೇಽನ್ಯಜನ್ಮನಿ ಬಾಂಧವಾಃ ॥ ೧೬೯ ॥**

**ತೇ ತೃಪ್ತಿಮಖಿಲಾ ಯಾಂತು ಯೇಽಪ್ಯಸ್ಮತ್ತೋಯಕಾಂಕ್ಷಿಣಃ ।**
**ಆಚಮ್ಯ ವಿಧಿವತ್ಸಮ್ಯಗಾಲಿಖೇತ್ಪದ್ಮಮಗ್ರತಃ ॥ ೧೭೦ ॥**

**ಅಕ್ಷತಾಭಿಸ್ಸಪುಷ್ಪಾಭಿಸ್ಸಲಿಲಾರುಣಚಂದನೈಃ ।**
**ಅರ್ಘ್ಯಂ ದತ್ವಾ ಪ್ರಯತ್ನೇನ ಸೂರ್ಯನಾಮಾನುಕೀರ್ತನೈಃ ॥ ೧೭೧ ॥**

**ನಮಸ್ತೇ ವಿಶ್ವರೂಪಾಯ ನಮಸ್ತೇ ಬ್ರಹ್ಮರೂಪಿಣೇ ।**
**ಸಹಸ್ರರಶ್ಮಯೇ ನಿತ್ಯಂ ನಮಸ್ತೇ ಸರ್ವತೇಜಸೇ ॥ ೧೭೨ ॥**

---

೧೬೮. ಅನಂತರ ದರ್ಭೆಯನ್ನು ಕೈಗೆ ಸಿಕ್ಕಿಸಿಕೊಂಡು ಪ್ರೇತಗಳಿಗೆ ತರ್ಪಣ ಕೊಡಬೇಕು. ತನ್ನ ಪಿತೃಗಳಿಗೆ ಹೆಸರು ಗೋತ್ರಗಳನ್ನು ಹೇಳಿಕೊಂಡೂ, ತಾಯಿಯ ತಂದೆ ಮುಂತಾದವರ ಹೆಸರು ಗೋತ್ರಗಳನ್ನು ಹೇಳಿಕೊಂಡು ತರ್ಪಣ ಕೊಡಬೇಕು. ಈರೀತಿ ವಿಧಿವತ್ತಾಗಿ ತರ್ಪಣಮಾಡಿ ಈ ಮಂತ್ರವನ್ನು ಹೇಳಬೇಕು.

೧೬೯ ಯಾರು ಬಂಧುಗಳಲ್ಲದೆಯೂ, ಬಂಧುಗಳಾಗಿಯೂ, ಬೇರೆ ಜನ್ಮದಲ್ಲಿ ಬಂಧುಗಳಾಗಿಯೂ ನನ್ನಿಂದ ಯಾರು ನೀರನ್ನು ಅಪೇಕ್ಷಿಸುತ್ತಾರೆಯೋ ಅವರೆಲ್ಲರೂ ತೃಪ್ತಿಯನ್ನು ಹೊಂದಲಿ.

೧೭೦-೧೭೧. ಅನಂತರ ವಿಧಿವತ್ತಾಗಿ ಆಚಮನಮಾಡಿ ಮುಂದುಗಡೆಯಲ್ಲಿ ಪದ್ಮವನ್ನು ಬರೆಯಬೇಕು. ಅದರಲ್ಲಿ ಅಕ್ಷತೆ ಹೂ ನೀರು ಕೆಂಪುಗಂಧಗಳಿಂದ ಸೂರ್ಯನ ಹೆಸರನ್ನು ಹೇಳಿಕೊಂಡು ಅರ್ಘ್ಯವನ್ನು ಕೊಡಬೇಕು.

೧೭೨-೧೭೩. ವಿಶ್ವರೂಪನೇ, ನಿನಗೆ ನಮಸ್ಕಾರವು. ಬ್ರಹ್ಮರೂಪಿಯೇ ನಿನಗೆ ನಮಸ್ಕಾರವು. ಸಹಸ್ರರಶ್ಮಿಯೇ ನಿನಗೆ ನಮಸ್ಕಾರವು. ಸರ್ವತೇಜಸ್ಸುಳ್ಳವನೇ ನಿನಗೆ ನಮಸ್ಕಾರವು. ರುದ್ರಶರೀರನೇ ನಿನಗೆ ನಮಸ್ಕಾರವು. ಭಕ್ತವತ್ಸಲನೇ ನಿನಗೆ ನಮಸ್ಕಾರವು. ಪದ್ಮನಾಭನೇ ನಿನಗೆ ನಮಸ್ಕಾರವು. ಕುಂಡಲ ಅಂಗದ

ನಮಸ್ತೇ ರುದ್ರವಪುಷೇ ನಮಸ್ತೇ ಭಕ್ತವತ್ಸಲ ।
ಪದ್ಮನಾಭ ನಮಸ್ತೇಽಸ್ತು ಕುಂಡಲಾಂಗದಭೂಷಿತ ॥ ೧೭೩ ॥

ನಮಸ್ತೇ ಸರ್ವಲೋಕೇಷು ಸುಪ್ತಾಂಸ್ತಾನ್ಪ್ರತಿಬುಧ್ಯಸೇ ।
ಸುಕೃತಂ ದುಷ್ಕೃತಂ ಚೈವ ಸರ್ವಂ ಪಶ್ಯಸಿ ಸರ್ವದಾ ॥ ೧೭೪ ॥

ಸತ್ಯದೇವ ನಮಸ್ತೇಽಸ್ತು ಪ್ರಸೀದ ಮಮ ಭಾಸ್ಕರ ।
ದಿವಾಕರ ನಮಸ್ತೇಽಸ್ತು ಪ್ರಭಾಕರ ನಮೋಽಸ್ತುತೇ ॥ ೧೭೫ ॥

ಏವಂ ಸೂರ್ಯಂ ನಮಸ್ಕೃತ್ಯ ತ್ರಿಃ ಕೃತ್ವಾ ಪ್ರದಕ್ಷಿಣಂ ।
ದ್ವಿಜಂ ಗಾಂ ಕಾಂಚನಂ ಸ್ಪೃಷ್ಟ್ವಾ ಪಶ್ಚಾಚ್ಚ ಸ್ವಗೃಹಂ ವ್ರಜೇತ್ ॥೧೭೬॥

ಆಶ್ರಮಸ್ಥಾಂ ತತಃ ಪುಣ್ಯಾಂ ಪ್ರತಿಮಾಂ ಚಾಪಿ ಪೂಜಯೇತ್ ।
ಭೋಜನಂ ತು ತತಃ ಪಶ್ಚಾದ್ದ್ವಿಜಪೂರ್ವಂ ತು ಕಾರಯೇತ್ ।
ಅನೇನ ವಿಧಿನಾ ಸರ್ವ ಋಷಯಸ್ಸಿದ್ಧಿಮಾಗತಾಃ ॥ ೧೭೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಸ್ನಾನವಿಧಿರ್ನಾಮ ವಿಂಶೋಽಧ್ಯಾಯಃ

---

ಗಳಿಂದ ಭೂಷಿತನೆ ನಿನಗೆ ನಮಸ್ಕಾರವು. ಎಲ್ಲಾ ಲೋಕಗಳಲ್ಲಿಯೂ ಮಲಗಿರುವವರನ್ನೂ ನೀನು ಎಚ್ಚರಗೊಳಿಸುತ್ತಿ. ಇಂತಹ ನಿನಗೆ ನಮಸ್ಕಾರವು.

೧೭೪-೧೭೫. ಲೋಕಗಳ ಪಾಪಪುಣ್ಯಗಳೆಲ್ಲವನ್ನೂ ನೀನು ಯಾವಾಗಲೂ ನೋಡುತ್ತೀಯೆ. ಸತ್ಯದೇವನೇ ನಿನಗೆ ನಮಸ್ಕಾರವು. ಭಾಸ್ಕರನೇ ನಿನಗೆ ನಮಸ್ಕಾರವು. ಹಗಲನ್ನು ಉಂಟುಮಾಡುವವನೇ ನಿನಗೆ ನಮಸ್ಕಾರವು. ಬೆಳಕನ್ನು ಉಂಟುಮಾಡುವವನೇ ನಿನಗೆ ನಮಸ್ಕಾರವು.

೧೭೬. ಈರೀತಿ ಸೂರ್ಯನನ್ನು ನಮಸ್ಕರಿಸಿ ಮೂರುಬಾರಿ ಪ್ರದಕ್ಷಿಣಮಾಡಿ ಬ್ರಾಹ್ಮಣ ಗೋವು ಚಿನ್ನಗಳನ್ನು ಮುಟ್ಟಿ ಅನಂತರ ತನ್ನ ಮನೆಗೆ ಹೋಗಬೇಕು.

೧೭೭. ಅನಂತರ ತನ್ನ ಆಶ್ರಮಕ್ಕೆ ತಕ್ಕಂತೆ ದೇವರ ಪ್ರತಿಮೆಯನ್ನು ಪೂಜಿಸಬೇಕು. ಅನಂತರ ಬ್ರಾಹ್ಮಣರಿಗೆ ಮೊದಲು ಭೋಜನಮಾಡಿಸಿ ತಾನು ಊಟಮಾಡಬೇಕು. ಈರೀತಿಯಾದ ವಿಧಿಯಿಂದ ಎಲ್ಲ ಋಷಿಗಳೂ ಸಿದ್ಧಿ ಹೊಂದಿದ್ದಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಸ್ನಾನವಿಧಿಯೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಏಕವಿಂಶೋಽಧ್ಯಾಯಃ

---

॥ ಪುಲಸ್ತ್ಯ ಉವಾಚ ॥

ಆಸೀತ್ಪುರಾ ಬೃಹತ್ಕಲ್ಪೇ ಧರ್ಮಮೂರ್ತಿರ್ನರಾಧಿಪಃ ।
ಸುಹೃಚ್ಛಕ್ರಸ್ಯ ನಿಹತಾ ಯೇನ ದೈತ್ಯಾಸ್ಸಹಸ್ರಶಃ ॥ ೧ ॥

ಸೋಮಸೂರ್ಯಾದಯೋ ಯಸ್ಯ ತೇಜಸಾ ವಿಗತಪ್ರಭಾಃ ।
ಭವಂತಿ ಶತಶೋ ಯೇನ ಶತ್ರವಸ್ತು ಪರಾಜಿತಾಃ । ॥ ೨ ॥

ಯಥೇಚ್ಛರೂಪಧಾರೀ ಚ ಮನುಷ್ಯೇಷ್ವಪರಾಜಿತಃ ।
ತಸ್ಯ ಭಾನುಮತೀ ನಾಮ ಭಾರ್ಯಾ ತ್ರೈಲೋಕ್ಯಸುಂದರೀ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯವು

೧. ಪುಲಸ್ತ್ಯನು ಹೇಳಿದನು :—ಪೂರ್ವದಲ್ಲಿ ಬೃಹತ್ಕಲ್ಪದಲ್ಲಿ ಧರ್ಮಮೂರ್ತಿ ಯೆಂಬ ರಾಜನಿದ್ದನು. ಅವನು ಇಂದ್ರನಿಗೆ ಸ್ನೇಹಿತನಾಗಿ ಅನೇಕ ಜನ ದೈತ್ಯರನ್ನು ಕೊಂದಿದ್ದನು.

೨. ಅವನ ತೇಜಸ್ಸಿನಿಂದ ಸೂರ್ಯಚಂದ್ರರ ಕಾಂತಿಯೂ ಕಡಿಮೆಯಾಗಿದ್ದಿತು. ಅವನು ಶತೃಗಳನ್ನು ಅನೇಕಬಾರಿ ಸೋಲಿಸಿದ್ದನು.

೩. ಅವನು ತನಗೆ ಇಷ್ಟಬಂದಂತೆ ರೂಪವನ್ನು ಹೊಂದುತ್ತ ಮನುಷ್ಯರಿಗೆ ಗೆಲ್ಲಲು ಅಸಾಧ್ಯನಾಗಿದ್ದನು. ಅವನಿಗೆ ತ್ರೈಲೋಕ್ಯಸುಂದರಿಯಾದ ಭಾನುಮತಿ ಎಂಬ ಹೆಂಡತಿಯಿದ್ದಳು.

ಲಕ್ಷ್ಮೀರಿವ ಚ ರೂಪೇಣ ನಿರ್ಜಿತಾಮರಸುಂದರೀ ।
ರಾಜ್ಞಸ್ತಸ್ಯಾಗ್ರಮಹಿಷೀ ಪ್ರಾಣೇಭ್ಯೋಽಪಿ ಗರೀಯಸೀ ॥ ೪ ॥

ದಶನಾರೀಸಹಸ್ರಾಣಾಂ ಮಧ್ಯೇ ಶ್ರೀರಿವ ಶೋಭತೇ ।
ನೃಪಕೋಟಿಸಹಸ್ರೇಣ ನ ಕದಾಚಿತ್ಪ್ರಮುಚ್ಯತೇ ॥ ೫ ॥

ಕದಾಚಿದಾಸ್ಥಾನಗತಃ ಪಪ್ರಚ್ಛ ಸ ಪುರೋಧಸಂ ।
ವಿಸ್ಮಯೇನಾವೃತೋ ನತ್ವಾ ವಸಿಷ್ಠಮೃಷಿಸತ್ತಮಂ ॥ ೬ ॥

॥ ರಾಜೋವಾಚ ॥

ಭಗವನ್ಕೇನ ಧರ್ಮೇಣ ಮಮ ಲಕ್ಷ್ಮೀರನುತ್ತಮಾ ।
ಕಸ್ಮಾಚ್ಚ ವಿಪುಲಂ ತೇಜೋ ಮಚ್ಛರೀರೇ ಸದೋತ್ತಮಂ ॥ ೭ ॥

॥ ವಸಿಷ್ಠ ಉವಾಚ ॥

ಪುರಾ ಲೀಲಾವತೀ ನಾಮ ವೇಶ್ಯಾ ಶಿವಪರಾಯಣಾ ।
ತಯಾ ದತ್ತಶ್ಚತುರ್ದಶ್ಯಾಂ ಪುಷ್ಕರೇ ಲವಣಾಚಲಃ ॥ ೮ ॥

---

೪. ರೂಪಿನಲ್ಲಿ ಲಕ್ಷ್ಮಿಯಂತಿದ್ದು ದೇವತಾಸುಂದರಿಯರನ್ನು ಮೀರಿಸಿದ್ದಳು ಆಕೆಯು ರಾಜನಿಗೆ ಪಟ್ಟದ ರಾಣಿಯಾಗಿ ಪ್ರಾಣಪ್ರಿಯಳಾಗಿದ್ದಳು.

೫. ಹತ್ತುಸಾವಿರ ಹೆಂಗಸರ ಮಧ್ಯದಲ್ಲಿ ಲಕ್ಷ್ಮಿಯಂತೆ ಪ್ರಕಾಶಿಸುತ್ತಿದ್ದಳು. ಅನೇಕ ಕೋಟಿ ರಾಜರಿಂದ ಯಾವಾಗಲೂ ಸೇವಿಸಿ ನಮಸ್ಕರಿಸಲ್ಪಡುತ್ತ ಆ ರಾಜನು ಇದ್ದನು.

೬. ಒಂದುಸಾರಿ ಆಸ್ಥಾನದಲ್ಲಿರುವಾಗ ಆಶ್ಚರ್ಯಪಟ್ಟು ಪುರೋಹಿತನಾದ ವಸಿಷ್ಠನನ್ನು ಕುರಿತು ಇಂತು ಪ್ರಶ್ನಿಸಿದನು.

೭. ರಾಜನು ಹೇಳಿದನು :—ಎಲೈ ಸ್ವಾಮಿಯೇ, ನನಗೆ ಬಂದಿರುವ ಈ ಐಶ್ವರ್ಯವು ಯಾವ ಧರ್ಮದಿಂದ ಬಂದಿದೆ? ನನಗೆ ಈ ಹೆಚ್ಚು ತೇಜಸ್ಸು ಬಂದಿರಲು ಕಾರಣವೇನು? ಅದು ಯಾವಾಗಲೂ ಇರಲು ಕಾರಣವೇನು?

೮-೯. ವಸಿಷ್ಠನು ಹೇಳಿದನು :—ಪೂರ್ವದಲ್ಲಿ ಲೀಲಾವತಿಯೆಂಬುವಳೊಬ್ಬಳು ಸೂಳೆಯಿದ್ದಳು. ಅವಳು ಶಿವಭಕ್ತಳು. ಅವಳು ಚತುದರ್ಶಿಯ ದಿನ ಪುಷ್ಕರದಲ್ಲಿ

**ಹೇಮಪ್ರತಿಮಯಾ ಸಾರ್ಧಂ ಯಥಾವದ್ವಿಧಿಪೂರ್ವಕಂ ।**
**ಶುದ್ಧಸ್ಸುವರ್ಣಕಾರಶ್ಚ ನಾಮ್ನಾ ದಾಸೋಽಭವತ್ತದಾ ॥ ೯ ॥**

**ಭೃತ್ಯೋ ಲೀಲಾವತೀಗೇಹೇ ತೇನ ಹೈಮೀರ್ವಿನಿರ್ಮಿತಾಃ ।**
**ದೇವತಾಪ್ರತಿಮಾ ಮುಖ್ಯಾಃ ಶ್ರದ್ಧಾಯುಕ್ತೇನ ಪಾರ್ಥಿವ ॥ ೧೦ ॥**

**ಅತಿರೂಪೇಣ ಸಂಪನ್ನಾ ಘಟಯಿತ್ವಾ ಸುಶೋಭನಾಃ ।**
**ಧರ್ಮಕಾರ್ಯಮಿತಿ ಜ್ಞಾತ್ವಾ ನ ಗೃಹೀತಂ ಚ ವೇತನಂ ॥ ೧೧ ॥**

**ಪ್ರಜ್ವಾಲಿತಾಶ್ಚ ತೇ ಪತ್ನ್ಯಾ ಸೌವರ್ಣಾಃ ಪಾದಪಾಸ್ತಥಾ ।**
**ಲೀಲಾವತೀಗೃಹೇ ಚಾಪಿ ಪರಿಚರ್ಯಾಶ್ಚ ಪಾರ್ಥಿವ ॥ ೧೨ ॥**

**ಕೃತಾಸ್ತಾಭ್ಯಾಮಶೇಷೇಣ ದ್ವಿಜಶುಶ್ರೂಷಣಾದಿಕಾಃ ।**
**ಸಾ ಚ ಲೀಲಾವತೀ ವೇಶ್ಯಾ ಕಾಲೇನ ಮಹತಾನಘ ॥ ೧೩ ॥**

**ಸರ್ವಪಾಪವಿನಿರ್ಮುಕ್ತಾ ಜಗಾಮ ಶಿವಮಂದಿರಂ ।**
**ಯೋಽಸೌ ಸುವರ್ಣಕಾರಸ್ತು ದರಿದ್ರೋಽಪ್ಯತಿಸತ್ತ್ವವಾನ್ ॥ ೧೪ ॥**

---

ಉಪ್ಪಿನ ಮೂಟೆಯ ಮೇಲೆ ಚಿನ್ನದ ಪ್ರತಿಮೆಯನ್ನಿಟ್ಟು ವಿಧಿವತ್ತಾಗಿ ದಾನಮಾಡಿದಳು. ಅವಳ ಮನೆಯಲ್ಲಿ ಒಬ್ಬ ಅಕ್ಕಸಾಲೆಯು ಆಳಾಗಿದ್ದನು. ಅವನೇ ಆ ಪ್ರತಿಮೆಯನ್ನು ಮಾಡಿದನು.

೧೦-೧೧. ದಾನದಲ್ಲಿ ಶ್ರದ್ಧೆಯಿರುವವನಿಗೆ ದೇವತೆಗಳ ಪ್ರತಿಮೆಯು ಮುಖ್ಯವಾಗಿರಬೇಕು. ಈ ಅಕ್ಕಸಾಲೆಯೂ ಸರಿಯಾದ ಅವಯವಗಳಿಂದ ಕೂಡಿ ಸುಂದರವಾದ ಪ್ರತಿಮೆಗಳನ್ನು ಮಾಡಿಕೊಟ್ಟನು. ಅಲ್ಲದೆ ಧರ್ಮಕಾರ್ಯವೆಂದು ತಿಳಿದು ಅದಕ್ಕೆ ಕೂಲಿಯನ್ನು ತೆಗೆದುಕೊಳ್ಳಲಿಲ್ಲ.

೧೨. ಆ ಅಕ್ಕಸಾಲೆಯ ಹೆಂಡತಿಯು ಚಿನ್ನದ ಮರದ ಎಲೆಗಳನ್ನು ಬಿಡಿಸಿದಳು. ಅಲ್ಲದೆ ಆ ಅಕ್ಕಸಾಲೆಯೂ ಆತನ ಹೆಂಡತಿಯೂ ಆ ಸೂಳೆಯ ಮನೆಯಲ್ಲಿ ಬ್ರಾಹ್ಮಣ ಶುಶ್ರೂಷೆ ಮುಂತಾದುವನ್ನು ಎಲ್ಲವನ್ನೂ ಪೂರ್ತಿಯಾಗಿ ಮಾಡಿದರು.

೧೩. ಬಹುಕಾಲದ ಮೇಲೆ ಆ ಲೀಲಾವತಿಯು ಪಾಪವನ್ನು ಕಳೆದುಕೊಂಡು ಶಿವಮಂದಿರಕ್ಕೆ ಹೋದಳು. (ಕೈಲಾಸವನ್ನು ಹೊಂದಿದಳು).

೧೪-೧೫. ಆ ಅಕ್ಕಸಾಲೆಯು ದರಿದ್ರನಾದರೂ ಸತ್ವಗುಣದಿಂದ ಕೂಡಿ ಆ ಸೂಳೆಯಿಂದ ಕೂಲಿಯನ್ನೂ ತೆಗೆದುಕೊಳ್ಳದ್ದರಿಂದ ಅವನೇ ನೀನಾಗಿ ಹುಟ್ಟಿ ಎಳು

ನ ಮೂಲ್ಯಮಾದಾದ್ವೇಶ್ಯಾತಸ್ಸ ಭವಾನಿಹ ಸಾಂಪ್ರತಂ ।
ಸಪ್ತದ್ವೀಪಪತಿರ್ಜಾತಸ್ಸೂರ್ಯಾಯುತಸಮಪ್ರಭಃ ॥ ೧೫ ॥

ಯಥಾ ಸುವರ್ಣಕಾರಶ್ಚ ತರವೋ ಹೇಮದೇವತಾಃ ।
ಸಮ್ಯಗುಜ್ಜ್ವಲಿತಾಃ ಪತ್ನ್ಯಾ ಸೇಯಂ ಭಾನುಮತೀ ತಥಾ ॥ ೧೬ ॥

ಉಜ್ಜ್ವಲನಾದುತ್ತಮರೂಪಮಸ್ಯಾಃ
ಸಂಜಾತಮಸ್ಮಿಂಸ್ತವ ಚಾಧಿಪತ್ಯಂ ।
ಯಸ್ಮಾತ್ಕೃತಂ ತತ್ಪರಿಕರ್ಮಣಾತ್ರ
ಸೇವಾದ್ವಯಾಭ್ಯಾಂ ಲವಣಾಚಲಸ್ಯ ॥ ೧೭ ॥

ತಸ್ಮಾನ್ನೃಲೋಕೇಷ್ವಪರಾಜಿತಸ್ತ್ವ-
ಮಾರೋಗ್ಯಸೌಭಾಗ್ಯಯುತಾ ಚ ಲಕ್ಷ್ಮೀಃ ।
ತಸ್ಮಾತ್ತ್ವಮಪ್ಯತ್ರ ವಿಧಾನಪೂರ್ವಂ
ಧಾನ್ಯಾಚಲಾದೀನ್ದಶಧಾ ಕುರುಷ್ವ ॥ ೧೮ ॥

॥ ಪುಲಸ್ತ್ಯ ಉವಾಚ ॥

ತಥೇತಿ ಸಂಪೂಜ್ಯ ಸ ಧರ್ಮಮೂರ್ತಿ-
ರ್ವಚೋ ವಸಿಷ್ಠಸ್ಯ ದದೌ ಚ ಸರ್ವಾನ್ ।

---

ದ್ವೀಪಗಳಿಗೂ ಒಡೆಯನಾಗಿ ಸಾವಿರಜನ ಸೂರ್ಯರಿಗೆ ಸಮವಾದ ಕಾಂತಿಯನ್ನು ಹೊಂದಿದೆ.

೧೬. ಅಕ್ಕಸಾಲಿಯು ಕೆಲಸಮಾಡುತ್ತಿದ್ದಂತೆಲ್ಲ ಅವನ ಹೆಂಡತಿಯೂ ಅದರಲ್ಲಿನ ಮರಗಳನ್ನೂ ದೇವತೆಗಳನ್ನೂ ಚೆನ್ನಾಗಿ ಕಾಣುವಂತೆ ಬಿಡಿಸಿದುದ್ದರಿಂದ ಈಗ ನಿನ್ನ ಹೆಂಡತಿ ಭಾನುಮತಿಯಾಗಿ ಹುಟ್ಟಿದಳು.

೧೭-೧೮. ಆ ಪ್ರತಿಮೆಯನ್ನು ತಿಕ್ಕಿ ಪ್ರಕಾಶಪಡಿಸಿದುದರಿಂದ ಈಕೆಗೆ ಉತ್ತಮ ರೂಪವೂ, ನಿನಗೆ ದೊರೆತನವೂ ಬಂದುವು. ಆ ಲವಣಾಚಲವನ್ನು ದಾನ ಮಾಡುವಾಗ ನೀವು ಸೇವೆ ಮಾಡಿದುದರಿಂದ ಈ ಮನುಷ್ಯಲೋಕದಲ್ಲಿ ಅಜೇಯನಾದೆ. ಆರೋಗ್ಯ ಸೌಭಾಗ್ಯ ಕಾಂತಿಗಳನ್ನೂ ಹೊಂದಿದೆ. ಆದ್ದರಿಂದ ನೀನೂ ಕೂಡ ವಿಧಿವತ್ತಾಗಿ ಧಾನ್ಯಾಚಲಾದಿಗಳನ್ನೂ ಅದಕ್ಕೆ ಹತ್ತರಷ್ಟನ್ನು ಮಾಡು.

ಧಾನ್ಯಾಚಲಾದೀನ್ವಿಧಿನಾ ಸ್ಮರಾರೇ-
ರ್ಲೋಕಂ ಗತೋಽಸೌ ಸುರಪೂಜ್ಯಮಾನಃ ॥ ೧೯ ॥

ಪಶ್ಯೇದ್ಯದೀಮಾನುಪನೀಯಮಾನಾ-
ನ್ಸ್ಪೃಶೇನ್ಮನುಷ್ಯೈರಿಹ ದೀಯಮಾನಾನ್ ।
ಶೃಣೋತಿ ಭಕ್ತ್ಯಾಥ ಮತಿಂ ದದಾತಿ
ವಿಕಲ್ಮಷಸ್ಸೋಽಪಿ ದಿವಂ ಪ್ರಯಾತಿ ॥ ೨೦ ॥

ದುಃಸ್ವಪ್ನಃ ಪ್ರಶಮಮುಪೈತಿ ಪಠ್ಯಮಾನೈಃ
ಶೈಲೇಂದ್ರೈರ್ಭವಭಯಭೇದನೈರ್ಮನುಷ್ಯೈಃ ।
ಯಃ ಕುರ್ಯಾತ್ಕಿಮು ನೃಪಪುಂಗವೇಹ ಸಮ್ಯಕ್
ಶಾಂತಾತ್ಮಾ ಸಕಲಗಿರೀಂದ್ರಸಂಪ್ರದಾನಂ ॥ ೨೧ ॥

॥ ಭೀಷ್ಮ ಉವಾಚ ॥

ಕಿಮಭೀಷ್ಟವಿಯೋಗಶೋಕಸಂಘಾ
ನಲಮುದ್ಧರ್ತುಮುಪೋಷಣಂ ವ್ರತಂ ವಾ ।

---

೧೯. ಪುಲಸ್ತ್ಯನು ಹೇಳಿದನು:—ಹಾಗೇ ಆಗಲೆಂದು ಆ ಧರ್ಮಮೂರ್ತಿಯು ವಸಿಷ್ಠನ ಮಾತಿನಂತೆ ವಿಧಿವತ್ತಾಗಿ ವಸಿಷ್ಠನಿಗೆ ಆ ದಾನವೆಲ್ಲವನ್ನೂ ಕೊಟ್ಟನು. ಆದರಿಂದ ದೇವತೆಗಳಿಂದ ಪೂಜೆಯನ್ನು ಹೊಂದುತ್ತ ಶಿವಲೋಕವನ್ನು ಹೊಂದಿದನು.

೨೦. ದಾನ ಕೊಡಲು ತೆಗೆದುಕೊಂಡು ಹೋಗುತ್ತಿರುವ ಈ ಪದಾರ್ಥಗಳನ್ನಾಗಲೀ, ಕೊಡುತ್ತಿರುವುದನ್ನಾಗಲೀ ನೋಡಿದರೂ, ಕೊಡುತ್ತಿರುವುದನ್ನು ಮನುಷ್ಯರು ಮುಟ್ಟಿದರೂ, ಭಕ್ತಿಯಿಂದ ಕೇಳಿದರೂ, ದೇವರು ಒಳ್ಳೆಯ ಬುದ್ಧಿಯನ್ನು ಕೊಡುತ್ತಾನೆ. ಅವನು ಪಾಪವನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ.

೨೧. ಓದುತ್ತಿರುವವರಿಗೆ ದುಸ್ಸ್ವಪ್ನವು ಹೋಗುತ್ತದೆ. ಸಂಸಾರದಲ್ಲಿ ಹುಟ್ಟು ಸಾವು ಹೋಗುತ್ತದೆ. ಹೀಗಿರುವಲ್ಲಿ ಅಲ್ಲಿ ಹೇಳಿರುವ ದಾನಪರ್ವತಗಳನ್ನು ದಾನಮಾಡಿದರೆ ಹೇಳತಕ್ಕದ್ದೇನು ?

೨೨. ಭೀಷ್ಮನು ಕೇಳಿದನು :—ಇಷ್ಟವಾದವರ ವಿಯೋಗ, ಅದರಿಂದ ಶೋಕ ಇವು ಮುಂತಾದುವನ್ನು ನಾಶಮಾಡಿಕೊಳ್ಳಲು ಉಪವಾಸವಾವುದುಂಟು ?

ವಿಭವೋದ್ಭವಕಾರಿ ಭೂತಲೇಽಸ್ಮಿ-
ನ್ಭವಭೀತೇರಪಿ ಕಂದನಂ ಚ ಪುಂಸಾಂ ॥ ೨೨ ॥

॥ ಪುಲಸ್ತ್ಯ ಉವಾಚ ॥

ಪರಿಪೃಷ್ಟಮಿದಂ ಜಗತ್ಪ್ರಿಯಂ ತೇ
ವಿಬುಧಾನಾಮಪಿ ದುರ್ಲಭಂ ಮಹತ್ವಾತ್ ।
ತವ ಭಕ್ತಿಮತಸ್ತಥಾಪಿ ವಕ್ಷ್ಯೇ
ವ್ರತಮಿಂದ್ರಾಸುರದಾನವೇಷು ಗುಹ್ಯಂ ॥ ೨೩ ॥

ಪುಣ್ಯಮಾಶ್ವಯುಜೇ ಮಾಸಿ ವಿಶೋಕದ್ವಾದಶೀವ್ರತಂ ।
ದಶಮ್ಯಾಂ ಲಘುಭುಗ್ವಿಪ್ರಶ್ಯಮೇನ ನಿಯಮೇನ ವಾ ॥ ೨೪ ॥

ಉದಙ್ಮುಖಃ ಪ್ರಾಙ್ಮುಖೋ ವಾ ದಂತಧಾವನಪೂರ್ವಕಂ ।
ಏಕಾದಶ್ಯಾಂ ನಿರಾಹಾರಸ್ಸಮ್ಯಗಭ್ಯರ್ಚ್ಯ ಕೇಶವಂ ॥ ೨೫ ॥

ಶ್ರಿಯಂ ಚಾಭ್ಯರ್ಚ್ಯ ವಿಧಿವದ್ಭೋಕ್ಷ್ಯೇಽಹಂ ಚಾಪರೇಽಹನಿ ।
ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ॥ ೨೬ ॥

---

ವ್ರತವಾದರೂ ಯಾವುದುಂಟು ? ಈ ಪ್ರಪಂಚದಲ್ಲಿ ಅವರ ಅನುಕೂಲಕ್ಕೆ ತಕ್ಕಂತೆ ಈ ಸಂಸಾರದಿಂದ ಪಾರಾಗಲು ಮನುಷ್ಯರಿಗೆ ಮೂಲವಾವುದು ? ಹೇಳು.

೨೩. ಪುಲಸ್ತ್ಯನು ಹೇಳಿದನು :—ಎಲೈ ಭೀಷ್ಮನೇ, ಜಗತ್ತಿಗೆ ಪ್ರಿಯವಾದ್ದನ್ನೇ ಕೇಳುತ್ತಿದ್ದೀಯೆ. ಇದು ಉತ್ಕೃಷ್ಟವಾದುದರಿಂದ ದೇವತೆಗಳಿಗೂ ದುರ್ಲಭವು. ನೀನು ಭಕ್ತಿಯುಳ್ಳವನಾದುದರಿಂದ ದೇವತೆಗಳಿಗೂ ತಿಳಿಯದ ಗುಟ್ಟಾದ ವಿಷಯವನ್ನು ಹೇಳುತ್ತೇನೆ.

೨೪-೨೬. ಪುಣ್ಯಪ್ರದವಾದ ಆಶ್ವಯುಜ ಮಾಸದ ವಿಶೋಕದ್ವಾದಶೀ ವ್ರತವೊಂದುಂಟು. ದಶಮಿಯ ದಿನ ಲಘುವಾದ ಆಹಾರವನ್ನು ತೆಗೆದುಕೊಂಡು ನಿಯಮದಿಂದಲೂ ಇಂದ್ರಿಯನಿಗ್ರಹದಿಂದಲೂ ಇರಬೇಕು. ಉತ್ತರ ಅಥವಾ ಪೂರ್ವಮುಖವಾಗಿ ಹಲ್ಲನ್ನು ಉಜ್ಜಬೇಕು. ಏಕಾದಶಿಯ ದಿನ ನಿರಾಹಾರಿಯಾಗಿ ಕೇಶವನನ್ನು ಪೂಜಿಸಿ, ಲಕ್ಷ್ಮಿಯನ್ನು ಪೂಜಿಸಿ ಮಾರನೆಯ ದಿನ ಊಟವನ್ನು ಮಾಡುತ್ತೇನೆ ಎಂದು ನಿಯಮಮಾಡಿಕೊಂಡು ಮಲಗಿ ಬೆಳಿಗ್ಗೆ ಏಳಬೇಕು.

**ಸ್ನಾನಂ ಸರ್ವೌಷಧೈಃ ಕುರ್ಯಾತ್ಪಂಚಗವ್ಯಜಲೇನ ತು ।**
**ಶುಕ್ಲಮಾಲ್ಯಾಂಬರಸ್ತದ್ವಚ್ಛ್ರೀಪತಿಂ ಪೂಜಯೇನ್ನರಃ ॥ ೨೭ ॥**

**ವಿಶೋಕಾಯ ನಮಃ ಪಾದೌ ಜಂಘೇ ಚ ವರದಾಯ ವೈ ।**
**ಶ್ರೀಶಾಯ ಜಾನುನೀ ತದ್ವದೂರೂ ಚ ಜಲಶಾಯಿನೇ ॥ ೨೮ ॥**

**ಕಂದರ್ಪಾಯ ನಮೋ ಗುಹ್ಯಂ ಮಾಧವಾಯ ನಮಃ ಕಟಿಂ ।**
**ದಾಮೋದರಾಯೇತ್ಯುದರಂ ಪಾರ್ಶ್ವೇ ಚ ವಿಪುಲಾಯ ವೈ ॥ ೨೯ ॥**

**ನಾಭಿಂ ಚ ಪದ್ಮನಾಭಾಯ ಹೃದಯಂ ಮನ್ಮಥಾಯ ವೈ ।**
**ಶ್ರೀಧರಾಯ ವಿಭೋರ್ವಕ್ಷಃ ಕರೌ ಮಧುಭಿದೇ ನಮಃ ॥ ೩೦ ॥**

**ವೈಕುಂಠಾಯ ನಮಃ ಕಂಠಮಾಸ್ಯಂ ಯಜ್ಞಮುಖಾಯ ವೈ ।**
**ನಾಸಾಮಶೋಕನಿಧಯೇ ವಾಸುದೇವಾಯ ಚಕ್ಷುಷೀ ॥ ೩೧ ॥**

---

೨೭. ಎಲ್ಲಾ ಮೂಲಿಕೆಗಳನ್ನೂ ಹಾಕಿದ ನೀರಿನಲ್ಲಿ ಸ್ನಾನಮಾಡಿ, ಪಂಚಗವ್ಯದಿಂದಲೂ ಶುದ್ಧನಾಗಿ ಬಿಳೀ ಹೂ ಬಿಳೀ ಬಟ್ಟೆಗಳನ್ನು ಹಾಕಿಕೊಂಡು ಶ್ರೀಪತಿಯನ್ನು ಪೂಜಿಸಬೇಕು.

೨೮—೩೦. ಶೋಕವಿಲ್ಲದವನಿಗೆ ನಮಸ್ಕಾರವೆಂದು ಪಾದಗಳನ್ನೂ, ವರದನಿಗೆ ನಮಸ್ಕಾರವೆಂದು ಮೊಣಕಾಲುಗಳನ್ನೂ, ಶ್ರೀಶನಿಗೆ ನಮಸ್ಕಾರವೆಂದು ಮಂಡಿಗಳನ್ನೂ, ನೀರಿನಲ್ಲಿ ಮಲಗಿರುವವನಿಗೆ ನಮಸ್ಕಾರವೆಂದು ತೊಡೆಗಳನ್ನೂ, ಕಂದರ್ಪನಿಗೆ ನಮಸ್ಕಾರವೆಂದು ಗುಹ್ಯಪ್ರದೇಶವನ್ನೂ, ಮಾಧವನಿಗೆ ನಮಸ್ಕಾರವೆಂದು ಹೊಕ್ಕಳನ್ನೂ, ಮನ್ಮಥನಿಗೆ ನಮಸ್ಕಾರವೆಂದು ಎದೆಯನ್ನೂ,-ಶ್ರೀಧರನಿಗೆ ನಮಸ್ಕಾರವೆಂದು ಎದೆಯ ಮೇಲುಭಾಗವನ್ನೂ, ಮಧುವನ್ನು ಕೊಂದವನಿಗೆ ನಮಸ್ಕಾರವೆಂದು ಕೈಗಳನ್ನೂ ಪೂಜಿಸಬೇಕು.

೩೧. ವೈಕುಂಠನಿಗೆ ನಮಸ್ಕಾರವೆಂದು ಕತ್ತನ್ನೂ, ಯಜ್ಞಮುಖನಿಗೆ ನಮಸ್ಕಾರವೆಂದು ಮುಖವನ್ನೂ, ಅಶೋಕನಿಗೆ ನಮಸ್ಕಾರವೆಂದು ಮೂಗನ್ನೂ, ವಾಸುದೇವನಿಗೆ ನಮಸ್ಕಾರವೆಂದು ಕಣ್ಣುಗಳನ್ನೂ ಪೂಜಿಸಬೇಕು.

ಲಲಾಟಂ ವಾಮನಾಯೇತಿ ಹರಯೇತಿ ಪುನರ್ಭ್ರುವೌ ।
ಕೇಶಕಾನ್ಮಾಧವಾಯೇತಿ ಕಿರೀಟಂ ವಿಶ್ವರೂಪಿಣೇ ॥ ೩೨ ॥

ಸಮಸ್ತ ಸರ್ವಾತ್ಮನೇ ತದ್ವಚ್ಛಿರ ಇತ್ಯಭಿಪೂಜಯೇತ್ ।
ಏವಂ ಸಂಪೂಜ್ಯ ಗೋವಿಂದಂ ಧೂಪಮಾಲ್ಯಾನುಲೇಪನೈಃ ॥ ೩೩ ॥

ತತಸ್ತು ಮಂಡಲಂ ಕುರ್ಯಾತ್ಸ್ಥಂಡಿಲಂ ಕಾರಯೇನ್ಮೃದಾ ।
ಚತುರಸ್ರಂ ಸಮಂತಾಚ್ಚ ರತ್ನಿಮಾತ್ರಮುದಕ್ಪ್ಲವಂ ॥ ೩೪ ॥

ಶ್ಲಕ್ಷ್ಣಂ ಶುದ್ಧಂ ಚ ಪರಿತೋ ವಪ್ರದ್ವಯಸಮಾವೃತಂ ।
ತ್ರಿರಂಗುಳೋಚ್ಛ್ರಿತೋ ವಪ್ರಸ್ತದ್ವಿಸ್ತಾರೋ ದ್ವಿರಂಗುಳಃ ॥ ೩೫ ॥

ಸ್ಥಂಡಿಲಸ್ಯೋಪರಿಷ್ಟಾಚ್ಚ ಭಿತ್ತಿರಷ್ಟಾಂಗುಳಾ ಭವೇತ್ ।
ನದೀವಾಲುಕಯಾ ತತ್ರ ಲಕ್ಷ್ಮ್ಯಾಃಪ್ರತಿಕೃತಿಂ ನ್ಯಸೇತ್ ॥ ೩೬ ॥

---

೩೨-೩೩. ವಾಮನನಿಗೆ ನಮಸ್ಕಾರವು ಎಂದು ಹಣೆಯನ್ನೂ, ಹರಿಗೆ ನಮಸ್ಕಾರವು ಎಂದು ಹುಬ್ಬುಗಳನ್ನೂ, ಮಾಧವನಿಗೆ ನಮಸ್ಕಾರವೆಂದು ಜುಟ್ಟನ್ನೂ ವಿಶ್ವರೂಪಿಗೆ ನಮಸ್ಕಾರವೆಂದು ಕಿರೀಟವನ್ನೂ, ಸರ್ವಾತ್ಮನಿಗೆ ನಮಸ್ಕಾರವೆಂದು ಶಿರಸ್ಸನ್ನೂ, ಪೂಜಿಸಬೇಕು. ಈರೀತಿ ಪೂಜಿಸಿ ಧೂಪ ದೀಪ ನೈವೇದ್ಯಗಳಿಂದ ಪೂಜಿಸಬೇಕು.

೩೪-೩೫. ಆಮೇಲೆ ಮಂಡಲವನ್ನು ಮಾಡಬೇಕು. ಅದರ ಮೇಲೆ ಮಣ್ಣಿನಿಂದ ಸ್ಥಂಡಿಲವನ್ನು (ಜಗುಲಿಯನ್ನು) ಮಾಡಬೇಕು. ಅದಕ್ಕೆ ಸುತ್ತಲೂ ನಾಲ್ಕು ಮೂಲೆಗಳಿರಬೇಕು. ದಕ್ಷಿಣೋತ್ತರವಾಗಿ ಹಿಡಿಯನ್ನೂ ಹಿಡಿದು ಮೊಳದುದ್ದವಿರಬೇಕು. ನುಣ್ಣಗಿರಬೇಕು. ಶುದ್ಧವಾಗಿರಬೇಕು. ಆಚೆ ಈಚೆ ಎರಡು ದಿಂಡುಗಳಿರಬೇಕು. ಅವು ಮೂರು ಅಂಗುಲ ಎತ್ತರವೂ ಎರಡು ಅಂಗುಲ ಅಗಲವೂ ಇರಬೇಕು. ಸ್ಥಂಡಿಲಕ್ಕಿಂತಲೂ ಮೇಲಕ್ಕೆ ಎಂಟು ಅಂಗುಲ ಕಾಣುವಂತೆ ಒಂದು ಗೋಡೆಯನ್ನು ಹಾಕಿರಬೇಕು.

೩೬. ಆ ಗೋಡೆಯ ಮೇಲೆ ನದಿಯಿಂದ ಮರಳನ್ನು ತಂದು ಲಕ್ಷ್ಮಿಯಾಕಾರವನ್ನು ಮಾಡಿ ಅಲ್ಲಿಡಬೇಕು. ಸ್ಥಂಡಿಲದಲ್ಲಿ ಸೂರ್ಯನನ್ನು ಆವಾಹಿಸಬೇಕು. ಅನಂತರ ಲಕ್ಷ್ಮಿಯನ್ನು ಇಂತು ಪೂಜಿಸಬೇಕು.

ಸ್ಥಂಡಿಲೇ ಸೂರ್ಯಮಾರೋಪ್ಯ ಲಕ್ಷ್ಮೀಮಿತ್ಯರ್ಚಯೇದ್ಬುಧಃ ।
ನಮೋ ದೇವ್ಯೈ ನಮಶ್ಶಾಂತ್ಯೈ ನಮೋ ಲಕ್ಷ್ಮ್ಯೈ ನಮಶ್ಶ್ರಿಯೈ ॥ ೩೭ ॥

ನಮಸ್ತುಷ್ಟ್ಯೈ ನಮಃ ಪುಷ್ಟ್ಯೈ ನಮಸ್ತೃಪ್ತ್ಯೈ ನಮೋ ನಮಃ ।
ವಿಶೋಕಾ ದುಃಖನಾಶಾಯ ವಿಶೋಕಾ ವರದಾಸ್ತು ಮೇ ॥ ೩೮ ॥

ವಿಶೋಕಾ ಮೇಽಸ್ತು ಸಂತತ್ಯೈ ವಿಶೋಕಾ ಸರ್ವಸಿದ್ಧಯೇ ।
ತತಶ್ಶುಕ್ಲಾಂಬರೈಃ ಸೂರ್ಯಂ ವೇಷ್ಟ್ಯ ಸಂಪೂಜಯೇತ್ಫಲೈಃ ॥ ೩೯ ॥

ಭಕ್ಷ್ಯೈರ್ನಾನಾವಿಧೈಸ್ತದ್ವತ್ಸುವರ್ಣಕಮಲೇನ ತು ।
ರಾಜತೀಷು ಚ ಸರ್ವಾಸು ನ್ಯಸೇದ್ದರ್ಭೋದಕಂ ಬುಧಃ ॥ ೪೦ ॥

ತತಸ್ತು ನೃತ್ಯಗೀತಾನಿ ಕಾರಯೇತ್ಸಕಲಾಂ ನಿಶಾಂ ।
ಯಾಮತ್ರಯೇ ವ್ಯತೀತೇ ತು ತತ ಉತ್ಥಾಯ ಮಾನವಃ ॥ ೪೧ ॥

ಅಭಿಗಮ್ಯ ಚ ವಿಪ್ರಾಣಾಂ ಮಿಥುನಾನಿ ತಥಾರ್ಚಯೇತ್ ।
ಶಕ್ತಿತಸ್ತ್ರೀಣಿ ಚೈಕಂ ವಾ ವಸ್ತ್ರಮಾಲ್ಯಾನುಲೇಪನೈಃ ॥ ೪೨ ॥

---

೩೭—೩೯. ದೇವಿಗೆ ನಮಸ್ಕಾರವು. ಶಾಂತಿಗೆ ನಮಸ್ಕಾರವು. ಲಕ್ಷ್ಮಿಗೆ ನಮಸ್ಕಾರವು. ಶ್ರೀಗೆ ನಮಸ್ಕಾರವು. ತುಷ್ಟಿಗೆ ನಮಸ್ಕಾರವು. ಪುಷ್ಟಿಗೆ ನಮಸ್ಕಾರವು. ತೃಪ್ತಿಗೆ ನಮಸ್ಕಾರವು. ವಿಶೋಕಳು ನನ್ನ ದುಃಖವನ್ನು ನಾಶಮಾಡಿ ವರವನ್ನು ಕೊಡಲಿ. ವಿಶೋಕಳು ನನಗೆ ಸಂತತಿಯನ್ನೂ ಸರ್ವಸಿದ್ಧಿಯನ್ನೂ ಕೊಡಲಿ ಎಂದು ಪೂಜಿಸಿ ಅನಂತರ ಬಿಳಿಯ ಬಟ್ಟೆಗಳಿಂದ ಸೂರ್ಯನನ್ನು ಹೊದ್ದಿಸಿ ಫಲಗಳಿಂದ ಪೂಜಿಸಬೇಕು.

೪೦. ನಾನಾಬಗೆಯ ಭಕ್ಷ್ಯಗಳಿಂದಲೂ ಚಿನ್ನದ ಕಮಲಗಳಿಂದಲೂ ಪೂಜಿಸಬೇಕು. ಬೆಳ್ಳಿಯ ಪಾತ್ರೆಗಳಲ್ಲಿ ದರ್ಭೆ ಹಾಕಿದ ನೀರನ್ನು ಇಟ್ಟಿರಬೇಕು.

೪೧-೪೨. ಅನಂತರ ರಾತ್ರಿಯಲೆಲ್ಲಾ ನೃತ್ಯಗೀತಾದಿಗಳಿಂದ ಜಾಗರಣೆಮಾಡಬೇಕು. ಮೂರು ಯಾಮಗಳು ಕಳೆದನಂತರ ನಾಲ್ಕನೆಯ ಯಾಮದಲ್ಲಿ ಎದ್ದು ಹೋಗಿ ದಂಪತಿಗಳನ್ನು ಪೂಜಿಸಬೇಕು. ಮೂರು, ಎರಡು, ಒಂದು ಯಥಾಶಕ್ತಿಯಾಗಿ ದಂಪತಿಗಳನ್ನು ಬಟ್ಟೆ ಹೂ ಗಂಧಗಳಿಂದ ಪೂಜಿಸಬೇಕು.

ಶಯನಸ್ಥಾನಿ ಪೂಜ್ಯಾನಿ ನಮೋಽಸ್ತು ಜಲಶಾಯಿನೇ ।
ತತಸ್ತು ಗೀತವಾದ್ಯೇನ ರಾತ್ರೌ ಜಾಗರಣೇ ಕೃತೇ ॥ ೪೩ ॥

ಪ್ರಭಾತೇ ಚ ತತಸ್ಸ್ನಾತ್ವಾ ದಾಂಪತ್ಯಮರ್ಚಯೇನ್ನರಃ ।
ಭೋಜಯೇಚ್ಚ ಯಥಾಶಕ್ತ್ಯಾ ವಿತ್ತಶಾಠ್ಯೇನ ವರ್ಜಿತಃ ॥ ೪೪ ॥

ಭುಕ್ತ್ವಾ ಶ್ರುತ್ವಾ ಪುರಾಣಾನಿ ತದ್ದಿನಂ ಚಾತಿವಾಹಯೇತ್ ।
ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ॥ ೪೫ ॥

ವ್ರತಾಂತೇ ಶಯನಂ ದದ್ಯಾದ್ಗುಡಧೇನುಸಮನ್ವಿತಂ ।
ಸೋಪಧಾನಕವಿಶ್ರಾಮಂ ಸ್ವಾಸ್ತರಾವರಣಂ ಶುಭಂ ॥ ೪೬ ॥

ಯಥಾ ಲಕ್ಷ್ಮೀರ್ನರೇಶ ತ್ವಾಂ ನ ಪರಿತ್ಯಜ್ಯ ಗಚ್ಛತಿ ।
ತಥಾ ಸುರೂಪತಾರೋಗ್ಯಮಶೋಕಂ ಚಾಸ್ತು ಮೇ ಸದಾ ॥ ೪೭ ॥

---

೪೩-೪೪. ಅವರನ್ನು ಹಾಸಿಗೆಯ ಮೇಲೆ ಕೂಡಿಸಿ ಪೂಜಿಸಬೇಕು. ಜಲಶಾಯಿಗೆ ನಮಸ್ಕಾರವೆಂದೆನ್ನಬೇಕು. ಈ ರಾತ್ರಿ ಕಳೆಯುವವರೆಗೂ ನೃತ್ಯವಾದ್ಯಗಳಿಂದ ಜಾಗರಣವು ಮುಗಿಯಲು ಬೆಳಗ್ಗೆ ಸ್ನಾನಮಾಡಿ ದಂಪತಿಗಳನ್ನು ಪೂಜಿಸಬೇಕು. ಕಾರ್ಪಣ್ಯವಿಲ್ಲದೇ ಶಕ್ತ್ಯನುಗುಣವಾಗಿ ಊಟಮಾಡಿಸಬೇಕು.

೪೫. ಊಟಮಾಡಿ ಪುರಾಣವನ್ನು ಕೇಳುತ್ತ ಆ ದಿನವನ್ನು ಕಳೆಯಬೇಕು. ಈರೀತಿಯಾಗಿ ತಿಂಗಳು ತಿಂಗಳಿಗೂ ಮಾಡುತ್ತಿರಬೇಕು.

೪೬. ವ್ರತದ ಕೊನೆಯಲ್ಲಿ ಗುಡಧೇನುವಿನಿಂದ ಕೂಡಿದ ಹಾಸಿಗೆಯನ್ನು ದಾನಮಾಡಬೇಕು. ಅದರಲ್ಲಿ ದಿಂಬು ಮಗ್ಗಲುಹಾಸಿಗೆ, ಹೊದ್ದಿಕೆಗಳೆಲ್ಲವೂ ಇರಬೇಕು.

೪೭. ಎಲೈ ದೊರೆಯೇ, ಲಕ್ಷ್ಮಿಯು ನಿನ್ನನ್ನು ಬಿಟ್ಟುಹೋಗದಂತೆ ಈ ವ್ರತಗಳನ್ನು ಮಾಡು. ಅದೇ ರೀತಿ ಸೌಂದರ್ಯ, ಆರೋಗ್ಯ, ದುಃಖವಿಲ್ಲದಿರುವುದು ಎಲ್ಲವೂ ಯಾವಾಗಲೂ ಇರಲಿ.

ಯಥಾ ದೇವೇನ ರಹಿತಾ ನ ಲಕ್ಷ್ಮೀರ್ಜಾಯತೇ ಕ್ವಚಿತ್ ।
ತಥಾ ವಿಶೋಕತಾ ಮೇಽಸ್ತು ಭಕ್ತಿರಗ್ರ್ಯಾ ಚ ಕೇಶವೇ ॥ ೪೮ ॥

ಮಂತ್ರೇಣಾನೇನ ಶಯನಂ ಗುಡಧೇನುಸಮನ್ವಿತಂ ।
ಸೂರ್ಯಶ್ಚ ಲಕ್ಷ್ಮ್ಯಾ ಸಹಿತೋ ದಾತವ್ಯೋ ಭೂತಿಮಿಚ್ಛತಾ ॥ ೪೯ ॥

ಉತ್ಪಲಂ ಕರವೀರಂ ವಾ ಬಾಣಮಮ್ಲಾನಕುಂಕುಮಂ ।
ಕೇತಕಂ ಸಿಂಧುವಾರಂ ಚ ಮಲ್ಲಿಕಾ ಗಂಧಪಾಟಲಾ ।
ಕದಂಬಕುಬ್ಜಕಂ ಜಾಜೀ ಶಸ್ತಾನ್ಯೇತಾನಿ ಸರ್ವದಾ ॥ ೫೦ ॥

॥ ಭೀಷ್ಮ ಉವಾಚ ॥

ಗುಡಧೇನುವಿಧಾನಂ ಚ ಸಮಾಚಕ್ಷ್ವ ಮುನೀಶ್ವರ ।
ಕಿಂರೂಪಾ ಕೇನ ಮಂತ್ರೇಣ ದಾತವ್ಯಾ ತದಿಹೋಚ್ಯತಾಂ ॥ ೫೧ ॥

---

೪೮-೪೯. ಸ್ವಾಮಿಯನ್ನು ಬಿಟ್ಟು ಲಕ್ಷ್ಮಿಯು ಬೇರೆ ಹೇಗೆ ಹುಟ್ಟುವುದೇ ಇಲ್ಲವೋ ಹಾಗೆ ನನಗೆ ಜೊತೆಯಲ್ಲಿಯೇ ವಿಶೋಕತೆಯು ಇರಲಿ. ಮತ್ತು ಹೆಚ್ಚು ಭಕ್ತಿಯೂ ಕೇಶವನಲ್ಲಿರಲಿ. ಈ ಮಂತ್ರದಿಂದ ಗುಡಧೇನುಸಹಿತವಾದ ಹಾಸಿಗೆಯನ್ನು ದಾನಮಾಡಬೇಕು. ಲಕ್ಷ್ಮಿಯೊಡನೆ ಸೂರ್ಯನನ್ನು ದಾನಮಾಡಿದರೆ ಐಶ್ವರ್ಯವು ಬರುತ್ತದೆ.

೫೦. ಕನ್ನೈದಿಲೆ, ಕಣಗಿಲೆ, ದಾಸವಾಳ, ಕುಂಕುಮದ ಹೂ, ತಾಳೆ, ಲಕ್ಕಿ, ಮಲ್ಲಿಗೆ, ಪಾದರಿ, ಕದಂಬ, ಕುಬ್ಜಕ, ಜಾಜೀ ಇವು ಯಾವಾಗಲೂ ಪೂಜೆಗೆ ಪವಿತ್ರವಾದುವು.

೫೧. ಭೀಷ್ಮನು ಕೇಳಿದನು :—ಎಲೈ ಋಷಿಯೇ, ಗುಡಧೇನುವಿನ ರೀತಿಯು ಏನೆಂಬುದನ್ನು ಹೇಳು. ಅದು ಹೇಗಿದೆ? ಯಾವ ಮಂತ್ರದಿಂದ ಕೊಡಬೇಕು? ಎಂಬುದನ್ನು ಹೇಳು.

॥ ಪುಲಸ್ತ್ಯ ಉವಾಚ ॥

ಗುಡಧೇನುವಿಧಾನಸ್ಯ ಯದ್ರೂಪಮಿಹ ಯತ್ಫಲಂ ।
ತದಿದಾನೀಂ ಪ್ರವಕ್ಷ್ಯಾಮಿ ಸರ್ವಪಾಪವಿನಾಶನಂ ॥ ೫೨ ॥

ಕೃಷ್ಣಾಜಿನಂ ಚತುರ್ಹಸ್ತಂ ಪ್ರಾಗ್ಗ್ರೀವಂ ವಿನ್ಯಸೇದ್ಭುವಿ ।
ಗೋಮಯೇನಾನುಲಿಪ್ತಾಯಾಂ ದರ್ಭಾನಾಸ್ತೀರ್ಯ ಸರ್ವತಃ ॥ ೫೩ ॥

ಲಘ್ವೇಣಕಾಜಿನಂ ತದ್ವದ್ವತ್ಸಸ್ಯ ಪರಿಕಲ್ಪಯೇತ್ ।
ಪ್ರಾಙ್ಮುಖೀಂ ಕಲ್ಪಯೇದ್ಧೇನುಂ ಮುದಾ ಗಾಂ ವಾ ಸವತ್ಸಕಾಂ ॥ ೫೪ ॥

ಉತ್ತಮಾ ಗುಡಧೇನುಸ್ಸ್ಯಾತ್ಸದಾ ಭಾರಚತುಷ್ಟಯಂ ।
ವತ್ಸಂ ಭಾರೇಣ ಕುರ್ವೀತ ಭಾರಾಭ್ಯಾಂ ಮಧ್ಯಮಾ ಸ್ಮೃತಾ ॥ ೫೫ ॥

ಅರ್ಧಭಾರೇಣ ವತ್ಸಸ್ಸ್ಯಾತ್ಕನಿಷ್ಠಾ ಭಾರಕೇಣ ತು ।
ಚತುರ್ಥಾಂಶೇನ ವತ್ಸಸ್ಸ್ಯಾದ್ಗೃಹವಿತ್ತಾನುಸಾರತಃ ॥ ೫೬ ॥

---

೫೨. ಪುಲಸ್ತ್ಯನು ಹೇಳಿದನು:—ಗುಡಧೇನುವು ಹೇಗಿರಬೇಕು? ಅದರ ಫಲವೇನು? ಎಂಬುದನ್ನು ಈಗ ಹೇಳುತ್ತೇನೆ ಕೇಳು. ಅದು ಎಲ್ಲ ಪಾಪವನ್ನು ನಾಶಮಾಡುತ್ತದೆ.

೫೩-೫೪. ಕೆಳಗೆ ನೆಲವನ್ನು ಹಸುವಿನ ಸಗಣಿಯಿಂದ ಸಾರಿಸಿ, ಅದರ ಮೇಲೆಲ್ಲ ದರ್ಭೆಯನ್ನು ಹರವಿ, ಅದರ ಮೇಲೆ ನಾಲ್ಕು ಮೊಳದುದ್ದವಿರುವ ಕೃಷ್ಣಾಜಿನವನ್ನು ಪೂರ್ವಮುಖವಾಗಿ ಹಾಸಬೇಕು. ಅದರಂತೆಯೇ ಕರುವಿನ ಸ್ಥಾನದಲ್ಲಿ ಒಂದು ಚಿಕ್ಕ ಕೃಷ್ಣಾಜಿನವನ್ನು ಕರುವಿಗೋಸ್ಕರ ಹಾಸಬೇಕು. ಆ ಹಸುವೂ ಕರುವೂ ಪೂರ್ವಾಭಿಮುಖವಾಗಿರಬೇಕು.

೫೫-೫೬. ನಾಲ್ಕು ಮಣ ಚಿನ್ನದಿಂದ ಹಸುವನ್ನೂ ಒಂದು ಮಣದಿಂದ ಕರುವನ್ನೂ ಮಾಡಿಸಿದರೆ ಗುಡಧೇನು. ಇದು ಉತ್ತಮಪಕ್ಷ. ಎರಡು ಮಣದಿಂದ ಹಸು. ಅರ್ಧಮಣಕ್ಕೆ ಕರು ಇದು ಎರಡನೆಯ ಪಕ್ಷ. ಒಂದು ಮಣದಿಂದ ಹಸು, ಕಾಲುಮಣದಿಂದ ಕರು. ಇದು ಅಧಮಪಕ್ಷ. ಇದೇ ಗುಡಧೇನು. ಅವನವನ ಅನುಕೂಲಕ್ಕೆ ತಕ್ಕಂತೆ ಇರಬಹುದು. ಕರುವು ಹಸುವಿನ ನಾಲ್ಕರಲ್ಲೊಂದಂಶವಾಗಿರಬೇಕು.

ಧೇನುವತ್ಸೌ ತದಾ ತೌ ತು ಸಿತಸೂಕ್ಷ್ಮಾಂಬರಾವೃತೌ ।
ಶುಕ್ತಿಕರ್ಣಾವಿಕ್ಷುಪಾದೌ ಶುಚಿಮುಕ್ತಾಫಲೇಕ್ಷಣೌ ॥ ೫೭ ॥

ಸಿತಸೂತ್ರಶಿರಾನಾಳೌ ಸಿತಕಂಬಳಕಂಬಳೌ ।
ತಾಮ್ರಗಂಡಕಪೃಷ್ಠೌ ತೌ ಸಿತಚಾಮರರೋಮಕೌ ॥ ೫೮ ॥

ವಿದ್ರುಮಭ್ರೂಯುಗಾವೇತೌ ನವನೀತಸ್ತನಾವೃತೌ ।
ಕ್ಷೌಮಪುಚ್ಛೌ ಕಾಂಸ್ಯದೇಹಾವಿಂದ್ರನೀಲಕತಾರಕೌ ॥ ೫೯ ॥

ನಾನಾಫಲಸಮಾಯುಕ್ತೌ ಘ್ರಾಣಗಂಧಕರಂಡಕೌ ।
ಇತ್ಯೇವಂ ರಚಯಿತ್ವಾ ತು ಧೂಪದೀಪೈಸ್ಸಮರ್ಚಯೇತ್ ॥ ೬೦ ॥

ಯಾ ಲಕ್ಷ್ಮೀಸ್ಸರ್ವಭೂತಾನಾಂ ಯಾ ಚ ದೇವೇಷ್ವವಸ್ಥಿತಾ ।
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥ ೬೧ ॥

ವಿಷ್ಣೋರ್ವಕ್ಷಸಿ ಯಾ ಲಕ್ಷ್ಮೀಸ್ಸ್ವಾಹಾ ಯಾ ಚ ವಿಭಾವಸೋಃ ।
ಚಂದ್ರಾರ್ಕಶಕ್ರಶಕ್ತಿರ್ಯಾ ಧೇನುರೂಪಾ ಚ ಸಾ ಶುಭಾ ॥ ೬೨ ॥

---

೫೭—೬೦. ಹಸು ಕರುಗಳೆರಡಕ್ಕು ಒಳ್ಳೆಯ ಬಟ್ಟೆಯನ್ನುಡಿಸಬೇಕು. ಚಿಪ್ಪಿನ ಕಿವಿಗಳೂ, ಕಬ್ಬಿನ ಕಾಲುಗಳೂ, ಮುತ್ತಿನ ಕಣ್ಣುಗಳೂ, ಬಿಳಿಯ ನೂಲಿನ ನಾಡಿನರಗಳೂ, ಬಿಳಿಯ ಕಂಬಳಿಯ ಕೆಂದೊಗಲೂ, ತಾಮ್ರದ ದಾಟಿ ಮತ್ತು ಕುಂಡೆಗಳೂ, ಬಿಳಿಯ ಚಾಮರದ ರೋಮಗಳೂ, ಹವಳದ ಹುಬ್ಬುಗಳೂ, ಬೆಣ್ಣೆಯ ಮೊಲೆಗಳೂ, ರೇಷ್ಮೆಯ ಬಾಲವೂ, ಕಂಚಿನ ಕರೆಯುವ ಪಾತ್ರೆಯೂ, ಇಂದ್ರನೀಲದ ಕಣ್ಣಿನ ಗುಡ್ಡೆಗಳೂ, ಬಗೆಬಗೆಯ ಹಣ್ಣುಗಳೂ, ಗಂಧದ ಮೂಗೂ ಇರಬೇಕು. ಈರೀತಿ ಮಾಡಿ ಧೂಪದೀಪಗಳಿಂದ ಪೂಜಿಸಬೇಕು.

೬೧. ಎಲ್ಲಾ ಪ್ರಾಣಿಗಳಲ್ಲಿಯೂ ಎಲ್ಲಾ ದೇವತೆಗಳಲ್ಲಿಯೂ ಯಾವ ಲಕ್ಷ್ಮಿಯು ಇದ್ದಾಳೋ ಆ ಲಕ್ಷ್ಮಿಯು ಈ ಧೇನುರೂಪದಿಂದ ನನ್ನ ಪಾಪವನ್ನು ನಾಶಮಾಡಲಿ.

೬೨. ವಿಷ್ಣುವಿನ ಎದೆಯಲ್ಲಿ ಯಾವ ಲಕ್ಷ್ಮಿ ಇರುವಳೋ, ಅಗ್ನಿಯಲ್ಲಿ ಯಾವ ಸ್ವಾಹಾ ದೇವಿಯು ಇರುವಳೋ, ಚಂದ್ರ ಸೂರ್ಯ ಇಂದ್ರರಲ್ಲಿ ಯಾವ ಶಕ್ತಿ ಇರುವುದೋ, ಅವುಗಳ ರೂಪವಾದ ಈ ಧೇನುಲಕ್ಷ್ಮಿಯು ನನಗೆ ಎಡೆಬಿಡದಿರಲಿ.

ಚತುರ್ಮುಖಸ್ಯ ಯಾ ಲಕ್ಷ್ಮೀರ್ಯಾ ಲಕ್ಷ್ಮೀರ್ಧನದಸ್ಯ ಚ ।
ಲಕ್ಷ್ಮೀರ್ಯಾ ಲೋಕಪಾಲಾನಾಂ ಸಾ ಧೇನುರ್ವರದಾಸ್ತು ಮೇ ॥ ೬೩ ॥

ಸ್ವಧಾ ತ್ವಂ ಪಿತೃಮುಖ್ಯಾನಾಂ ಸ್ವಾಹಾ ಕ್ರತುಭುಜಾಂ ಯತಃ ।
ಸರ್ವಪಾಪಹರಾ ಧೇನುಸ್ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ೬೪ ॥

ಏವಮಾಮಂತ್ರ್ಯ ತಾಂ ಧೇನುಂ ಬ್ರಾಹ್ಮಣಾಯ ನಿವೇದಯೇತ್ ।
ವಿಧಾನಮೇತದ್ಧೇನೂನಾಂ ಸರ್ವಾಸಾಮಪಿ ಪಠ್ಯತೇ ॥ ೬೫ ॥

ಯಾಸ್ತು ಪಾಪವಿನಾಶಿನ್ಯಃ ಪಠ್ಯಂತೇ ದಶ ಧೇನವಃ ।
ತಾಸಾಂ ಸ್ವರೂಪಂ ವಕ್ಷ್ಯಾಮಿ ನಾಮಾನಿ ಚ ನರಾಧಿಪ ॥ ೬೬ ॥

ಪ್ರಥಮಾ ಗುಡಧೇನುಸ್ಸ್ಯಾದ್ಘೃತಧೇನುರಥಾಪರಾ ।
ತಿಲಧೇನುಸ್ತೃತೀಯಾ ತು ಚತುರ್ಥೀ ಜಲನಾಮಿಕಾ ॥ ೬೭ ॥

ಕ್ಷೀರಧೇನುಶ್ಚ ವಿಖ್ಯಾತಾ ಮಧುಧೇನುಸ್ತಥಾಪರಾ ।
ಸಪ್ತಮೀ ಶರ್ಕರಾಧೇನುರಷ್ಟಮೀ ಲವಣಸ್ಯ ತು ॥ ೬೮ ॥

---

೬೩. ಬ್ರಹ್ಮನಲ್ಲಿರುವ ಲಕ್ಷ್ಮಿಯೂ, ಕುಬೇರನಲ್ಲಿರುವ ಲಕ್ಷ್ಮಿಯೂ, ಲೋಕಪಾಲಕರಲ್ಲಿರುವ ಲಕ್ಷ್ಮಿಯೂ ಧೇನುರೂಪದಲ್ಲಿರುವ ಲಕ್ಷ್ಮಿಯೂ ನನಗೆ ವರವನ್ನು ಕೊಡಲಿ.

೬೪. ಪಿತೃಗಳಿಗೆ ಸ್ವಧಾರೂಪವಾದ, ದೇವತೆಗಳಿಗೆ ಸ್ವಾಹಾರೂಪವಾದ, ಸರ್ವ ಪಾಪಗಳನ್ನೂ ನಾಶಮಾಡುವ ಈ ಧೇನುರೂಪ ಲಕ್ಷ್ಮಿಯು ನನಗೆ ಪ್ರಸನ್ನಳಾಗಲಿ

೬೫. ಈರೀತಿ ಆ ಧೇನುವಿಗೆ ಹೇಳಿ ಬ್ರಾಹ್ಮಣನಿಗೆ ಕೊಡಬೇಕು. ಎಲ್ಲಾ ಧೇನುವಿಗೂ ಇದೇ ಕ್ರಮವೆಂದು ತಿಳಿಯಬೇಕು.

೬೬. ಪಾಪವನ್ನು ಹಾಳುಮಾಡುವ ಇನ್ನೂ ಯಾವ ಧೇನುಗಳಿವೆಯೋ ಅವೆಲ್ಲದರ ಹೆಸರನ್ನೂ ಸ್ವರೂಪವನ್ನೂ ಹೇಳುತ್ತೇನೆ. ಕೇಳು.

೬೭—೬೯. ಗುಡಧೇನು, ಘೃತಧೇನು, ತಿಲಧೇನು, ಜಲಧೇನು, ಕ್ಷೀರ ಧೇನು, ಮಧುಧೇನು, ಶರ್ಕರಾಧೇನು, ಲವಣಧೇನು, ರಸಧೇನು, ಹಸುರೂಪವಾದ

**ರಸಧೇನುಶ್ಚ ನವಮೀ ದಶಮೀ ಸ್ಯಾತ್ಸ್ವರೂಪತಃ ।**
**ಕುಂಭಾಃ ಸ್ಯೂ ರಸಧೇನೂನಾಂ ಗುಡಾದೀನಾಂ ತು ರಾಶಯಃ ॥ ೬೯ ॥**

**ಸುವರ್ಣಧೇನುಂ ಚಾಪ್ಯತ್ರ ಕೇಚಿದಿಚ್ಛಂತಿ ಮಾನವಾಃ ।**
**ನವನೀತೇನ ತೈಲೈಶ್ಚ ತಥಾನ್ಯೇ ಚ ಮಹರ್ಷಯಃ ॥ ೭೦ ॥**

**ಏತದೇವ ವಿಧಾನಂ ಸ್ಯಾತ್ತ ಏವೋಪಸ್ಕರಾಸ್ಸ್ಮೃತಾಃ ।**
**ಮಂತ್ರಾವಾಹನಸಂಯುಕ್ತಾಸ್ಸದಾ ಪರ್ವಣಿ ಪರ್ವಣಿ ॥ ೭೧ ॥**

**ಯಥಾಶ್ರದ್ಧಂ ಪ್ರದಾತವ್ಯಾ ಭುಕ್ತಿಮುಕ್ತಿಫಲಪ್ರದಾಃ ।**
**ಗುಡಧೇನುಪ್ರಸಂಗೇನ ಸರ್ವಾಸ್ತವ ಮಯೋದಿತಾಃ ॥ ೭೨ ॥**

**ಅಶೇಷಯಜ್ಞಫಲದಾಸ್ಸರ್ವಪಾಪಹರಾಶ್ಶುಭಾಃ ।**
**ವ್ರತಾನಾಮುತ್ತಮಂ ಯಸ್ಮಾದ್ವಿಶೋಕದ್ವಾದಶೀವ್ರತಂ ॥ ೭೩ ॥**

---

ಧೇನು, ಎಂಬುದಾಗಿ ಹತ್ತುಬಗೆಯ ಧೇನುಗಳು. ಈ ಧೇನುಗಳಿಗೆ ಆಯಾ ಪದಾರ್ಥಗಳ ರಾಶಿಗಳೇ ಆಗಿವೆ. ರಸಧೇನುವಿಗೆ ರಸದ ಕುಂಭವಾಗಿರುತ್ತದೆ.

೭೦-೭೧. ಕೆಲವರು ಇದೇರೀತಿ ಸುವರ್ಣಧೇನುವೂ ಉಂಟೆಂದು ಹೇಳುತ್ತಾರೆ. ಅಲ್ಲದೆ ನವನೀತ (ಬೆಣ್ಣೆ) ತೈಲ (ಎಣ್ಣೆ) ಈ ಧೇನುಗಳನ್ನೂ ಹೇಳುತ್ತಾರೆ. ಒಂದಕ್ಕೆ ಹೇಳಿದ ರೀತಿಯ ಸಾಮಾನುಗಳೇ ಎಲ್ಲಕ್ಕೂ ಇರುತ್ತವೆ. ಇವುಗಳನ್ನು ಮಾಡಬೇಕಾದರೆ ಪರ್ವದಿನಗಳಲ್ಲಿ ಮಾಡಬೇಕು. ಮಂತ್ರದಿಂದ ಆವಾಹನಾದಿಗಳನ್ನು ಮಾಡಬೇಕು.

೭೨. ಇದನ್ನು ಶ್ರದ್ಧೆಯಿಂದ ದಾನಮಾಡಿದರೆ ಭುಕ್ತಿಯೂ ಮುಕ್ತಿಯೂ ಸಿಕ್ಕುತ್ತದೆ. ಗುಡಧೇನು ಪ್ರಸಂಗದಿಂದ ಎಲ್ಲವನ್ನೂ ಹೇಳಿದ್ದೇನೆ.

೭೩. ಇವೆಲ್ಲವೂ ಎಲ್ಲ ಯಜ್ಞಗಳ ಫಲವನ್ನು ಕೊಡುತ್ತವೆ. ಪಾಪವೆಲ್ಲವನ್ನೂ ನಾಶಮಾಡುತ್ತವೆ. ಕಲ್ಯಾಣಕರಗಳು. ವಿಶೋಕದ್ವಾದಶೀವ್ರತವು, ವ್ರತಗಳೊಳಗೆಲ್ಲಾ ಉತ್ತಮವಾದುದು. ಅದರ ಅಂಗವಾಗಿ ಈ ಗುಡಧೇನುವು ಹೇಳಲ್ಪಟ್ಟಿದೆ.

**ತದಂಗತ್ವೇನ ಚೈವಾತ್ರ ಗುಡಧೇನುಃ ಪ್ರಶಸ್ಯತೇ ।**
**ಅಯನೇ ವಿಷುವೇ ಪುಣ್ಯೇ ವ್ಯತೀಪಾತೇಷು ವಾ ಪುನಃ ॥ ೭೪ ॥**

**ಗುಡಧೇನ್ವಾದಯೋ ದೇಯಾ ಉಪರಾಗಾದಿಪರ್ವಸು ।**
**ವಿಶೋಕದ್ವಾದಶೀ ಚೈಷಾ ಸರ್ವಪಾಪಹರಾ ಶುಭಾ ॥ ೭೫ ॥**

**ಯಾಮುಪೋಷ್ಯ ನರೋ ಯಾತಿ ತದ್ವಿಷ್ಣೋಃ ಪರಮಂ ಪದಂ ।**
**ಇಹ ಲೋಕೇ ಸ ಸೌಭಾಗ್ಯಮಾಯುರಾರೋಗ್ಯಮೇವ ಚ ॥ ೭೬ ॥**

**ವೈಷ್ಣವಂ ಪುರಮಾಪ್ನೋತಿ ಮರಣೇ ಸ್ಮರಣಂ ಹರೇಃ ।**
**ದಶಾರ್ಬುದಸಹಸ್ರಾಣಿ ದಶ ವಾಷ್ಟೌ ಚ ಧರ್ಮವಿತ್ ॥ ೭೭ ॥**

**ನ ಶೋಕದುಃಖದೌರ್ಗತ್ಯಂ ತಸ್ಯ ಸಂಜಾಯತೇ ನೃಪ ।**
**ನಾರೀ ವಾ ಕುರುತೇ ಯಾ ತು ವಿಶೋಕದ್ವಾದಶೀಮಿಮಾಂ ॥ ೭೮ ॥**

**ನೃತ್ಯಗೀತಪರಾ ನಿತ್ಯಂ ಸಾಪಿ ತತ್ಫಲಮಾಪ್ನುಯಾತ್ ।**
**ಯಸ್ಮಾದಗ್ರೇ ಹರೇರ್ನಿತ್ಯಮನಂತಂ ಗೀತವಾದಿತಂ ॥ ೭೯ ॥**

---

೭೪-೭೫. ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು, ವಿಷುವತ್ಪುಣ್ಯಕಾಲ, ವ್ಯತೀಪಾತ, ಗ್ರಹಣಗಳು, ಇಂತಹ ಪರ್ವಗಳಲ್ಲಿ ಈ ದಾನಗಳನ್ನು ಮಾಡಬೇಕು. ಈ ವಿಶೋಕದ್ವಾದಶೀವ್ರತವು ಪಾಪಹರವು. ಮಂಗಳಪ್ರದವು

೭೬. ಈ ವಿಶೋಕದ್ವಾದಶಿಯಲ್ಲಿ ಉಪವಾಸಮಾಡಿ ದಾನಕೊಟ್ಟರೆ ವೈಕುಂಠ ಪ್ರಾಪ್ತಿಯಾಗುತ್ತದೆ. ಈ ಲೋಕದಲ್ಲಿ ಸೌಭಾಗ್ಯ, ಆಯುಸ್ಸು, ಆರೋಗ್ಯಗಳನ್ನು ಹೊಂದುತ್ತಾನೆ. ವೈಷ್ಣವಲೋಕವನ್ನು ಹೊಂದುತ್ತಾನೆ. ಮರಣಕಾಲದಲ್ಲಿ ವಿಷ್ಣುವಿನ ಸ್ಮರಣೆ ಬರುತ್ತದೆ.

೭೭. ಹತ್ತು ಅರ್ಬುದಸಾವಿರ ವರ್ಷಗಳ ಅಥವಾ ಹದಿನೆಂಟು ಅರ್ಬುದ ಸಾವಿರ ವರ್ಷಗಳವರೆಗೂ ಈತನು ದುಃಖ ಶೋಕ ಕೀಳು ಸ್ಥಿತಿಗಳನ್ನು ಹೊಂದುವುದೇ ಇಲ್ಲ.

೭೮-೭೯. ಗಂಡಸಾಗಲೀ ಹೆಂಗಸಾಗಲೀ ಈ ವಿಶೋಕದ್ವಾದಶೀವ್ರತವನ್ನು ಮಾಡಿ ನೃತ್ಯಗೀತಗಳನ್ನು ಆ ಸ್ವಾಮಿಯ ಎದುರಿಗೆ ಮಾಡಿದರೆ ಅನಂತಫಲವನ್ನು ಹೊಂದುತ್ತಾರೆ.

ಇತಿ ಪಠತಿ ಯ ಇತ್ಥಂ ಯಶ್ಶೃಣೋತೀಹ ಸಮ್ಯ-
ಙ್ಮಧುಮುರನರಕಾರೇರರ್ಚನಂ ವಾಥ ಪಶ್ಯೇತ್ ।
ಮತಿಮಪಿ ಚ ಜನಾನಾಂ ಯೋ ದದಾತೀಂದ್ರಲೋಕೇ
ವಸತಿ ಚ ವಿಬುಧೌಘೈಃ ಪೂಜ್ಯತೇ ಕಲ್ಪಮೇಕಂ ॥ ೮೦ ॥

॥ ಭೀಷ್ಮ ಉವಾಚ ॥

ಭಗವನ್ಶ್ರೋತುಮಿಚ್ಛಾಮಿ ದಾನಮಾಹಾತ್ಮ್ಯಮುತ್ತಮಂ ।
ಯದಕ್ಷಯಂ ಪರೇ ಲೋಕೇ ದೇವರ್ಷಿಗಣಪೂಜಿತಂ ॥ ೮೧ ॥

॥ ಪುಲಸ್ತ್ಯ ಉವಾಚ ॥

ಮೇರೋಃ ಪ್ರದಾನಂ ವಕ್ಷ್ಯಾಮಿ ದಶಧಾ ನೃಪಸತ್ತಮ ।
ಯತ್ಪ್ರದಾತಾನಂತಲೋಕಾನಾಪ್ನೋತಿ ಸುರಪೂಜಿತಾನ್ ॥ ೮೨ ॥

ಪುರಾಣೇಷು ಚ ವೇದೇಷು ಯಜ್ಞೇಷ್ವಾಯತನೇಷು ಚ ।
ನ ತತ್ಫಲಮಧೀತೇಷು ಕೃತೇಷ್ವಿಹ ಯದಶ್ನುತೇ ॥ ೮೩ ॥

---

೮೦. ಇದನ್ನು ಕೇಳುವವನು, ಓದುವವನು, ಶ್ರೀಕೃಷ್ಣನ ಅರ್ಚನೆಯನ್ನು ನೋಡುವವನು, ಈರೀತಿ ಮಾಡಲು ಜನರಿಗೆ ಬೋಧಿಸುವವನು ಇವರೆಲ್ಲರೂ ಇಂದ್ರ ಲೋಕದಲ್ಲಿ ದೇವತೆಗಳಿಂದ ಪೂಜಿಸಲ್ಪಡುತ್ತ ಒಂದು ಕಲ್ಪದವರೆಗೂ ಇರುತ್ತಾರೆ.

೮೧. ಭೀಷ್ಮನು ಹೇಳಿದನು:—ಸ್ವಾಮಿ, ಪರಲೋಕದಲ್ಲಿ ಅಕ್ಷಯಫಲವನ್ನು ಕೊಡುವ, ದೇವತೆ ಋಷಿಗಳಿಂದ ಪೂಜಿತವಾದ ದಾನಮಹಿಮೆಯನ್ನು ಕೇಳಲು ಇಚ್ಛಿಸುತ್ತೇನೆ, ಹೇಳು.

೮೨. ಪುಲಸ್ತ್ಯನು ಹೇಳಿದನು :—ಮೇರುದಾನವನ್ನು ಹೇಳುತ್ತೇನೆ. ಅದು ಹತ್ತು ಬಗೆಯಾಗಿದೆ. ಅದನ್ನು ದಾನಮಾಡಿದವನು ದೇವತೆಗಳಿಂದ ಪೂಜಿತವಾದ ಅನೇಕ ಲೋಕಗಳನ್ನು ಹೊಂದುತ್ತಾನೆ.

೮೩. ಪುರಾಣ ವೇದಗಳನ್ನು ಓದಿದರೂ, ಯಾಗಗಳನ್ನು ಮಾಡಿದರೂ, ದೇವಸ್ಥಾನಗಳನ್ನು ಕಟ್ಟಿದರೂ ಆ ಫಲವು ಬರುವುದಿಲ್ಲ.

ತಸ್ಮಾದ್ದಾನಂ ಪ್ರವಕ್ಷ್ಯಾಮಿ ಪರ್ವತಾನಾಮನುಕ್ರಮಾತ್ ।
ಪ್ರಥಮೋ ಧಾನ್ಯಶೈಲಸ್ಸ್ಯಾದ್ದ್ವಿತೀಯೋ ಲವಣಾಚಲಃ ॥ ೮೪ ॥

ಗುಡಾಚಲಸ್ತೃತೀಯಸ್ತು ಚತುರ್ಥೋ ಹೇಮಪರ್ವತಃ ।
ಪಂಚಮಸ್ತಿಲಶೈಲಶ್ಚ ಷಷ್ಠಃ ಕಾರ್ಪಾಸ ಏವ ಚ ॥ ೮೫ ॥

ಸಪ್ತಮೋ ಘೃತಶೈಲಸ್ಸ್ಯಾದ್ರತ್ನಶೈಲಸ್ತಥಾಷ್ಟಮಃ ।
ರಾಜತೋ ನವಮಸ್ತದ್ವದ್ದಶಮಃ ಶರ್ಕರಾಚಲಃ ॥ ೮೬ ॥

ವಕ್ಷ್ಯೇ ವಿಧಾನಮೇತೇಷಾಂ ಯಥಾವದನುಪೂರ್ವಶಃ ।
ಅಯನೇ ವಿಷುವೇ ಪುಣ್ಯೇ ವ್ಯತೀಪಾತೇ ದಿನಕ್ಷಯೇ ॥ ೮೭ ॥

ಶುಕ್ಲಪಕ್ಷೇ ತೃತೀಯಾಯಾಮುಪರಾಗೇ ಶಶಿಕ್ಷಯೇ ।
ವಿವಾಹೋತ್ಸವಯಜ್ಞೇಷು ದ್ವಾದಶ್ಯಾಮಥವಾ ಪುನಃ ॥ ೮೮ ॥

ಶುಕ್ಲಾಯಾಂ ಪಂಚದಶ್ಯಾಂ ವಾ ಪುಣ್ಯರ್ಕ್ಷೇ ವಾ ವಿಧಾನತಃ ।
ಧಾನ್ಯಶೈಲಾದಯೋ ದೇಯಾಃ ಕಾರ್ತಿಕ್ಯಾಂ ಜ್ಯೇಷ್ಠಪುಷ್ಕರೇ ॥ ೮೯ ॥

ತೀರ್ಥೇಷ್ವಾಯತನೇ ಚಾಪಿ ಗೋಷ್ಠೇ ವಾ ಭವನಾಂಗಣೇ ।
ಮಂಡಪಂ ಕಾರಯೇದ್ಭಕ್ತ್ಯಾ ಚತುರಶ್ರಮುದಙ್ಮುಖಂ ॥ ೯೦ ॥

---

೮೪—೮೬. ಆದ್ದರಿಂದ ದಾನಗಳನ್ನು ಕ್ರಮವಾಗಿ ಹೇಳುತ್ತೇನೆ ಕೇಳು. ಧಾನ್ಯಶೈಲ, ಲವಣಾಚಲ, ಗುಡಾಚಲ, ಹೇಮಪರ್ವತ, ತಿಲಶೈಲ, ಕಾರ್ಪಾಸ (ಹತ್ತಿ) ಶೈಲ, ಘೃತಶೈಲ, ರತ್ನಶೈಲ, ರಜತ (ಬೆಳ್ಳಿ) ಶೈಲ, ಶರ್ಕರಾಚಲ ಎಂದು ಹತ್ತು ಬಗೆಯಾಗಿವೆ.

೮೭—೮೯. ಇವುಗಳ ವಿಧಾನವನ್ನು ಕ್ರಮವಾಗಿ ಹೇಳುತ್ತೇನೆ. ಕರ್ಕಾಟಕ, ಮಕರಸಂಕ್ರಮಣಗಳು, ವಿಷುವತ್ಪುಣ್ಯಕಾಲ, ವ್ಯತೀಪಾತ, ಅಮಾವಾಸ್ಯೆ, ಶುಕ್ಲಪಕ್ಷ, ತೃತೀಯೆ, ಸೂರ್ಯಚಂದ್ರಗ್ರಹಣಗಳು, ತಿಥಿಕ್ಷಯ, ಮದುವೆ, ಉತ್ಸವ, ಯಜ್ಞ, ದ್ವಾದಶಿ, ಪೂರ್ಣಿಮೆ, ಪುಣ್ಯನಕ್ಷತ್ರ ಇವುಗಳಲ್ಲಿ ಧಾನ್ಯಶೈಲಾದಿಗಳನ್ನೂ ದಾನಮಾಡಬೇಕು. ಕಾರ್ತಿಕದಲ್ಲಿ ಜ್ಯೇಷ್ಠಪುಷ್ಕರದಲ್ಲಿ ಮಾಡಿದರೆ ವಿಶೇಷವು.

೯೦-೯೧. ತೀರ್ಥಗಳಲ್ಲಾಗಲೀ, ದೇವಸ್ಥಾನಗಳಲ್ಲಾಗಲೀ, ದನಗಳ ಕೊಟ್ಟಿಗೆಯಲ್ಲಾಗಲೀ, ಮನೆಯ ಅಂಗಳದಲ್ಲಾಗಲೀ, ಮಂಡಪವನ್ನು ಮಾಡಬೇಕು. ಅದು

**ಪ್ರಾಗುದಕ್ಪ್ರವಣಂ ಪುಣ್ಯಂ ಪ್ರಾಙ್ಮುಖಂ ವಾ ವಿಧಾನತಃ ।**
**ಗೋಮಯೇನಾನುಲಿಪ್ತಾಯಾಂ ಭೂಮಾವಾಸ್ತೀರ್ಯ ವೈ ಕುಶಾನ್** ॥ ೯೧ ॥

**ತನ್ಮಧ್ಯೇ ಪರ್ವತಂ ಕುರ್ಯಾದ್ವಿಷ್ಕಂಭಪರ್ವತಾನ್ವಿತಂ ।**
**ಧಾನ್ಯದ್ರೋಣಸಹಸ್ರೇಣ ಭವೇದ್ಗಿರಿರಿಹೋತ್ತಮಃ ॥**
**ಮಧ್ಯಮಃ ಪಂಚಶತಕೈಃ ಕನಿಷ್ಠಸ್ಸ್ಯಾತ್ತ್ರಿಭಿಶ್ಶತೈಃ** ॥ ೯೨ ॥

**ಮೇರುರ್ಮಹಾವ್ರೀಹಿಮಯಸ್ಸಮಂತಾ-**
**ತ್ಸುವರ್ಣವೃಕ್ಷತ್ರಯಸಂಯುತಸ್ಸ್ಯಾತ್ ।**
**ಮೂರ್ಧನ್ಯವಸ್ಥಾನಮಥಾಂಬರೇಣ**
**ಕಾರ್ಯಂ ತ್ವನೇಕಂ ಚ ಪುನರ್ದ್ವಿಜಾದ್ಯೈಃ** ॥ ೯೩ ॥

**ಚತ್ವಾರಿ ಶೃಂಗಾಣಿ ಚ ರಾಜತಾನಿ**
**ನಿತಂಬಭಾಗೇಷ್ವಪಿ ರಾಜತಂ ಸ್ಯಾತ್ ।**
**ಪೂರ್ವೇಣ ಮುಕ್ತಾಫಲ ವಜ್ರಯುಕ್ತೋ**
**ಯಾಮ್ಯೇನ ಗೋಮೇದಕಪುಷ್ಪರಾಗೈಃ** ॥ ೯೪ ॥

---

ಉತ್ತರಮುಖವಾಗಿಯಾಗಲೀ, ಪೂರ್ವಮುಖವಾಗಿಯಾಗಲೀ, ಮನೆಗೆ ಇರಬೇಕು. ಆ ಮಂಡಪವು ನಾಲ್ಕು ಮೂಲೆಯುಳ್ಳದ್ದಾಗಿರಬೇಕು. ಆ ಜಾಗದಲ್ಲಿ ಪೂರ್ವ ಮುಖಕ್ಕೆ ಹಸುವಿನ ಸಗಣಿಯಿಂದ ಸಾರಿಸಿ ಅದರ ಮೇಲೆ ದರ್ಭೆಗಳನ್ನು ಹರವ ಬೇಕು.

೯೨. ಅದರ ಮಧ್ಯದಲ್ಲಿ ದುಂಡಗೆ ರಾಶಿಯ ರೂಪದಲ್ಲಿ ಪರ್ವತವನ್ನು ಹಾಕ ಬೇಕು. ಧಾನ್ಯಗಳಾದರೆ ಸಾವಿರ ಕೊಳಗಗಳಾದರೆ ಉತ್ತಮಶೈಲ. ಐನೂರು ಕೊಳಗವು ಮಧ್ಯಮವು. ಮುನ್ನೂರು ಕೊಳಗವಾದರೆ ಅಧಮ.

೯೩. ಬತ್ತದ ಮೇರುವಾದರೆ ಅದರ ಸುತ್ತಲೂ ಮೂರು ಚಿನ್ನದ ಮರ ಗಳಿರಬೇಕು. ತಲೆಯ ಮೇಲೆ ಬಟ್ಟೆಗಳನ್ನು ಹೊದ್ದಿಸಿರಬೇಕು. ಇದು ವ್ರೀಹಿಮೇರು.

೯೪-೯೫. ಬೆಳ್ಳಿಯಲ್ಲಿ ನಾಲ್ಕು ಶಿಖರಗಳಿರಬೇಕು. ತಪ್ಪಲಿನಲ್ಲಿಯೂ ಬೆಳ್ಳಿ ಯದಾಗಿರಬೇಕು. ಪೂರ್ವಭಾಗದಲ್ಲಿ ಮುತ್ತುವಜ್ರಗಳಿರಬೇಕು. ದಕ್ಷಿಣಕ್ಕೆ ಗೋಮೇದ-ಪುಷ್ಯರಾಗಗಳಿರಬೇಕು. ಪಶ್ಚಿಮಕ್ಕೆ ಗಾರುತ್ಮಕ ನೀಲರತ್ನಗಳಿರಬೇಕು.

ಪಶ್ಚಾಚ್ಚ ಗಾರುತ್ಮತನೀಲರತ್ನೈ
ಸ್ಸೌಮ್ಯೇನ ವೈಢೂರ್ಯಸರೋಜರಾಗೈಃ ।
ಶ್ರೀಖಂಡಖಂಡೈ ರುಚಿರಪ್ರವಾಳೈ-
ರ್ಯತಾನ್ವಿತಶ್ಶುಕ್ತಿಶಿಲಾತಲಸ್ಸ್ಯಾತ್ ॥ ೯೫ ॥

ಬ್ರಹ್ಮಾಥ ವಿಷ್ಣುರ್ಭಗವಾನ್ಮುರಾರಿ-
ರ್ದಿವಾಕರೋಽಪ್ಯತ್ರ ಹಿರಣ್ಮಯಸ್ಸ್ಯಾತ್ ।
ತಥೇಕ್ಷುವಂಶಾವೃತಕಂದರಸ್ತು
ಘೃತೋದಕಪ್ರಸ್ರವಣಶ್ಚ ದಿಕ್ಷು ॥ ೯೬ ॥

ಶುಕ್ಲಾಂಬರಾಣ್ಯಂಬುಧರಾವಳಿಃ ಸ್ಯಾ-
ತ್ಪೂರ್ವೇಣ ಪೀತಾನಿ ಚ ದಕ್ಷಿಣೇನ ।
ವಾಸಾಂಸಿ ಪಶ್ಚಾದಥ ಕರ್ಬುರಾಣಿ
ರತ್ನಾನಿ ಚೈವೋತ್ತರತೋ ಘನಾನಿ ॥ ೯೭ ॥

ರೌಪ್ಯಾನ್ಮಹೇಂದ್ರಪ್ರಮುಖಾಂಸ್ತಥಾಷ್ಟೌ
ಸಂಸ್ಥಾಪ್ಯ ಲೋಕಾಧಿಪತೀನ್ಕ್ರಮೇಣ ।
ನಾನಾಫಲಾದೀನಿ ಸಮಂತತಃ ಸ್ಯಾ-
ನ್ಮನೋರಮಂ ಮಾಲ್ಯವಿಲೇಪನಂ ಚ ॥ ೯೮ ॥

---

ಉತ್ತರಕ್ಕೆ ವೈಡೂರ್ಯ ವಜ್ರಗಳಿರಬೇಕು. ಚಂದನದ ಖಂಡಗಳೂ ಹವಳದ ಬಳ್ಳಿಗಳೂ ಇರಬೇಕು. ಒಳಭಾಗವು ಮುತ್ತಿನಚಿಪ್ಪಿನಿಂದ ಕೂಡಿರಬೇಕು.

೯೬-೯೭. ಬ್ರಹ್ಮ, ವಿಷ್ಣು, ರುದ್ರ, ಸೂರ್ಯ ಈ ಪ್ರತಿಮೆಗಳು ಚಿನ್ನದವುಗಳಾಗಿರಬೇಕು. ಗುಹೆಗಳನ್ನು ಕಬ್ಬಿನ ಜಲ್ಲೆಗಳಿಂದ ಮಾಡಿರಬೇಕು. ಅದರಲ್ಲಿ ತುಪ್ಪವೇ ನೀರಿನಂತೆ ಸ್ರವಿಸುತ್ತಿರಬೇಕು. ಬಿಳಿಯ ಬಟ್ಟೆಗಳು ಮೇಘಪಙ್ಕ್ತಿಯಾಗಿರಬೇಕು. ಮತ್ತು ಬಿಳಿಮುಕಪ್ಪು ಸೇರಿರುವ ಬೂದುಬಟ್ಟೆಯೂ ಮೇಘವಾಗಿರಬೇಕು. ಉತ್ತರದಲ್ಲಿ ರತ್ನಗಳನ್ನು ಹಾಕಿ ಮೇಘಗಳನ್ನು ಮಾಡಿರಬೇಕು.

೯೮-೯೯. ಬೆಳ್ಳಿಯಲ್ಲಿ ಅಷ್ಟದಿಕ್ಪಾಲಕರನ್ನು ಮಾಡಿಸಿಡಬೇಕು. ಸುತ್ತಲೂ ನಾನಾ ಫಲಗಳಿರಬೇಕು. ಮತ್ತು ಹೂಗಂಧಗಳಿರಬೇಕು. ಮೇಲುಗಡೆ ಐದು

ವಿತಾನಕಂ ಚೋಪರಿ ಪಂಚವರ್ಣ-
ಮಮ್ಲಾನಪುಷ್ಪಾಭರಣಂ ಸಿತಂ ಚ ।
ಇತ್ಥಂ ನಿವೇಶ್ಯಾಮರಶೈಲಮಗ್ರ್ಯಂ
ಮೇರೋಸ್ತು ವಿಷ್ಕಂಭಗಿರಿಂ ಕ್ರಮೇಣ　　　　॥ ೯೯ ॥

ತುರೀಯಭಾಗೇನ ಚತುರ್ದಿಶಂ ತು
ಸಂಸ್ಥಾಪಯೇತ್ಪುಷ್ಪವಿಲೇಪನಾಢ್ಯಂ ।
ಪೂರ್ವೇಣ ಮಂದರಮನೇಕಫಲೈಶ್ಚ ಯುಕ್ತಂ
ಧಾನ್ಯೈರ್ಗಣೈಃ ಕನಕಭದ್ರಕದಂಬಯುಕ್ತಂ　　　　॥ ೧೦೦ ॥

ಕಾಮೇನ ಕಾಂಚನಮಯೇನ ವಿರಾಜಮಾನ-
ಮಾಕಾರಯೇತ್ಕುಸುಮವಸ್ತ್ರವಿಲೇಪನಾಢ್ಯಂ ।
ತತಸ್ತು ತಂ ಕಾಂಚನವದ್ವಿರಾಜಿತಂ
ತಂ ಕಾರಯೇತ್ಕುಂಕುಮಲೇಪನಾಢ್ಯಂ　　　　॥ ೧೦೧ ॥

ಕ್ಷೀರಾರುಣೋದಸರಸಾಥ ವನೇನ ಚೈವ
ರೌಪ್ಯೇಣ ಶಕ್ತಿಘಟಿತೇನ ವಿರಾಜಮಾನಂ ।

---

ಬಣ್ಣದ ಮೇಲ್ಕಟ್ಟಿರಬೇಕು. ಅದಕ್ಕೆ ಹೂವನ್ನು ಕಟ್ಟಿರಬೇಕು. ಈರೀತಿ ಮೇರುವನ್ನು ಮಾಡಿ ಸುತ್ತಲೂ ಉಪಪರ್ವತಗಳನ್ನು ಮಾಡಿರಬೇಕು.

೧೦೦—೧೦೩. ಈ ಶೈಲದ ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ಕನೇ ಒಂದುಭಾಗದಷ್ಟು ಚಿಕ್ಕದಾಗಿರುವಂತೆ ಸಣ್ಣ ಪರ್ವತಗಳನ್ನು ಮಾಡಬೇಕು. ಅವುಗಳಲ್ಲಿ ಹೂ ಗಂಧಗಳಿರಬೇಕು. ಹೇಗೆಂದರೆ ಆ ಮೇರುವಿನ ಪೂರ್ವಕ್ಕೆ ಮಂದರ ಪರ್ವತವನ್ನು ಮಾಡಬೇಕು. ಇದು ಅನೇಕ ಫಲಗಳಿಂದ ಕೂಡಿರಬೇಕು. ಧಾನ್ಯಗಳನ್ನು ಹಾಕಿರಬೇಕು. ಚಿನ್ನದ ಕಮಲಗಳಿರಬೇಕು. ಚಿನ್ನದ ಕಾಮನನ್ನು ಮಾಡಿಸಬೇಕು. ಆ ಕಾಮನಿಗೆ ಹೂ ಗಂಧಗಳಿಂದ ಅಲಂಕರಿಸಬೇಕು. ಅದಕ್ಕೆ ಬೇಕಾದ ಚಿನ್ನದ ಒಡವೆಗಳನ್ನು ಹಾಕಿ ಅಲಂಕರಿಸಬೇಕು. ಅದರ ಬಳಿ ಹಾಲು ನೀರಿನಿಂದ ಕೂಡಿದ ಸರೋವರಗಳನ್ನು ಮಾಡಿರಬೇಕು. ಬೆಳ್ಳಿಯ ವನವನ್ನು ಮಾಡಿರಬೇಕು. ಅದರಲ್ಲಿ ಶಕ್ತಿದೇವತೆಯನ್ನು ಇಟ್ಟಿರಬೇಕು. ದಕ್ಷಿಣಕ್ಕೆ ಗಂಧಮಾದನ ಪರ್ವತವನ್ನು ಮಾಡಿರಬೇಕು. ಅದನ್ನು ಗೋಧಿಯಿಂದ ಮಾಡಬೇಕು.

ಯಾಮ್ಯೇನ ಗಂಧಮದನೋತ್ರ ನಿವೇಶನೀಯೋ
ಗೋಧೂಮಸಂಚಯಮಯಃ ಕಲಧೌತವಾಂಶ್ಚ ॥ ೧೦೨ ॥

ಹೈಮೇನ ಯಕ್ಷಪತಿನಾ ಘೃತಮಾನಸೇನ
ವಸ್ತ್ರೈಶ್ಚ ರಾಜತವನೇನ ಚ ಸಂಯುತಸ್ಸ್ಯಾತ್ ।
ಪಶ್ಚಾತ್ತಿಲಾಚಲಮನೇಕಸುಗಂಧಪುಷ್ಪಂ
ಸೌವರ್ಣಪಿಪ್ಪಲಹಿರಣ್ಮಯಹಂಸಯುಕ್ತಂ ॥ ೧೦೩ ॥

ಆಕಾರಯೇದ್ರಜತಪುಷ್ಪವನೇನ ತದ್ವ-
ದ್ವಸ್ತ್ರಾನ್ವಿತಂ ದಧಿಸಿತೋದಸರಸ್ತಥಾಗ್ರೇ ।
ಸಂಸ್ಥಾಪ್ಯ ತಂ ವಿಪುಲಶೈಲಮಥೋತ್ತರೇಣ
ಶೈಲಂ ಸುಪಾರ್ಶ್ವಮಪಿ ಮಾಷಮಯಂ ಸವಸ್ತ್ರಂ ॥ ೧೦೪ ॥

ಪುಷ್ಪೈಶ್ಚ ಹೇಮವಟಪಾದಪಶೇಖರಂ ತ-
ಮಾಕಾರಯೇತ್ಕನಕಕೇತುವಿರಾಜಮಾನಂ ।
ಸರ್ವೇಣ ಮಾಕ್ಷಿಕರಸೇನ ವಿರಾಜಮಾನಂ
ರೌಪ್ಯೇಣ ಭಾಸ್ವರವತಾ ಚ ಯುತಂ ವಿಧಾಯ ॥ ೧೦೫ ॥

---

ಚಿನ್ನದ ಒಡವೆಗಳೂ ಇರಬೇಕು. ಅದರಲ್ಲಿ ಚಿನ್ನದ ಕುಬೇರನ ವಿಗ್ರಹವಿರಬೇಕು. ತುಪ್ಪದ ಮಾನಸ ಸರೋವರವಿರಬೇಕು. ಬೆಳ್ಳಿಯ ವನವನ್ನು ಮಾಡಿರಬೇಕು. ಬಟ್ಟೆ ಹೊದ್ದಿಸಿರಬೇಕು. ಪಶ್ಚಿಮದಿಕ್ಕಿನಲ್ಲಿ ತಿಲದಿಂದ ಬೆಟ್ಟವನ್ನು ಮಾಡಿರಬೇಕು. ಸುಗಂಧದ ಹೂ, ಚಿನ್ನದ ಅರಳೀಮರ, ಅದರಲ್ಲಿ ಚಿನ್ನದ ಹಂಸವಿರಬೇಕು.

೧೦೪. ಬೆಳ್ಳಿಯ ಹೂವಿನ ವನವನ್ನು ಮಾಡಬೇಕು. ಬಟ್ಟೆಗಳನ್ನೂ ಹೊದ್ದಿಸಿರಬೇಕು. ಮೊಸರು ಹಾಕಿ ಅದರಲ್ಲಿ ಸರೋವರವನ್ನು ಮಾಡಿರಬೇಕು. ಆ ಮುಖ್ಯಪರ್ವತದಿಂದ ಉತ್ತರಕ್ಕೆ ಉದ್ದಿನಿಂದ ಈ ಪರ್ವತವನ್ನು ಮಾಡಿರಬೇಕು.

೧೦೫. ಚಿನ್ನದ ಹೂಗಳಿಂದ ಅಲಂಕರಿಸಿರಬೇಕು. ಆಲದ ಮರವನ್ನು ತುದಿಯಲ್ಲಿಟ್ಟಿರಬೇಕು. ಚಿನ್ನದ ಧ್ವಜವನ್ನು ಮಾಡಿರಬೇಕು. ಅದು ಜೇನು ತುಪ್ಪದ ಗೂಡಿನಿಂದ ಕೂಡಿರುವಂತೆಯೂ ಬೆಳ್ಳಿಯಿಂದ ಮಾಡಿದ ಎಲೆಗಳಿಂದ ಕೂಡಿದುದಾಗಿಯೂ ಇರಬೇಕು.

ಹೋಮಶ್ಚತುರ್ಭಿರಥ ವೇದಪುರಾಣವಿದ್ಭಿ-
ರ್ದಾಂತೈಸ್ತೈರನಿಂದ್ಯಚರಿತಾಕೃತಿಭಿರ್ದ್ವಿಜೇಂದ್ರೈಃ ।
ಪೂರ್ವೇಣ ಹಸ್ತಮಿತಮತ್ರ ವಿಧಾಯ ಕುಂಡಂ
ಕಾರ್ಯಸ್ತಿಲೈರ್ಯವಘೃತೇನ ಸಮಿತ್ಕುಶೈಶ್ಚ ॥ ೧೦೬ ॥

ರಾತ್ರೌ ಚ ಜಾಗರಮನುದ್ಧತಗಾನಪೂರ್ವೈ-
ರಾವಾಹನಂ ಚ ಕಥಯಾಮಿ ಶಿಲೋಚ್ಚಯಾನಾಂ ।
ತ್ವಂ ಸರ್ವದೇವಗಣಧಾಮನಿಧೇ ವಿರುದ್ಧ-
ಮಸ್ಮದ್ಗೃಹೇಷ್ವಮರಪರ್ವತ ನಾಶಯಾಶು ॥ ೧೦೭ ॥

ಕ್ಷೇಮಂ ವಿಧತ್ಸ್ವ ಕುರು ಶಾಂತಿಮನುತ್ತಮಾಂ ನಃ
ಸಂಪೂಜಿತಃ ಪರಮಭಕ್ತಿಮತಾಂ ಮಯಾ ಹಿ ॥ ೧೦೮ ॥

ತ್ವಮೇವ ಭಗವಾನೀಶೋ ಬ್ರಹ್ಮಾ ವಿಷ್ಣುರ್ದಿವಾಕರಃ ।
ಮೂರ್ತಾಮೂರ್ತಂ ಪರಂ ಬೀಜಮತಃ ಪಾಹಿ ಸನಾತನ ॥ ೧೦೯ ॥

---

೧೦೬. ವೇದಪುರಾಣಗಳನ್ನು ಬಲ್ಲ ನಾಲ್ಕು ಜನಗಳಿಂದ ಹೋಮಮಾಡಿಸಬೇಕು ಅವರು ವೇದಾದಿ ಸಮಸ್ತ ಶಾಸ್ತ್ರಪರಿಣತರಾಗಿರಬೇಕು. ಅದಕ್ಕಿಂತ ಪೂರ್ವದಲ್ಲಿ ಒಂದು ಮೊಳ ಆಳವಾಗಿ ಒಂದು ಕುಂಡವನ್ನು ತೋಡಿರಬೇಕು. ಅದರಲ್ಲಿ ಸಮಿತ್ತು, ಕುಶ, ಯವ, ತುಪ್ಪಗಳಿಂದ ಹೋಮವನ್ನು ಮಾಡಬೇಕು.

೧೦೭-೧೦೮. ರಾತ್ರಿಯಲ್ಲಿ ಜಾಗರಣಮಾಡಬೇಕು. ಆಗ ಸಾಧಾರಣವಾದ ಗಾನವನ್ನು ಮಾಡಬೇಕು. ಆ ಪರ್ವತಗಳ ಆವಾಹನೆಯನ್ನು ಹೇಳುತ್ತೇನೆ. ನೀನು ಎಲ್ಲಾ ದೇವರುಗಳಿಗೂ ಜಾಗವಾಗಿದ್ದೀಯೆ. ನಮ್ಮ ಮನೆಯಲ್ಲಿ ನಮಗೆ ವಿರುದ್ಧವಾಗಿರುವುದನ್ನೆಲ್ಲಾ ನಾಶಮಾಡು. ಮತ್ತು ಕ್ಷೇಮವನ್ನುಂಟುಮಾಡು. ಉತ್ತಮವಾದ ಶಾಂತಿಯನ್ನು ಕೊಡು. ನಾನು ಭಕ್ತಿಯಿಂದ ಪೂಜಿಸುತ್ತೇನೆ.

೧೦೯. ನೀನೇ ಭಗವಂತನಾದ ಈಶನು, ಬ್ರಹ್ಮನು, ವಿಷ್ಣುವು, ಸೂರ್ಯನೂ ಆಗಿದ್ದೀಯೆ. ಕಾಣುವ ಕಾಣದಿರುವ ಉತ್ತಮವಾದ ಬೀಜವಾಗಿದ್ದೀಯೆ. ಆದ್ದರಿಂದ ನನ್ನನ್ನು ಕಾಪಾಡು.

ಯಸ್ಮಾತ್ತ್ವಂ ಲೋಕಪಾಲಾನಾಂ ವಿಶ್ವಮೂರ್ತೇಶ್ಚ ಮಂದಿರಂ ।
ರುದ್ರಾದಿತ್ಯವಸೂನಾಂ ಚ ತಸ್ಮಾಚ್ಛಾಂತಿಂ ಪ್ರಯಚ್ಛ ಮೇ ॥ ೧೧೦ ॥

ಯಸ್ಮಾದಶೂನ್ಯಮಮರೈರ್ನಾರೀಭಿಶ್ಚ ಶಿರಸ್ತವ ।
ತಸ್ಮಾನ್ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ॥ ೧೧೧ ॥

ಏವಮಭ್ಯರ್ಚ್ಯ ತಂ ಮೇರುಂ ಮಂದರಂ ಚಾಭಿಪೂಜಯೇತ್ ।
ಯಸ್ಮಾಚ್ಚೈತ್ರರಥೇನ ತ್ವಂ ಭದ್ರಾಶ್ವೇನ ಚ ಪರ್ವತ ॥ ೧೧೨ ॥

ಶೋಭಸೇ ಮಂಧರ ಕ್ಷಿಪ್ರಮತಸ್ತುಷ್ಟಿಕರೋ ಭವ ।
ಯಸ್ಮಾಚ್ಚೂಡಾಮಣಿರ್ಜಂಬುದ್ವೀಪೇ ತ್ವಂ ಗಂಧಮಾದನ ॥ ೧೧೩ ॥

ಗಂಧರ್ವವನಶೋಭಾವಾನತಃ ಕೀರ್ತಿರ್ದೃಢಾಸ್ತು ಮೇ ।
ಯಸ್ಮಾತ್ತ್ವಂ ಕೇತುಮಾಲೇನ ವೈಭ್ರಾಜೇನ ವನೇನ ಚ ॥ ೧೧೪ ॥

---

೧೧೦. ನೀನು ಲೋಕಪಾಲಕರಿಗೂ, ವಿಶ್ವಮೂರ್ತಿಯಾದ ಸ್ವಾಮಿಗೂ ಮನೆಯಾಗಿದ್ದೀಯೆ. ರುದ್ರ, ಆದಿತ್ಯ, ವಸುಗಳು, ಇವರಿಗೂ ಮನೆಯಾಗಿದ್ದೀಯೆ. ನನಗೆ ಶಾಂತಿಯನ್ನು ಕೊಡು.

೧೧೧. ನಿನ್ನ ತಲೆಯು ಯಾವಾಗಲೂ ದೇವತೆಗಳಿಂದಲೂ ಅವರ ಹೆಂಗಸರಿಂದಲೂ ಕೂಡಿಕೊಂಡಿದೆ. ಆದ್ದರಿಂದ ನನ್ನನ್ನು ಈ ದುಃಖಸಾಗರದಿಂದ ಪಾರುಗಾಣಿಸು.

೧೧೨. ಈರೀತಿ ಮೇರುವನ್ನು ಪೂಜಿಸಿ ಅನಂತರ ಮಂದರವನ್ನು ಪೂಜಿಸಬೇಕು. ಎಲೈ ಮಂದರನೇ, ನೀನು ಚೈತ್ರದ ರಥದಿಂದಲೂ, ಭದ್ರಾಶ್ವದಿಂದಲೂ, ಕೂಡಿದ್ದೀಯೆ. ಆದ್ದರಿಂದ ನನಗೆ ತುಷ್ಟಿಯನ್ನು ಕೊಡು.

೧೧೩. ಎಲೈ ಮಂದರನೇ, ನೀನು ಜಂಬೂದ್ವೀಪಕ್ಕೆ ಚೂಡಾಮಣಿಯು. ಗಂಧರ್ವರ ವನಗಳಿಂದ ಕೂಡಿದ್ದೀಯೆ. ಆದ್ದರಿಂದ ನನಗೆ ದೃಢವಾದ ಕೀರ್ತಿಯನ್ನು ಕೊಡು.

೧೧೪. ನೀನು ಕೇತುಮಾಲನಿಂದಲೂ ವೈಭ್ರಾಜವನದಿಂದಲೂ ಶೋಭಿಸುತ್ತಿದ್ದೀಯೆ. ಚಿನ್ನದ ರೂಪವಾಗಿದ್ದಿಯೆ. ಆದ್ದರಿಂದ ನನಗೆ ಪುಷ್ಟಿಯನ್ನು ಕೊಡು.

**ಹಿರಣ್ಮಯೋಽಸಿ ಭಗವಾಂಸ್ತಸ್ಮಾತ್ಪುಷ್ಟಿರ್ದೃಢಾಸ್ತು ಮೇ ।**
**ಉತ್ತರೇ ಕುರುಭಿರ್ಯಸ್ತು ಸಾವಿತ್ರೇಣ ವನೇನ ಚ** ॥ ೧೧೫ ॥

**ಸುಪಾರ್ಶ್ವ ರಾಜಸೇ ನಿತ್ಯಮತಃ ಶ್ರೀರಕ್ಷಯಾಸ್ತು ಮೇ ।**
**ಏವಮಾಮಂತ್ರ್ಯ ತಾನ್ಸರ್ವಾನ್ಪ್ರಭಾತೇ ವಿಮಲೇ ತತಃ** ॥ ೧೧೬ ॥

**ಸ್ನಾತ್ವಾಥ ಗುರುವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ।**
**ವಿಷ್ಕಂಭಪರ್ವತಾನ್ದದ್ಯಾದೃತ್ವಿಗ್ಭ್ಯಃ ಕ್ರಮಶೋ ನೃಪ** ॥ ೧೧೭ ॥

**ಗಾವೋ ದೇಯಾಶ್ಚತುರ್ವಿಂಶದಥವಾ ದಶ ಪಾರ್ಥಿವ ।**
**ಶಕ್ತಿತಸ್ಸಪ್ತ ಚಾಷ್ಟೌ ವಾ ಪಂಚ ದದ್ಯಾದಶಕ್ತಿಮಾನ್** ॥ ೧೧೮ ॥

**ಏಕಾ ಚ ಗುರವೇ ದೇಯಾ ಕಪಿಲಾಥ ಪಯಸ್ವಿನೀ ।**
**ಪರ್ವತಾನಾಮಶೇಷಾಣಾಮೇಷ ಏವ ವಿಧಿಸ್ಸ್ಮೃತಃ** ॥ ೧೧೯ ॥

---

೧೧೫. ಉತ್ತರ ಕುರುವಿನಿಂದಲೂ, ಸಾವಿತ್ರೀ ವನದಿಂದಲೂ, ಎಲೈ ಸುಪಾರ್ಶ್ವನೇ ನೀನು ಬೆಳಗುತ್ತಿದ್ದೀಯೆ. ಆದ್ದರಿಂದ ನನಗೆ ನಾಶರಹಿತವಾದ ಸಂಪತ್ತಿರಲಿ.

೧೧೬-೧೧೭. ಈರೀತಿ ಅವುಗಳೆಲ್ಲಕ್ಕೂ ಉಪಚಾರ ಹೇಳಿ, ಬೆಳಿಗ್ಗೆ ಒಳ್ಳೆಯ ನೀರಿನಲ್ಲಿ ಸ್ನಾನಮಾಡಿ ಮಧ್ಯದಲ್ಲಿರುವ ಮೇರುಪರ್ವತವನ್ನು ಗುರುವಿಗೆ ಕೊಡಬೇಕು. ಉಳಿದ ಅಕ್ಕಪಕ್ಕದ ಪರ್ವತಗಳನ್ನು ಋತ್ವಿಕ್ಕುಗಳಿಗೆ ಕೊಡಬೇಕು.

೧೧೮. ಇಪ್ಪತ್ತುನಾಲ್ಕು ಹಸುಗಳನ್ನಾಗಲೀ ಅದಿಲ್ಲದಿದ್ದರೆ ಹತ್ತು ಹಸುಗಳನ್ನಾಗಲೀ, ಎಂಟನ್ನಾಗಲೀ, ಏಳನ್ನಾಗಲೀ, ಶಕ್ತಿಯಿಲ್ಲದಿದ್ದರೆ ಕೊನೆಗೆ ಐದು ಹಸುಗಳನ್ನಾಗಲೀ ಕೊಡಬೇಕು. ಅವುಗಳಲ್ಲಿ ಕಪಿಲವರ್ಣದ ಹಾಲುಕೊಡುವ ಹಸುವೊಂದನ್ನು ಗುರುವಿಗೆ ಕೊಡಬೇಕು.

೧೧೯. ಪರ್ವತಗಳೆಲ್ಲಕ್ಕೂ ಇದೇ ವಿಧಿಯೆಂದು ತಿಳಿ. ಪೂಜೆಗಳಿಗೆಲ್ಲಾ ಇದೇ ಮಂತ್ರವು. ಪದಾರ್ಥಗಳು ಸಾಮಾನುಗಳೆಲ್ಲವೂ ಒಂದಕ್ಕೆ ಹೇಳಿರುವಂತೆಯೇ ಎಲ್ಲಕ್ಕೂ ಎಂದು ತಿಳಿ.

ತ ಏವ ಪೂಜನೇ ಮಂತ್ರಾಸ್ತ ಏವೋಪಸ್ಕರಾಸ್ಸ್ಮೃತಾಃ ।
ಗ್ರಹಾಣಾಂ ಲೋಕಪಾಲಾನಾಂ ಬ್ರಹ್ಮಾದೀನಾಂ ಸಭೂಭೃತಾಂ ॥ ೧೨೦ ॥

ಸ್ವಮಂತ್ರೇಣೈವ ಸರ್ವೇಷು ಹೋಮಶ್ಶೈಲೇಷು ಪಠ್ಯತೇ ।
ಉಪವಾಸೀ ಭವೇನ್ನಿತ್ಯಮಶಕ್ತೌ ನಕ್ತಮಿಷ್ಯತೇ ॥ ೧೨೧ ॥

ವಿಧಾನಂ ಸರ್ವಶೈಲಾನಾಂ ಕ್ರಮಶಶ್ಶೃಣು ಪಾರ್ಥಿವ ।
ದಾನಕಾಲೇಷು ಯೇ ಮಂತ್ರಾಃ ಪರ್ವತೇಷು ಯಥಾಫಲಂ ॥ ೧೨೨ ॥

ಅನ್ನಂ ಬ್ರಹ್ಮ ಯತಃ ಪ್ರೋಕ್ತಮನ್ನಂ ಪ್ರಾಣಾಃ ಪ್ರಕೀರ್ತಿತಾಃ ।
ಅನ್ನಾದ್ಭವಂತಿ ಭೂತಾನಿ ಜಗದನ್ನೇನ ವರ್ಧತೇ ॥ ೧೨೩ ॥

ಅನ್ನಮೇವ ಯತೋ ಲಕ್ಷ್ಮೀರನ್ನಮೇವ ಜನಾರ್ದನಃ ।
ಧಾನ್ಯಪರ್ವತರೂಪೇಣ ಪಾಹಿ ತಸ್ಮಾನ್ನಗೋತ್ತಮ ॥ ೧೨೪ ॥

ಅನೇನ ವಿಧಿನಾ ಯಸ್ತು ದದ್ಯಾದ್ಧಾನ್ಯಮಯಂ ಗಿರಿಂ ।
ಮನ್ವಂತರಶತಂ ಸಾಗ್ರಂ ದೇವಲೋಕೇ ಮಹೀಯತೇ ॥ ೧೨೫ ॥

---

೧೨೦-೧೨೧. ಗ್ರಹಗಳು, ಲೋಕಪಾಲಕರು, ಬ್ರಹ್ಮಾದಿ ದೇವತೆಗಳು, ಪರ್ವತಗಳು, ಅವುಗಳಿಗೆಲ್ಲಾ ಅವರವರ ಮಂತ್ರದಿಂದಲೇ ಹೋಮಮಾಡಬೇಕು. ಮನುಷ್ಯನು ಉಪವಾಸಮಾಡಿರಬೇಕು. ಅದಕ್ಕೆ ಶಕ್ತಿಯಿಲ್ಲದಿದ್ದರೆ ರಾತ್ರಿಯಲ್ಲಿ ಲಘು ಆಹಾರ ತೆಗೆದುಕೊಳ್ಳಬಹುದು.

೧೨೨. ಎಲ್ಲಾ ಶೈಲಗಳ ವಿಧಾನವನ್ನೂ ಹೇಳುತ್ತೇನೆ. ಕ್ರಮವಾಗಿ ಕೇಳು. ದಾನಕಾಲದಲ್ಲಿ ಅವುಗಳ ಮಂತ್ರವನ್ನೂ ಅವುಗಳ ಫಲವನ್ನೂ ಹೇಳುತ್ತೇನೆ. ಕೇಳು.

೧೨೩-೧೨೪. ಅನ್ನವೇ ಬ್ರಹ್ಮವು. ಅನ್ನವೇ ಪ್ರಾಣವು. ಅನ್ನದಿಂದಲೇ ಪ್ರಾಣಗಳು ಬದುಕಿರುವುವು. ಜಗತ್ತೆಲ್ಲವೂ ಅನ್ನದಿಂದಲೇ ಬೆಳೆಯುತ್ತದೆ. ಅನ್ನವೇ ಲಕ್ಷ್ಮಿಯು. ಅನ್ನವೇ ಜನಾರ್ದನನೂ ಕೂಡ. ಆದ್ದರಿಂದ ಈ ಪರ್ವತರೂಪವಾದ ನೀನು ನನ್ನನ್ನು ಕಾಪಾಡು.

೧೨೫. ಈ ವಿಧಿಯಿಂದ ಅನ್ನಮಯವಾದ ಧ್ಯಾನಗಿರಿಯನ್ನು ದಾನಮಾಡಿದರೆ ನೂರು ಮನ್ವಂತರಗಳವರೆಗೂ ದೇವಲೋಕದಲ್ಲಿ ಸುಖಿಸುತ್ತಾನೆ.

**ಅಪ್ಸರೋಗಣಗಂಧರ್ವೈರಾಕೀರ್ಣೇನ ವಿರಾಜತಾ ।**
**ವಿಮಾನೇನ ದಿವಃ ಪೃಷ್ಠಮಾಯಾತಿ ನೃಪಸತ್ತಮ ॥ ೧೨೬ ॥**

**ಕರ್ಮಕ್ಷಯೇ ರಾಜರಾಜ್ಯಂ ಪ್ರಾಪ್ನೋತೀಹ ನ ಸಂಶಯಃ ।**
**ಅಥಾತಸ್ಸಂಪ್ರವಕ್ಷ್ಯಾಮಿ ಲವಣಾಚಲಮುತ್ತಮಂ ॥ ೧೨೭ ॥**

**ಯತ್ಪ್ರದಾನಾನ್ನರೋ ಲೋಕಮಾಪ್ನೋತಿ ಶಿವಸಂಯುತಂ ।**
**ಉತ್ತಮಷ್ಷೋಡಶದ್ರೋಣೈಃ ಕರ್ತವ್ಯೋ ಲವಣಾಚಲಃ ॥ ೧೨೮ ॥**

**ಮಧ್ಯಮಶ್ಚ ತದರ್ಧೇನ ಚತುರ್ಭಿರಧಮಸ್ಸ್ಮೃತಃ ।**
**ವಿತ್ತಹೀನೋ ಯಥಾಶಕ್ತಿ ದ್ರೋಣಾದರ್ಧಂ ಚ ಕಾರಯೇತ್ ॥ ೧೨೯ ॥**

**ಚತುರ್ಥಾಂಶೇನ ವಿಷ್ಕಂಭಪರ್ವತಂ ಕಾರಯೇತ್ಪೃಥಕ್ ।**
**ವಿಧಾನಂ ಪೂರ್ವವತ್ಕುರ್ಯಾದ್ಬ್ರಹ್ಮಾದೀನಾಂ ಚ ಸರ್ವದಾ ॥ ೧೩೦ ॥**

---

೧೨೬. ಅಂತಹವನು ಅಪ್ಸರರೂ ಗಂಧರ್ವರೂ ಕೂಡಿರುವ ಪ್ರಕಾಶಮಾನವಾದ ವಿಮಾನದಲ್ಲಿ ಕೂತು ಸ್ವರ್ಗಕ್ಕೆ ಹೋಗುತ್ತಾನೆ.

೧೨೭. ಅಲ್ಲಿ ತನ್ನ ಪುಣ್ಯಮುಗಿದನಂತರ ಈ ಲೋಕದಲ್ಲಿ ಚಕ್ರವರ್ತಿಯಾಗುತ್ತಾನೆ. ಇನ್ನು ಮೇಲೆ ಲವಣಾಚಲದ ವಿಷಯವನ್ನು ಹೇಳುತ್ತೇನೆ.

೧೨೮-೧೨೯. ಅದನ್ನು ದಾನಮಾಡಿದುದರಿಂದ ಮನುಷ್ಯನು ಶಿವಲೋಕ ಹೊಂದುತ್ತಾನೆ. ಹದಿನಾರು ಕೊಳಗ ಉಪ್ಪನ್ನು ಹಾಕಿ ಮಾಡಿದರೆ ಅದು ಉತ್ತಮವು. ಅದರ ಅರ್ಧವಾದರೆ ಮಧ್ಯಮವು. ನಾಲ್ಕನೇ ಒಂದುಭಾಗವಾದರೆ ಅದು ಅಧಮವು. ಎಷ್ಟೇ ಕಡಿಮೆಯಾದರೂ ಅರ್ಧ ಕೊಳಗವಾದರೂ ಇದ್ದೇ ಇರಬೇಕು. ಅದಕ್ಕಿಂತಲೂ ಕಡಿಮೆಮಾಡಬಾರದು.

೧೩೦-೧೩೧. ಮುಖ್ಯಪರ್ವತದ ನಾಲ್ಕನೇ ಒಂದು ಭಾಗದಿಂದ ಅಂಗಪರ್ವತಗಳನ್ನು ಮಾಡಬೇಕು. ಬ್ರಹ್ಮಾದಿ ದೇವತೆಗಳಿಗೆಲ್ಲಾ ಮೊದಲಿನಂತೆಯೇ ವಿಧಿಯು. ಲೋಕಪಾಲಕರುಗಳ ಇರುವಿಕೆಯು ಅವರಿಗೆ ಹೇರಳಿತಕ್ಕ ಚಿನ್ನದ ಪ್ರಮಾಣವೂ

ತದ್ವದ್ಧೇಮಮಯಂ ಸರ್ವಂ ಲೋಕಪಾಲನಿವೇಶನಂ ।
ಸರಾಂಸಿ ವನವೃಕ್ಷಾಂಶ್ಚ ತದ್ವಚ್ಚಾನ್ಯನ್ನಿವೇಶಯೇತ್ ॥ ೧೩೧ ॥

ಕುರ್ಯಾಜ್ಜಾಗರಮತ್ರಾಪಿ ದಾನಮಂತ್ರಾನ್ನಿಬೋಧತ ।
ಸೌಭಾಗ್ಯರಸಸಂಭೂತೋ ಯತೋಽಸೌ ಲವಣೋ ರಸಃ ॥ ೧೩೨ ॥

ತದಾತ್ಮಕತ್ವೇನ ಚ ಮಾಂ ಪಾಹಿ ಪಾಪಾನ್ನಗೋತ್ತಮ ।
ಯಸ್ಮಾದನ್ಯೇ ರಸಾಸ್ಸರ್ವೇ ನೋತ್ಕಟಾ ಲವಣಂ ವಿನಾ ।
ಪ್ರಿಯಶ್ಚ ಶಿವಯೋರ್ನಿತ್ಯಂ ತಸ್ಮಾಚ್ಛಾಂತಿಪ್ರದೋ ಭವ ॥ ೧೩೩ ॥

ವಿಷ್ಣುದೇಹಸಮುದ್ಭೂತೋ ಯಸ್ಮಾದಾರೋಗ್ಯವರ್ಧನಃ ।
ತಸ್ಮಾತ್ಪರ್ವತರೂಪೇಣ ಪಾಹಿ ಮಾಂ ಶೋಕಸಾಗರಾತ್ ॥ ೧೩೪ ॥

ಅನೇನ ವಿಧಿನಾ ಯಸ್ತು ದದ್ಯಾಲ್ಲವಣಪರ್ವತಂ ।
ಉಮಾಲೋಕೇ ವಸೇತ್ಕಲ್ಪಂ ತತೋ ಯಾತಿ ಪರಾಂ ಗತಿಂ ॥ ೧೩೫ ॥

---

ಹಿಂದಿನಂತೆಯೇ. ಸರೋವರ, ಕಾಡಿನ ಮರಗಳೂ, ಇನ್ನೂ ಇತರಗಳನ್ನೂ ಹಿಂದಿನಂತೆಯೇ ಕೊಡಬೇಕು. ಇವುಗಳಲ್ಲಿ ರಾತ್ರೆ ಜಾಗರಣವನ್ನು ಮಾಡಬೇಕು. ದಾನಮಂತ್ರಗಳನ್ನು ಕೇಳು.

೧೩೨-೧೩೩. ಲವಣರಸ ಸೌಭಾಗ್ಯರಸದಿಂದ ಕೂಡಿದೆ. ಅದರಿಂದ ನನ್ನನ್ನು ಎಲೈ ಲವಣಪರ್ವತವೇ, ಕಾಪಾಡು. ಲವಣರಸಕ್ಕಿಂತಲೂ ಒಂದು ರಸವೂ ಮೇಲಲ್ಲ. ಲವಣರಸವು ಶಿವಪಾರ್ವತಿಯರಿಗೆ ಇಷ್ಟವಾದುದು. ಆದರಿಂದ ನೀನು ನನಗೆ ಶಾಂತಿಯನ್ನು ಕೊಡು.

೧೩೪. ವಿಷ್ಣುವಿನ ದೇಹದಿಂದ ಹುಟ್ಟಿ ಆರೋಗ್ಯವನ್ನು ಹೆಚ್ಚಿಸುತ್ತೀಯೆ. ಆದ್ದರಿಂದ ಪರ್ವತರೂಪದಿಂದ ಇರುವ ನೀನು ನನ್ನನ್ನು ದುಃಖಸಮುದ್ರದಿಂದ ಕಾಪಾಡು.

೧೩೫. ಈರೀತಿ ನಿಯಮದಿಂದ ಯಾವನು ಲವಣಪರ್ವತವನ್ನು ದಾನಮಾಡುವನೋ ಅವನು ಉಮಾಲೋಕದಲ್ಲಿ ಕಲ್ಪಕಾಲ ವಾಸಮಾಡಿ ಉತ್ತಮಗತಿಯನ್ನು ಹೊಂದುತ್ತಾನೆ.

**ಅತಃ ಪರಂ ಪ್ರವಕ್ಷ್ಯಾಮಿ ಗುಡಪರ್ವತಮುತ್ತಮಂ ।**
**ಯತ್ಪ್ರದಾನಾನ್ನರಸ್ಸ್ವರ್ಗಂ ಪ್ರಾಪ್ನೋತಿ ಸುರಪೂಜಿತಃ ॥ ೧೩೬ ॥**

**ಉತ್ತಮೋ ದಶಭಿರ್ಭಾರೈರ್ಮಧ್ಯಮಃ ಪಂಚಭಿರ್ಮತಃ ।**
**ತ್ರಿಭಿರ್ಭಾರೈಃ ಕನಿಷ್ಠಸ್ಸ್ಯಾತ್ತದರ್ಧೇನಾಲ್ಪವಿತ್ತವಾನ್ ॥ ೧೩೭ ॥**

**ತದ್ವದಾಮಂತ್ರಣಂ ಪೂಜಾ ಹೈಮವೃಕ್ಷಾಸ್ಸುರಾರ್ಚನಂ ।**
**ವಿಷ್ಕಂಭಪರ್ವತಾಂಸ್ತದ್ವತ್ಸರಾಂಸಿ ವನದೇವತಾಃ ॥ ೧೩೮ ॥**

**ಹೋಮಂ ಜಾಗರಣಂ ತದ್ವಲ್ಲೋಕಪಾಲಾಧಿವಾಸನಂ ।**
**ಧಾನ್ಯಪರ್ವತವತ್ಕುರ್ಯಾದಿಮಂ ಮಂತ್ರಮುದೀರಯೇತ್ ॥ ೧೩೯ ॥**

**ಯಥಾ ದೇವೇಷು ವಿಶ್ವಾತ್ಮಾ ಪ್ರವರೋಽಯಂ ಜನಾರ್ದನಃ ।**
**ಸಾಮವೇದಸ್ತು ವೇದಾನಾಂ ಮಹಾದೇವಸ್ತು ಯೋಗಿನಾಂ ॥ ೧೪೦ ॥**

---

೧೩೬. ಇನ್ನು ಮೇಲೆ ಉತ್ತಮವಾದ ಗುಡಪರ್ವತವನ್ನು ಹೇಳುತ್ತೇನೆ. ಅದರ ದಾನದಿಂದ ಮನುಷ್ಯನು ದೇವತೆಗಳಿಗೂ ಪೂಜ್ಯನಾಗಿ ಸ್ವರ್ಗವನ್ನು ಹೊಂದುತ್ತಾನೆ.

೧೩೭. ಈ ಗುಡಪರ್ವತವು ಹತ್ತುಮಣಗಳಿಂದ ಮಾಡಲ್ಪಟ್ಟರೆ ಉತ್ತಮವು. ಐದು ಮಣಗಳಿಂದ ಮಾಡಿದರೆ ಮಧ್ಯಮವು. ಮೂರು ಮಣಗಳಾದರೆ ಕನಿಷ್ಠವು. ಶಕ್ತಿಯಿಲ್ಲದವನು ಒಂದೂವರೆ ಮಣಗಳಿಂದ ಮಾಡಬಹುದು.

೧೩೮-೧೩೯. ಹಿಂದಿನಂತೆಯೇ ಪೂಜೆಯು. ಚಿನ್ನದ ಮರಗಳು, ದೇವತೆಗಳು, ಅರ್ಚನೆ, ಅಂಗಪರ್ವತಗಳು, ಸರೋವರಗಳು, ದೇವತೆಗಳು, ಹೋಮ, ಜಾಗರಣ, ಲೋಕಪಾಲಕರ ಪೂಜೆ ಎಲ್ಲವನ್ನೂ ಧಾನ್ಯಪರ್ವತದಂತೆ ಮಾಡಿ ಈ ಮಂತ್ರವನ್ನು ಹೇಳಬೇಕು.

೧೪೦-೧೪೧. ದೇವತೆಗಳಲ್ಲಿ ಹರಿಯು ಹೇಗೆ ಶ್ರೇಷ್ಠನೋ, ವೇದಗಳಲ್ಲಿ ಸಾಮವೇದವು ಹೇಗೆ ಉತ್ತಮವೋ, ಯೋಗಿಗಳಲ್ಲಿ ಮಹಾದೇವನು ಹೇಗೆ ಆದಿಯೋ,

ಪ್ರಣವಸ್ಸರ್ವಮಂತ್ರಾಣಾಂ ನಾರೀಣಾಂ ಪಾರ್ವತೀ ಯಥಾ ।
ತಥಾ ರಸಾನಾಂ ಪ್ರವರಸ್ಸದೈವೇಕ್ಷುರಸೋ ಮತಃ ॥ ೧೪೧ ॥

ಮಮ ತಸ್ಮಾತ್ಪರಾಂ ಲಕ್ಷ್ಮೀಂ ದದಾತು ಗುಡಪರ್ವತಃ ।
ಯಸ್ಮಾತ್ಸೌಭಾಗ್ಯದಾಯಿನ್ಯಾ ಭಾಮ ತ್ವಂ ಗುಡಪರ್ವತ ॥ ೧೪೨ ॥

ನಿರ್ಮಿತಶ್ಚಾಸಿ ಪಾರ್ವತ್ಯಾ ತಸ್ಮಾನ್ಮಾಂ ಪಾಹಿ ಸರ್ವದಾ ।
ಅನೇನ ವಿಧಿನಾ ಯಸ್ತು ದದ್ಯಾದ್ಗುಡಮಯಂ ಗಿರಿಂ। ॥ ೧೪೩ ॥

ಸ ಪೂಜ್ಯಮಾನೋ ಗಂಧರ್ವೈರ್ಗೌರೀಲೋಕೇ ಮಹೀಯತೇ ।
ಪುನಃ ಕಲ್ಪಶತಾಂತೇ ಚ ಸಪ್ತದ್ವೀಪಾಧಿಪೋ ಭವೇತ್ ॥ ೧೪೪ ॥

ಆಯುರಾರೋಗ್ಯಸಂಪನ್ನಃ ಶತ್ರುಭಿಶ್ಚಾಪರಾಜಿತಃ ।
ಅಥ ಪಾಪಹರಂ ವಕ್ಷ್ಯೇ ಸುವರ್ಣಾಚಲಮುತ್ತಮಂ ॥ ೧೪೫ ॥

---

ಮಂತ್ರಗಳಿಗೆಲ್ಲಾ ಪ್ರಣವವು ಹೇಗೆ ಉತ್ತಮವೋ, ಹೆಂಗಸರಲ್ಲಿ ಪಾರ್ವತಿಯು ಹೇಗೆ ಶ್ರೇಷ್ಠಳೋ ಹಾಗೆ ರಸಗಳಲ್ಲೆಲ್ಲಾ ಕಬ್ಬಿನ ರಸವು ಶ್ರೇಷ್ಠವಾದುದು. ಅಂತಹ ಗುಡಪರ್ವತವು ನನಗೆ ಉತ್ತಮವಾದ ಸಂಪತ್ತನ್ನು ಕೊಡಲಿ.

೧೪೨. ಎಲೈ ಗುಡಪರ್ವತವೇ, ನೀನು ಸೌಭಾಗ್ಯದಾಯಿನಿಯಾದ ಪಾರ್ವತಿಯಿಂದ ನಿರ್ಮಿತವಾಗಿದ್ದೀಯೆ. ಅಂತಹ ನೀನು ನನ್ನನ್ನು ಕಾಪಾಡು.

೧೪೩ ಈ ವಿಧಿಯಿಂದ ಗುಡಪರ್ವತವನ್ನು ದಾನಮಾಡಿದವನು ಗಂಧರ್ವರಿಂದ ಪೂಜಿಸಲ್ಪಡುತ್ತ ಗೌರಿಯ ಲೋಕಕ್ಕೆ ಹೋಗುತ್ತಾನೆ.

೧೪೪. ಆಯುರಾರೋಗ್ಯಗಳಿಂದ ಕೂಡಿ ಶತ್ರುಗಳಿಗೆ ಅಂಜದೆ ನೂರು ಕಲ್ಪಗಳಾದ ಮೇಲೆ ಸಪ್ತದ್ವೀಪಗಳಿಗೂ ಅಧಿಪತಿಯಾಗಿ ಹುಟ್ಟುತ್ತಾನೆ.

೧೪೫. ಪಾಪಹರನಾದ ಸುವರ್ಣಾಚಲವನ್ನು ಹೇಳುತ್ತೇನೆ. ಅದರ ಅನುಗ್ರಹದಿಂದ ಮನುಷ್ಯನು ಬ್ರಹ್ಮನ ಲೋಕವನ್ನು ಹೊಂದುತ್ತಾನೆ.

**ಯಸ್ಯ ಪ್ರದಾನಾದ್ಭವನಂ ವೈರಿಂಚ್ಯಂ ಯಾಂತಿ ಮಾನವಾಃ ।**
**ಉತ್ತಮಃ ಪಲಸಾಹಸ್ರೋ ಮಧ್ಯಮಃ ಪಂಚಭಿಶ್ಶತೈಃ ॥ ೧೪೬ ॥**

**ತದರ್ಧೇನಾಧಮಸ್ತದ್ವದಲ್ಪವಿತ್ತೋಽಪಿ ಮಾನವಃ ।**
**ದದ್ಯಾದೇಕಪಲಾದೂರ್ಧ್ವಂ ಯಥಾಶಕ್ತ್ಯಾವಿಮತ್ಸರಃ ॥ ೧೪೭ ॥**

**ಧಾನ್ಯಪರ್ವತವತ್ಸರ್ವಂ ವಿದಧ್ಯಾದ್ರಾಜಸತ್ತಮ ।**
**ವಿಷ್ಕಂಭಶೈಲಾಂಸ್ತದ್ವಚ್ಚ ಋತ್ವಿಗ್ಭ್ಯಃ ಪ್ರತಿಪಾದಯೇತ್ ॥ ೧೪೮ ॥**

**ನಮಸ್ತೇ ಬ್ರಹ್ಮಬೀಜಾಯ ಬ್ರಹ್ಮಗರ್ಭಾಯ ವೈ ನಮಃ ।**
**ಯಸ್ಮಾದನಂತಫಲದಸ್ತಸ್ಮಾತ್ಪಾಹಿ ಶಿಲೋಚ್ಚಯ ॥ ೧೪೯ ॥**

**ಯಸ್ಮಾದಗ್ನೇರಪತ್ಯಂ ತ್ವಂ ಯಸ್ಮಾತ್ಪುತ್ರೋ ಜಗತ್ಪತೇಃ ।**
**ಹೇಮಪರ್ವತರೂಪೇಣ ತಸ್ಮಾತ್ಪಾಹಿ ನಗೋತ್ತಮ ॥ ೧೫೦ ॥**

**ಅನೇನ ವಿಧಿನಾ ಯಸ್ತು ದದ್ಯಾತ್ಕನಕಪರ್ವತಂ ।**
**ಸ ಯಾತಿ ಪರಮಂ ಬ್ರಹ್ಮಲೋಕಮಾನಂದಕಾರಕಂ ॥ ೧೫೧ ॥**

---

೧೪೬-೧೪೭. ಸಾವಿರ ಪಲಗಳಿಂದ ಮಾಡಿದರೆ ಉತ್ತಮವು. ಐನೂರು ಪಲಗಳಿಂದ ಮಾಡಿದರೆ ಮಧ್ಯಮವು. ಇನ್ನೂರೈವತ್ತು ಪಲಗಳಿಂದ ಮಾಡಿದರೆ ಅಧಮವು. ಗತಿಯಿಲ್ಲದವನು ಒಂದು ಪಲಕ್ಕಿಂತ ಕಡಿಮೆಯಾಗಿ ಮಾಡಬಾರದು. ಶಕ್ತ್ಯನುಸಾರವಾಗಿರಬೇಕು.

೧೪೮. ಧಾನ್ಯಪರ್ವತದಂತೆ ಉಳಿದುವೆಲ್ಲವನ್ನೂ ಮಾಡಬೇಕು. ಉಪಪರ್ವತಗಳನ್ನು ಋತ್ವಿಕ್ಕುಗಳಿಗೆ ದಾನ ಕೊಡಬೇಕು.

೧೪೯. ಬ್ರಹ್ಮಬೀಜವಾದ ಬ್ರಹ್ಮಗರ್ಭವಾದ ನಿನಗೆ ನಮಸ್ಕಾರವು. ನೀನು ಅನಂತಫಲವನ್ನು ಕೊಡತಕ್ಕುದಾದುದರಿಂದ ಎಲೈ ಪರ್ವತವೇ, ನನ್ನನ್ನು ಕಾಪಾಡು.

೧೫೦. ನೀನು ಅಗ್ನಿಗೆ ಮಗನು. ಜಗತ್ಪತಿಯ ಪುತ್ರನು. ಹೇಮಪರ್ವತರೂಪದಿಂದ ನನ್ನನ್ನು ಕಾಪಾಡು.

೧೫೧. ಈ ವಿಧಿಯಿಂದ ಕನಕಪರ್ವತವನ್ನು ದಾನಮಾಡಿದರೆ ಅವನು ಆನಂದವನ್ನು ಕೊಡುವ ಬ್ರಹ್ಮಲೋಕವನ್ನು ಹೊಂದುತ್ತಾನೆ.

ತತ್ರ ಕಲ್ಪಶತಂ ತಿಷ್ಠೇತ್ತತೋ ಯಾತಿ ಪರಾಂ ಗತಿಂ ।
ಅತಃ ಪರಂ ಪ್ರವಕ್ಷ್ಯಾಮಿ ತಿಲಶೈಲಂ ವಿಧಾನತಃ ॥ ೧೫೨ ॥

ತತ್ಪ್ರದಾನಾನ್ನರೋ ಯಾತಿ ವಿಷ್ಣುಲೋಕಮನುತ್ತಮಂ ।
ಉತ್ತಮೋ ದಶಭಿರ್ದ್ರೋಣೈಃ ಪಂಚಭಿರ್ಮಧ್ಯಮಸ್ಸ್ಮೃತಃ ॥ ೧೫೩ ॥

ತ್ರಿಭಿಃ ಕನಿಷ್ಠೋ ರಾಜೇಂದ್ರ ತಿಲಶೈಲಃ ಪ್ರಕೀರ್ತಿತಃ ।
ಪೂರ್ವವಚ್ಚಾಪರಂ ಸರ್ವಂ ವಿಷ್ಕಂಭಪರ್ವತಾದಿಕಂ ॥ ೧೫೪ ॥

ದಾನಮಂತ್ರಂ ಪ್ರವಕ್ಷ್ಯಾಮಿ ಯಥಾವನ್ಮುನಿಪುಂಗವ ।
ಯಸ್ಮಾನ್ಮಧುವನೇ ವಿಷ್ಣೋರ್ದೇಹಸ್ವೇದಸಮುದ್ಭವಾಃ ॥ ೧೫೫ ॥

ತಿಲಾಃ ಕುಶಾಶ್ಚ ಮಾಷಾಶ್ಚ ತಸ್ಮಾಚ್ಛಾಂತಿಪ್ರದೋ ಭವ ।
ಹವ್ಯಕವ್ಯೇಷು ಯಸ್ಮಾಚ್ಚ ತಿಲಾ ಏವ ಹಿ ರಕ್ಷಣಂ ॥ ೧೫೬ ॥

---

೧೫೨. ಅಲ್ಲಿ ನೂರು ಕಲ್ಪಗಳವರೆಗೂ ಇದ್ದು ಅನಂತರ ಉತ್ತಮಸ್ಥಾನವನ್ನು ಹೊಂದುತ್ತಾನೆ. ಅನಂತರ ಶಿಲಶೈಲವನ್ನು ಹೇಳುತ್ತೇನೆ ಕೇಳು. ವಿಧಿವತ್ತಾಗಿ ಅದನ್ನು ದಾನಮಾಡಿದರೆ ವಿಷ್ಣುಲೋಕವನ್ನು ಹೊಂದುವನು.

೧೫೩-೧೫೪. ಹತ್ತು ಕೊಳಗಗಳಿಂದ ಮಾಡಿಪರೆ ಉತ್ತಮವೂ, ಐದು ಕೊಳಗಗಳಿಂದ ಮಾಡಿದರೆ ಮಧ್ಯಮವೂ, ಮೂರು ಕೊಳಗಗಳಿಂದ ಕನಿಷ್ಠವೂ, ಆದರೆ ತಿಲಶೈಲವೆನ್ನಿಸಿಕೊಳ್ಳುತ್ತದೆ. ಉಪಪರ್ವತ ಮುಂತಾದುವುಗಳು ಮೊದಲಿನಂತೆಯೇ.

೧೫೫. ಎಲೈ ಮುನಿಯೇ, ದಾನಮಂತ್ರವನ್ನು ಕ್ರಮವಾಗಿ ಹೇಳುತ್ತೇನೆ. ಮಧುವನದಲ್ಲಿ ಎಳ್ಳು, ಉದ್ದು, ದರ್ಭೆಗಳಾದ ನೀವು ಮೂವರೂ ವಿಷ್ಣುವಿನಿಂದ ಉತ್ಪನ್ನರಾದವರು. ಆದ್ದರಿಂದ ನೀವು ನನಗೆ ಶಾಂತಿಯನ್ನು ಕೊಡಿ.

೧೫೬—೧೫೭. ಹವ್ಯಗಳಲ್ಲಿಯೂ ಕವ್ಯಗಳಲ್ಲಿಯೂ ಎಳ್ಳೇ ರಕ್ಷಿಸುತ್ತದೆ. ಎಲೈ ತಿಲವೇ, ನೀನೇ ರುದ್ರನು. ಅಂತಹ ತಿಲಾಚಲವೇ ನಿನಗೆ ನಮಸ್ಕಾರವು.

ಭವಾನ್ರುದ್ರಶ್ಚ ಶೈಲೇಂದ್ರ ತಿಲಾಚಲ ನಮೋಽಸ್ತು ತೇ ।
ಇತ್ಯಾಮಂತ್ರ್ಯ ಚ ಯೋ ದದ್ಯಾತ್ತಿಲಾಚಲಮನುತ್ತಮಂ ॥ ೧೫೭ ॥

ಸ ವೈಷ್ಣವಂ ಪದಂ ಯಾತಿ ಪುನರಾವೃತ್ತಿದುರ್ಲಭಂ ।
ದೀರ್ಘಾಯುಷ್ಯಮವಾಪ್ನೋತಿ ಪುತ್ರಪೌತ್ರೈಶ್ಚ ಮಾನವಃ ॥ ೧೫೮ ॥

ಪಿತೃಭಿರ್ದೇವಗಂಧರ್ವೈಃ ಪೂಜ್ಯಮಾನೋ ದಿವಂ ವ್ರಜೇತ್ ।
ಅತಃ ಪರಂ ಪ್ರವಕ್ಷ್ಯಾಮಿ ಕಾರ್ಪಾಸಾಚಲಮುತ್ತಮಂ ॥ ೧೫೯ ॥

ಯತ್ಪ್ರದಾನಾನ್ನರೋ ಯಾತಿ ರೌದ್ರಂ ಪದಮನುತ್ತಮಂ ।
ಸರ್ವಸೌಖ್ಯಪ್ರದಂ ನ್ಯೂಣಾಮಾಪ್ನೋತಿ ಪರಮಂ ಪದಂ ॥ ೧೬೦ ॥

ಕಾರ್ಪಾಸಪರ್ವತಸ್ತದ್ವದ್ವಿಂಶದ್ಭಾರೈರಿಹೋತ್ತಮಃ ।
ದಶಭಿರ್ಮಧ್ಯಮಃ ಪ್ರೋಕ್ತಃ ಕನಿಷ್ಠಃ ಪಂಚಭಿರ್ಮತಃ ॥ ೧೬೧ ॥

ಭಾರೇಣಾಲ್ಪಧನೋ ದದ್ಯಾದ್ವಿತ್ತಶಾಠ್ಯವಿವರ್ಜಿತಃ ।
ಧಾನ್ಯಪರ್ವತವತ್ಸರ್ವಮಾಸಾದ್ಯಂ ರಾಜಸತ್ತಮ ॥ ೧೬೨ ॥

---

ಹೀಗೆಂದು ಹೇಳಿ ತಿಲಾಚಲವನ್ನು ದಾನಮಾಡಬೇಕು. ಅವನು ವಿಷ್ಣುಲೋಕವನ್ನು ಹೊಂದುತ್ತಾನೆ. ಪುನರಾವೃತ್ತಿಯಿಲ್ಲ. ಈ ಲೋಕದಲ್ಲಿಯೂ ದೀರ್ಘಾಯುಷ್ಯವನ್ನು ಹೊಂದಿ ಮಕ್ಕಳು ಮೊಮ್ಮಕ್ಕಳಿಂದ ಕೂಡಿ ಕೊನೆಗೆ ದೇವತೆಗಳು ಗಂಧರ್ವರಿಂದ ಪೂಜೆ ಹೊಂದುತ್ತ ಸ್ವರ್ಗವನ್ನು ಹೊಂದುತ್ತಾನೆ.

೧೫೯-೧೬೦. ಇನ್ನು ಮೇಲೆ ಕಾರ್ಪಾಸಪರ್ವತವನ್ನು ಹೇಳುತ್ತೇನೆ. ಇದರ ದಾನದಿಂದ ಉತ್ತಮವಾದ ಸರ್ವಸೌಖ್ಯವನ್ನು ಕೊಡುವ ರುದ್ರನ ಸ್ಥಾನವನ್ನು ಹೊಂದುತ್ತಾನೆ.

೧೬೧-೧೬೨. ಈ ಹತ್ತಿಯ ಪರ್ವತವು ಇಪ್ಪತ್ತು ಮಣವಾದರೆ ಉತ್ತಮವು. ಹತ್ತು ಮಣವಾದರೆ ಮಧ್ಯಮವು. ಐದು ಮಣವಾದರೆ ಕನಿಷ್ಠವು. ಬಡವನಾದರೆ ಒಂದು ಮಣದಿಂದಲಾದರೂ ಮಾಡಬೇಕು. ಲೋಭಮಾಡಬಾರದು. ಉಳಿದ ದೆಲ್ಲವೂ ಧಾನ್ಯಪರ್ವತದಂತೆ ತಿಳಿ.

ಪ್ರಭಾತಾಯಾಂ ತು ಶರ್ವರ್ಯಾಂ ದದ್ಯಾದಿದಮುದೀರಯೇತ್ ।
ತ್ವಮೇವ ಪ್ರಾವರೋ ಯಸ್ಮಾಲ್ಲೋಕಾನಾನಾಮಿಹ ಸರ್ವದಾ ॥ ೧೬೩ ॥

ಕಾರ್ಪಾಸಾದ್ರೇ ನಮಸ್ತಸ್ಮಾದಘೌಘಧ್ವಂಸನೋ ಭವ ।
ಇತಿ ಕಾರ್ಪಾಸಶೈಲೇಂದ್ರಂ ಯೋ ದದ್ಯಾಚ್ಛರ್ವಸನ್ನಿಧೌ ॥ ೧೬೪ ॥

ರುದ್ರಲೋಕೇ ವಸೇತ್ಕಲ್ಪಂ ತತೋ ರಾಜಾ ಭವೇದಿಹ ।
ಅತಃ ಪರಂ ಪ್ರವಕ್ಷ್ಯಾಮಿ ಘೃತಾಚಲಮನುತ್ತಮಂ ॥ ೧೬೫ ॥

ತೇಜೋಮಯಂ ಘೃತಂ ದಿವ್ಯಂ ಮಹಾಪಾತಕನಾಶನಂ ।
ವಿಂಶತ್ಯಾ ಘೃತಕುಂಭಾನಾಮುತ್ತಮಸ್ಸ್ಯಾದ್ಘೃತಾಚಲಃ ॥ ೧೬೬ ॥

ದಶಭಿರ್ಮಧ್ಯಮಃ ಪ್ರೋಕ್ತಃ ಪಂಚಭಿಸ್ತ್ವಧಮಸ್ಸ್ಮೃತಃ ।
ಅಲ್ಪವಿತ್ತೋಽಪಿ ಕುರ್ವೀತ ದ್ವಾಭ್ಯಾಮಿಹ ವಿಧಾನತಃ ॥ ೧೬೭ ॥

---

೧೬೩. ಎಲ್ಲವನ್ನೂ ಪೂಜೆಮಾಡಿ ಬೆಳಿಗ್ಗೆ ಈ ಮಂತ್ರವನ್ನು ಹೇಳಬೇಕು. ಎಲೈ ಹತ್ತಿಯೇ, ಈ ಲೋಕಕ್ಕೆಲ್ಲಾ ನೀನೇ ಹೊದ್ದಿಕೆಯಾಗಿ ಉಳ್ಳವನು. ಎಲೈ ಕಾರ್ಪಾಸಾದ್ರಿಯೇ, ನಿನಗೆ ನಮಸ್ಕಾರವು. ನನ್ನ ಪಾಪದ ಸ್ವರೂಪವನ್ನು ನಾಶ ಮಾಡು.

೧೬೪. ಈರೀತಿ ಹತ್ತಿಯ ಬೆಟ್ಟವನ್ನು ಶಿವಸನ್ನಿಧಿಯಲ್ಲಿ ಕೊಟ್ಟವನು ರುದ್ರ ಲೋಕದಲ್ಲಿ ವಾಸಮಾಡುತ್ತಾನೆ. ಅನಂತರ ರಾಜನಾಗಿ ಹುಟ್ಟುತ್ತಾನೆ.

೧೬೫. ಇನ್ನುಮೇಲೆ ಘೃತಾಚಲವನ್ನು ಹೇಳುತ್ತೇನೆ. ತುಪ್ಪವು ತೇಜೋ ಮಯವಾದುದು. ದಿವ್ಯವಾದುದು. ಮಹಾಪಾತಕವನ್ನು ನಾಶಮಾಡುತ್ತದೆ.

೧೬೬-೧೬೭. ಇಪ್ಪತ್ತು ಬಿಂದಿಗೆಗಳಿಂದ ಕೂಡಿದ ಘೃತಾಚಲವು ಉತ್ತಮವು. ಹತ್ತು ಬಿಂದಿಗೆಯದು ಮಧ್ಯಮವು. ಐದು ಬಿಂದಿಗೆಯದು ಅಧಮವು. ಬಡವ ನಾದವನು ಎರಡು ಬಿಂದಿಗೆಯಿಂದ ಮಾಡಬಹುದು.

**ವಿಷ್ಕಂಭಪರ್ವತಾಂಸ್ತದ್ವಚ್ಚತುರ್ಭಾಗೇಣ ಕಲ್ಪಯೇತ್ ।**
**ಶಾಲಿತಂಡುಲಪಾತ್ರಾಣಿ ಕುಂಭೋಪರಿ ನಿವೇಶಯೇತ್ ॥ ೧೬೮ ॥**

**ಕಾರಯೇತ್ಸಂಹತಾನುಚ್ಚಾನ್ಯತ್ನವಾನ್ಸವಿಧಾನತಃ ।**
**ವೇಷ್ಟಯೇಚ್ಛುಕ್ಲವಾಸೋಭಿರಿಕ್ಷುದಂಡಂ ಫಲಾದಿಕೈಃ ॥ ೧೬೯ ॥**

**ಧಾನ್ಯಪರ್ವತವಚ್ಛೇಷಂ ವಿಧಾನಮಿಹ ಪಠ್ಯತೇ ।**
**ಅಧಿವಾಸನಪೂರ್ವಂ ಹಿ ತದ್ವದ್ಧೋಮಸುರಾರ್ಚನಂ ॥ ೧೭೦ ॥**

**ಪ್ರಭಾತಾಯಾಂ ತು ಶರ್ವರ್ಯಾಂ ಗುರುವೇ ವಿನಿವೇದಯೇತ್ ।**
**ವಿಷ್ಕಂಭಪರ್ವತಾಂಸ್ತದ್ವದೃತ್ವಿಗ್ಭ್ಯಶ್ಶಾಂತಮಾನಸಃ ॥ ೧೭೧ ॥**

**ಸಂಯೋಗಾದ್ಘೃತಮುತ್ಪನ್ನಂ ಯಸ್ಮಾದಮೃತತೇಜಸಾ ।**
**ತಸ್ಮಾದ್ಘೃತಾರ್ಚಿರ್ವಿಶ್ವಾತ್ಮಾ ಪ್ರೀಯತಾಮತ್ರ ಶಂಕರಃ ॥ ೧೭೨ ॥**

---

೧೬೮. ಉಪಪರ್ವತಗಳನ್ನು ಅವುಗಳ ನಾಲ್ಕನೆಯ ಒಂದು ಭಾಗದಿಂದ ಮಾಡಬೇಕು. ಅಕ್ಕಿಯ ಪಾತ್ರೆಗಳನ್ನು ಆ ಕುಂಭಗಳ ಮೇಲಿಡಬೇಕು.

೧೬೯. ಮಿಕ್ಕವುಗಳನ್ನು ಹೆಚ್ಚುಕಡಿಮೆಯನ್ನು ನೋಡಿಕೊಂಡು ವಿಧಿವತ್ತಾಗಿ ಮಾಡಬೇಕು. ಅವೆಲ್ಲವನ್ನೂ ಬಿಳಿಯ ಬಟ್ಟೆಯಿಂದ ಸುತ್ತಬೇಕು. ಕಬ್ಬಿನ ಕೋಲಿಗೆ ಫಲಗಳನ್ನು ಯಥಾಯೋಗ್ಯವಾಗಿ ಇಡಬೇಕು.

೧೭೦. ಮಿಕ್ಕವೆಲ್ಲವೂ ಧಾನ್ಯಪರ್ವತದಂತೆಯೇ. ಅವುಗಳ ಅಧಿವಾಸನ, ಹೋಮ, ಪೂಜೆಗಳೆಲ್ಲ ಹಿಂದಿನಂತೆಯೇ.

೧೭೧. ಪೂಜೆಮಾಡಿ ಬೆಳಿಗ್ಗೆ ಎದ್ದು ಆ ಪರ್ವತವನ್ನು ಗುರುವಿಗೂ ಉಪಪರ್ವತಗಳನ್ನು ಋತ್ವಿಕ್ಕುಗಳಿಗೂ ಕೊಡಬೇಕು.

೧೭೨. ಅಮೃತಕ್ಕೂ ತೇಜಸ್ಸಿಗೂ ಸಂಯೋಗವಾಗಿ ಅದರಿಂದ ತುಪ್ಪವು ಹುಟ್ಟಿತು. ಆದ್ದರಿಂದ ಘೃತವು ವಿಶ್ವಾತ್ಮವಾಗಿದೆ. ಇದರಿಂದ ಶಂಕರನು ಪ್ರೀತಿ ಹೊಂದಲಿ.

ಯಸ್ಮಾತ್ತೇಜೋಮಯಂ ಬ್ರಹ್ಮ ಘೃತೇ ಚೈವ ವ್ಯವಸ್ಥಿತಂ ।
ಘೃತಪರ್ವತರೂಪೇಣ ಮಾಮತಃ ಪಾಹಿ ಭೂಧರ ॥ ೧೭೩ ॥

ಅನೇನ ವಿಧಿನಾ ದದ್ಯಾದ್ಘೃತಾಚಲಮನುತ್ತಮಂ ।
ಮಹಾಪಾತಕಯುಕ್ತೋಽಪಿ ಲೋಕಮಾಯಾತಿ ಶಾಂಭವಂ ॥ ೧೭೪ ॥

ಹಂಸಸಾರಸಯುಕ್ತೇನ ಕಿಂಕಿಣೀಜಾಲಮಾಲಿನಾ ।
ವಿಮಾನೇನಾಪ್ಸರೋಭಿಶ್ಚ ಸಿದ್ಧವಿದ್ಯಾಧರೈರ್ಯುತಃ ॥ ೧೭೫ ॥

ವಿಚರೇತ್ಪಿತೃಭಿಸ್ಸರ್ವಂ ಯಾವದಾಭೂತಸಂಪ್ಲವಂ ।
ಅತಃ ಪರಂ ಪ್ರವಕ್ಷ್ಯಾಮಿ ರತ್ನಾಚಲಮನುತ್ತಮಂ ॥ ೧೭೬ ॥

ಮುಕ್ತಾಫಲಸಹಸ್ರೇಣ ಪರ್ವತಸ್ಸ್ಯಾದನುತ್ತಮಃ ।
ಮಧ್ಯಮಃ ಪಂಚಶತಿಕಃ ತ್ರಿಶತೇನಾಧಮಸ್ಸ್ಮೃತಃ ॥ ೧೭೭ ॥

---

೧೭೩. ತೇಜೋಮಯವಾದುದು ಬ್ರಹ್ಮವು. ಬ್ರಹ್ಮವೂ ಕೂಡ ತುಪ್ಪದಲ್ಲಿಯೇ ಇದೆ. ಆದ್ದರಿಂದ ನೀನು ಘೃತಪರ್ವತರೂಪದಿಂದ ನನ್ನನ್ನು ಕಾಪಾಡು.

೧೭೪-೧೭೫. ಈ ವಿಧಿಯಿಂದ ಘೃತಾಚಲವನ್ನು ದಾನಮಾಡಬೇಕು. ಮಹಾಪಾಪಗಳನ್ನು ಮಾಡಿದ್ದರೂ, ಹಂಸಸಾರಸಗಳಿಂದ ಕೂಡಿದ, ಗೆಜ್ಜೆಗಳಿಂದಲಂಕೃತವಾದ, ಅಪ್ಸರಸ್ತ್ರೀಯರೂ, ಸಿದ್ಧರೂ, ಚಾರಣರೂ ಕುಳಿತಿರುವ ವಿಮಾನದಲ್ಲಿ ಶಾಂಭವಲೋಕವನ್ನು ಹೊಂದುತ್ತಾನೆ. ಅಲ್ಲದೇ ಅದೇ ವಿಮಾನದಲ್ಲಿ ಪಿತೃಗಳೊಡನೆ ಪ್ರಳಯಕಾಲದವರೆಗೂ ಸಂಚರಿಸುತ್ತಾನೆ.

೧೭೬-೧೭೭. ಇನ್ನುಮೇಲೆ ರತ್ನಾಚಲವನ್ನು ಹೇಳುತ್ತೇನೆ. ಸಾವಿರ ಮುತ್ತುಗಳಿಂದ ಮಾಡಿದರೆ ಉತ್ತಮಪರ್ವತವು. ಐನೂರು ಮುತ್ತುಗಳಾದರೆ ಮಧ್ಯಮ ಪರ್ವತವು. ಮುನ್ನೂರು ಮುತ್ತುಗಳಾದರೆ ಅಧಮಪರ್ವತವು. ಅವವುಗಳ ನಾಲ್ಕನೇ ಒಂದು ಭಾಗದಿಂದ ಉಪಪರ್ವತಗಳನ್ನು ಮಾಡಬೇಕು.

ಚತುರ್ಭಾಗೇಣ ವಿಷ್ಕಂಭಪರ್ವತಾಸ್ಸ್ಯುಸ್ಸಮಂತತಃ ।
ಪೂರ್ವೇಣ ವಜ್ರಗೋಮೇದೌ ದಕ್ಷಿಣೇನೇಂದ್ರನೀಲಕೌ ॥ ೧೭೮ ॥

ಪುಷ್ಯರಾಗಯುತಃ ಕಾರ್ಯೋ ವಿದ್ವದ್ಭಿರ್ಗಂಧಮಾದನಃ ।
ವೈಡೂರ್ಯವಿದ್ರುಮೈಃ ಪಶ್ಚಾತ್ಸಮ್ಮಿಶ್ರೋ ವಿಪುಲಾಚಲಃ ॥ ೧೭೯ ॥

ಪದ್ಮ ರಾಗೈಸ್ಸಸೌವರ್ಣೈರುತ್ತರೇಣಾಪಿ ವಿನ್ಯಸೇತ್ ।
ಧಾನ್ಯಪರ್ವತವತ್ಸರ್ವಮತ್ರಾಪಿ ಪರಿಕಲ್ಪಯೇತ್ ॥ ೧೮೦ ॥

ತದ್ವದಾವಾಹನಂ ಕೃತ್ವಾ ವೃಕ್ಷಾನ್ದೇವಾಂಶ್ಚ ಕಾಂಚನಾನ್ ।
ಪೂಜಯೇತ್ಪುಷ್ಪಪಾನೀಯೈಃ ಪ್ರಭಾತೇ ಸ್ಯಾದ್ವಿಸರ್ಜನಂ ॥ ೧೮೧ ॥

ಪೂರ್ವವದ್ಗುರುಋತ್ವಿಗ್ಭ್ಯ ಇಮಂ ಮಂತ್ರಮುದೀರಯೇತ್ ।
ಯಥಾ ದೇವಗಣಾಸ್ಸರ್ವೇ ಸರ್ವರತ್ನೇಷ್ವವಸ್ಥಿತಾಃ ॥ ೧೮೨ ॥

---

೧೭೮-೧೭೯. ಪೂರ್ವದಿಕ್ಕಿನಲ್ಲಿ ವಜ್ರಗೋಮೇದಗಳನ್ನೂ, ದಕ್ಷಿಣದಲ್ಲಿ ಇಂದ್ರನೀಲವನ್ನೂ, ಹಾಕಿ ಪುಷ್ಯರಾಗವನ್ನು ಸೇರಿಸಿ ಗಂಧಮಾದನ ಪರ್ವತವನ್ನು ಮಾಡಬೇಕು. ವೈಡೂರ್ಯ ವಿದ್ರುಮಗಳಿಂದ ಕೂಡಿಸಿ ಆ ಪರ್ವತವನ್ನು ಪಶ್ಚಿಮದಲ್ಲಿ ಮಾಡಬೇಕು.

೧೮೦. ಪದ್ಮರಾಗ ಸುವರ್ಣಗಳಿಂದ ಉತ್ತರದಲ್ಲಿ ಉಪಪರ್ವತವನ್ನು ಮಾಡಬೇಕು ಧಾನ್ಯಪರ್ವತದಂತೆಯೇ ಎಲ್ಲವನ್ನೂ ಇಲ್ಲಿಯೂ ತಿಳಿಯಬೇಕು. ಮಾಡಬೇಕು.

೧೮೧. ಮರಗಳನ್ನು ದೇವತೆಗಳನ್ನು ಹಿಂದಿನಂತೆಯೇ ಮಾಡಬೇಕು. ಹೂವು ನೀರುಗಳಿಂದ ಪೂಜಿಸಿ, ಬೆಳಿಗ್ಗೆ ವಿಸರ್ಜನೆಮಾಡಬೇಕು.

೧೮೨-೧೮೩. ಹಿಂದಿನಂತೆಯೇ ಪ್ರಧಾನಪರ್ವತವನ್ನು ಗುರುವಿಗೂ, ಉಪಪರ್ವತಗಳನ್ನು ಋತ್ವಿಜರಿಗೂ ಈ ಮಂತ್ರವನ್ನು ಹೇಳಿಕೊಡಬೇಕು. ದೇವತೆಗಳೆಲ್ಲರೂ ರತ್ನಗಳಲ್ಲಿಯೇ ಕುಳಿತಿದ್ದಾರೆ. ನೀನು ರತ್ನಮಯನು. ಆದ್ದರಿಂದ

ತ್ವಂ ಚ ರತ್ನಮಯೋ ನಿತ್ಯಮತಃ ಪಾಹಿ ಮಹಾಚಲ ।
ಯಸ್ಮಾದ್ರತ್ನಪ್ರದಾನೇನ ತುಷ್ಟಿಮೇತಿ ಜನಾರ್ದನಃ ॥ ೧೮೩ ॥

ಪೂಜಾಮಂತ್ರಪ್ರದಾನೇನ ತಸ್ಮಾನ್ನಃ ಪಾಹಿ ಸರ್ವತಃ ।
ಅನೇನ ವಿಧಿನಾ ಯಸ್ತು ದದ್ಯಾದ್ರತ್ನಮಹಾಗಿರಿಂ ॥ ೧೮೪ ॥

ಸ ಯಾತಿ ವೈಷ್ಣವಂ ಲೋಕಮಮರೇಶ್ವರಪೂಜಿತಃ ।
ಯಾವತ್ಕಲ್ಪಶತಂ ಸಾಗ್ರಂ ವಸೇತ್ಸ್ವರ್ಗೇ ನರಾಧಿಪ ॥ ೧೮೫ ॥

ರೂಪಾರೋಗ್ಯಗುಣೋಪೇತಸ್ಸಪ್ತದ್ವೀಪಾಧಿಪೋ ಭವೇತ್ ।
ಬ್ರಹ್ಮಹತ್ಯಾದಿಕಂ ಕಿಂಚಿದತ್ರಾಮುತ್ರಾಥವಾ ಕೃತಂ ॥ ೧೮೬ ॥

ತತ್ಸರ್ವಂ ನಾಶಮಾಯಾತಿ ಗಿರಿವ್ರಜ್ರಹತೋ ಯಥಾ ।
ಅತಃ ಪರಂ ಪ್ರವಕ್ಷ್ಯಾಮಿ ರೌಪ್ಯಾಚಲಮನುತ್ತಮಂ ॥ ೧೮೭ ॥

---

ಮಹಾಚಲವೇ ನನ್ನನ್ನು ಕಾಪಾಡು. ಜನಾರ್ದನನು ರತ್ನದ ದಾನದಿಂದ ತುಷ್ಟನಾಗುವುದರಿಂದ ನನ್ನನ್ನು ಕಾಪಾಡು ಎಂದು ಈ ಪೂಜಾಮಂತ್ರದಿಂದ ಅಚಲವನ್ನು ಕೊಡಬೇಕು.

೧೮೪-೧೮೫. ಈ ವಿಧಿಯಿಂದ ರತ್ನಗಿರಿಯನ್ನು ದಾನಮಾಡಿದರೆ ಅವನು ದೇವತೆಗಳಿಂದ ಪೂಜಿಸಲ್ಪಟ್ಟು ವೈಷ್ಣವಲೋಕವನ್ನು ಹೊಂದಿ, ಸ್ವರ್ಗದಲ್ಲಿ ನೂರು ಕಲ್ಪಗಳವರೆಗೆ ಇರುತ್ತಾನೆ. ಅನಂತರ ಈ ಲೋಕದಲ್ಲಿ ಹುಟ್ಟಿ ರೂಪ ಆಯುಸ್ಸು ಆರೋಗ್ಯವುಳ್ಳವನಾಗಿ ಏಳುದ್ವೀಪಕ್ಕೂ ಅಧಿಪತಿಯಾಗುತ್ತಾನೆ.

೧೮೬. ಬ್ರಹ್ಮಹತ್ಯಾದಿಪಾಪಗಳನ್ನು ಈ ಜನ್ಮದಲ್ಲಾಗಲಿ ಹಿಂದಿನ ಜನ್ಮಗಳಲ್ಲಾಗಲೀ ಯಾವಾಗ ಮಾಡಿದ್ದರೂ ಅವೆಲ್ಲವೂ ವ್ರಜಾಯುಧದಿಂದ ಪರ್ವತಗಳು ನಾಶವಾದಂತೆ ನಾಶವಾಗುತ್ತವೆ.

೧೮೭. ಇನ್ನುಮೇಲೆ ರೌಪ್ಯ (ಬೆಳ್ಳಿ) ಅಚಲವನ್ನು ಹೇಳುತ್ತೇನೆ. ಇದನ್ನು ದಾನಮಾಡುವುದರಿಂದ ಮನುಷ್ಯನು ಸೋಮಲೋಕವನ್ನು ಹೊಂದುತ್ತಾನೆ.

**ಯತ್ಪ್ರದಾನಾನ್ನರೋ ಯಾತಿ ಸೋಮಲೋಕಂ ನೃಪೋತ್ತಮ ।**
**ದಶಭಿಃ ಫಲಸಾಹಸ್ರೈರುತ್ತಮೋ ರಜತಾಚಲಃ ॥ ೧೮೮ ॥**

**ಪಂಚಭಿರ್ಮಧ್ಯಮಃ ಪ್ರೋಕ್ತಸ್ತದರ್ಧೇನಾಧಮಸ್ಸ್ಮೃತಃ ।**
**ಅಶಕ್ತೋ ವಿಂಶತೇರೂರ್ಧ್ವಂ ಕಾರಯೇಚ್ಛಕ್ತಿತಸ್ಸದಾ ॥ ೧೮೯ ॥**

**ವಿಷ್ಕಂಭಪರ್ವತಾಂಸ್ತದ್ವತ್ತುರೀಯಾಂಶೇನ ಕಲ್ಪಯೇತ್ ।**
**ಪೂರ್ವವದ್ರಾಜತಾನ್ಕುರ್ಯಾನ್ಮಂದರಾದೀನ್ವಿಧಾನತಃ ॥ ೧೯೦ ॥**

**ಕಲಧೌತಮಯಾಂಸ್ತದ್ವಲ್ಲೋಕೇಶಾನ್ಕಾರಯೇದ್ಬುಧಃ ।**
**ಬ್ರಹ್ಮವಿಷ್ಣ್ವರ್ಕವಾನ್ಕಾರ್ಯೋ ನಿತಂಬೋಽತ್ರ ಹಿರಣ್ಮಯಃ । ॥ ೧೯೧ ॥**

**ರಾಜತಂ ಸ್ಯಾದ್ಯದನ್ಯೇಷಾಂ ಸರ್ವತ್ರೇಹ ಚ ಕಾಂಚನಂ ।**
**ಶೇಷಂ ಚ ಪೂರ್ವವತ್ಕುರ್ಯಾದ್ಧೋಮಜಾಗರಣಾದಿಕಂ ॥ ೧೯೨ ॥**

---

೧೮೮-೧೮೯. ಹತ್ತುಸಾವಿರ ಪಲ ಬೆಳ್ಳಿಯಿಂದ ಮಾಡಿದರೆ ಉತ್ತಮವು. ಐದುಸಾವಿರ ಪಲದಿಂದ ಮಾಡಿದರೆ ಮಧ್ಯಮವು. ಅದರ ಅರ್ಧ ಎಂದರೆ ಎರಡೂವರೆ ಸಾವಿರದಿಂದ ಮಾಡಿದರೆ ಅಧಮವೆಂದು ತಿಳಿ. ಬಹಳ ಅಶಕ್ತನಾಗಿರುವ ಪಕ್ಷದಲ್ಲಿ ಇಪ್ಪತ್ತು ಪಲಗಳಿಗಿಂತ ಮೇಲೆ ಮಾಡಿಸಬೇಕು.

೧೯೦. ಉಪಪರ್ವತಗಳನ್ನು ಕಾಲುಭಾಗದಿಂದ ಮಾಡಿಸಬೇಕು. ಮಂದರಾದಿ ಪರ್ವತಗಳನ್ನು ಹಿಂದೆ ಹೇಳಿದ ರೀತಿಯಲ್ಲಿ ಬೆಳ್ಳಿ ಮುಂತಾದುವುಗಳಿಂದ ಮಾಡ ಬೇಕು.

೧೯೧. ಬೆಳ್ಳಿಯಲ್ಲಿ ಲೋಕಪಾಲಕರನ್ನೂ ಹಿಂದಿನಂತೆ ಮಾಡಿಸಬೇಕು. ಬ್ರಹ್ಮ, ವಿಷ್ಣು, ಸೂರ್ಯರನ್ನೂ ನಿತಂಬಪ್ರದೇಶವನ್ನೂ ಚಿನ್ನದಿಂದ ಮಾಡಿಸಬೇಕು.

೧೯೨. ಮಿಕ್ಕದೆಲ್ಲಕ್ಕೂ ಬೆಳ್ಳಿಯೇ ಆಗಬೇಕು. ಈ ಬ್ರಹ್ಮಾದಿಗಳಿಗೆ ಮಾತ್ರ ಚಿನ್ನವಾಗಬೇಕು. ಹೋಮ ಜಾಗರಣೆ ಇವೆಲ್ಲವನ್ನೂ ಮೊದಲಿನಂತೆಯೇ ತಿಳಿಯ ಬೇಕು.

ದದ್ಯಾತ್ತದ್ವತ್ಪ್ರಭಾತಾಂತೇ ಗುರವೇ ರೌಪ್ಯಪರ್ವತಂ ।
ವಿಷ್ಕಂಭಶೈಲಾನೃತ್ವಿಗ್ಭ್ಯಃ ಪೂಜ್ಯ ವಸ್ತ್ರವಿಭೂಷಣೈಃ ॥ ೧೯೩ ॥

ಇಮಂ ಮಂತ್ರಂ ಪಠನ್ದದ್ಯಾದ್ದರ್ಭಪಾಣಿರ್ವಿಮತ್ಸರಃ ।
ಪಿತೄಣಾಂ ವಲ್ಲಭಂ ಯಸ್ಮಾದ್ವಿಷ್ಣೋರ್ವಾ ಶಂಕರಸ್ಯ ಚ ॥ ೧೯೪ ॥

ರಜತಂ ಪಾಹಿ ತಸ್ಮಾನ್ನಶ್ಶೋಕಸಂಸಾರಸಾಗರಾತ್ ।
ಇತ್ಥಂ ನಿವೇಶ್ಯ ಯೋ ದದ್ಯಾದ್ರಜತಾಚಲಮುತ್ತಮಂ ॥ ೧೯೫ ॥

ಗವಾಮಯುತಸಾಹಸ್ರಫಲಂ ಪ್ರಾಪ್ನೋತಿ ಮಾನವಃ ।
ಸೋಮಲೋಕೇ ಸ ಗಂಧರ್ವೈಃ ಕಿನ್ನರಾಪ್ಸರಸಾಂ ಗಣೈಃ ॥ ೧೯೬ ॥

ಪೂಜ್ಯಮಾನೋ ವಸೇದ್ವಿದ್ವಾನ್ಯಾವದಾಭೂತಸಂಪ್ಲವಂ ।
ಅಥಾತಸ್ಸಂಪ್ರವಕ್ಷ್ಯಾಮಿ ಶರ್ಕರಾಚಲ ಮುತ್ತಮಂ ॥ ೧೯೭ ॥

---

೧೯೩. ಮಾರನೆಯ ದಿನ ಬೆಳಿಗ್ಗೆ ಆ ಪರ್ವತವನ್ನು ಗುರುವಿಗೂ, ಉಪಪರ್ವತಗಳನ್ನು ಋತ್ವಿಕುಗಳಿಗೂ ವಸ್ತ್ರಭೂಷಣಗಳಿಂದ ಅಲಂಕರಿಸಿ ಕೊಡಬೇಕು.

೧೯೪. ಈ ಮಂತ್ರವನ್ನು ಹೇಳಬೇಕು. ದರ್ಭೆಯ ಪವಿತ್ರವನ್ನು ಹಾಕಿಕೊಂಡು ಇರಬೇಕು. ಪಿತೃಗಳಿಗೂ ವಿಷ್ಣುವಿಗೂ ಶಂಕರನಿಗೂ ರಜತವು ಪ್ರೀತಿಪಾತ್ರವಾದುದು. ಆದ್ದರಿಂದ ಎಲೈ ರಜತವೇ, ಈ ದುಃಖಸಾಗರದಿಂದ ನನ್ನನ್ನು ಕಾಪಾಡು.

೧೯೫-೧೯೬. ಈರೀತಿಯಾಗಿ ಇಟ್ಟು ಯಾವನು ರಜತಾಚಲದ ದಾನವನ್ನು ಮಾಡುತ್ತಾನೆಯೋ ಅವನು ಮೂರುಸಾವಿರ ಗೋಗಳನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ. ಗಂಧರ್ವರೊಡನೆಯೂ ಅಪ್ಸರರೊಡನೆಯೂ ಪೂಜೆಯನ್ನು ಹೊಂದುತ್ತಾ ಪ್ರಳಯಕಾಲವರೆಗೂ ಸೋಮಲೋಕದಲ್ಲಿ ಸುಖಿಸುತ್ತಾನೆ.

೧೯೭. ಇನ್ನು ಶರ್ಕರಾಚಲವನ್ನು ಹೇಳುತ್ತೇನೆ. ಇದನ್ನು ದಾನಮಾಡುವುದರಿಂದ ವಿಷ್ಣು, ರುದ್ರ, ಅರ್ಕರು ತೃಪ್ತಿಹೊಂದುತ್ತಾರೆ.

ಯಸ್ಯ ಪ್ರದಾನಾದ್ವಿಷ್ಣ್ವರ್ಕರುದ್ರಾಸ್ತುಷ್ಯಂತಿ ಸರ್ವದಾ ।
ಅಷ್ಟಾಭಿಶ್ಯರ್ಕರಾಭಾರೈರುತ್ತಮಸ್ಸ್ಯಾನ್ಮಹಾಚಲಃ ॥ ೧೯೮ ॥

ಚತುರ್ಭಿರ್ಮಧ್ಯಮಃ ಪ್ರೋಕ್ತೋ ಭಾರಾಭ್ಯಾಮಧಮಸ್ಸ್ಮೃತಃ ।
ಭಾರೇಣ ಚಾರ್ಧಭಾರೇಣ ಕುರ್ಯಾಚ್ಚ ಸ್ವಲ್ಪವಿತ್ತವಾನ್ ॥ ೧೯೯ ॥

ವಿಷ್ಕಂಭಪರ್ವತಾನ್ಕುರ್ಯಾತ್ತುರೀಯಾಂಶೇನ ಮಾನವಃ ।
ಧಾನ್ಯಪರ್ವತವತ್ಸರ್ವಂ ಹೈಮಾಮರಸುಸಂಯುತಂ ॥ ೨೦೦ ॥

ಮೇರೋರುಪರಿ ತದ್ವಚ್ಚ ಸ್ಥಾಪ್ಯಂ ಹೇಮತರುತ್ರಯಂ ।
ಮಂದಾರಃ ಪಾರಿಜಾತಶ್ಚ ತೃತೀಯಃ ಕಲ್ಪಪಾದಪಃ ।
ಏತದ್ವೃಕ್ಷತ್ರಯಂ ಮೂರ್ಧ್ನಿ ಪರ್ವತೇಷು ನಿವೇಶಯೇತ್ ॥ ೨೦೧ ॥

ಹರಿಚಂದನಸಂತಾನೌ ಪೂರ್ವಪಶ್ಚಿಮಭಾಗಯೋಃ ।
ನಿವೇಶ್ಯೌ ಸರ್ವಶೈಲೇಷು ವಿಶೇಷಾಚ್ಛರ್ಕರಾಚಲೇ ॥ ೨೦೨ ॥

---

೧೯೮. ಎಂಟುಮಣ ಸಕ್ಕರೆಯಿಂದ ಮಾಡಿದ ಅಚಲವು ಉತ್ತಮವು. ನಾಲ್ಕುಮಣದಿಂದ ಮಾಡಿದರೆ ಅದು ಮಧ್ಯಮವು. ಎರಡು ಮಣವಾದರೆ ಅಧಮವು.

೧೯೯-೨೦೦. ಒಂದು ಅಥವಾ ಅರ್ಧಮಣದಿಂದ ಬಡವನು ಮಾಡಬೇಕು. ನಾಲ್ಕನೇ ಒಂದುಭಾಗದಿಂದ ಉಪಪರ್ವತಗಳನ್ನು ಮಾಡಬೇಕು. ಮಿಕ್ಕುದೆಲ್ಲವೂ ಧಾನ್ಯಪರ್ವತದಂತೆ. ದೇವತೆಗಳೂ ಚಿನ್ನವೂ ಇರತಕ್ಕದ್ದು.

೨೦೧. ಮೇರುವಿನ ಮೇಲುಭಾಗದಲ್ಲಿ ಮಂದಾರ, ಪಾರಿಜಾತ, ಕಲ್ಪವೃಕ್ಷ ಈ ಮೂರನ್ನೂ ಇಡಬೇಕು.

೨೦೨. ಹರಿಚಂದನ, ಸಂತಾನಮರಗಳನ್ನು ಕ್ರಮವಾಗಿ ಪೂರ್ವ ಪಶ್ಚಿಮೆಗಳಲ್ಲಿಡಬೇಕು. ಎಲ್ಲಾ ಶೈಲದಲ್ಲಿಯೂ ಇವು ಇರಬೇಕಾದರೂ ಈ ಶರ್ಕರಾಚಲದಲ್ಲಿ ಇದ್ದೇ ತಿರಬೇಕು.

ಮಂದರೇ ಕಾಮದೇವಶ್ಚ ಪ್ರತ್ಯಗ್ವಕ್ತ್ರಸ್ಸದಾ ಭವೇತ್ ।
ಗಂಧಮಾದನಶೃಂಗೇ ತು ಧನದಸ್ಸ್ಯಾದುದಙ್ಮುಖಃ ॥ ೨೦೩ ॥

ಪ್ರಾಙ್ಮುಖೋ ಹೇಮಮೂರ್ತಿಸ್ತು ಹಂಸಸ್ಸ್ಯಾದ್ವಿಪುಲಾಚಲೇ ।
ಹೈಮೀ ಸುಪಾರ್ಶ್ವೇ ತು ಭವೇತ್ಸುರಭೀ ದಕ್ಷಿಣಾಮುಖೀ ॥ ೨೦೪ ॥

ಧಾನ್ಯಪರ್ವತವತ್ಸರ್ವಮಾವಾಹನಮುಖಾದಿಕಂ ।
ಕೃತ್ವಾಥ ಗುರವೇ ದದ್ಯಾನ್ಮಧ್ಯಮಂ ಪರ್ವತೋತ್ತಮಂ ॥ ೨೦೫ ॥

ಋತ್ವಿಗ್ಭ್ಯಶ್ಚತುರಶ್ಶೈಲಾನಿಮಾನ್ಮಂತ್ರಾನುದೀರಯೇತ್ ।
ಸೌಭಾಗ್ಯಾಮೃತಸಾರೋಽಯಂ ಪರಮಶ್ಶರ್ಕರಾಚಲಃ ॥ ೨೦೬ ॥

ತಸ್ಮಾದಾನಂದಕಾರೀ ತ್ವಂ ಭವ ಶೈಲೇಂದ್ರ ಸರ್ವದಾ ।
ಅಮೃತಂ ಪಿಬತಾಂ ಯೇ ತು ಪತಿತಾ ಭುವಿ ಶೀಕರಾಃ ॥ ೨೦೭ ॥

---

೨೦೩-೨೦೪. ಮಂದರಪರ್ವತದಲ್ಲಿ ಕಾಮದೇವನು ಪಶ್ಚಿಮಮುಖವಾಗಿರಬೇಕು. ಗಂಧಮಾದನಪರ್ವತದಲ್ಲಿ ಕುಬೇರನ ಪ್ರತಿಮೆಯನ್ನು ಉತ್ತರಮುಖಕ್ಕೆ ಇಟ್ಟಿರಬೇಕು. ವಿಪುಲಾಚಲದಲ್ಲಿ ಚಿನ್ನದ ಹಂಸವು ಪೂರ್ವಮುಖವಾಗಿರಬೇಕು. ಚಿನ್ನದ ಕಾಮಧೇನುವು ಸುಪಾರ್ಶ್ವಪರ್ವತದಲ್ಲಿ ದಕ್ಷಿಣಮುಖವಾಗಿರಬೇಕು.

೨೦೫. ಆವಾಹನೆ ವಿಸರ್ಜನೆ ಹೋಮಗಳೆಲ್ಲವೂ ಧಾನ್ಯಪರ್ವತದಂತೆ ನಡೆಯಬೇಕು. ಎಲ್ಲವೂ ಆದ ನಂತರ ಮುಖ್ಯಪರ್ವತವನ್ನು ಗುರುವಿಗೂ ಉಪಪರ್ವತಗಳನ್ನು ಋತ್ವಿಕ್ಕುಗಳಿಗೂ ಕೊಡಬೇಕು. ಈ ಮಂತ್ರಗಳನ್ನು ಹೇಳಬೇಕು.

೨೦೬-೨೦೭. ಸೌಭಾಗ್ಯ, ಅಮೃತ, ಇವುಗಳ ಉತ್ಕೃಷ್ಟಸಾರವೇ. ಈ ಶರ್ಕರಾಚಲವು. ಆದ್ದರಿಂದ ನೀನು ಆನಂದಕರನಾಗಿ ಯಾವಾಗಲೂ ನನಗೆ ಅಗು. ದೇವತೆಗಳು ಅಮೃತವನ್ನು ಕುಡಿಯುತ್ತಿರಲು ಅವರಿಂದ ತುಂತುರುಗಳು ಕೆಳಕ್ಕೆ ಬಿದ್ದವು. ಅದೇ ಶರ್ಕರವಾಯಿತು. ಅದರಿಂದ ಹುಟ್ಟಿದ ನೀನು ನಮಗೆ ಒಳ್ಳೆಯದನ್ನು ಮಾಡು.

**ದೇವಾನಾಂ ತತ್ಸಮುತ್ಥಸ್ತ್ವಂ ಪಾಹಿ ನಶ್ಶರ್ಕರಾಚಲ ।**
**ಮನೋಭವತನೋರ್ಮಧ್ಯಾದುದ್ಭೂತಾ ಶರ್ಕರಾಯತಃ ॥ ೨೦೮ ॥**

**ತನ್ಮಯೋಽಸಿ ಮಹಾಶೈಲ ಪಾಹಿ ಸಂಸಾರಸಾಗರಾತ್ ।**
**ಯೋ ದದ್ಯಾಚ್ಛರ್ಕರಾಶೈಲಮನೇನ ವಿಧಿನಾ ನರಃ ॥ ೨೦೯ ॥**

**ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಬ್ರಹ್ಮಮಂದಿರಂ ।**
**ಚಂದ್ರಾದಿತ್ಯಾರ್ಕಸಂಕಾಶಮಧಿರುಹ್ಯಾನುಜೀವಿಭಿಃ ॥ ೨೧೦ ॥**

**ಸಹೈವ ಯಾನಮುತ್ತಿಷ್ಠೇತ್ಸ ತು ವಿಷ್ಣುಪ್ರಭೋ ದಿವಿ ।**
**ತತಃ ಕಲ್ಪಶತಾಂತೇ ತು ಸಪ್ತದ್ವೀಪಾಧಿಪೋ ಭವೇತ್ ॥ ೨೧೧ ॥**

**ಆಯುರಾರೋಗ್ಯಸಂಪನ್ನೋ ಯಾವಜ್ಜನ್ಮಾಯುತತ್ರಯಂ ।**
**ಭೋಜನಂ ಶಕ್ತಿತಃ ಕುರ್ಯಾತ್ಸರ್ವಶೈಲೇಷ್ವಮತ್ಸರಃ ॥ ೨೧೨ ॥**

---

೨೦೮. ಮನ್ಮಥನ ಶರೀರಮಧ್ಯದಲ್ಲಿ ನೀನು ಹುಟ್ಟಿದ್ದೀಯೆ. ಎಲೈ ಸಕ್ಕರೆಯ ಬೆಟ್ಟವೇ, ನೀನು ಮನ್ಮಥನೇ ಆಗಿದ್ದೀಯೆ. ಈ ಸಂಸಾರಸಾಗರದಿಂದ ನನ್ನನ್ನು ಕಾಪಾಡು.

೨೦೯—೨೧೧. ಈ ವಿಧಿಯಿಂದ ಶರ್ಕರಾಶೈಲವನ್ನು ದಾನಮಾಡಿದವನು ಪಾಪದಿಂದ ಮುಕ್ತನಾಗಿ ಬ್ರಹ್ಮನ ಮಂದಿರವನ್ನು ಹೊಂದುತ್ತಾನೆ. ತನ್ನ ಆಳು ಗಳೊಡನೆ ಚಂದ್ರಸೂರ್ಯರಂತಿರುವ ವಿಮಾನವನ್ನು ಹತ್ತಿ, ಅಂತರಿಕ್ಷದಲ್ಲಿ ವಿಷ್ಣುವಿನಂತೆ ಪ್ರಕಾಶಿಸುತ್ತಾ ಹೋಗುತ್ತಾನೆ. ಅಲ್ಲಿ ನೂರು ಕಲ್ಪಗಳವರೆಗೂ ಇರುತ್ತಾನೆ. ಅನಂತರ ಹುಟ್ಟಿ ಸಪ್ತದ್ವೀಪಗಳಿಗೂ ಅಧಿಪತಿಯಾಗಿ ಆಯುಸ್ಸು ಆರೋಗ್ಯ ಐಶ್ವರ್ಯಗಳನ್ನು ಹೊಂದುತ್ತಾನೆ. ಸಾವಿರ ಜನ್ಮಗಳವರೆಗೂ ಆ ದ್ವೀಪಗಳಿಗೆ ಅಧಿಪತಿಯಾಗಿ ಹುಟ್ಟು ತ್ತಾನೆ.

೨೧೨-೨೧೩. ಎಲ್ಲಾ ಶೈಲಗಳ ವಿಷಯದಲ್ಲಿಯೂ ಭೋಜನವನ್ನು ಶಕ್ತಿಗೆ ಅನುಗುಣವಾಗಿ ಮಾಡಿಸಬೇಕು. ತಾನು ಕಾರ ಉಪ್ಪುಗಳನ್ನು ಬಿಟ್ಟು, ಆ ಬ್ರಾಹ್ಮಣರ

ಸ್ವಯಂ ಚಾಕ್ಷಾರಲವಣಮಶ್ನೀಯಾತ್ತದನುಜ್ಞಯಾ ।
ಪರ್ವತೋಪಸ್ಕರಾನ್ಸರ್ವಾನ್ಪ್ರಾಪಯೇದ್ಬ್ರಾಹ್ಮಣಾಲಯಂ ॥ ೨೧೩ ॥

ಏತತ್ತೇ ಸರ್ವಮಾಖ್ಯಾತಂ ಶೈಲದಾನಮನುತ್ತಮಂ ।
ಯದನ್ಯದ್ರೋಚತೇ ತುಭ್ಯಂ ತನ್ಮಾಂ ಪೃಚ್ಛಸ್ವ ಪಾರ್ಥಿವ ॥ ೨೧೪ ॥

॥ ಭೀಷ್ಮ ಉವಾಚ ॥

ಭಗವನ್ಭವಸಂಸಾರಸಾಗರೋತ್ತಾರಕಾರಕಂ ।
ಕಿಂಚಿದ್ವ್ರತಂ ಸಮಾಚಕ್ಷ್ವ ಸ್ವರ್ಗಾರೋಗ್ಯಸುಖಪ್ರದಂ ॥ ೨೧೫ ॥

॥ ಪುಲಸ್ತ್ಯ ಉವಾಚ ॥

ಸೌರಂ ಧರ್ಮಂ ಪ್ರವಕ್ಷ್ಯಾಮಿ ನಾಮ್ನಾ ಕಲ್ಯಾಣಸಪ್ತಮೀ ।
ವಿಶೋಕಸಪ್ತಮೀ ತದ್ವತ್ಫಲಕಾಮ್ಯೋಪಪಾದಿನೀ ॥ ೨೧೬ ॥

ಶರ್ಕರಾಸಪ್ತಮೀ ಪುಣ್ಯಾ ತಥಾ ಚಾಮಲಸಪ್ತಮೀ ।
ಸರ್ವಾಃ ಪುಣ್ಯಫಲಾಃ ಪ್ರೋಕ್ತಾ ಸ್ಸರ್ವದೇವರ್ಷಿಪೂಜಿತಾಃ ॥ ೨೧೭ ॥

---

ಅಪ್ಪಣೆ ಪಡೆದು ಊಟಮಾಡಬೇಕು. ಪರ್ವತಗಳ ಸಾಮಾನುಗಳನ್ನೆಲ್ಲಾ ಆಯಾ ಬ್ರಾಹ್ಮಣರ ಮನೆಗೆ ಕಳುಹಿಸಬೇಕು.

೨೧೪. ಈ ಶೈಲದಾನಗಳೆಲ್ಲವನ್ನೂ ಹೇಳಿದ್ದೇನೆ. ಮತ್ತೆ ನಿನಗೆ ಏನು ಹೇಳ ಬೇಕು? ಕೇಳು. ಅದೆಲ್ಲವನ್ನೂ ಹೇಳುತ್ತೇನೆ.

೨೧೫. ಭೀಷ್ಮನೇ ಕೇಳಿದನು:—ಸ್ವಾಮಿ, ಸಂಸಾರಸಾಗರವನ್ನು ದಾಟಿಸುವ ಸ್ವರ್ಗ, ಆರೋಗ್ಯ, ಸುಖಗಳನ್ನು ಕೊಡುವ ಒಂದು ವ್ರತವನ್ನು ನನಗೆ ಹೇಳು.

೨೧೬-೨೧೭. ಪುಲಸ್ತ್ಯನು ಹೇಳಿದನು:—ಇನ್ನು ಮೇಲೆ ಸೂರ್ಯನ ಧರ್ಮದ ವ್ರತಗಳನ್ನು ಹೇಳುತ್ತೇನೆ. ಅವುಗಳಲ್ಲಿ ಒಂದು ಕಲ್ಯಾಣಸಪ್ತಮೀ, ಮತ್ತೊಂದು ವಿಶೋಕಸಪ್ತಮೀ, ಇವಲ್ಲದೆ ಶರ್ಕರಾಸಪ್ತಮಿ, ಅಮಲಸಪ್ತಮಿ ಇವೂ ಕೂಡ ಪುಣ್ಯವ್ರತಗಳು. ದೇವರ್ಷಿಗಳಿಂದ ಪೂಜಿತವಾದುವು.

ವಿಧಾನಮಾಸಾಂ ವಕ್ಷ್ಯಾಮಿ ಯಥಾವದನುಪೂರ್ವಶಃ ।
ಯದಾಹ ಶುಕ್ಲಸಪ್ತಮ್ಯಾಮಾದಿತ್ಯಸ್ಯ ದಿನಂ ಭವೇತ್ ॥ ೨೧೮ ॥

ಸಾ ತು ಕಲ್ಯಾಣಿನೀ ನಾಮ ವಿಜಯಾ ತು ನಿಗದ್ಯತೇ ।
ಪ್ರಾತರ್ಗವ್ಯೇನ ಪಯಸಾ ಸ್ನಾನಂ ನದ್ಯಾಂ ಸಮಾಚರೇತ್ ॥ ೨೧೯ ॥

ಶುಕ್ಲಾಂಬರಧರಃ ಪದ್ಮಮಕ್ಷತೈಃ ಪರಿಕಲ್ಪಯೇತ್ ।
ಪ್ರಾಙ್ಮುಖೋಽಷ್ಟದಳಂ ಮಧ್ಯೇ ತದ್ವದ್ವೃತ್ತಾಂ ಚ ಕರ್ಣಿಕಾಂ ॥ ೨೨೦ ॥

ಸರ್ವೇಷ್ವಪಿ ದಳೇಷ್ವೇವಂ ವಿನ್ಯಸೇತ್ಸರ್ವತಃ ಕ್ರಮಾತ್ ।
ಪೂರ್ವೇಣ ತಪನಾಯೇತಿ ಮಾರ್ತಂಡಯೇತಿ ವೈ ತತಃ ॥ ೨೨೧ ॥

ಯಾಮ್ಯೇ ದಿವಾಕರಾಯೇತಿ ವಿಧಾತ್ರ ಇತಿ ನೈಋತೇ ।
ಪಶ್ಚಿಮೇ ವರುಣಾಯೇತಿ ಭಾಸ್ಕರಾಯೇತಿ ವಾನಿಲೇ ॥ ೨೨೨ ॥

ಸೌಮ್ಯೇ ವಿಕರ್ತನಾಯೇತಿ ದೇವಾಯೇತ್ಯಷ್ಟಮೇ ದಳೇ ।
ಆದಾವಂತೇ ಚ ಮಧ್ಯೇ ಚ ನಮೋಽಸ್ತು ಪರಮಾತ್ಮನೇ ॥ ೨೨೩ ॥

---

೨೧೮. ಇವುಗಳ ವಿಧಾನವನ್ನು ಕ್ರಮವಾಗಿ ಹೇಳುತ್ತೇನೆ. ಶುಕ್ಲ ಸಪ್ತಮಿಯ ದಿನ ಭಾನುವಾರ ಬಂದರೆ ಅದು ಕಲ್ಯಾಣಸಪ್ತಮಿ. ವಿಜಯಸಪ್ತಮಿ ಎಂದೂ ಎನ್ನಿಸಿ ಕೊಳ್ಳುತ್ತದೆ.

೨೧೯-೨೨೦. ಬೆಳಿಗ್ಗೆ ಪಂಚಗವ್ಯ ತೆಗೆದುಕೊಂಡು ನದಿಯಲ್ಲಿ ಸ್ನಾನಮಾಡಿ ಬಿಳಿಯ ಬಟ್ಟೆಯನ್ನುಟ್ಟುಕೊಂಡು ಅಕ್ಷತೆಗಳಿಂದ ಪದ್ಮವನ್ನು ಮಧ್ಯದಲ್ಲಿ ವೃತ್ತವನ್ನು ಬಿಡಿಸಿ ಪೂರ್ವಮುಖವಾಗಿ ಕುಳಿತು ಬರೆಯಬೇಕು.

೨೨೧—೨೨೩. ಎಲ್ಲಾ ದಳಗಳಲ್ಲಿಯೂ ಕ್ರಮವಾಗಿ ಈ ರೀತಿಯಿರಬೇಕು. ತಪನನಿಗೆಂದು ಪೂರ್ವದ ಕರ್ಣಿಕೆಯಲ್ಲಿ ಮಾರ್ತಂಡನಿಗೆಂದು, ಅಗ್ನಿಕರ್ಣಿಕೆಯಲ್ಲಿ ದಿವಾಕರನಿಗೆಂದು, ದಕ್ಷಿಣಕರ್ಣಿಕೆಯಲ್ಲಿ ವಿಧಾತೃಗೆಂದು, ನೈರುತ್ಯಕರ್ಣಿಕೆಯಲ್ಲಿ ವರುಣನಿಗೆಂದು ಪಶ್ಚಿಮಕರ್ಣಿಕೆಯಲ್ಲಿ ಭಾಸ್ಕರನಿಗೆಂದು, ವಾಯವ್ಯಕರ್ಣಿಕೆಯಲ್ಲಿ ವಿಕರ್ತನನಿಗೆಂದು, ಉತ್ತರಕರ್ಣಿಕೆಯಲ್ಲಿ ದೇವನಿಗೆಂದು ಎಂಟನೇ ದಳದಲ್ಲಿ ಆವಾಹನೆ ಗಳನ್ನು ಮಾಡಬೇಕು. ಇವುಗಳನ್ನು ಆವಾಹಿಸುವಾಗ ಆದಿ ಮಧ್ಯ ಅಂತ್ಯಗಳಲ್ಲಿ ನಮೋಽಸ್ತು ಎಂದು ಹೇಳುತ್ತಿರಬೇಕು.

ಮಂತ್ರೈರೇತೈಸ್ಸಮಭ್ಯರ್ಚ್ಯ ನಮಸ್ಕಾರಾಂತದೀಪಿತೈಃ ।
ಶುಕ್ಲವಸ್ತ್ರೈಃ ಫಲೈರ್ಭಕ್ಷ್ಯೈರ್ಧೂಪಮಾಲ್ಯಾನುಲೇಪನೈಃ ॥ ೨೨೪ ॥

ಸ್ಥಂಡಿಲೇ ಪೂಜಯೇದ್ಭಕ್ತ್ಯಾ ಗುಡೇನ ಲವಣೇನ ಚ ।
ತತೋ ವ್ಯಾಹೃತಿಮಂತ್ರೇಣ ವಿಸರ್ಜ್ಯ ದ್ವಿಜಪುಂಗವಾನ್ ॥ ೨೨೫ ॥

ಶಕ್ತಿತಸ್ತರ್ಪಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ।
ತಿಲಮಾತ್ರಂ ಹಿರಣ್ಯಂ ಚ ಬ್ರಾಹ್ಮಣಾಯ ನಿವೇದಯೇತ್ ॥ ೨೨೬ ॥

ಏವಂ ನಿಯಮಕೃತ್ಸುಪ್ತ್ವಾ ಪ್ರಾತರುತ್ಥಾಯ ಮಾನವಃ ।
ಕೃತಸ್ನಾನಜಪೋ ವಿಪ್ರೈಸ್ಸಹೈವ ಘೃತಪಾಯಸಂ ॥ ೨೨೭ ॥

ಭುಕ್ತ್ವಾ ಚ ವೇದವಿದುಷೇ ಬೈಡಾಲವ್ರತವರ್ಜಿತಂ ।
ಘೃತಪಾತ್ರಂ ಸಕನಕಂ ಸೋದಕುಂಭಂ ನಿವೇದಯೇತ್ ॥ ೨೨೮ ॥

---

೨೨೪. ನಮಸ್ಕಾರವೇ ಕೊನೆಯಲ್ಲಿ ಬರುವಂತೆ ಈ ಮಂತ್ರಗಳನ್ನು ಹೇಳುತ್ತ ಪೂಜಿಸಬೇಕು. ಬಿಳಿಬಟ್ಟೆ, ಫಲ, ಭಕ್ಷ್ಯಗಳು, ಧೂಪ, ದೀಪ, ನೈವೇದ್ಯ, ಅನುಲೇಪ ಇವುಗಳೆಲ್ಲದರಿಂದಲೂ ಪೂಜಿಸಬೇಕು.

೨೨೫-೨೨೬. ಆ ಸ್ಥಂಡಿಲದಲ್ಲಿ ಬೆಲ್ಲ ಉಪ್ಪುಗಳನ್ನಿಟ್ಟು ಭಕ್ತಿಯಿಂದ ಪೂಜಿಸಬೇಕು. ಅನಂತರ ಓಂ ಎಂಬ ವ್ಯಾಹೃತಿಮಂತ್ರದಿಂದ ವಿಸರ್ಜಿಸಬೇಕು. ಅನಂತರ ಶಕ್ತ್ಯನುಗುಣವಾಗಿ ಬ್ರಾಹ್ಮಣರಿಗೆ ಹಾಲು ತುಪ್ಪ ಮುಂತಾದುವುಗಳಿಂದ ಅನ್ನ ಹಾಕಿ ತೃಪ್ತಿಪಡಿಸಬೇಕು. ಅನಂತರ ಎಳ್ಳು ಚಿನ್ನಗಳನ್ನು ದಕ್ಷಿಣೆಗಳೊಂದಿಗೆ ಬ್ರಾಹ್ಮಣರಿಗೆ ಕೊಡಬೇಕು.

೨೨೭-೨೨೮. ಈರೀತಿ ಮಾಡಿಕೊಂಡು ನಿಯಮದಿಂದಿದ್ದು ಬೆಳಿಗ್ಗೆ ಎದ್ದು ಸ್ನಾನ ಜಪಗಳನ್ನು ಮಾಡಿಕೊಂಡು ತುಪ್ಪ ಪಾಯಸಗಳಿಂದ ಕೂಡಿದ ಭೋಜನವನ್ನು ಮಾಡಬೇಕು. ಕಪಟವಿರಬಾರದು. ಅನಂತರ ತುಪ್ಪದ ಪಾತ್ರೆಯನ್ನೂ ಉದಕುಂಭವನ್ನೂ ಬ್ರಾಹ್ಮಣನಿಗೆ ಕೊಡಬೇಕು.

ಪ್ರೀಯತಾಮತ್ರ ಭಗವಾನ್ಪರಮಾತ್ಮಾ ದಿವಾಕರಃ ।
ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ॥ ೨೨೯ ॥

ತತಸ್ತ್ರಯೋದಶೇ ಮಾಸಿ ಗಾಶ್ಚ ದದ್ಯಾತ್ತ್ರಯೋದಶ ।
ವಸ್ತ್ರಾಲಂಕಾರಸಂಯುಕ್ತಾಸ್ಸ್ವರ್ಣಶೃಂಗಾಃ ಪಯಸ್ವಿನೀಃ ॥ ೨೩೦ ॥

ಏಕಾಮಪಿ ಪ್ರದದ್ಯಾದ್ಗಾಂ ವಿತ್ತಹೀನೋ ವಿಮತ್ಸರಃ ।
ನ ವಿತ್ತಶಾಠ್ಯಂ ಕುರ್ವೀತ ಯತೋ ಮೋಹಾತ್ಪತತ್ಯಧಃ ॥ ೨೩೧ ॥

ಅನೇನ ವಿಧಿನಾ ಯಸ್ತು ಕುರ್ಯಾತ್ಕಲ್ಯಾಣಸಪ್ತಮೀಂ ।
ಸರ್ವಪಾಪವಿನಿರ್ಮುಕ್ತೋ ಸೂರ್ಯಲೋಕೇ ಮಹೀಯತೇ ॥ ೨೩೨ ॥

ಆಯುರಾರೋಗ್ಯಮೈಶ್ವರ್ಯಮನಂತಮಿಹ ಜಾಯತೇ ।
ಸರ್ವಪಾಪಹರಾ ನಿತ್ಯಂ ಸರ್ವದೈವತಪೂಜಿತಾ ॥ ೨೩೩ ॥

---

೨೨೯. ಪರಮಾತ್ಮನಾದ ಸೂರ್ಯನು ಈ ವಿಧಿಯಿಂದ ತೃಪ್ತಿಪಡಲಿ ಎಂದು ಹೇಳಬೇಕು. ಈರೀತಿಯಾಗಿ ತಿಂಗಳುತಿಂಗಳಿಗೂ ಮಾಡುತ್ತಿರಬೇಕು.

೨೩೦. ಈರೀತಿ ಹದಿಮೂರು ತಿಂಗಳು ಮಾಡಿ ಆಗ ಹದಿಮೂರು ಹಸುಗಳನ್ನು ತಂದು ಅವಕ್ಕೆ ಬಟ್ಟೆ ಮುಂತಾದುವುಗಳಿಂದಲಂಕರಿಸಿ ದಾನಮಾಡಬೇಕು. ಚಿನ್ನದ ಕೊಂಬನ್ನು (ಗೊಣಸು) ಮಾಡಿರಬೇಕು. ಅವು ಕರೆಯುತ್ತಿರಬೇಕು.

೨೩೧. ಅಷ್ಟು ಗೋದಾನವನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಒಂದು ಹಸುವನ್ನಾದರೂ ದಾನಮಾಡಬೇಕು. ಲೋಭತನ ಮಾಡಕೂಡದು. ಆರೀತಿ ಮಾಡಿದರೆ ನರಕ ಪ್ರಾಪ್ತಿಯಾಗುವುದು.

೨೩೨-೨೩೩. ಈ ವಿಧಿಯಿಂದ ಕಲ್ಯಾಣಸಪ್ತಮಿಯನ್ನು ಮಾಡಿದರೆ ಪಾಪಗಳೆಲ್ಲವೂ ಹೋಗಿ ಸೂರ್ಯಲೋಕದಲ್ಲಿ ಸುಖಿಸುತ್ತಾನೆ. ಈ ಲೋಕದಲ್ಲಿ ಆಯುಸ್ಸು ಆರೋಗ್ಯ ಐಶ್ವರ್ಯಗಳು ಉಂಟಾಗುತ್ತವೆ. ಈ ಸಪ್ತಮಿಯು ಪಾಪಗಳನ್ನು ನಾಶಮಾಡುತ್ತದೆ. ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಟ್ಟುದು.

ಸರ್ವದುಷ್ಟೋಪಶಮನೀ ಸದಾ ಕಲ್ಯಾಣಸಪ್ತಮೀ ।
ಇಮಾಮನಂತಫಲದಾಂ ಯಸ್ತು ಕಲ್ಯಾಣಸಪ್ತಮೀಂ ॥ ೨೩೪ ॥

ಶೃಣೋತಿ ಯಃ ಪಠೇದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।
ವಿಶೋಕಸಪ್ತಮೀಂ ತದ್ವದ್ವಕ್ಷ್ಯಾಮಿ ನೃಪಸತ್ತಮ ॥ ೨೩೫ ॥

ಯಾಮುಪೋಷ್ಯ ನರಶ್ಶೋಕಂ ನಾರೀ ನ ಲಭತೇ ಕ್ವಚಿತ್ ।
ಮಾಘೇ ಕೃಷ್ಣತಿಲೈಸ್ಸ್ನಾತಃ ಪಂಚಮ್ಯಾಂ ಶುಕ್ಲಪಕ್ಷತಃ ॥ ೨೩೬ ॥

ಕೃತಾಹಾರಃ ಕೃಶರಯಾ ದಂತಧಾವನಪೂರ್ವಕಂ ।
ಉಪವಾಸವ್ರತಂ ಕೃತ್ವಾ ಬ್ರಹ್ಮಚಾರೀ ನಿಶಿ ಸ್ವಪೇತ್ ॥ ೨೩೭ ॥

ತತಃ ಪ್ರಭಾತ ಉತ್ಥಾಯ ಕೃತಸ್ನಾನಜಪಶ್ಶುಚಿಃ ।
ಕೃತ್ವಾ ಚ ಕಾಂಚನಂ ಪದ್ಮಮರ್ಕಾಯೇತಿ ಪ್ರಪೂಜಯೇತ್ ॥ ೨೩೮ ॥

ಕರವೀರೇಣ ರಕ್ತೇನ ರಕ್ತವಸ್ತ್ರಯುಗೇನ ಚ ।
ಯಥಾ ವಿಶೋಕಂ ಭವನಂ ತ್ವಯ್ಯೈವಾದಿತ್ಯ ಸರ್ವದಾ ॥ ೨೩೯ ॥

---

೨೩೪. ಈ ಕಲ್ಯಾಣಸಪ್ತಮಿಯು ಕೆಟ್ಟುದನ್ನೆಲ್ಲಾ ನಾಶಮಾಡುತ್ತದೆ. ಅನಂತ ಫಲಗಳನ್ನು ಕೊಡತಕ್ಕ ಈ ಕಲ್ಯಾಣಸಪ್ತಮಿಯನ್ನು ಕೇಳಿದರೂ ಓದಿದರೂ ಎಲ್ಲಾ ಪಾಪಗಳೂ ಹೋಗುತ್ತವೆ.

೨೩೫. ಅದರಂತೆಯೇ ವಿಶೋಕಸಪ್ತಮಿಯನ್ನು ಹೇಳುತ್ತೇನೆ, ಕೇಳು. ಅದರಲ್ಲಿ ಉಪವಾಸಮಾಡಿದರೆ ಗಂಡಸಾಗಲೀ ಹೆಂಗಸಾಗಲೀ ದುಃಖಭಾಗಿಗಳಾಗುವುದಿಲ್ಲ.

೨೩೬—೨೩೮. ಮಾಘಮಾಸದಲ್ಲಿ ಶುಕ್ಲ ಪಂಚಮಿಯ ದಿನ ಕರಿಯ ಎಳ್ಳಿನ ಎಣ್ಣೆಯಿಂದ ಸ್ನಾನಮಾಡಿ, ಹಲ್ಲುಜ್ಜಿಕೊಂಡು, ಕೃಶರವನ್ನು ತಿಂದು ಆ ದಿವಸ ಉಪವಾಸವಿರಬೇಕು. ರಾತ್ರಿ ಬ್ರಹ್ಮಚಾರಿಯಾಗಿ ಮಲಗಿರಬೇಕು. ಅನಂತರ ಬೆಳಿಗ್ಗೆ ಎದ್ದು ಸ್ನಾನ ಜಪಗಳನ್ನು ಮಾಡಿಕೊಂಡು ಒಂದು ಚಿನ್ನದ ಪದ್ಮವನ್ನು ಮಾಡಿ ಸೂರ್ಯನಿಗೆ ನಮಸ್ಕಾರವೆಂದು ಅದನ್ನು ಪೂಜಿಸಬೇಕು.

೨೩೯. ಎಲೈ ಆದಿತ್ಯನೇ, ನನ್ನ ಮನೆಯು ದುಃಖವಿಲ್ಲದುದಾಗಿ ನಿನ್ನಿಂದಾಗಬೇಕು. ಎಂದು ಭಕ್ತಿಯಿಂದ ಕೆಂಪುಬಟ್ಟೆಯಿಂದಲೂ ಕೆಂಪುಕಣಿಗಲೆ ಹೂವಿನಿಂದಲೂ ಪೂಜಿಸಬೇಕು.

**ತಥಾ ವಿಶೋಕತಾ ಮೇ ಸ್ಯಾತ್ತ್ವದ್ಭಕ್ತಿಃ ಪ್ರತಿಜನ್ಮ ಚ ।**
**ಏವಂ ಸಂಪೂಜ್ಯ ಷಷ್ಠ್ಯಾಂ ತು ಭಕ್ತ್ಯಾ ಸಂಪೂಜ್ಯ ವೈ ದ್ವಿಜಾನ್ ॥೨೪೦॥**

**ಸ್ತುತ್ವಾ ಸಂಪ್ರಾಶ್ಯ ಗೋಮೂತ್ರಮುತ್ಥಾಯ ಕೃತನೈತ್ಯಕಃ ।**
**ಸಂಪೂಜ್ಯ ವಿಪ್ರಾನ್ಯತ್ನೇನ ಗುಡಪಾತ್ರಸಮನ್ವಿತಂ ॥ ೨೪೧ ॥**

**ಸದ್ವಸ್ತ್ರಯುಗ್ಮಂ ಪದ್ಮಂ ಚ ಬ್ರಾಹ್ಮಣಾಯ ನಿವೇದಯೇತ್ ।**
**ಅತೈಲಲವಣಂ ಭುಕ್ತ್ವಾ ಸಪ್ತಮ್ಯಾಂ ಮೌನಸಂಯುತಃ ॥ ೨೪೨ ॥**

**ತತಃ ಪುರಾಣಶ್ರವಣಂ ಕರ್ತವ್ಯಂ ಭೂತಿಮಿಚ್ಛಕಾ ।**
**ಅನೇನ ವಿಧಿನಾ ಸರ್ವಮುಭಯೋರಪಿ ಪಕ್ಷಯೋಃ ॥ ೨೪೩ ॥**

**ಕುರ್ಯಾದ್ಯಾವತ್ಪುನರ್ಮಾಘಶುಕ್ಲಪಕ್ಷಸ್ಯ ಸಪ್ತಮೀ ।**
**ವ್ರತಾಂತೇ ಕಲಶಂ ದದ್ಯಾತ್ಸುವರ್ಣಕಮಲಾನ್ವಿತಂ ॥ ೨೪೪ ॥**

**ಶಯ್ಯಾಂ ಸೋಪಸ್ಕರಾಂ ದದ್ಯಾತ್ಕಪಿಲಾಂ ಚ ಪಯಸ್ವಿನೀಂ ।**
**ಅನೇನ ವಿಧಿನಾ ಯಸ್ತು ವಿತ್ತಶಾಠ್ಯವಿವರ್ಜಿತಃ ॥ ೨೪೫ ॥**

---

೨೪೦—೨೪೨. ಈರೀತಿಯಾಗಿ ಷಷ್ಠಿಯ ದಿನ ಭಕ್ತಿಯಿಂದ ಪೂಜಿಸಬೇಕು. ಬ್ರಾಹ್ಮಣರಿಗೂ ಪೂಜಿಸಬೇಕು. ಆ ದಿನ ಗೋಮೂತ್ರವನ್ನು (ಗಂಜಲ) ಕುಡಿಯಬೇಕು. ಅನಂತರ ಸಪ್ತಮಿಯ ದಿನ ಎದ್ದು ಬೆಲ್ಲದ ಪಾತ್ರೆಯೊಡನೆಯೂ ವಸ್ತ್ರದೊಡನೆಯೂ ಆ ಪ್ರತಿಮೆಯನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಆ ಸಪ್ತಮಿಯ ದಿನ ಎಣ್ಣೆ ಉಪ್ಪುಗಳಿಲ್ಲದಂತೆ ಮೌನದಿಂದ ಊಟಮಾಡಬೇಕು.

೨೪೩-೨೪೪. ಐಶ್ವರ್ಯಕಾಮಿಯು ಅನಂತರ ಪುರಾಣಶ್ರವಣವನ್ನು ಮಾಡಬೇಕು. ಈರೀತಿ ಎರಡು ಪಕ್ಷಗಳಲ್ಲಿಯೂ ಮಾಡಬೇಕು. ಈರೀತಿ ಮತ್ತೆ ಮಾಘ ಮಾಸದ ಸಪ್ತಮಿಯವರೆಗೂ ಮಾಡಬೇಕು. ವ್ರತದ ಕೊನೆಯಲ್ಲಿ ಕಲಶವನ್ನೂ ಚಿನ್ನದ ಕಮಲವನ್ನೂ ಕೊಡಬೇಕು.

೨೪೫-೨೪೬. ಸಲಕರಣೆಯೊಡಗೂಡಿದ ಹಾಸಿಗೆಯನ್ನು ದಾನಮಾಡಬೇಕು. ಕಪಿಲೆಬಣ್ಣದ ಕರೆಯುವ ಹಸುವನ್ನು ದಾನಮಾಡಬೇಕು. ಲೋಭಮಾಡಬಾರದು.

ವಿಶೋಕಸಪ್ತಮೀಂ ಕುರ್ಯಾತ್ಸಯಾತಿ ಪರಮಾಂ ಗತಿಂ ।
ಯಾವಜ್ಜನ್ಮಸಹಸ್ರಾಣಾಂ ಸಾಗ್ರಂ ಕೋಟಿಶತಂ ಭವೇತ್ ॥ ೨೪೬ ॥

ತಾವನ್ನ ಶೋಕಮಾಪ್ನೋತಿ ರೋಗದ್ರೋಹವಿವರ್ಜಿತಃ ।
ಯಂ ಯಂ ಪ್ರಾರ್ಥಯತೇ ಕಾಮಂ ತಂ ತಂ ಪ್ರಾಪ್ನೋತಿ ಪುಷ್ಕಲಂ ॥ ೨೪೭ ॥

ನಿಷ್ಕಾಮಂ ಕುರುತೇ ಯಸ್ತು ಸ ಪರಂ ಬ್ರಹ್ಮ ಗಚ್ಛತಿ ।
ಯಃ ಪಠೇಚ್ಛೃಣುಯಾದ್ವಾಪಿ ವಿಶೋಕಾಖ್ಯಾಂ ತು ಸಪ್ತಮೀಂ ॥ ೨೪೮ ॥

ಸೋಽಪೀಂದ್ರಲೋಕಮಾಪ್ನೋತಿ ನ ದುಃಖೀ ಜಾಯತೇ ಕ್ವಚಿತ್ ।
ಅನ್ಯಾಮಪಿ ಪ್ರವಕ್ಷ್ಯಾಮಿ ನಾಮ್ನಾ ತು ಫಲಸಪ್ತಮೀಂ ॥ ೨೪೯ ॥

ಯಾಮುಪೋಷ್ಯ ನರಃ ಪಾಪೈರ್ವಿಮುಕ್ತಸ್ಸ್ವರ್ಗಭಾಗ್ಭವೇತ್ ।
ಮಾರ್ಗಶೀರ್ಷೇ ಶುಭೇ ಮಾಸಿ ಪಂಚಮ್ಯಾಂ ನಿಯತವ್ರತಃ ॥ ೨೫೦ ॥

---

ಈ ವಿಧಿಯಿಂದ ವಿಶೋಕಸಪ್ತಮಿಯನ್ನು ಮಾಡಬೇಕು. ಅವನು ಉತ್ತಮಗತಿಯನ್ನು ಹೊಂದುತ್ತಾನೆ. ಸಾವಿರ ಜನ್ಮಗಳು ನೂರುಕೋಟಿ ಬಾರಿ ಆಗುವವರೆಗೂ ಇವನಿಗೆ ಶೋಕವುಂಟಾಗುವುದೇ ಇಲ್ಲ. ರೋಗ ದ್ರೋಹಗಳಿಗೂ ಪಾತ್ರನಾಗುವುದಿಲ್ಲ.

೨೪೭. ಯಾವುಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಹೊಂದುತ್ತಾನೆ. ನಿಷ್ಕಾಮವಾಗಿ ಮಾಡತಕ್ಕವನು ಬ್ರಹ್ಮನನ್ನೇ ಹೊಂದುತ್ತಾನೆ.

೨೪೮. ಈ ವಿಶೋಕಸಪ್ತಮಿಯನ್ನು ಕೇಳಿದವನೂ ಓದಿದವನೂ ಇಂದ್ರಲೋಕವನ್ನು ಹೊಂದುತ್ತಾನೆ. ದುಃಖವನ್ನು ಹೊಂದುವುದಿಲ್ಲ.

೨೪೯. ಮತ್ತೊಂದಾದ ಫಲಸಪ್ತಮಿಯನ್ನು ಹೇಳುತ್ತೇನೆ. ಅದರಲ್ಲಿ ಉಪವಾಸಮಾಡಿದರೆ ಮನುಷ್ಯನ ಪಾಪಗಳೆಲ್ಲವೂ ಹೋಗುತ್ತವೆ.

೨೫೦-೨೫೧. ಮಾರ್ಗಶಿರ ಶುದ್ಧ ಪಂಚಮಿಯ ದಿನ ನಿಯಮದಿಂದಿದ್ದು

**ಷಷ್ಠೀಮುಪೋಷ್ಯ ಕಮಲಂ ಕಾರಯಿತ್ವಾ ತು ಕಾಂಚನಂ ।**
**ಶರ್ಕರಾಸಂಯುತಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ॥ ೨೫೧ ॥**

**ರೂಪಂ ಕಾಂಚನಕಂ ಕೃತ್ವಾ ಫಲಸ್ಯೈತಸ್ಯ ಕರ್ಮವಿತ್ ।**
**ದದ್ಯಾದ್ದ್ವಿಕಾಲವೇಲಾಯಾಂ ಭಾನುರ್ಮೇ ಪ್ರೀಯತಾಮಿತಿ ॥ ೨೫೨ ॥**

**ಶಕ್ತ್ಯಾ ತು ವಿಪ್ರಾನ್ಸಂಪೂಜ್ಯ ಸಪ್ತಮ್ಯಾಂ ಕ್ಷೀರಭೋಜನಂ ।**
**ಕೃತ್ವಾ ಕುರ್ಯಾತ್ಫಲತ್ಯಾಗಂ ಯಾವತ್ಸ್ಯಾತ್ಕೃಷ್ಣಸಪ್ತಮೀ ॥ ೨೫೩ ॥**

**ತಾಮುಪೋಷ್ಯಾಥ ವಿಧಿವದನೇನೈವ ಕ್ರಮೇಣ ತು ।**
**ತದ್ವದ್ಧೇನುಫಲಂ ದತ್ವಾ ಸುವರ್ಣಕಮಲಾನ್ವಿತಂ ॥ ೨೫೪ ॥**

**ಶರ್ಕರಾಪಾತ್ರಸಂಯುಕ್ತಂ ವಸ್ತ್ರಮಾಲ್ಯಸಮನ್ವಿತಂ ।**
**ಸಂವತ್ಸರಮನೇನೈವ ವಿಧಿನೋಭಯಸಪ್ತಮೀಂ ॥ ೨೫೫ ॥**

**ಉಪೋಷ್ಯ ದದ್ಯಾತ್ಕ್ರಮಶಸ್ಸೂರ್ಯಮಂತ್ರಮುದೀರಯೇತ್ ।**
**ಭಾನುರರ್ಕೋ ರವಿರ್ಬ್ರಹ್ಮಾ ಸೂರ್ಯಶ್ಶಕ್ರೋ ಹರಿಃ ಶಿವಃ ॥ ೨೫೬ ॥**

---

ಷಷ್ಠಿಯ ದಿನ ಉಪವಾಸಮಾಡಿ ಚಿನ್ನದ ಕಮಲವನ್ನು ಮಾಡಿಸಿ ಸಕ್ಕರೆಯೊಡನೆ ಕುಟುಂಬಿಯಾದ ಬ್ರಾಹ್ಮಣನಿಗೆ ದಾನಮಾಡಬೇಕು.

೨೫೨-೨೫೩. ಒಂದು ಹಣ್ಣನ್ನು ಚಿನ್ನದಿಂದ ಮಾಡಿಸಬೇಕು. ಸಾಯಂ ಕಾಲದ ವೇಳೆಯಲ್ಲಿ ಭಾನುವು ಪ್ರೀತಿಹೊಂದಲೆಂದು ಬ್ರಾಹ್ಮಣನಿಗೆ ದಾನಮಾಡ ಬೇಕು. ಶಕ್ತ್ಯನುಗುಣವಾಗಿ ಬ್ರಾಹ್ಮಣಪೂಜೆಯನ್ನು ಮಾಡಿ ಸಪ್ತಮಿಯ ದಿನ ಹಾಲನ್ನವನ್ನೂಟಮಾಡಬೇಕು. ಹಣ್ಣುಗಳನ್ನು ಆ ದಿನ ತಿನ್ನಕೂಡದು. ಮತ್ತೊಂದು ಕೃಷ್ಣಸಪ್ತಮಿ ಬರುವವರೆಗೂ ಹಣ್ಣನ್ನು ತಿನ್ನಕೂಡದು.

೨೫೪-೨೫೫. ಆ ಸಪ್ತಮಿಯ ದಿನವೂ ಉಪವಾಸವಿದ್ದು ಈ ಕ್ರಮದಲ್ಲಿಯೇ ಮತ್ತೆ ಮಾಡಬೇಕು. ಚಿನ್ನದ ಹಣ್ಣುಗಳನ್ನೂ ಚಿನ್ನದ ಕಮಲವನ್ನೂ ದಾನಮಾಡ ಬೇಕು. ಸಕ್ಕರೆ ಪಾತ್ರೆ ಬಟ್ಟೆ ದಕ್ಷಿಣೆಗಳನ್ನೂ ಕೊಡಬೇಕು. ಈರೀತಿ ಶುಕ್ಲ ಕೃಷ್ಣ ಎರಡು ಸಪ್ತಮಿಗಳಲ್ಲಿಯೂ ಒಂದು ವರ್ಷದವರೆಗೂ ಮಾಡುತ್ತಿರಬೇಕು.

೨೫೬. ಆ ದಿವಸ ಉಪವಾಸವಿದ್ದು ಸೂರ್ಯನ ಮಂತ್ರಗಳನ್ನು ಹೇಳುತ್ತ ದಾನ ಮಾಡಬೇಕು. ಭಾನು, ಅರ್ಕ, ರವಿ, ಬ್ರಹ್ಮ, ಸೂರ್ಯ, ಶಕ್ರ, ಹರಿ, ಶಿವ, ಶ್ರೀಮಂತ, ವಿಭಾವಸು, ತ್ವಷ್ಟಾ, ವರುಣ ಇವರು ಪ್ರೀತಿಹೊಂದಲೆಂದು ಹೇಳಿ ಕೊಡಬೇಕು.

ಶ್ರೀಮಾನ್ವಿಭಾವಸುಸ್ತ್ವಷ್ಟಾ ವರುಣಃ ಪ್ರೀಯತಾಮಿತಿ ।
ಪ್ರತಿಮಾಸಂ ಚ ಸಪ್ತಮ್ಯಾಮೇಕೈಕಂ ನಾಮ ಕೀರ್ತಯೇತ್ ॥ ೨೫೭ ॥

ಪ್ರತಿಪಕ್ಷಂ ಫಲತ್ಯಾಗಮೇತತ್ಕುರ್ವನ್ಸಮಾಚರೇತ್ ।
ವ್ರತಾಂತೇ ವಿಪ್ರಮಿಥುನಂ ಪೂಜಯೇದ್ವಸ್ತ್ರಭೂಷಣೈಃ ॥ ೨೫೮ ॥

ಶರ್ಕರಾಕಲಶಂ ದದ್ಯಾದ್ಧೇಮಪದ್ಮಫಲಾನ್ವಿತಂ ।
ಯಥಾ ನ ವಿಫಲಃ ಕಾಮಸ್ತ್ವದ್ಭಕ್ತಾನಾಂ ಸದಾ ಭವೇತ್ ॥ ೨೫೯ ॥

ತಥಾನಂತಫಲಾವಾಪ್ತಿರಸ್ತು ಮೇ ಜನ್ಮಜನ್ಮನಿ ।
ಇಮಾಮನಂತಫಲದಾಂ ಯಃ ಕುರ್ಯಾತ್ಫಲಸಪ್ತಮೀಂ ॥ ೨೬೦ ॥

ಸರ್ವಪಾಪವಿಶುದ್ಧಾತ್ಮಾ ಸೂರ್ಯಲೋಕೇ ಮಹಿಯತೇ ।
ಸುರಾಪಾನಾದಿಕಂ ಕಿಂಚಿದ್ಯದತ್ರಾಮುತ್ರ ವಾ ಕೃತಂ ॥ ೨೬೧ ॥

---

೨೫೭. ಪ್ರತಿಮಾಸದ ಸಪ್ತಮಿಯಲ್ಲಿಯೂ ಒಂದೊಂದು ಹೆಸರನ್ನು ಹೇಳಿ ದಾನಮಾಡಬೇಕು. ಪ್ರತಿ ಪಕ್ಷದಲ್ಲಿಯೂ ಫಲವನ್ನು ತಿನ್ನದಿರಬೇಕು. ಈರೀತಿ ವ್ರತವನ್ನು ಮಾಡಬೇಕು.

೨೫೮. ವ್ರತದ ಕೊನೆಯಲ್ಲಿ ದಂಪತಿಗಳನ್ನು ವಸ್ತ್ರಾಲಂಕಾರಗಳಿಂದ ಪೂಜಿಸಬೇಕು. ಸಕ್ಕರೆಯ ಕಲಶವನ್ನು ಚಿನ್ನದ ಹಣ್ಣಿನೊಡನೆ ಕೊಡಬೇಕು.

೨೫೯. ನಿನ್ನ ಭಕ್ತರಾಗಿರುವವರಿಗೆ ಇಷ್ಟವು ನೆರವೇರುವ ರೀತಿಯಲ್ಲಿ ಜನ್ಮಜನ್ಮದಲ್ಲಿಯೂ ಅನಂತ ಫಲವುಂಟಾಗಲಿ.

೨೬೦. ಈ ಬಹು ಫಲವನ್ನು ಕೊಡುವ ಫಲಸಪ್ತಮಿಯನ್ನು ಮಾಡುವವನು ಸಕಲ ಪಾಪಗಳನ್ನು ಕಳೆದುಕೊಂಡು ಸೂರ್ಯಲೋಕದಲ್ಲಿ ಸುಖಿಸುತ್ತಾನೆ.

೨೬೧-೨೬೨. ಸುರಾಪಾನವೇ ಮೊದಲಾದ ಮಹಾಪಾತಕಗಳನ್ನು ಈ ಜನ್ಮದಲ್ಲಾಗಲೀ ಹಿಂದಿನ ಜನ್ಮಗಳಲ್ಲಾಗಲೀ ಮಾಡಿದ್ದರೂ ಈ ಫಲಸಪ್ತಮಿಯನ್ನು

**ತತ್ಸರ್ವಂ ನಾಶಮಾಯಾತಿ ಯಃ ಕುರ್ಯಾತ್ಫಲಸಪ್ತಮೀಂ ।**
**ಭೂತಭವ್ಯಾಂಶ್ಚ ಪುರುಷಾಂಸ್ತಾರಯೇದೇಕವಿಂಶತಿಂ ॥ ೨೬೨ ॥**

**ಯಶ್ಶೃಣೋತಿ ಪಠೇದ್ವಾಪಿ ಸೋಽಪಿ ಕಲ್ಯಾಣಭಾಗ್ಭವೇತ್ ।**
**ಶರ್ಕರಾಸಪ್ತಮೀಂ ವಕ್ಷ್ಯೇ ತದ್ವತ್ಕಲ್ಮಷನಾಶನೀಂ ॥ ೨೬೩ ॥**

**ಆಯುರಾರೋಗ್ಯಮೈಶ್ವರ್ಯಂ ಯಯಾಽನಂತಂ ಪ್ರಜಾಯತೇ ।**
**ಮಾಧವಸ್ಯ ಸಿತೇ ಪಕ್ಷೇ ಸಪ್ತಮ್ಯಾಂ ನಿಯತವ್ರತಃ ॥ ೨೬೪ ॥**

**ಪ್ರಾತಸ್ಸ್ನಾತ್ವಾ ತಿಲೈಶ್ಶುಕ್ಲೈಃ ಶುಕ್ಲಮಾಲ್ಯಾನುಲೇಪನೈಃ ।**
**ಸ್ಥಂಡಿಲೇ ಪದ್ಮಮುಲ್ಲಿಖ್ಯ ಕುಂಕುಮೇನ ಸಕರ್ಣಿಕಂ ॥ ೨೬೫ ॥**

**ತಸ್ಮಿನ್ನಮಸ್ಸವಿತ್ರೇತಿ ಗಂಧಧೂಪಂ ನಿವೇದಯೇತ್ ।**
**ಸ್ಥಾಪಯೇದುದಕುಂಭಂ ಚ ಶರ್ಕರಾಪಾತ್ರಸಂಯುತಂ ॥ ೨೬೬ ॥**

---

ಮಾಡಿದರೆ ಅವೆಲ್ಲವೂ ನಾಶವಾಗುತ್ತದೆ. ಹಿಂದಿನ ಏಳು, ತನ್ನೊಡನೆ ಏಳು, ಮುಂದೆ ಏಳು ಒಟ್ಟು ಇಪ್ಪತ್ತೊಂದು ತಲೆಗಳನ್ನು ಉದ್ಧರಿಸುತ್ತದೆ.

೨೬೩. ಇದನ್ನು ಕೇಳುವವನೂ ಹೇಳುವವನೂ ಕಲ್ಯಾಣವನ್ನು ಹೊಂದುತ್ತಾರೆ. ಇದರಂತೆಯೇ ಪಾಪನಾಶಕವಾದ ಶರ್ಕರಾಸಪ್ತಮಿಯನ್ನು ಹೇಳುತ್ತೇನೆ. ಆಯುಸ್ಸು ಆರೋಗ್ಯ ಐಶ್ವರ್ಯಗಳು ಅದರಿಂದ ಉಂಟಾಗುತ್ತವೆ.

೨೬೪-೨೬೫. ವೈಶಾಖಮಾಸದ ಶುಕ್ಲ ಸಪ್ತಮಿಯ ದಿವಸ ನಿಯಮಿಷ್ಠರಾಗಿ ಒಳ್ಳೆಯ ಮನಸ್ಸಿನಿಂದ ಬಿಳಿಯ ಎಳ್ಳೆಣ್ಣೆಯಿಂದ ಸ್ನಾನಮಾಡಿ ಬಿಳಿಯ ಬಟ್ಟೆ ಹೂಗಳನ್ನು ಧರಿಸಿಕೊಂಡು ಸ್ಥಂಡಿಲದಲ್ಲಿ ಪದ್ಮವನ್ನು ಕುಂಕುಮದಿಂದ ಬರೆಯಬೇಕು. ಅದರಲ್ಲಿ ಕರ್ಣಿಕೆಯನ್ನು ಬಿಡಿಸಿರಬೇಕು. ಅದರಲ್ಲಿ ಸವಿತೃವಿಗೆ ನಮಸ್ಕಾರವು ಎಂದು ಗಂಧಧೂಪಗಳನ್ನು ಒಪ್ಪಿಸಬೇಕು.

೨೬೬-೨೬೭. ಸಕ್ಕರೆಯ ಪಾತ್ರೆಯನ್ನು ನೀರಿನಿಂದ ಕೂಡಿದ ಕಲಶವನ್ನು ಸ್ಥಾಪಿಸಬೇಕು. ಅದಕ್ಕೆ ಬಿಳಿಯ ಬಟ್ಟೆಯನ್ನು ಹೊದ್ದಿಸಿ ಬಿಳಿಯ ಹೂವನ್ನು

ಶುಕ್ಲವಸ್ತ್ರೈರಲಂಕೃತ್ಯ ಶುಕ್ಲಮಾಲ್ಯಾನುಲೇಪನೈಃ ।
ಸ್ವರ್ಣಪುಷ್ಪಸಮಾಯುಕ್ತಂ ಮಂತ್ರೇಣಾನೇನ ಪೂಜಯೇತ್ ॥ ೨೬೭ ॥

ವಿಶ್ವದೇವಮಯೋ ಯಸ್ಮಾದ್ವೇದವಾದೀತಿ ಪಠ್ಯತೇ ।
ತ್ವಮೇವಾಮೃತಸರ್ವಸ್ವಮತಶ್ಶಾಂತಿಂ ಪ್ರಯಚ್ಛ ಮೇ ॥ ೨೬೮ ॥

ಪಂಚಗವ್ಯಂ ತತಃ ಪೀತ್ವಾ ಸ್ವಪೇತ್ತತ್ಪಾರ್ಶ್ವತಃ ಕ್ಷಿತೌ ।
ಸೌರಂ ಸೂಕ್ತಂ ಜಪನ್ನಾಸ್ತೇ ಪುರಾಣಶ್ರವಣೇನ ಚ ॥ ೨೬೯ ॥

ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಕೃತನೈತ್ಯಕಃ ।
ತತ್ಸರ್ವಂ ವೇದವಿದುಷೇ ಬ್ರಾಹ್ಮಣಾಯ ನಿವೇದಯೇತ್ ॥ ೨೭೦ ॥

ಭೋಜಯೇಚ್ಛಕ್ತಿತೋ ವಿಪ್ರಾನ್ಶರ್ಕರಾಘೃತಪಾಯಸೈಃ ।
ಭುಂಜೀತಾತೈಲಲವಣಂ ಸ್ವಯಮಪ್ಯಥ ವಾಗ್ಯತಃ ॥ ೨೭೧ ॥

ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ।
ಸಂವತ್ಸರಾಂತೇ ಶಯನಂ ಶರ್ಕರಾಕಲಶಾನ್ವಿತಂ ॥ ೨೭೨ ॥

---

ಸುತ್ತಿರಬೇಕು. ಚಿನ್ನದ ಹೂವಿನಿಂದ ಮುಂದೆ ಹೇಳುವ ಮಂತ್ರದಿಂದ ಪೂಜಿಸಬೇಕು.

೨೬೮. ನೀನು ವಿಶ್ವೇದೇವಮಯನು. ವೇದವಾದೀ ಎಂದು ಹೇಳಲ್ಪಟ್ಟಿದ್ದೀಯೆ. ನೀನೇ ಅಮೃತದ ಆಕಾರನು. ಆದ್ದರಿಂದ ನನಗೆ ಶಾಂತಿಯನ್ನು ಕೊಡು.

೨೬೯. ಪಂಚಗವ್ಯವನ್ನು ಕುಡಿದು ಅದರ ಪಕ್ಕದಲ್ಲಿಯೇ ಭೂಮಿಯಲ್ಲಿ ಮಲಗಿರಬೇಕು. ಆಗ ಸೌರಸೂಕ್ತವನ್ನು ಹೇಳುತ್ತ ಪುರಾಣಗಳನ್ನು ಕೇಳುತ್ತಿರಬೇಕು.

೨೭೦-೨೭೧. ಹಿಂದಿನ ದಿನ ಕಳೆಯುತ್ತಲೂ ಅಷ್ಟಮಿಯ ದಿವಸ ನಿತ್ಯಕರ್ಮವನ್ನು ಮುಗಿಸಿಕೊಂಡು ಅವೆಲ್ಲವನ್ನು ವೇದವನ್ನು ಬಲ್ಲ ಬ್ರಾಹ್ಮಣನಿಗೆ ದಾನಮಾಡಬೇಕು. ಶಕ್ತ್ಯನುಸಾರ ತುಪ್ಪ ಪಾಯಸಗಳಿಂದ ಊಟಮಾಡಿಸಬೇಕು. ತಾನು ಮೌನದಿಂದ ಎಣ್ಣೆ ಉಪ್ಪುಗಳಿಲ್ಲದೆ ಊಟಮಾಡಬೇಕು.

೨೭೨-೨೭೩. ಈರೀತಿಯ ನಿಯಮದಿಂದಲೇ ಎಲ್ಲವನ್ನೂ ಪ್ರತಿತಿಂಗಳಲ್ಲಿಯೂ ಮಾಡುತ್ತಿರಬೇಕು. ವರ್ಷ ಮುಗಿದ ಮೇಲೆ ಹಾಸಿಗೆಯನ್ನೂ ಅದರ ಪರಿಕರ

ಸರ್ವೋಪಸ್ಕರಸಂಯುಕ್ತಾಂ ತಥೈಕಾಂ ಗಾಂ ಪಯಸ್ವಿನೀಂ ।
ಗೃಹಂ ಚ ಶಕ್ತಿಮಾನ್ದದ್ಯಾತ್ಪ್ರಶಸ್ತೋಪಸ್ಕರಾನ್ವಿತಂ ॥ ೨೭೩ ॥

ಸಹಸ್ರೇಣಾಥ ನಿಷ್ಕಾಣಾಂ ಕೃತ್ವಾ ದದ್ಯಾಚ್ಛತೇನ ವಾ ।
ದಶಭಿರ್ವಾ ತ್ರಿಭಿರ್ವಾಪಿ ನಿಷ್ಕೇಣೈಕೇನ ವಾ ಪುನಃ ॥ ೨೭೪ ॥

ಪದ್ಮಂ ಸ್ವಶಕ್ತಿತೋ ದದ್ಯಾತ್ಪೂರ್ವವನ್ಮಂತ್ರಪಾಠನಂ ।
ವಿತ್ತಶಾಠ್ಯಂ ನ ಕುರ್ವೀತ ಕುರ್ವನ್ದೋಷಾನ್ಸಮುಶ್ನುತೇ ॥ ೨೭೫ ॥

ಅಮೃತಂ ಪಿಬತೋ ವಕ್ತ್ರಾತ್ಸೂರ್ಯಸ್ಯಾಮೃತಬಿಂದವಃ ।
ಸಮುತ್ಪೇತುರ್ಧರಣ್ಯಾಂ ಯೇ ಶಾಲಿಮುದ್ಗೇಕ್ಷವಃ ಕ್ರಮಾತ್ ॥ ೨೭೬ ॥

ಶರ್ಕರಾಯಾ ರಸಸ್ತಸ್ಮಾದಿಕ್ಷುಸಾರೋಽಮೃತಾತ್ಮವಾನ್ ।
ಇಷ್ಟಾ ರವೇರತಃ ಪುಣ್ಯಾ ಶರ್ಕರಾ ಹವ್ಯಕವ್ಯಯೋಃ ॥ ೨೭೭ ॥

---

ಗಳನ್ನೂ ಸಕ್ಕರೆಯ ಕಲಶವನ್ನೂ ದಾನಮಾಡಬೇಕು. ಒಂದು ಕರೆಯುವ ಹಸುವನ್ನು ಕೊಡಬೇಕು. ಶಕ್ತಿಯಿದ್ದರೆ ಮನೆಯನ್ನೂ ಅದಕ್ಕೆ ತಕ್ಕ ಪದಾರ್ಥಗಳನ್ನೂ ಕೊಡಬೇಕು.

೨೭೪-೨೭೫. ಸಾವಿರ ನಿಷ್ಕದಿಂದಲಾಗಲೀ, ನೂರು ನಿಷ್ಕಗಳಿಂದಲಾಗಲೀ, ಹತ್ತು ನಿಷ್ಕಗಳಿಂದಲಾಗಲೀ, ಕೊನೆಗೆ ಒಂದೇ ನಿಷ್ಕದಿಂದಾಗಲೀ ಕಮಲವನ್ನು ತನ್ನ ಶಕ್ತಿಗನುಗುಣವಾಗಿ ಮಾಡಿಸಬೇಕು. ಲೋಭತನಮಾಡಬಾರದು. ಮಾಡಿದರೆ ದೋಷಬರುತ್ತದೆ. ಅದನ್ನು ದಾನಮಾಡಬೇಕು.

೨೭೬. ಸೂರ್ಯನು ಅಮೃತ ಕುಡಿಯುತ್ತಿರುವಾಗ ಅವನ ಬಾಯಿಂದ ಅಮೃತ ಬಿಂದುಗಳು ನೆಲಕ್ಕೆ ಬಿದ್ದುವು. ಅದರಿಂದ ಭತ್ತ ಹೆಸರು ಕಬ್ಬುಗಳು ಹುಟ್ಟಿದುವು.

೨೭೭. ಅದರಿಂದ ಸಕ್ಕರೆಯ ರಸವು ಕಬ್ಬಿನಿಂದ ಉತ್ಪನ್ನವಾಗಿದೆ. ಅದು ಸೂರ್ಯನಿಗೆ ಇಷ್ಟವಾದುದು. ಆದ್ದರಿಂದಲೇ ಹವ್ಯಕವ್ಯಗಳಲ್ಲಿ ಇದನ್ನು ಉಪಯೋಗಿಸುತ್ತಾರೆ.

ಶರ್ಕರಾಸಪ್ತಮೀ ಚೇಯಂ ವಾಜಿಮೇಧಫಲಪ್ರದಾ ।
ಸರ್ವದುಷ್ಟೋಪಶಮನೀ ಪುತ್ರಪೌತ್ರವಿವರ್ಧಿನೀ ॥ ೨೭೮ ॥

ಯಃ ಕುರ್ಯಾತ್ಪರಯಾ ಭಕ್ತ್ಯಾ ಸ ಪರಂ ಬ್ರಹ್ಮ ಗಚ್ಛತಿ ।
ಕಲ್ಪಮೇಕಂ ವಸೇತ್ಸ್ವರ್ಗೇ ತತೋ ಯಾತಿ ಪರಂ ಪದಂ ॥ ೨೭೯ ॥

ಇದಮನಘಂ ಶೃಣೋತಿ ಯಸ್ಸ್ಮರೇದ್ವಾ
ಪರಿಪಠತೀಹ ಸುರೇಶ್ವರಸ್ಯ ಲೋಕೇ ।
ಮತಿಮಪಿ ಚ ದದಾತಿ ಸೋಽಪಿ ದೇವೈ-
ರಮರಪುರೇ ಪರಿಪೂಜ್ಯತೇ ಮುನೀಂದ್ರೈಃ ॥ ೨೮೦ ॥

ಅತಃ ಪರಂ ಪ್ರವಕ್ಷ್ಯಾಮಿ ತದ್ವತ್ಕಮಲಸಪ್ತಮೀಂ ।
ಯಸ್ಯಾಸ್ಸಂಕೀರ್ತನಾದೇವ ತುಷ್ಯತೀಹ ದಿವಾಕರಃ ॥ ೨೮೧ ॥

---

೨೭೮. ಈ ಶರ್ಕರಾಸಪ್ತಮಿಯು ಅಶ್ವಮೇಧ ಫಲವನ್ನು ಕೊಡುತ್ತದೆ. ಕೆಡುಕನ್ನೆಲ್ಲಾ ನಾಶಮಾಡುತ್ತದೆ. ಮಕ್ಕಳು ಮೊಮ್ಮಕ್ಕಳನ್ನು ಹೆಚ್ಚಿಸುತ್ತದೆ.

೨೭೯. ಯಾವನು ಬಹು ಭಕ್ತಿಯಿಂದ ಮಾಡುತ್ತಾನೆಯೋ ಅವನು ಪರಬ್ರಹ್ಮಪದವನ್ನು ಹೊಂದುತ್ತಾನೆ. ಒಂದು ಕಲ್ಪದವರೆಗೂ ಸ್ವರ್ಗದಲ್ಲಿದ್ದು ಅನಂತರ ಪರಮಪದವನ್ನು ಹೊಂದುತ್ತಾನೆ.

೨೮೦. ಈ ಉತ್ತಮವಾದ ವ್ರತವನ್ನು ಯಾವನು ಕೇಳುತ್ತಾನೆಯೋ, ಸ್ಮರಿಸುತ್ತಾನೆಯೋ, ಓದುತ್ತಾನೆಯೋ ಅವನು ಇಂದ್ರಲೋಕದಲ್ಲಿ ಸುಖಿಸುತ್ತಾನೆ. ಈ ವ್ರತವನ್ನು ಮಾಡುವುದಕ್ಕೆ ಬುದ್ಧಿಯನ್ನು ಮತ್ತೊಬ್ಬರಿಗೆ ಹುಟ್ಟಿಸಿದರೆ ಅವನು ಆ ಇಂದ್ರಲೋಕದಲ್ಲಿ ದೇವತೆಗಳಿಂದಲೂ ಮುನೀಂದ್ರರಿಂದಲೂ ಗೌರವಿಸಲ್ಪಡುತ್ತಾನೆ.

೨೮೧. ಇನ್ನು ಮುಂದೆ ಕಮಲಸಪ್ತಮಿಯನ್ನು ಹೇಳುತ್ತೇನೆ. ಅದನ್ನು ಹೇಳಿದ ಕೂಡಲೇ ಸೂರ್ಯನು ಸಂತೋಷಗೊಳ್ಳುತ್ತಾನೆ.

ವಸಂತಾಮಲಸಪ್ತಮ್ಯಾಂ ಸಂಸ್ನಾತೋ ಗೌರಸರ್ಷಪೈಃ ।
ತಿಲಪಾತ್ರೇ ಚ ಸೌವರ್ಣಂ ನಿಧಾಯ ಕಮಲಂ ಶುಭಂ ॥ ೨೮೨ ॥

ವಸ್ತ್ರಯುಗ್ಮಾವೃತಂ ಕೃತ್ವಾ ಗಂಧಪುಷ್ಪೈರಥಾರ್ಚಯೇತ್ ।
ನಮಸ್ತೇ ಪದ್ಮಹಸ್ತಾಯ ನಮಸ್ತೇ ವಿಶ್ವಧಾರಿಣೇ ॥ ೨೮೩ ॥

ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ ।
ತತೋ ವಿಕಾಲವೇಲಾಯಾಮುದಕುಂಭಸಮನ್ವಿತಂ ॥ ೨೮೪ ॥

ವಿಪ್ರಾಯ ದದ್ಯಾತ್ಸಂಪೂಜ್ಯ ವಸ್ತ್ರಮಾಲ್ಯವಿಭೂಷಣೈಃ ।
ಶಕ್ತಿಶ್ಚೇತ್ಕಪಿಲಾಂ ದದ್ಯಾದಲಂಕೃತ್ಯ ವಿಧಾನತಃ ॥ ೨೮೫ ॥

ಅಹೋರಾತ್ರೇ ಗತೇ ಪಶ್ಚಾದಷ್ಟಮ್ಯಾಂ ಭೋಜಯೇದ್ದ್ವಿಜಾನ್ ।
ಯಥಾಶಕ್ತ್ಯಾಥ ಭುಂಜೀತ ವಿಮಾಂಸಂ ತೈಲವರ್ಜಿತಂ ॥ ೨೮೬ ॥

---

೨೮೨. ಚೈತ್ರಮಾಸದ ಸಪ್ತಮಿಯಲ್ಲಿ ಬಿಳಿಸಾಸುವೆ ಎಣ್ಣೆಯಿಂದ ಸ್ನಾನ ಮಾಡಿ ಎಳ್ಳನ್ನು ಪಾತ್ರೆಯಲ್ಲಿ ಹಾಕಿಕೊಂಡು ಅದರಲ್ಲಿ ಚಿನ್ನದ ಕಮಲವನ್ನು ಹಾಕಿ ಅದಕ್ಕೆ ಒಂದು ಜೊತೆ ಬಟ್ಟೆಯನ್ನು ಹೊದ್ದಿಸಿ ಗಂಧಪುಷ್ಪಗಳಿಂದ ಪೂಜಿಸಬೇಕು.

೨೮೩—೨೮೫. ಪದ್ಮಹಸ್ತನೇ ನಮಸ್ಕಾರವು. ವಿಶ್ವಧಾರಿಯೇ ನಿನಗೆ ನಮಸ್ಕಾರವು. ದಿವಾಕರನೇ ನಮಸ್ಕಾರವು. ಪ್ರಭಾಕರನೇ ನಿನಗೆ ನಮಸ್ಕಾರವು. ಎಂದು ಹೇಳಿ ಕಾಲವೇಳೆಯನ್ನು ನೋಡಿಕೊಂಡು (ಸಾಯಂಕಾಲದಲ್ಲಿ) ಉದಕುಂಭದಿಂದ ಸೇರಿಸಿ ಆ ತಿಲಪಾತ್ರವನ್ನು ಬ್ರಾಹ್ಮಣನನ್ನು ಕರೆದು ಅವನಿಗೆ ವಸ್ತ್ರಾದಿಗಳಿಂದ ಪೂಜಿಸಿ ಕೊಡಬೇಕು. ಶಕ್ತಿಯಿದ್ದರೆ ಕರೆಯುವ ಹಸುವನ್ನು ಅಲಂಕರಿಸಿ ಕೊಡಬೇಕು.

೨೮೬. ಆ ದಿನ ಕಳೆಯುತ್ತಲೂ ಅಷ್ಟಮಿಯ ದಿನ ಶಕ್ತ್ಯನುಗುಣವಾಗಿ ಬ್ರಾಹ್ಮಣರಿಗೆ ಊಟಮಾಡಿಸಬೇಕು. ತಾನು ಮಾಂಸ ಎಣ್ಣೆಗಳಿಲ್ಲದುದನ್ನು ಊಟ ಮಾಡಬೇಕು.

ಅನೇನಾ ವಿಧಿನಾ ಶುಕ್ಲಸಪ್ತಮ್ಯಾಂ ಮಾಸಿ ಮಾಸಿ ಚ ।
ಸರ್ವಂ ಸಮಾಚರೇದ್ಭಕ್ತ್ಯಾ ವಿತ್ತಶಾಠ್ಯವಿವರ್ಜಿತಃ ॥ ೨೮೭ ॥

ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ।
ಗಾಶ್ಚ ಪ್ರದದ್ಯಾಚ್ಛಕ್ತ್ಯಾ ತು ಸುವರ್ಣಾಸ್ತ್ಯ ಪಯಸ್ವಿನೀಃ ॥ ೨೮೮ ॥

ಭೋಜನಾಸನದೀಪಾದೀನ್ದದ್ಯಾದಿಷ್ಟಾನುಪಸ್ಕರಾನ್ ।
ಅನೇನ ವಿಧಿನಾ ಯಸ್ತು ಕುರ್ಯಾತ್ಕಮಲಸಪ್ತಮೀಂ ॥ ೨೮೯ ॥

ಲಕ್ಷ್ಮೀಮನಂತಾಮಭ್ಯೇತಿ ಸೂರ್ಯಲೋಕಂ ಚ ಗಚ್ಛತಿ
ಕಲ್ಪೇ ಕಲ್ಪೇ ತತೋ ಲೋಕಾನ್ಸಪ್ತ ಗತ್ವಾ ಪೃಥಕ್ಪೃಥಕ್ ।
ಅಪ್ಸರೋಭಿಃ ಪರಿವೃತಸ್ತತೋ ಯಾತಿ ಪರಾಂ ಗತಿಂ ॥ ೨೯೦ ॥

ಪಶ್ಯೇದಿಮಾಂ ಯಶ್ಶೃಣುಯಾನ್ಮುಹೂರ್ತಂ
ಪಠೇಚ್ಚ ಭಕ್ತ್ಯಾಥ ಮತಿಂ ದದಾತಿ ।

---

೨೮೭. ಈ ನಿಯಮದಿಂದ ಶುದ್ಧ ಸಪ್ತಮಿಯ ದಿನ ಪ್ರತಿ ತಿಂಗಳಲ್ಲಿಯೂ ಭಕ್ತಿಯಿಂದ ಇದನ್ನು ಆಚರಿಸಬೇಕು. ಲೋಭತನ ಕೂಡದು.

೨೮೮. ವ್ರತದ ಕೊನೆಯಲ್ಲಿ ಚಿನ್ನದ ಕಮಲದಿಂದ ಕೂಡಿದ ಹಾಸಿಗೆಯನ್ನು ಕೊಡಬೇಕು. ಕರೆಯುವ ಹಸುವನ್ನು ಶಕ್ತಿಗನುಗುಣವಾಗಿ ಕೊಡಬೇಕು.

೨೮೯. ಊಟ ಆಸನ ದೀಪಗಳನ್ನೂ ಅವುಗಳಿಗೆ ಅನುಗುಣವಾಗಿ ಕೊಡಬೇಕು. ಈ ವಿಧಿಯಿಂದ ಯಾವನು ಕಮಲಸಪ್ತಮಿಯನ್ನು ಮಾಡುತ್ತಾನೋ ಅವನು ಬಹಳವಾದ ಲಕ್ಷ್ಮಿಯನ್ನು ಹೊಂದುತ್ತಾನೆ. ಸೂರ್ಯಲೋಕವನ್ನು ಹೊಂದುತ್ತಾನೆ.

೨೯೦. ಮತ್ತು ಒಂದೊಂದು ಕಲ್ಪಕ್ಕೂ ಒಂದೊಂದು ಲೋಕಕ್ಕೆ ಹೋಗಿ ಅಲ್ಲಿ ಅಪ್ಸರಸ್ತ್ರೀಯರೊಡನಿದ್ದು ಸುಖವನ್ನು ಹೊಂದಿ ಕೊನೆಗೆ ಉತ್ತಮಪದವನ್ನು ಹೊಂದುತ್ತಾನೆ.

೨೯೧. ಈ ವ್ರತವನ್ನು ನೋಡುವವನು, ಕೇಳುವವನು, ಓದುವವನು,

ಸೋಽಪ್ಯತ್ರ ಲಕ್ಷ್ಮೀಮಮಲಾಮವಾಪ್ಯ
ಗಂಧರ್ವವಿದ್ಯಾಧರಲೋಕನಾಥಃ ॥ ೨೯೧ ॥

ಅಥಾತಸ್ಸಂಪ್ರವಕ್ಷ್ಯಾಮಿ ಸರ್ವಪಾಪಪ್ರಣಾಶಿನೀಂ ।
ಸರ್ವಕಾಮಪ್ರದಾಂ ಪುಣ್ಯಾಂ ನಾಮ್ನಾ ಮಂದಾರಸಪ್ತಮೀಂ ॥ ೨೯೨ ॥

ಮಾಘಸ್ಯಾಮಲಪಕ್ಷೇ ತು ಪಂಚಮ್ಯಾಂ ಲಘುಭುಙ್ನರಃ ।
ದಂತಕಾಷ್ಠಂ ತತಃ ಕೃತ್ವಾ ಷಷ್ಠೀಮುಪವಸೇದ್ಬುಧಃ ॥ ೨೯೩ ॥

ವಿಪ್ರಾಂಶ್ಚ ಪೂಜಯಿತ್ವಾ ತು ಮಂದಾರಂ ಪ್ರಾರ್ಥಯೇನ್ನಿಶಿ ।
ತತಃ ಪ್ರಭಾತ ಉತ್ಥಾಯ ಕೃತಸ್ನಾನಃ ಪುನರ್ದ್ವಿಜಾನ್ ॥ ೨೯೪ ॥

ಭೋಜಯೇಚ್ಛಕ್ತಿತಃ ಕುರ್ಯಾನ್ಮಂದಾರಕುಸುಮಾಷ್ಟಕಂ ।
ಸೌವರ್ಣಂ ಪುರುಷಂ ತದ್ವತ್ಪದ್ಮಹಸ್ತಂ ತು ಶೋಭನಂ ॥ ೨೯೫ ॥

---

ಮಾಡುವಂತೆ ಪ್ರೇರಿಸುವವನು ಇವರು ಲಕ್ಷ್ಮಿಯನ್ನು ಹೊಂದಿ ಗಂಧರ್ವ ವಿದ್ಯಾಧರರ ಲೋಕಕ್ಕೆ ಒಡೆಯರಾಗುತ್ತಾರೆ.

೨೯೨. ಮುಂದೆ ಪಾಪಪರಿಹಾರಕವಾದ ಇಷ್ಟಾರ್ಥಗಳನ್ನು ಕೊಡುವ ಪುಣ್ಯಕರವಾದ ಮಂದಾರಸಪ್ತಮಿಯನ್ನು ಹೇಳುತ್ತೇನೆ.

೨೯೩. ಮಾಘಮಾಸದ ಶುಕ್ಲಪಕ್ಷದ ಪಂಚಮಿಯ ದಿನ ಮಿತಾಹಾರಮಾಡಿ ಹಲ್ಲುಜ್ಜಿಕೊಂಡು ಷಷ್ಠಿಯ ದಿನ ಉಪವಾಸಮಾಡಬೇಕು.

೨೯೪. ಬ್ರಾಹ್ಮಣರನ್ನು ಪೂಜಿಸಿ ಅನಂತರ ಮಂದಾರವೃಕ್ಷವನ್ನು ಪ್ರಾರ್ಥಿಸಬೇಕು. ಆಮೇಲೆ ಮಾರನೆಯ ದಿನ ಬೆಳಿಗ್ಗೆ ಎದ್ದು ಸ್ನಾನಮಾಡಿಕೊಂಡು ಬ್ರಾಹ್ಮಣರಿಗೆ ಭೋಜನಮಾಡಿಸಿ ಮಂದಾರಮರದ ಹೂಗಳು ಎಂಟನ್ನು ಮಾಡಿಸಬೇಕು.

೨೯೫. ಸುವರ್ಣದಲ್ಲಿ ಒಬ್ಬ ಪುರುಷನನ್ನು ಮಾಡಿಸಿ ಅವನ ಕೈಯಲ್ಲಿ ಕಮಲವನ್ನು ಕೊಟ್ಟಿರಬೇಕು. ಮತ್ತು ಒಂದು ತಾಮ್ರದ ಪಾತ್ರೆಯಲ್ಲಿ ಎಂಟು ದಳದ ಪದ್ಮವನ್ನು ಕರಿಯ ಎಳ್ಳುಗಳಿಂದ ಮಾಡಬೇಕು.

ಪದ್ಮಂ ಕೃಷ್ಣತಿಲೈಃ ಕೃತ್ವಾ ತಾಮ್ರಪಾತ್ರೇऽಷ್ಟಪತ್ರಕಂ ।
ಇಮಂ ಮಂದಾರಕುಸುಮೈರ್ಭಾಸ್ಕರಾಯೇತಿ ಪೂರ್ವತಃ ॥ ೨೯೬ ॥

ನಮಸ್ಕಾರೇಣ ತದ್ವತ್ತು ಸೂರ್ಯಾಯೇತ್ಯನಲೇ ದಳೇ ।
ದಕ್ಷಿಣೇ ತದ್ವದರ್ಕಾಯ ತಥಾರ್ಯಮ್ಣೇ ಚ ನೈಋರ್ತೇ ॥ ೨೯೭ ॥

ಪಶ್ಚಿಮೇ ವೇದಧಾಮ್ನೇ ಚ ವಾಯವ್ಯೇ ಚಂಡಭಾನವೇ ।
ಪೂಷ್ಣೇ ಚೋತ್ತರತಃ ಪೂಜ್ಯ ಆನಂದಾಯೇತ್ಯತಃ ಪರಂ ॥ ೨೯೮ ॥

ಕರ್ಣಿಕಾಯಾಂ ಚ ಪುರುಷಃ ಸ್ಥಾಪ್ಯಃ ಸರ್ವಾತ್ಮನೇऽಪಿ ಚ ।
ಶುಕ್ಲವಸ್ತ್ರೈಸ್ಸಮಾವೇಷ್ಟ್ಯ ಭಕ್ಷ್ಯೈರ್ಮಾಲ್ಯಫಲಾದಿಭಿಃ ॥ ೨೯೯ ॥

ಏವಮಭ್ಯರ್ಚ್ಯ ತತ್ಸರ್ವಂ ದದ್ಯಾದ್ವೇದವಿದೇ ತತಃ ।
ಭುಂಜೀತಾತ್ತೈಲಲವಣಂ ವಾಗ್ಯತಃ ಪ್ರಾಙ್ಮುಖೋ ಗೃಹೀ ॥ ೩೦೦ ॥

ಅನೇನ ವಿಧಿನಾ ಸರ್ವಂ ಮಾಸಿ ಮಾಸಿ ಸಮಾಚರೇತ್ ।
ಕುರ್ಯಾತ್ಸಂವತ್ಸರಂ ಯಾವದ್ವಿತ್ತಶಾಠ್ಯವಿವರ್ಜಿತಃ. ॥ ೩೦೧ ॥

---

೨೯೬—೨೯೯. ಈ ಕಮಲವನ್ನು ಮಂದಾರದ ಹೂಗಳಿಂದ ಭಾಸ್ಕರನಿಗೆ ನಮಸ್ಕಾರವು ಎಂದು ಪೂರ್ವದಳವನ್ನೂ, ಸೂರ್ಯನಿಗೆ ನಮಸ್ಕಾರವು ಎಂದು ಆಗ್ನೇಯ ದಳವನ್ನೂ, ಅರ್ಕನಿಗೆ ನಮಮಸ್ಕಾರವೆಂದು ದಕ್ಷಿಣದ ದಳವನ್ನೂ, ಅರ್ಯಮನಿಗೆ ನಮಸ್ಕಾರವೆಂದು ನೈಋತ್ಯದಳವನ್ನೂ, ವೇದಧಾಮನಿಗೆ ನಮಸ್ಕಾರವೆಂದು ಪಶ್ಚಿಮ ದಳವನ್ನೂ, ಚಂಡಭಾನುವಿಗೆ ನಮಸ್ಕಾರವೆಂದು ವಾಯುವ್ಯದಳವನ್ನೂ, ಪೂಷನಿಗೆ ನಮಸ್ಕಾರವೆಂದು ಉತ್ತರದಳವನ್ನೂ, ಆನಂದನಿಗೆ ನಮಸ್ಕಾರವೆಂದು ಈಶಾನ್ಯದಳ ವನ್ನೂ, ಪೂಜಿಸಿ ಆವಾಹನೆ ಮಾಡಿ ಮಧ್ಯದ ಕರ್ಣಿಕೆಯಲ್ಲಿ ಸರ್ವಾತ್ಮನಿಗೆ ನಮಸ್ಕಾರ ವೆಂದು ಆ ಚಿನ್ನದ ಪ್ರತಿಮೆಯನ್ನು ಇಟ್ಟು ಪೂಜಿಸಬೇಕು. ಬಿಳಿಯ ಬಟ್ಟೆಯನ್ನು ಸುತ್ತಬೇಕು. ಮಾಲೆ ಫಲ ಭಕ್ಷ್ಯಗಳನ್ನು ಮಾಡಿ ಪೂಜಿಸಬೇಕು.

೩೦೦. ಈರೀತಿ ಪೂಜಿಸಿ ವೇದಾಧ್ಯಯನ ಸಂಪನ್ನನಿಗೆ ಆದನ್ನು ದಾನ ಮಾಡಬೇಕು. ಅನಂತರ ಮೌನದಿಂದ ಎಣ್ಣೆ ಉಪ್ಪುಗಳನ್ನು ಬಿಟ್ಟು ಊಟ ಮಾಡಬೇಕು.

೩೦೧. ಈ ರೀತಿಯಾಗಿ ಪ್ರತಿ ತಿಂಗಳಿನಲ್ಲಿಯೂ ಒಂದು ವರ್ಷದವರೆಗೂ ಮಾಡಬೇಕು. ಲೋಭತನಮಾಡಬಾರದು.

ಏತದೇವ ವ್ರತಾಂತೇ ತು ನಿಧಾಯ ಕಲಶೋಪರಿ ।
ಗೋಭಿರ್ವಿಭವತಸ್ಸಾರ್ಧಂ ದಾತವ್ಯಂ ಭೂತಿಮಿಚ್ಛತಾ　　॥ ೩೦೨ ॥

ನಮೋ ಮಂದಾರನಾಥಾಯ ಮಂದಾರಭವನಾಯ ಚ ।
ತ್ವಂ ರವೇ ತಾರಯಸ್ವಾಸ್ಮಾನಸ್ಮಾತ್ಸಂಸಾರಸಾಗರಾತ್　　॥ ೩೦೩ ॥

ಅನೇನ ವಿಧಿನಾ ಯಸ್ತು ಕುರ್ಯಾನ್ಮಂದಾರಸಪ್ತಮೀಂ ।
ವಿಪಾಪ್ಮಾ ಸ ಸುಖೀ ಮರ್ತ್ಯಃ ಕಲ್ಪಂ ಚ ದಿವಿ ಮೋದತೇ　　॥ ೩೦೪ ॥

ಇಮಾಮಘೌಘಪಟಲಭೀಷಣಧ್ವಾಂತದೀಪಿಕಾಂ ।
ಗಚ್ಛನ್ಸಂಗೃಹ್ಯ ಸಂಸಾರಶರ್ವರ್ಯಾಂ ನ ಸ್ಖಲೇನ್ನರಃ　　॥ ೩೦೫ ॥

ಮಂದಾರಸಪ್ತಮೀಮೇತಾಮೀಪ್ಸಿತಾರ್ಥಫಲಪ್ರದಾಂ ।
ಯಃ ಪಠೇಚ್ಛೃಣುಯಾದ್ವಾಪಿ ಸೋಽಪಿ ಪಾಪೈಃ ಪ್ರಮುಚ್ಯತೇ ॥ ೩೦೬ ॥

ಅಥಾನ್ಯಾಮಪಿ ವಕ್ಷ್ಯಾಮಿ ಶೋಭನಾಂ ಶುಭಸಪ್ತಮೀಂ ।
ಯಾಮುಪೋಷ್ಯ ನರೋ ರೋಗಶೋಕೌಘಾತ್ತು ಪ್ರಮುಚ್ಯತೇ ॥ ೩೦೭ ॥

---

೩೦೨. ವ್ರತದ ಕೊನೆಯಲ್ಲಿ ಇದನ್ನೇ ಕಲಶದ ಮೇಲಿಟ್ಟು ದಾನಮಾಡಬೇಕು. ಐಶ್ವರ್ಯಕಾಮಿಯು ಕರೆಯುವ ಗೋವಿನೊಡನೆ ಕೊಡಬೇಕು.

೩೦೩-೩೦೪. ಮಂದಾರನಾಥನೇ ನಿನಗೆ ನಮಸ್ಕಾರವು. ಮಂದಾರಭವನೇ ನಿನಗೆ ನಮಸ್ಕಾರವು. ಎಲೈ ರವಿಯೇ, ಈ ಸಂಸಾರಸಾಗರದಿಂದ ನಮ್ಮನ್ನು ಕಾಪಾಡು ಎಂದು ಹೇಳಬೇಕು. ಈ ವಿಧಿಯಿಂದ ಯಾವನು ಮಂದಾರಸಪ್ತಮಿಯನ್ನು ಮಾಡುತ್ತಾನೆಯೋ ಅವನು ಪಾಪವನ್ನು ಕಳೆದುಕೊಂಡು ಸುಖಿಯಾಗಿ ಕಲ್ಪಕಾಲ ಸ್ವರ್ಗದಲ್ಲಿ ಸುಖಿಸುತ್ತಾನೆ.

೩೦೫. ಪಾಪವೆಂಬ ಕಗ್ಗತ್ತಲೆಗೆ ದೀಪವಾದ ವ್ರತವನ್ನು ಮಾಡಿದರೆ ಸಂಸಾರವೆಂಬ ಕಗ್ಗತ್ತಲೆಯಲ್ಲಿ ಹೋಗುವವನು ಎಡುವುವುದಿಲ್ಲ.

೩೦೬. ಈಪ್ಸಿತವಾದುದನ್ನು ಕೊಡುವ ಈ ಮಂದಾರಸಪ್ತಮಿಯನ್ನು ಕೇಳಿದರೆ, ಓದಿದರೆ ಸರ್ವಪಾಪಗಳೂ ಹೋಗುತ್ತವೆ.

೩೦೭. ಮತ್ತೊಂದಾದ ಶುಭಸಪ್ತಮಿಯನ್ನು ಹೇಳುತ್ತೇನೆ. ಮನುಷ್ಯನು ಅದರಲ್ಲಿ ಉಪವಾಸವಿದ್ದರೆ ರೋಗಶೋಕಗಳು ಬರುವುದಿಲ್ಲ.

ಪುಣ್ಯಾಹಮಾಶ್ವಯುಜೇ ಮಾಸಿ ಕೃತಸ್ನಾನಜಪಶ್ಶುಚಿಃ ।
ವಾಚಯಿತ್ವಾ ತತೋ ವಿಪ್ರಾನಾರಭೇಚ್ಛುಭಸಪ್ತಮೀಂ ॥ ೩೦೮ ॥

ಕಪಿಲಾಂ ಪೂಜಯೇದ್ಭಕ್ತ್ಯಾ ಗಂಧಮಾಲ್ಯಾನುಲೇಪನೈಃ ।
ನಮಾಮಿ ಸೂರ್ಯಸಂಭೂತಾಮಶೇಷಭುವನಾಲಯಾಂ ॥ ೩೦೯ ॥

ತ್ವಾಮಹಂ ಶುಭಕಲ್ಯಾಣಿ ಸ್ವಶರೀರವಿಶುದ್ಧಯೇ ।
ಅಥ ಕೃತ್ವಾ ತಿಲಪ್ರಸ್ಥಂ ತಾಮ್ರಪಾತ್ರೇಣ ಸಂಯುತಂ ॥ ೩೧೦ ॥

ಕಾಂಚನಂ ವೃಷಭಂ ತದ್ವದ್ವಸ್ತ್ರಮಾಲ್ಯಗುಣಾನ್ವಿತಂ ।
ಸೋಪಧಾನಕವಿಸ್ತೀರ್ಣಭಾಜನಾಸನಸಂಯುತಂ ॥ ೩೧೧ ॥

ಫಲೈರ್ನಾನಾವಿಧೈರ್ಭಕ್ಷ್ಯೈರ್ಘೃತಪಾಯಸಸಂಯುತೈಃ ।
ದದ್ಯಾದ್ದ್ವಿಜಾಲವೇಲಾಯಾಮರ್ಯಮಾ ಪ್ರೀಯತಾಮಿತಿ ॥ ೩೧೨ ॥

ಪಂಚಗವ್ಯಂ ಚ ಸಂಪ್ರಾಶ್ಯ ಸ್ವಪೇದ್ಭೂಮಾವಸಂಸ್ತರೇ ।
ತತಃ ಪ್ರಭಾತೇ ಸಂಜಾತೇ ಭಕ್ತ್ಯಾ ಸಂತರ್ಪಯೇದ್ದ್ವಿಜಾನ್ ॥ ೩೧೩ ॥

---

೩೦೮. ಆಶ್ವಯುಜಮಾಸದಲ್ಲಿ ಸ್ನಾನಮಾಡಿ ಶುಚಿಯಾಗಿ ಪುಣ್ಯಾಹವನ್ನು ಮಾಡಿಸಿ ಶುಭಸಪ್ತಮಿಯನ್ನಾರಂಭಿಸಬೇಕು.

೩೦೯. ಕಪಿಲೆ ಹಸುವನ್ನು ಭಕ್ತಿಯಿಂದ ಹೂ ಗಂಧ ಮುಂತಾದುವುಗಳಿಂದ ಪೂಜಿಸಬೇಕು. ಸೂರ್ಯನಿಂದ ಉತ್ಪನ್ನಳಾದ, ಎಲ್ಲಾ ಲೋಕವೂ ಮನೆಯಾಗಿವುಳ್ಳ ಎಲೈ ಕಲ್ಯಾಣಿಯೇ, ನನ್ನ ದೇಹಶುದ್ಧಿಗೋಸ್ಕರ ನಿನ್ನನ್ನು ಪೂಜಿಸುತ್ತೇನೆ.

೩೧೦—೩೧೨. ತಾಮ್ರಪಾತ್ರದಲ್ಲಿ ಒಂದು ಕೊಳಗ ಎಳ್ಳನ್ನು ಇಡಬೇಕು. ಚಿನ್ನದ ಒಂದು ಹೋರಿಕರುವನ್ನು ಮಾಡಿಸಿ ಅದರೊಳಗಿಟ್ಟು ವಸ್ತ್ರಾದಿಗಳಿಂದಲಂಕರಿಸಿ, ಪಾತ್ರೆಯೇ ಮುಂತಾದ ಪರಿಕರಗಳನ್ನು ಇಟ್ಟು, ಬಗೆಬಗೆ ಫಲಗಳನ್ನೂ ಭಕ್ಷ್ಯಗಳನ್ನೂ ತುಪ್ಪ ಪಾಯಸಗಳನ್ನೂ ಇಟ್ಟು ಬ್ರಾಹ್ಮಣನನ್ನು ಪೂಜಿಸಿ, ಅರ್ಯಮನಿಗೆ ಪ್ರೀತಿಯಾಗಲೆಂದು ಸಾಯಂಕಾಲದಲ್ಲಿ ಕೊಡಬೇಕು.

೩೧೩. ಆ ದಿನ ಪಂಚಗವ್ಯವನ್ನು ಕುಡಿದು ಹಾಸದಿರುವ ಬರೀ ನೆಲದ ಮೇಲೆ ಮಲಗಬೇಕು. ಬೆಳಿಗ್ಗೆ ಎದ್ದು ಭಕ್ತಿಯಿಂದ ಬ್ರಾಹ್ಮಣಸಂತರ್ಪಣೆ ಮಾಡಬೇಕು.

ಅನೇನ ವಿಧಿನಾ ದದ್ಯಾನ್ಮಾಸಿ ಮಾಸಿ ಸದಾ ನರಃ ।
ವಾಸಸೀ ವೃಷಭಂ ಹೈಮಂ ತದ್ವದ್ಗಾಂ ಕಾಂಚನೋದ್ಭವಾಂ ॥ ೩೧೪ ॥

ಸಂವತ್ಸರಾಂತೇ ಶಯನಮಿಕ್ಷುದಂಡಗುಡಾನ್ವಿತಂ ।
ತಾಮ್ರಪಾತ್ರೇ ತಿಲಪ್ರಸ್ಥಂ ಸೌವರ್ಣಂ ವೃಷಭಂ ತಥಾ ॥ ೩೧೫ ॥

ದದ್ಯಾದ್ವೇದವಿದೇ ಸರ್ವಂ ವಿಶ್ವಾತ್ಮಾ ಪ್ರೀಯತಾಮಿತಿ ।
ಅನೇನ ವಿಧಿನಾ ವಿದ್ವಾನ್ಕುರ್ಯಾದ್ಯಃ ಶುಭಸಪ್ತಮೀಂ ॥ ೩೧೬ ॥

ತಸ್ಯ ಶ್ರೀರ್ವಿಮಲಾ ಕೀರ್ತಿರ್ಭವೇಜ್ಜನ್ಮನಿ ಜನ್ಮನಿ ।
ಅಪ್ಸರಸಾಂ ಗಣೈಸ್ಸರ್ವೈಃ ಪೂಜ್ಯಮಾನಸ್ಸುರಾಲಯೇ ॥ ೩೧೭ ॥

ವಸೇದ್ಗಣಾಧಿಪೋ ಭೂತ್ವಾ ಯಾವದಾಭೂತಸಂಪ್ಲವಂ ।
ಕಲ್ಪಾದಾವವತೀರ್ಣಶ್ಚ ಸಪ್ತದ್ವೀಪಾಧಿಪೋ ಭವೇತ್ ॥ ೩೧೮ ॥

ಭ್ರೂಣಹತ್ಯಾಸಹಸ್ರಸ್ಯ ಬ್ರಹ್ಮಹತ್ಯಾಶತಸ್ಯ ಚ ।
ನಾಶಾಯಾಲಮಿಯಂ ಪುಣ್ಯಾ ಪಠ್ಯತೇ ಶುಭಸಪ್ತಮೀ ॥ ೩೧೯ ॥

---

೩೧೪. ಈರೀತಿಯಾಗಿ ತಿಂಗಳುತಿಂಗಳಿಗೂ ಮಾಡಬೇಕು. ಬಟ್ಟೆ, ಚಿನ್ನದ ಹೋರಿ, ಗೋವುಗಳನ್ನು ದಾನಮಾಡಬೇಕು.

೩೧೫. ವರ್ಷದ ಕೊನೆಯಲ್ಲಿ ಹಾಸಿಗೆ ಕಬ್ಬು ಬೆಲ್ಲ, ತಾಮ್ರಪಾತ್ರದಲ್ಲಿ ಒಂದುಕೊಳಗ ಎಳ್ಳು, ಚಿನ್ನದ ವೃಷಭ, ಇವನ್ನು ವಿಶ್ವಾತ್ಮನಿಗೆ ಪ್ರೀತಿಯಾಗಲೆಂದು ವೇದ ಓದಿದವನಿಗೆ ಕೊಡಬೇಕು.

೩೧೬. ಈ ವಿಧಿಯಿಂದ ಶುಭಸಪ್ತಮಿಯನ್ನು ಮಾಡಿದವನು ಸಂಪತ್ತನ್ನೂ ಕೀರ್ತಿಯನ್ನೂ ಹೊಂದಿ ಜನ್ಮಜನ್ಮದಲ್ಲಿಯೂ ಸುಖಿಸುತ್ತಾನೆ.

೩೧೭-೩೧೮. ಇಂತಹವನು ಅಪ್ಸರಸಗಣದಿಂದ ಪೂಜಿಸಲ್ಪಡುತ್ತ ಸ್ವರ್ಗದಲ್ಲಿ ಗಣಾಧಿಪನಾಗಿ ಪ್ರಳಯಕಾಲದವರೆಗೂ ಇರುತ್ತಾನೆ. ಅನಂತರ ಈ ಲೋಕದಲ್ಲಿ ಹುಟ್ಟಿ ಏಳುದ್ವೀಪಗಳಿಗೂ ಅಧಿಪತಿಯಾಗುತ್ತಾನೆ.

೩೧೯. ಸಾವಿರ ಭ್ರೂಣಹತ್ಯೆ, ನೂರು ಬ್ರಹ್ಮಹತ್ಯೆಗಳನ್ನು ಈ ಶುಭಸಪ್ತಮಿಯು ನಾಶಮಾಡುತ್ತದೆ.

ಇಮಾಂ ಪಠೇದ್ಯಶ್ಶೃಣುಯಾನ್ಮುಹೂರ್ತಂ
ಪಶ್ಯೇತ್ಪ್ರಸಂಗಾದಪಿ ದೀಯಮಾನಂ ।
ಸೋऽಪ್ಯತ್ರ ಸರ್ವಾಘವಿಮುಕ್ತದೇಹಃ
ಪ್ರಾಪ್ನೋತಿ ವಿದ್ಯಾಧರನಾಯಕತ್ವಂ ॥ ೩೨೦ ॥

ಯಾವತ್ಸಮಾಸ್ಸಪ್ತ ನರಃ ಕರೋತಿ
ಯಸ್ಸಪ್ತಮೀಂ ಸಪ್ತವಿಧಾನಯುಕ್ತಾಂ ।
ಸ ಸಪ್ತಲೋಕಾಧಿಪತಿಃ ಕ್ರಮೇಣ
ಭೂತ್ವಾ ಪದಂ ಯಾತಿ ಪರಂ ಮುರಾರೇಃ ॥ ೩೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಪುಷ್ಕರಮಾಹಾತ್ಮ್ಯೇ ಏಕವಿಂಶತಿತಮೋऽಧ್ಯಾಯಃ



---

೩೨೦. ಇದನ್ನು ಓದಿದವನು, ಕೇಳಿದವನು, ದಾನವನ್ನು ನೋಡಿದವನು ಇವರು ಎಲ್ಲಾ ಪಾಪವನ್ನೂ ಕಳೆದುಕೊಂಡು ಸತ್ತಮೇಲೆ ವಿದ್ಯಾಧರರಿಗೆ ಒಡೆಯರಾಗುತ್ತಾರೆ.

೩೨೧. ಮನುಷ್ಯನು ಈ ಏಳು ವಿಧವಾದ ಸಪ್ತಮಿಗಳನ್ನು ಏಳು ವರ್ಷಗಳು ಮಾಡಿದರೆ ಅವನು ಸಪ್ತಲೋಕಗಳಿಗೂ ಅಧಿಪತಿಯಾಗಿದ್ದುಕೊಂಡು ಅನಂತರ ವೈಕುಂಠವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಪುಷ್ಕರಮಹಿಮೆಯಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ದ್ವಾವಿಂಶತಿತಮೋಽಧ್ಯಾಯಃ

---

॥ ಭೀಷ್ಮ ಉವಾಚ ॥

**ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋಽಥ ಮಹರ್ಜನಃ ।**
**ತಪಸ್ಸತ್ಯಂ ಚ ಸಪ್ತೈತೇ ದೇವಲೋಕಾಃ ಪ್ರಕೀರ್ತಿತಾಃ ॥ ೧ ॥**

**ಪರ್ಯಾಯೇಣ ತು ಸರ್ವೇಷಾಮಾಧಿಪತ್ಯಂ ಕಥಂ ಭವೇತ್ ।**
**ಇಹ ಲೋಕೇ ಶುಭಂ-ರೂಪಮಾಯುರಾರೋಗ್ಯಮೇವ ಚ ॥**
**ಲಕ್ಷ್ಮೀಶ್ಚಾಪಿ ಪುರಾ ಬ್ರಹ್ಮನ್ ಕಥಂ ಸ್ಯಾತ್ಸುರಪೂಜಿತಾ ॥ ೨ ॥**

॥ ಪುಲಸ್ತ್ಯ ಉವಾಚ ॥

**ಪುರಾ ಹುತಾಶನಸ್ಸಾರ್ಧಂ ಮಾರುತೇನ ಮಹೀತಲೇ ।**
**ಆದಿಷ್ಟಃ ಪುರುಹೂತೇನ ವಿನಾಶಾಯ ಸುರದ್ವಿಷಾಂ ॥ ೩ ॥**

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಭೀಷ್ಮನು ಕೇಳಿದನು :—ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಎಂಬುದಾಗಿ ಏಳು ಲೋಕಗಳು ಪ್ರಸಿದ್ಧವಾಗಿವೆ.

೨. ಈ ಲೋಕಗಳ ಒಡೆತನವು ಕ್ರಮದಿಂದ ಬರುವುದೆಂದರೆ ಹೇಗೆ? ಈ ಲೋಕದಲ್ಲಿ ಸೌಂದರ್ಯ, ಒಳ್ಳೆಯ ರೂಪ, ಆಯಸ್ಸು, ಆರೋಗ್ಯ ಇವುಗಳು ಬರುವುದು ಹೇಗೆ? ಲಕ್ಷ್ಮಿಯು ಪೂರ್ವದಲ್ಲಿ ದೇವಪೂಜಿತಳಾದುದು ಹೇಗೆ?

೩. ಪುಲಸ್ತ್ಯನು ಹೇಳಿದನು :— ಪೂರ್ವದಲ್ಲಿ ಇಂದ್ರನು ಅಗ್ನಿಯನ್ನೂ, ವಾಯುವನ್ನೂ ಕುರಿತು ಲೋಕದಲ್ಲಿ ರಾಕ್ಷಸರನ್ನು ನಾಶಮಾಡಿರೆಂದು ಆಜ್ಞಾಪಿಸಿದನು.

ನಿರ್ದಗ್ಧೇಷು ತತಸ್ತೇನ ದಾನವೇಷು ಸಹಸ್ರಶಃ ।
ತಾರಕಃ ಕಮಲಾಕ್ಷಶ್ಚ ಕಾಲದಂಷ್ಟ್ರಃ ಪರಾವಸುಃ ॥ ೪ ॥

ವಿರೋಚನಶ್ಚ ಸಂಹ್ಲಾದಃ ಪ್ರಯಾತಾಸ್ತೇ ತದಾವಸನ್ ।
ಅಂತಸ್ಸಮುದ್ರಮಾವಿಶ್ಯ ಸನ್ನಿವೇಶಮಕುರ್ವತ ॥ ೫ ॥

ಅಶಕ್ತಾ ಇತಿ ತೇಽಪ್ಯಗ್ನಿಮಾರುತಾಭ್ಯಾಮುಪೇಕ್ಷಿತಾಃ ।
ತತಃ ಪ್ರಭೃತಿ ವೈ ದೇವಾನ್ಮನುಷ್ಯಾನ್ಸಭುಜಂಗಮಾನ್ ॥ ೬ ॥

ಸಂಪೀಡ್ಯ ಚ ಮುನೀನ್ಸರ್ವಾನ್ಪ್ರವಿಶಂತಿ ಪುನರ್ಜಲಂ ।
ಏವಂ ಯುಗಸಹಸ್ರಾಣಿ ತೇ ವೀರಾಃ ಪಂಚ ಸಪ್ತ ಚ ॥ ೭ ॥

ಜಲದುರ್ಗಬಲಾದ್ರಾಜನ್ ಪೀಡಯಂತಿ ಜಗತ್ತ್ರಯಂ ।
ತತಃ ಪುನರಥೋ ವಹ್ನಿಮಾರುತಾವಮರಾಧಿಪಃ ॥ ೮ ॥

ಆದಿದೇಶಾಚಿರಾದಂಬುನಿಧಿರೇಷ ವಿಶೋಷ್ಯತಾಂ ।
ಯಸ್ಮಾದಸ್ಮದ್ದ್ವಿಷಾಂ ಚೈಷ ಶರಣಂ ವರುಣಾಲಯಃ ॥ ೯ ॥

---

೪-೫. ಆಗವರಿಬ್ಬರೂ ದಾನವರನ್ನು ಸಾವಿರಗಟ್ಟಲೆಯಾಗಿ ನಾಶಮಾಡಿದರು. ಆಗ ತಾರಕ, ಕಮಲಾಕ್ಷ, ಕಾಲದಂಷ್ಟ್ರ, ಪರಾವಸು, ವಿರೋಚನ, ಸಂಹ್ಲಾದ ಇವರುಗಳು ಸಮುದ್ರದೊಳಗೆ ಮನೆಮಾಡಿಕೊಂಡು, ಆ ಅಗ್ನಿ, ಮಾರುತರ ತೊಂದರೆಯನ್ನು ತಪ್ಪಿಸಿಕೊಂಡರು.

೬. ಈ ರಾಕ್ಷಸರು ಕೈಲಾಗದವರೆಂದು ಅಗ್ನಿ, ವಾಯುಗಳು, ಅವರನ್ನು ಉಪೇಕ್ಷಿಸಿದರು. ಅದು ಮೊದಲುಗೊಂಡು ಅವರು ದೇವತೆಗಳನ್ನೂ, ಮನುಷ್ಯರನ್ನೂ, ಸರ್ಪಗಳನ್ನೂ, ಮುನಿಗಳನ್ನೂ ಬಾಧಿಸುತ್ತ ಮತ್ತೆ ಆ ನೀರಿನೊಳಕ್ಕೆ ಹೊರಟುಹೋಗುತ್ತಿದ್ದರು.

೭. ಈರೀತಿಯಾಗಿ ಆ ದಾನವರು ಜಲದುರ್ಗದ ಆಶ್ರಯದಿಂದ ಆ ಐದಾರು ಜನ ವೀರರೂ ಸಾವಿರ ಯುಗಗಳವರೆಗೂ ಮೂರು ಲೋಕವನ್ನು ಪೀಡಿಸುತ್ತ ಬಂದರು.

೮-೯. ಆ ಮೇಲೆ ಮತ್ತೆ ಇಂದ್ರನು ಅಗ್ನಿ ವಾಯುಗಳನ್ನು ಕುರಿತು, ಈ ಸಮುದ್ರವು ನಮ್ಮ ಶತ್ರುಗಳಾದ ದಾನವರಿಗೆ ಆಶ್ರಯವನ್ನು ಕೊಟ್ಟಿದೆ. ಆದ್ದರಿಂದ ಇದನ್ನು ನೀರಿಲ್ಲದಂತೆ ಒಣಗಿಸಿರಿ ಎಂದು ಅಪ್ಪಣೆಮಾಡಿದನು.

ತಸ್ಮಾದ್ಭವದ್ಭ್ಯಾಮದ್ಯೈವ ಶೋಷಮೇಷ ಪ್ರಣೀಯತಾಂ ।
ತಾವೂಚತುಸ್ತತಶ್ಶಕ್ರಂ ಮಯಶಂಬರಸೂದನಂ ॥ ೧೦ ॥

॥ ಅಗ್ನಿವಾಯೂ ಊಚತುಃ ॥

ಅಧರ್ಮ ಏಷ ದೇವೇಂದ್ರ ಸಾಗರಸ್ಯ ವಿನಾಶನಂ ।
ಯಸ್ಮಾಜ್ಜೀವನಿಕಾಯಸ್ಯ ಮಹತಸ್ಸಂಕ್ಷಯೋ ಭವೇತ್ ॥ ೧೧ ॥

ತಸ್ಮಾದುಪಾಯಮನ್ಯಂ ತ್ವಂ ಸಮಾಶ್ರಯ ಪುರಂದರ ।
ಯಸ್ಯ ಯೋಜನಮಾತ್ರೇಽಪಿ ಜೀವಕೋಟಿಶತಾನಿ ವೈ ।
ನಿವಸಂತಿ ಸುರಶ್ರೇಷ್ಠ ಸ ಕಥಂ ನಾಶಮರ್ಹತಿ ॥ ೧೨ ॥

॥ ಪುಲಸ್ತ್ಯ ಉವಾಚ ॥

ಏವಮುಕ್ತಸ್ಸುರೇಂದ್ರಸ್ತು ಕ್ರೋಧಸಂರಕ್ತಲೋಚನಃ ।
ಉವಾಚೇದಂ ವಚೋ ರೋಷಾದುದ್ವಮನ್ನಿವ ಪಾವಕಂ ॥ ೧೩ ॥

॥ ಇಂದ್ರ ಉವಾಚ ॥

ನ ಧರ್ಮಾಧರ್ಮಸಂಯೋಗಂ ಪ್ರಾಪ್ನುವಂತ್ಯಮರಾಃ ಕ್ವಚಿತ್ ।
ಭವಂತೌ ತು ವಿಶೇಷೇಣ ಮಾಹಾತ್ಮ್ಯೇನಾವತಿಷ್ಠತಃ ॥ ೧೪ ॥

---

೧೦. ಆಗ ಅವರಿಬ್ಬರೂ ಮಯ, ಶಂಬರ ನಾಶಕನಾದ ಇಂದ್ರನಿಗೆ ಇಂತೆಂದರು.

೧೧. ಅಗ್ನಿ ವಾಯುಗಳು ಹೇಳಿದರು :— ಎಲೈ ದೇವೇಂದ್ರನೇ, ಅನೇಕ ಪ್ರಾಣಿಗಳು ನಾಶವಾಗುವುದರಿಂದ ಈ ಸಮುದ್ರವನ್ನು ಶೋಷಮಾಡುವುದು ಯುಕ್ತವಲ್ಲ.

೧೨. ಎಲೈ ಇಂದ್ರನೇ, ಬೇರೆ ಉಪಾಯವನ್ನು ಯೋಚಿಸು. ಆ ಸಮುದ್ರದಲ್ಲಿ ಒಂದು ಯೋಜನದಷ್ಟರಲ್ಲಿ ಕೋಟಿ ಜೀವಗಳು ವಾಸಮಾಡುತ್ತವೆ. ಅಂತಹ ಅದನ್ನು ಹೇಗೆ ನಾಶಮಾಡುವುದು ?

೧೩. ಪುಲಸ್ತ್ಯನು ಹೇಳಿದನು :—ಹೀಗೆಂದುದನ್ನು ಕೇಳಿ ಇಂದ್ರನು ಕೋಪದಿಂದ ಕಣ್ಣುಗಳನ್ನು ಕೆಂಪು ಮಾಡಿಕೊಂಡು ಅಗ್ನಿಯನ್ನು ಕುರಿತು ಇಂತೆಂದನು.

೧೪. ಇಂದ್ರನು ಹೇಳಿದನು :—ದೇವತೆಗಳಿಗೆ ಧರ್ಮ ಅಧರ್ಮಗಳ ಸಂಬಂಧವೇ ಇಲ್ಲ. ಅದರಲ್ಲಿ ಅಗ್ನಿ ವಾಯುಗಳಾದ ನಿಮ್ಮಿಬ್ಬರಿಗಂತೂ ಅದು ಅಂಟುವುದೇ ಇಲ್ಲ. ನಿಮ್ಮ ಮಹಿಮೆಯು ಅಪಾರವಾಗಿದೆ.

ಮಮಾಜ್ಞಾ ನ ಕೃತಾ ಯಸ್ಮಾನ್ಮಾರುತೇನ ಸಮಂ ತ್ವಯಾ ।
ಮುನಿವ್ರತಪರೋ ಭೂತ್ವಾ ಪರಿಗೃಹ್ಯ ಕಲೇವರಂ ॥ ೧೫ ॥

ಧರ್ಮಾರ್ಥಶಾಸ್ತ್ರರಹಿತಾಂ ಯೋನಿಂ ಪ್ರತಿ ವಿಭಾವಸೋ ।
ತಸ್ಮಾದೇಕೇನ ವಪುಷಾ ಮುನಿರೂಪೇಣ ಮಾನುಷೇ ॥ ೧೬ ॥

ಮಾರುತೇನ ಸಮಂ ಲೋಕೇ ತವ ಜನ್ಮ ಭವಿಷ್ಯತಿ ।
ಯದಾऽಪಿ ಮಾನುಷತ್ವೇऽಪಿ ತ್ವಯಾ ಗಂಡೂಷಶೋಷಿತಃ ॥ ೧೭ ॥

ಭವಿಷ್ಯತ್ಯುದಧಿರ್ವಹ್ನೇ ತದಾ ದೇವತ್ವಮಾಪ್ಸ್ಯಸಿ ॥ ೧೮ ॥

॥ ಪುಲಸ್ತ್ಯ ಉವಾಚ ॥

ಇತೀಂದ್ರಶಾಪಾತ್ಪತಿತೌ ತತ್ಕ್ಷಣಾತ್ತೌ ಮಹಾದ್ಯುತೀ ।
ಅವಾಪ್ತವಂತೌ ದೇಹಂ ಚ ಕುಂಭಾಜ್ಜನ್ಮ ತತೋऽಭವತ್ ॥ ೧೯ ॥

ಮಿತ್ರಾವರುಣಯೋರ್ವೀರ್ಯಾದ್ವಸಿಷ್ಠಸ್ಯಾತ್ಮಜೋऽಭವತ್ ।
ತತೋऽಗಸ್ತ್ಯ ಉಗ್ರತಪಾ ಬಭೂವ ಮುನಿಮೂರ್ಧನಿ ॥ ೨೦ ॥

ಅಸ್ಮದ್ಭ್ರಾತುಃ ಸ ವೈ ಭ್ರಾತಾ ವಸಿಷ್ಠಸ್ಯಾನುಜೋ ಮುನಿಃ ॥ ೨೧ ॥

---

೧೫—೧೮. ಎಲೈ ಅಗ್ನಿಯೇ, ನೀನೂ, ವಾಯುವೂ, ನನ್ನ ಅಪ್ಪಣೆಯನ್ನು ನಡೆಸಲಿಲ್ಲ. ಆದ್ದರಿಂದ ನೀವಿಬ್ಬರೂ ಬೇರೆ ಶರೀರವನ್ನು ಧರಿಸಿ, ಮುನಿಯ ವ್ರತಗಳನ್ನು ಧರಿಸಿ, ಧರ್ಮಕ್ಕೂ ಶಾಸ್ತ್ರಕ್ಕೂ ಹೊರಗಾದ ಜಾತಿಯಲ್ಲಿ ಹುಟ್ಟಿರಿ. ಒಂದೇ ರೀತಿಯಾದ ಶರೀರದಿಂದ ಮನುಷ್ಯಲೋಕದಲ್ಲಿ ನೀವು ಜನ್ಮವೆತ್ತಿರಿ. ಆ ಮನುಷ್ಯ ಶರೀರದಲ್ಲಿಯೂ ನೀನು ಬಾಯಿಗೆ ನೀರನ್ನು ತುಂಬಿಕೊಳ್ಳುವುದರಿಂದ ಸಮುದ್ರವನ್ನು ಶೋಷಿಸಿದಾಗ ದೇವತ್ವವನ್ನು ಹೊಂದುತ್ತೀಯೆ, ಎಂದನು.

೧೯. ಪುಲಸ್ತ್ಯನು ಹೇಳಿದನು :—ಈರೀತಿ ಇಂದ್ರನ ಶಾಪದಿಂದ ಅವರಿಬ್ಬರೂ ದೇಹವನ್ನು ಹೊಂದಿದರು. ಮಡಿಕೆಯಲ್ಲಿ ಅವರ ಜನ್ಮವಾಯಿತು.

೨೦-೨೧. ಮಿತ್ರಾವರುಣರ ವೀರ್ಯದಿಂದ ವಸಿಷ್ಠನಿಗೆ ಸೋದರನಾದನು. ಅವನಿಗೆ ಅಗಸ್ತ್ಯನೆಂದು ಹೆಸರಾಯಿತು. ಅವನು ಋಷಿಶ್ರೇಷ್ಠನಾದನು. ಈರೀತಿ ನಮ್ಮ ಸೋದರನಾದ ವಸಿಷ್ಠನಿಗೆ ಆ ಅಗಸ್ತ್ಯನು ಅನುಜನಾದನು.

॥ ಭೀಷ್ಮ ಉವಾಚ ॥

ಕಥಂ ವೈ ಮಿತ್ರಾವರುಣೌ ಪಿತರಾವಸ್ಯ ತೌ ಸ್ಮೃತೌ ।
ಜನ್ಮ ಕುಂಭಾದಗಸ್ತ್ಯಸ್ಯ ಯಥಾಽಭೂತ್ತದ್ವದಾಧುನಾ ॥ ೨೨ ॥

॥ ಪುಲಸ್ತ್ಯ ಉವಾಚ ॥

ಪುರಾ ಪುರಾಣಪುರುಷಃ ಕದಾಚಿದ್ಗಂಧಮಾದನೇ ।
ಭೂತ್ವಾ ಧರ್ಮಸುತೋ ವಿಷ್ಣುಶ್ಚಚಾರ ವಿಪುಲಂ ತಪಃ ॥ ೨೩ ॥

ತಪಸಾ ತಸ್ಯ ಭೀತೇನ ವಿಘ್ನಾರ್ಥೇ ಪ್ರೇಷಿತಾವುಭೌ ।
ಶಕ್ರೇಣ ಮಾಧವಾನಂಗಾವಪ್ಸರೋಗಣಸಂಯುತೌ ॥ ೨೪ ॥

ಯದಾ ಚ ಗೀತವಾದ್ಯೇನ ಭಾವಹಾವಾದಿನಾ ಹರಿಃ ।
ಮೋಹಿತಃ ಸ ತದಾ ತೈಸ್ತು ತತಃ ಖೇದಮುಪಾಗತಃ ॥ ೨೫ ॥

ತದಾ ಕಾಮಮಧುಸ್ತ್ರೀಣಾಂ ವಿಷಾದಮಭಜದ್ಗಣಃ ।
ಸಂಕ್ಷೋಭಾಯ ತತಸ್ತೇಷಾಮೂರುದೇಶಾನ್ನರಾಗ್ರಜಃ ॥ ೨೬ ॥

---

೨೨. ಭೀಷ್ಮನು ಕೇಳಿದನು :— ಈ ವಹ್ನಿಗೆ ಮಿತ್ರಾವರುಣರು ಹೇಗೆ ತಂದೆ ಯಾದರು? ಅಗಸ್ತ್ಯನು ಗಡಿಗೆಯಲ್ಲಿ ಹೇಗೆ ಹುಟ್ಟಿದನೆಂಬುದನ್ನು ಈಗ ಹೇಳು.

೨೩. ಪುಲಸ್ತ್ಯನು ಹೇಳಿದನು :— ಪೂರ್ವದಲ್ಲಿ ಪುರಾಣಪುರುಷನಾದ ವಿಷ್ಣುವು ಧರ್ಮಸುತನಾಗಿ ಗಂಧಮಾದನ ಪರ್ವತದಲ್ಲಿ ಬಹುವಾಗಿ ತಪಸ್ಸು ಮಾಡಿ ದನು.

೨೪. ಅವನ ತಪಸ್ಸಿನಿಂದ ಹೆದರಿದ ಇಂದ್ರನು ಅವನಿಗೆ ವಿಘ್ನವನ್ನು ಉಂಟು ಮಾಡಲು ವಸಂತ ಮನ್ಮಥರನ್ನು ಅಪ್ಸರರ ಸಹಾಯವನ್ನು ಕೊಟ್ಟು ಕಳುಹಿಸಿದನು.

೨೫. ಅವರ ಗೀತಗಳಿಂದಲೂ ವಾದ್ಯದಿಂದಲೂ ನಟನೆಯಿಂದಲೂ ಹರಿಯು ಮೋಹಗೊಂಡನು. ಅದನ್ನು ತಿಳಿದು ಮನಸ್ಸಿಗೆ ಖೇದವೂ ಆಯಿತು.

೨೬. ಆಗ ಕಾಮ, ವಸಂತ, ಅಪ್ಸರಸ್ತ್ರೀಯರ ಗುಂಪು ವಿಷಾದವನ್ನು ಹೊಂದಿತು. ಏಕೆಂದರೆ ಅವರನ್ನು ಮೋಹಗೊಳಿಸಲು ಆ ಹರಿಯು ತನ್ನ ತೊಡೆ

ನಾರೀಮುತ್ಪಾದಯಾಮಾಸ ತ್ರೈಲೋಕ್ಯಸ್ಯಾಪಿ ಮೋಹಿನೀಂ ।
ಸಂಮೋಹಿತಸ್ತಯಾ ದೇವಾಸ್ತೌ ತು ಚೈವ ಸುರಾವೃಭೌ ॥ ೨೭ ॥

ಅಪ್ಸರಾ ಇತಿ ಸಂಮಾನ್ಯಾ ದೇವಾನಾಮಬ್ರವೀದ್ಧರಿಃ ।
ಉರ್ವಶೀತಿ ಚ ನಾಮ್ನೇಯಂ ಲೋಕೇ ಖ್ಯಾತಿಂ ಗಮಿಷ್ಯತಿ ॥ ೨೮ ॥

ತತಃ ಕಾಮಯಮಾನೇನ ಮಿತ್ರೇಣಾಹೂಯ ಸೋರ್ವಶೀ ।
ಪ್ರೋಕ್ತಾ ಮಾಂ ರಮಯಸ್ವೇತಿ ಬಾಢಮಿತ್ಯಬ್ರವೀಚ್ಚ ಸಾ ॥ ೨೯ ॥

ಗರ್ಭಿಣ್ಯೇವಾಂತರಾ ತದ್ವತ್ಸ್ತೋಕಮಿಂದೀವರೇಕ್ಷಣಾ ।
ವರುಣೇನ ಭೃತಾ ಪಶ್ಚಾದ್ವಚನಂ ಚಾಪ್ಯಭಾಷತ ॥ ೩೦ ॥

ಮಿತ್ರೇಣಾಹಂ ಭೃತಾ ಪೂರ್ವಂ ಮಮ ಸೂರ್ಯಃ ಪತಿರ್ವಿಭೋ ।
ಉವಾಚ ವರುಣಶ್ಚಿತ್ತಂ ಮಯಿ ಸಂತ್ಯಜ್ಯ ಗಮ್ಯತಾಂ ॥ ೩೧ ॥

---

ಯಿಂದ ಮೂರು ಲೋಕಕ್ಕೂ ಮೋಹಕಳಾದ ಒಬ್ಬ ಸ್ತ್ರೀಯನ್ನು ಉತ್ಪಾದನೆ ಮಾಡಿದನು.

೨೭-೨೮. ದೇವತೆಗಳೂ, ಆ ಮಿತ್ರಾವರುಣರೂ, ಈಕೆಯನ್ನು ನೋಡಿ, ಮೋಹಗೊಂಡರು. ಆಗ ಹರಿಯು ಇವಳನ್ನು ಅಪ್ಸರಳೆಂದು ಗೌರವಿಸಿ ಎಂದನು. ಅಲ್ಲದೆ ಊರ್ವಶೀ ಎಂದು ಲೋಕದಲ್ಲಿ ಪ್ರಸಿದ್ಧಿಯಾಗಲಿ ಎಂದೂ ಹೇಳಿದನು.

೨೯. ಆಗ ಮಿತ್ರನು ಆಕೆಯನ್ನಪೇಕ್ಷಿಸಿ ಕರೆದು ನನ್ನನ್ನು ರಮಿಸೆಂದನು. ಅವಳು ಹಾಗೆಯೇ ಆಗಲಿ ಎಂದಳು.

೩೦. ಅವನಲ್ಲಿ ರಮಿಸಿ ಗರ್ಭಿಣಿಯಾಗಿ ಸ್ವಲ್ಪ ದಿನಗಳಾಗಿದ್ದುವು. ಅಷ್ಟರೊಳಗೆ ವರಣನು ಆಕೆಯನ್ನು ಅಪೇಕ್ಷಿಸಿ ರಮಿಸಿದನು.

೩೧. ಅದರಿಂದಲೂ ಆಕೆಯು ಗರ್ಭವನ್ನು ಹೊಂದಿ, ವರುಣನನ್ನು ಕುರಿತು ಎಲೈ ವರುಣನೇ, ನನ್ನನ್ನು ಮೊದಲು ಸೂರ್ಯನು ರಮಿಸಿದನು. ಅವನೇ ನನಗೆ ಗಂಡನೆಂದಳು. ಆಗ ವರುಣನು ಹಾಗಾದರೆ ನನ್ನಲ್ಲಿರುವ ಮನಸ್ಸನ್ನು ಬಿಟ್ಟು ಅವನಲ್ಲಿಗೇ ಹೋಗೆಂದನು.

**ಗತಾಯಾಂ ಬಾಢಮಿತ್ಯುಕ್ತ್ವಾ ಮಿತ್ರಃ ಶಾಪಮುದಾದಥ ।**
**ಅದ್ಯೈವ ಮಾನುಷೇ ಲೋಕೇ ಗಚ್ಛ ಸೋಮಸುತಾತ್ಮಜಂ ॥ ೩೨ ॥**

**ಭಜಸ್ವೇತಿ ಯತೋ ಮಿಥ್ಯಾಧರ್ಮ ಏಷ ತ್ವಯಾ ಕೃತಃ ।**
**ಜಲಕುಂಭೇ ತತೋ ವೀರ್ಯಂ ಮಿತ್ರೇಣ ವರುಣೇನ ಚ ॥ ೩೩ ॥**

**ಪ್ರಕ್ಷಿಪ್ತಮಥ ಸಂಜಾತೌ ದ್ವಾವೇವ ಮುನಿಸತ್ತಮೌ ।**
**ನಿಮಿರ್ನಾಮ ನೃಪಃ ಸ್ತ್ರೀಭಿಃ ಪುರಾ ದ್ಯೂತಮದೀವ್ಯತ ॥ ೩೪ ॥**

**ನಿಮಿತ್ರಾವ್ಮೃತ ಪುನಃ ಪುರಾ ಯುಗ್ಮಮಜಾಯತ ।**
**ತದಂತರೇಽಭ್ಯಾಜಗಾಮ ವಸಿಷ್ಠೋ ಬ್ರಹ್ಮಣಃ ಸುತಃ ॥ ೩೫ ॥**

**ತಸ್ಯ ಪೂಜಾಮಕುರ್ವಾಣಂ ಶಶಾಪ ಸ ಮುನಿರ್ನೃಪಂ ।**
**ವಿದೇಹಸ್ತ್ವಂ ಭವಸ್ವೇತಿ ಶಪ್ತಸ್ತೇನಾಪ್ಯಸೌ ಮುನಿಃ ॥ ೩೬ ॥**

---

೩೨. ಆಕೆಯು ಹಾಗೇ ಆಗಲೆಂದು ಹೇಳಿ ಸೂರ್ಯನ ಬಳಿಗೆ ಹೋಗಲು, ಸೂರ್ಯನು ನೀನು ಈಗಲೇ ಮನುಷ್ಯಲೋಕದಲ್ಲಿ ಹೋಗಿ, ಸೋಮಬುದ್ಧನ ಮಗನನ್ನು ಹೊಂದು. ನೀನು ನನ್ನೊಡನೆ ಕಪಟದಿಂದಿದ್ದುದಕ್ಕೆ ಇದೇ ಶಿಕ್ಷೆಯೆಂದು ಶಾಪವನ್ನು ಕೊಟ್ಟನು.

೩೩. ಆಮೇಲೆ ಆ ಮಿತ್ರಾವರುಣರು ಆಕೆಯಲ್ಲಿದ್ದ ತಮ್ಮ ತಮ್ಮ ವೀರ್ಯಗಳನ್ನು ತೆಗೆದು ನೀರಿನ ಗಡಿಗೆಯಲ್ಲಿ ಹಾಕಲು ಆ ಅಗಸ್ತ್ಯ, ವಸಿಷ್ಠರು ಹುಟ್ಟಿದರು.

೩೪. ನಿಮಿ ಎಂಬ ರಾಜನು ಪೂರ್ವದಲ್ಲಿ ಹೆಂಗಸರೊಡನೆ ಜೂಜಾಡುತ್ತಿದ್ದನು. ನಿಮಿತ್ರ, ಅಮೃತ ಎಂಬದಾಗಿ ಪೂರ್ವದಲ್ಲಿ ಅವಳಿಜವಳಿಗರು ಹುಟ್ಟಿದರು.

೩೫. ಈ ಜೂಜಾಟದ ಮಧ್ಯದಲ್ಲಿ ಬ್ರಹ್ಮನ ಮಗನಾದ ವಸಿಷ್ಠನು ಅಲ್ಲಿಗೆ ಬರಲು ಜೂಜಿನಲ್ಲಿ ಆಸಕ್ತನಾಗಿದ್ದ ಆ ರಾಜನು ಅವನಿಗೆ ಪೂಜೆಮಾಡಲಿಲ್ಲ. ಆಗ ಋಷಿಯು ರಾಜನಿಗೆ ಶಾಪವನ್ನು ಕೊಟ್ಟನು.

೩೬-೩೭. ಎಲೈ ರಾಜನೇ, ನೀನು ದೇಹವನ್ನು ಧರಿಸದಿರುವವನಾಗು ಎಂದನು. ಆ ರಾಜನು ಕೂಡ ನೀನೂ ಹಾಗೇ ಆಗೆಂದನು. ಈರೀತಿ ಇಬ್ಬರಿಗೂ

ಅನ್ಯೋನ್ಯಶಾಪಾದುಭಯೋರ್ವಿಶರೀರೇ ತು ತೇಜಸೀ ।
ಜಗ್ಮತುಃ ಶಾಪನಾಶಾಯ ಬ್ರಹ್ಮಾಣಂ ಜಗತಃ ಪತಿಂ ॥ ೩೭ ॥

ಅಥ ಬ್ರಹ್ಮಸಮಾದೇಶಾಲ್ಲೋಕೇಷ್ವನೇಷ್ವವಸನ್ನಿಮಿಃ ।
ನಿಮೇಷಾಃ ಸ್ಯುಶ್ಚ ಲೋಕಾನಾಂ ತದ್ವಿಶ್ರಾಮಾಯ ಪಾರ್ಥಿವ ॥ ೩೮ ॥

ವಸಿಷ್ಠೋಽಪ್ಯಭವತ್ತಸ್ಮಿನ್ ಜಲಕುಂಭೇ ಚ ಪೂರ್ವವತ್ ।
ತತೋ ಜಾತಶ್ಚತುರ್ಬಾಹುಃ ಸಾಕ್ಷಸೂತ್ರಕಮಂಡಲುಃ ॥ ೩೯ ॥

ಅಗಸ್ತ್ಯ ಇತಿ ಶಾಂತಾತ್ಮಾ ಬಭೂವ ಋಷಿಸತ್ತಮಃ ।
ಮಲಯಸ್ಯೈಕದೇಶೇ ತು ವೈಖಾನಸವಿಧಾನತಃ ॥ ೪೦ ॥

ಸಭಾರ್ಯಃ ಸಂವೃತೋ ವಿಪ್ರೈಸ್ತಪಶ್ಚಕ್ರೇ ಸುದುಷ್ಕರಂ ।
ತತಃ ಕಾಲೇನ ಮಹತಾ ತಾರಕಾದಿನಿಪೀಡಿತಂ ॥ ೪೧ ॥

---

ಶರೀರವು ಹೋಗಿ ತೇಜೋಮಯವಾಗಿ ನಿಂತರು. ಆಗ ಅವರ ಶಾಪದ ವಿಮೋಚನ ಕ್ಕೋಸ್ಕರ ಬ್ರಹ್ಮನ ಬಳಿಗೆ ಹೋದರು.

೩೮. ಆಗ ಬ್ರಹ್ಮನ ಅಪ್ಪಣೆಯಂತೆ ನಿಮಿಯು ಜನಗಳ ರೆಪ್ಪೆಯಲ್ಲಿ ನಿಂತನು. ಲೋಕಕ್ಕೆ ಆದರಿಂದ ಜನಗಳಿಗೆ ಅವನಿರುವುದಕ್ಕೋಸ್ಕರ ರೆಪ್ಪೆಗಳನ್ನು ನಿರ್ಮಿಸಿದನು.

೩೯. ಆಗ ಆ ವಸಿಷ್ಠನು ಆ ಬ್ರಹ್ಮನ ಅಪ್ಪಣೆಯಂತೆ ಆ ನೀರಿನ ಗಡಿಗೆಯಲ್ಲಿ ಮೊದಲಿನಂತೆ ನಾಲ್ಕು ತೋಳುಳ್ಳವನಾಗಿ ಅಕ್ಷ, ಸೂತ್ರ ಕಮಂಡಲಗಳನ್ನು ಧರಿಸಿ ಹುಟ್ಟಿ ಅಗಸ್ತ್ಯನೆಂಬ ಶಾಂತಾತ್ಮನಾದ ಋಷಿಯೆಂದು ಪ್ರಸಿದ್ಧನಾದನು.

೪೦. ಮಲಯಪರ್ವತದ ಒಂದು ಕಡೆಯಲ್ಲಿ ವೈಖಾನಸ ರೀತಿಯಿಂದ ಹೆಂಡತಿಯೊಡನೆ ಅನೇಕ ಜನ ಬ್ರಾಹ್ಮಣರೊಡನೆಯೂ ಕೂಡಿಕೊಂಡು, ಆ ಅಗಸ್ತ್ಯನು ಉಗ್ರವಾದ ತಪಸ್ಸನ್ನು ಮಾಡಿದನು.

೪೧. ಅನಂತರ ಬಹುಕಾಲದ ಮೇಲೆ ಪ್ರಪಂಚವು ತಾರಕಾದಿ ರಾಕ್ಷಸರಿಂದ ಬಾಧೆಪಡುತ್ತಿರುವುದನ್ನೂ ಅವರಿಗೆ ಸಮುದ್ರವು ಆ ಆಶ್ರಯಕೊಟ್ಟಿರುವುದನ್ನೂ ತಿಳಿದು ಕೋಪದಿಂದ ಸಮುದ್ರವನ್ನು ಕುಡಿದನು.

ಜಗದ್ವೀಕ್ಷ್ಯ ಸ ಕೋಪೇನ ಪೀತವಾನ್ವರುಣಾಲಯಂ ।
ತತೋಽಸ್ಯ ವರದಾಃ ಸರ್ವೇ ಬಭೂವುಃ ಶಂಕರಾದಯಃ ॥ ೪೨ ॥

ಬ್ರಹ್ಮಾ ವಿಷ್ಣುಶ್ಚ ಭಗವಾನ್ವರದಾನಾಯ ಜಗ್ಮತುಃ ।
ವರಂ ವೃಣೀಷ್ವ ಭದ್ರಂ ತೇ ಯಶ್ಚಾಭೀಷ್ಟಶ್ಚ ವೈ ಮುನೇ ॥ ೪೩ ॥

॥ ಅಗಸ್ತ್ಯ ಉವಾಚ ॥

ಯಾವದ್ಬ್ರಹ್ಮಸಹಸ್ರಾಣಾಂ ಪಂಚವಿಂಶತಿಕೋಟಯಃ ।
ವೈಮಾನಿಕೋ ಭವಿಷ್ಯಾಮಿ ದಕ್ಷಿಣಾಂಬರವರ್ತ್ಮನಿ ॥ ೪೪ ॥

ಮದ್ವಿಮಾನೋದಯಾತ್ಪೂರ್ವಂ ಯಃ ಕಶ್ಚಿತ್ಪೂಜನಂ ಮಮ ।
ಸ ಸಪ್ತಲೋಕಾಧಿಪತಿಃ ಪರ್ಯಾಯೇಣ ಭವಿಷ್ಯತಿ ॥ ೪೫ ॥

ಯಸ್ತ್ವಾಶ್ರಮಂ ಪುಷ್ಕರೇ ತು ಮನ್ನಾಮ್ನಾ ಪರಿಕೀರ್ತಯೇತ್ ।
ಸ ಚೈವ ಪುಣ್ಯತಾಂ ಯಾತು ವರ ಏಷ ವೃತೋ ಮಯಾ ॥ ೪೬ ॥

ಶ್ರಾದ್ಧಂ ಯೇಽತ್ರ ಕರಿಷ್ಯಂತಿ ಪಿಂಡಪೂರ್ವಂ ತು ಶಕ್ತಿತಃ ।
ತೇಷಾಂ ಪಿತೃಗಣಾಃ ಸರ್ವೇ ಮಯಾ ಸಾರ್ಧಂ ದಿವಿ ಸ್ಥಿತಾಃ ॥ ೪೭ ॥

---

೪೨-೪೩. ಆಗ ದೇವತೆಗಳು ವರವನ್ನು ಕೊಡಲು ಅವನ ಬಳಿಗೆ ಬಂದರು. ಬ್ರಹ್ಮ, ವಿಷ್ಣು, ಶಂಕರರು ಬಂದು, ಎಲೈ ಮುನಿಯೇ, ನಿನಗೆ ಇಷ್ಟವಾದುದನ್ನು ಕೇಳಿಕೋ ಎಂದರು.

೪೪. ಅಗಸ್ತ್ಯನು ಹೇಳಿದನು :—ಇಪ್ಪತ್ತೈದು ಕೋಟಿಸಾವಿರ ಬ್ರಹ್ಮರುಗಳ ಕಾಲದವರೆವಿಗೂ, ದಕ್ಷಿಣದಿಕ್ಕಿನ ಆಕಾಶದಲ್ಲಿ ವಿಮಾನದಲ್ಲಿರಬೇಕು.

೪೫. ಯಾವನು ನನ್ನ ವಿಮಾನವನ್ನು ಕಂಡಕೂಡಲೇ ನನಗೆ ಪೂಜೆ ಮಾಡುವನೋ ಅವನು ಕ್ರಮದಿಂದ ಲೋಕಗಳಿಗೂ ಅಧಿಪತಿಯಾಗಬೇಕು.

೪೬. ಪುಷ್ಕರದಲ್ಲಿ ಯಾವನು ನನ್ನ ಆಶ್ರಮದ ಹೆಸರು ಹೇಳುವನೋ ಅವನು ಪುಣ್ಯಭಾಗಿಯಾಗಲಿ ಇದೇ ನನಗೆ ಬೇಕಾದ ವರವು.

೪೭. ಯಾರು ಇಲ್ಲಿ ಶಕ್ತ್ಯನುಸಾರವಾಗಿ ಪಿಂಡಪ್ರದಾನ ಮಾಡುವರೋ ಅವರ ಪಿತೃಗಳು ನನ್ನೊಡನೆ ಆ ಅಂತರಿಕ್ಷದಲ್ಲಿರಲಿ.

ಏತತ್ಕಾಲಂ ವಸಿಷ್ಯಂತಿ ಏಷ ಏವ ವರೋ ಮಮ ।
ಏವಮಸ್ತ್ವಿತಿ ತೇಽಪ್ಯುಕ್ತ್ವಾ ಜಗ್ಮುರ್ದೇವಾ ಯಥಾಗತಂ ।
ತಸ್ಮಾದರ್ಘಃ ಪ್ರದಾತವ್ಯೋ ಹ್ಯಗಸ್ತ್ಯಸ್ಯ ಸದಾ ಬುಧೈಃ ॥ ೪೮ ॥

॥ ಭೀಷ್ಮ ಉವಾಚ ॥

ಕಥಮರ್ಘಪ್ರದಾನಾದಿ ಕರ್ತವ್ಯಂ ತಸ್ಯ ವೈ ಮುನೇ ।
ವಿಧಾನಂ ಯದಗಸ್ತ್ಯಸ್ಯ ಪೂಜನೇ ತದ್ವದಸ್ವ ಮೇ ॥ ೪೯ ॥

॥ ಪುಲಸ್ತ್ಯ ಉವಾಚ ॥

ಪ್ರತ್ಯೂಷಸಮಯೇ ವಿದ್ವಾನ್ಕುರ್ಯಾದಸ್ಯೋದಯೇ ನಿಶಿ ।
ಸ್ನಾನಂ ಶುಕ್ಲತಿಲೈಸ್ತದ್ವಚ್ಛುಕ್ಲಮಾಲ್ಯಾಂಬರೋ ಗೃಹೀ ॥ ೫೦ ॥

ಸ್ಥಾಪಯೇದ್ರವಣಂ ಕುಂಭಂ ಮಾಲ್ಯವಸ್ತ್ರವಿಭೂಷಿತಂ ।
ಪಂಚರತ್ನಸಮಾಯುಕ್ತಂ ಘೃತಪಾತ್ರೇಣ ಸಂಯುತಂ ॥ ೫೧ ॥

---

೪೮. ಅವರೆಲ್ಲರು ನಾನು ಕೇಳಿಕೊಂಡ ಕಾಲದವರೆಗೂ ಇರಲಿ. ಇದೇ ನನಗೆ ಬೇಕಾದ ವರವು ಎಂದನು. ಆ ದೇವತೆಗಳೆಲ್ಲರೂ ಹಾಗೇ ಆಗಲೆಂದು ಹೇಳಿ ಬಂದಂತೆ ಹೊರಟು ಹೋದರು. ಆದ್ದರಿಂದ ಅಗಸ್ತ್ಯನಿಗೆ ದ್ವಿಜರು ಯಾವಾಗಲೂ ಅರ್ಘ್ಯವನ್ನು ಕೊಡಬೇಕು.

೪೯. ಭೀಷ್ಮನು ಹೇಳಿದನು:—ಆ ಋಷಿಗೆ ಅರ್ಘ್ಯಪ್ರದಾವನ್ನು ಹೇಗೆ ಮಾಡಬೇಕು? ಅದರ ವಿಧಿಯನ್ನು ನನಗೆ ಹೇಳು.

೫೦. ಪುಲಸ್ತ್ಯನು ಹೇಳಿದನು:—ಬೆಳಗಿನ ಝಾವದಲ್ಲಿ ಆಗಸ್ತ್ಯನ ಉದಯವಾಗುವಾಗ ಇನ್ನೂ ರಾತ್ರಿಯಾಗಿರುವಾಗಲೇ ಬಿಳಿಯ ಎಳ್ಳೆಣ್ಣೆಯಿಂದ ಸ್ನಾನಮಾಡಿ ಬಿಳಿಯಬಟ್ಟೆ, ಹೂಗಳನ್ನು ಧರಿಸಬೇಕು.

೫೧. ಒಂದು ಕಲಶವನ್ನು ಇಡಬೇಕು. ಅದಕ್ಕೆ ಹೂವು ಬಟ್ಟೆಗಳನ್ನು ಹೊದ್ದಿಸಬೇಕು. ಐದು ಬಗೆಯ ರತ್ನಗಳನ್ನು ಅದರ ಒಳಕ್ಕೆ ಹಾಕಬೇಕು. ತುಪ್ಪದ ಪಾತ್ರೆಯನ್ನು ಇಟ್ಟಿರಬೇಕು.

ಅಂಗುಷ್ಠಮಾತ್ರಂ ಪುರುಷಂ ತಥೈವ
ಸುವರ್ಣಮಧ್ಯಾಯತಬಾಹುದಂಡಂ ।
ಚತುರ್ಭುಜಂ ಕುಂಭಮುಖೇ ನಿಧಾಯ
ಧಾನ್ಯಾನಿ ಸರ್ವಾಂಬರಸಂಯುತಾನಿ ॥ ೫೨ ॥

ಸಕಾಂಸ್ಯಪಾತ್ರಾಕ್ಷತಶುಕ್ತಿಯುಕ್ತಂ
ಮಂತ್ರೇಣ ದದ್ಯಾದ್ದ್ವಿಜಪುಂಗವಾಯ ।
ಉತ್ಕೃಷ್ಯ ಲಂಬೋದರದೀರ್ಘಬಾಹು
ಮನನ್ಯಚೇತಾಸ್ತ್ವಮುದಙ್ಮುಖಸ್ಥಂ ॥ ೫೩ ॥

ಶ್ವೇತಾಂ ಚ ದದ್ಯಾದ್ಯದಿ ಶಕ್ತಿರಸ್ತಿ
ರೌಪ್ಯೈಃ ಖುರೈರ್ಹೇಮಮುಖೀಂ ಸವತ್ಸಾಂ ।
ಧೇನುಂ ನರಃ ಕ್ಷೀರವತೀಂ ಪ್ರಣಮ್ಯ
ಸ್ರಗ್ವಸ್ತ್ರಘಂಟಾಭರಣಾಂ ದ್ವಿಜಾಯ ॥ ೫೪ ॥

ಆಸಪ್ತರಾತ್ರಾದುದಯೇ ನೃಪಾಸ್ಯ
ದಾತವ್ಯಮೇತತ್ಸಕಲಂ ನರೇಣ ।

---

೫೨. ಅಂಗುಷ್ಠದಷ್ಟುದ್ದವಿರುವ ನಾಲ್ಕು ಭುಜಗಳುಳ್ಳ ಒಂದು ಅಗಸ್ತ್ಯನ ಪ್ರತಿಮೆಯನ್ನು ಮಾಡಿಸಿ ಆ ಕುಂಭದಲ್ಲಿ ಹಾಕಬೇಕು. ಧಾನ್ಯಗಳನ್ನೂ ಬಟ್ಟೆಗಳನ್ನೂ ಶಕ್ತ್ಯನುಗುಣವಾಗಿ ಹಾಕಬೇಕು.

೫೩. ಕಂಚಿನ ಪಾತ್ರೆಯಲ್ಲಿ ಅಕ್ಷತೆ, ಮುತ್ತಿನ ಚಿಪ್ಪುಗಳನ್ನು ಇಟ್ಟು ಮಂತ್ರವನ್ನು ಹೇಳಿ, ದೊಡ್ಡಹೊಟ್ಟೆಯೂ, ಉದ್ದವಾದ ತೋಳುಗಳೂ, ಉಳ್ಳ ಆ ಅಗಸ್ತ್ಯನ ವಿಗ್ರಹವನ್ನು ದಾನಮಾಡಬೇಕು.

೫೪. ಬೆಳ್ಳಿಯ ಗೊರಸುಗಳುಳ್ಳ, ಚಿನ್ನದ ಮುಖವನ್ನು ಹಾಕಿರುವ, ಕರುವಿನೊಡನೆ ಕೂಡಿದ ಕರೆಯುವ ಹಸುವನ್ನು ಗೆಜ್ಜೆ ಗಂಟೆಗಳನ್ನು ಕಟ್ಟಿ ಶಕ್ತಿಯಿದ್ದರೆ ದಾನಮಾಡಬೇಕು.

೫೫. ಏಳು ರಾತ್ರಿಗಳವರೆಗೂ ಈ ಅಗಸ್ತ್ಯನ ಉದಯದಲ್ಲಿ ಕೊಡಬೇಕು. ಏಳು ಅಥವಾ ಹತ್ತು ವರ್ಷಗಳು ಅದರ ಮೇಲೂ ಆದರೂ ಮಾಡಬಹುದು.

ಯಾವತ್ಸಮಾಃ ಸಪ್ತದಶಾಥ ವಾ ಸ್ಯು-
ರಥೋರ್ಧ್ವಮಪ್ಯತ್ರ ವದಂತಿ ಕೇಚಿತ್ ॥ ೫೫ ॥

ಕಾಶಪುಷ್ಪಪ್ರತೀಕಾಶ ಅಗ್ನಿಮಾರುತಸಂಭವ ।
ಮಿತ್ರಾವರುಣಯೋಃ ಪುತ್ರ ಕುಂಭಯೋನೇ ನಮೋಽಸ್ತು ತೇ ॥ ೫೬ ॥

ಪ್ರತ್ಯಬ್ದಂ ಚ ಫಲತ್ಯಾಗಮೇವಂ ಕುರ್ವನ್ನ ಸೀದತಿ ।
ಹೋಮಂ ಕುರ್ಯಾತ್ತತಃ ಪಶ್ಚಾದ್ವರ್ಜಯೇನ್ಮಾನವಃ ಫಲಂ ॥ ೫೭ ॥

ಅನೇನ ವಿಧಿನಾ ಯಸ್ತು ಪುಮಾನರ್ಘ್ಯಂ ನಿವೇದಯೇತ್ ।
ಇಮಂ ಲೋಕಮವಾಪ್ನೋತಿ ರೂಪಾರೋಗ್ಯಸಮನ್ವಿತಃ ॥ ೫೮ ॥

ದ್ವಿತೀಯೇನ ಭುವರ್ಲೋಕಂ ಸ್ವರ್ಲೋಕಂ ಚ ತತಃ ಪರಂ ।
ಸಪ್ತೈವ ಲೋಕಾನಾಪ್ನೋತಿ ಸಪ್ತಾರ್ಘಾನ್ಯಃ ಪ್ರಯಚ್ಛತಿ ॥ ೫೯ ॥

ಇತಿ ಪಠತಿ ಶೃಣೋತಿ ವಾ ಯ ಏತ-
ನ್ಮುನಿವರಯುಗಸಂಭವಸ್ಯ ದಾನಂ ।

---

೫೬. ದರ್ಭೆಯ ಹುಲ್ಲಿನ ಹೂವಿನಂತೆ ಪ್ರಕಾಶನಾದ, ಅಗ್ನಿ ಮರುತ್ತರುಗಳಿಂದ ಉತ್ಪನ್ನನಾದ, ಮಿತ್ರಾವರುಣರ ಮಗನಾದ, ಕುಂಭದಲ್ಲಿ ಹುಟ್ಟಿದ ಆಗಸ್ತ್ಯನಿಗೆ ನಮಸ್ಕಾರವು.

೫೭. ಪ್ರತಿವರ್ಷವೂ ಫಲತ್ಯಾಗಮಾಡುತ್ತಿರುವವನು ದುಃಖಪಡುವುದಿಲ್ಲ. ಅನಂತರ ಫಲಾಪೇಕ್ಷೆಯಿಲ್ಲದ ಮನುಷ್ಯನು ಹೋಮವನ್ನು ಮಾಡಬೇಕು.

೫೮. ಈ ವಿಧಿಯಿಂದಲೇ ಯಾವನು ಅರ್ಘ್ಯವನ್ನು ಕೊಡುತ್ತಾನೆಯೋ ಆವನು ರೂಪ, ಆರೋಗ್ಯ, ಸಂಪದಗಳಿಂದ ಕೂಡಿದ್ದು ಈ ಭೂಲೋಕವನ್ನು ಹೊಂದುತ್ತಾನೆ.

೫೯. ಎರಡನೆಯ ಅರ್ಘ್ಯದಿಂದ ಭುವರ್ಲೋಕವನ್ನೂ, ಮತ್ತೊಂದರಿಂದ ಸ್ವರ್ಲೋಕವನ್ನೂ, ಹೀಗೆ ಒಂದೊಂದರಿಂದ ಒಂದೊಂದು ಹೆಚ್ಚಿನ ಲೋಕವನ್ನೂ, ಅಂತೂ ಏಳು ಲೋಕಗಳನ್ನೂ ಹೊಂದುತ್ತಾನೆ.

ಮತಿಮಪಿ ಚ ದದಾತಿ ಸೋಽಪಿ ವಿಷ್ಣೋ-
ರ್ಭವನನಗತಃ ಪರಿಪೂಜ್ಯತೇಽಮರಾದ್ಯೈಃ ॥ ೬೦ ॥

॥ ಭೀಷ್ಮ ಉವಾಚ ॥

ಸೌಭಾಗ್ಯಾರೋಗ್ಯಫಲದಮಮಿತ್ರಕ್ಷಯಕಾರಕಂ ।
ಭುಕ್ತಿಮುಕ್ತಿಪ್ರದಂ ಯಚ್ಚ ತನ್ಮೇ ಬ್ರೂಹಿ ಮಹಾಮುನೇ ॥ ೬೧ ॥

॥ ಪುಲಸ್ತ್ಯ ಉವಾಚ ॥

ಯದುಮಾಯಾಃ ಪುರಾ ದೇವ ಉವಾಚಾಂಧಕಸೂದನಃ ।
ಕಥಾಸು ಸಂಪ್ರವೃತ್ತಾಸು ಧರ್ಮ್ಯಾಸು ಲಲಿತಾಸು ಚ ।
ತದಿದಾನೀಂ ಪ್ರವಕ್ಷ್ಯಾಮಿ ಭುಕ್ತಿಮುಕ್ತಿಫಲಪ್ರದಂ ॥ ೬೨ ॥

॥ ಗೌರ್ಯುವಾಚ ॥

ದತ್ತಃ ಶಾಪೋ ಹಿ ಸಾವಿತ್ರ್ಯಾ ಲಕ್ಷ್ಮ್ಯಾಃ ಶೈಲಸುರೇಶ್ವರ ।
ಯಥಾ ಲಕ್ಷ್ಮೀಪ್ರಧಾನತ್ವಮಹಂ ಯಾಮಿ ಸುರೋತ್ತಮ ॥ ೬೩ ॥

---

೬೦. ಇದನ್ನು ಓದುವವನು, ಕೇಳುವವನು, ಈ ಮುನಿಗಳ ಪ್ರತಿಮೆಯನ್ನು ದಾನಮಾಡುವುದಕ್ಕೆ ಪ್ರೇರಿಸುವವನು ಕೂಡ ವಿಷ್ಣು ಭವನಕ್ಕೆ ಗೌರವದಿಂದ ಹೋಗುತ್ತಾನೆ.

೬೧. ಭೀಷ್ಮನು ಹೇಳಿದನು:—ಸೌಭಾಗ್ಯ, ಆರೋಗ್ಯ, ಶತ್ರುನಾಶಕ, ಭುಕ್ತಿ, ಮುಕ್ತಿಗಳನ್ನು ಕೊಡತಕ್ಕ ವ್ರತವನ್ನು ನನಗೆ ಹೇಳು.

೬೨. ಪುಲಸ್ತ್ಯನು ಹೇಳಿದನು:—ಧರ್ಮದ ವಿಷಯದ ಮಾತುಗಳನ್ನು ಆಡುತ್ತಿರುವಾಗ ಈಶ್ವರನು ಉಮೆಯನ್ನು ಕುರಿತು ಹೇಳಿದನು. ಭುಕ್ತಿ, ಮುಕ್ತಿ ದಾಯಕವಾದ ವ್ರತವನ್ನು ಹೇಳುತ್ತೇನೆ.

೬೩. ಗೌರಿಯು ಕೇಳಿದಳು:—ಎಲೈ ಗೌರೀಶನೇ, ಸಾವಿತ್ರಿಯು ಲಕ್ಷ್ಮಿಗೆ ಶಾಪವನ್ನು ಕೊಟ್ಟಳಲ್ಲ. ನಾನು ಲಕ್ಷ್ಮಿಯನ್ನು ಮುಖ್ಯಳಾಗಿ ಉಳ್ಳವಳಾಗಿ ಹೇಗೆ ಆಗಲಿ ?

॥ ಶಂಕರ ಉವಾಚ ॥

ಶೃಣುಷ್ವಾವಹಿತಾ ದೇವಿ ತಥೈವಾನ್ಯತ್ಸ್ವಯಂ ಕೃತಂ ।
ನರಾಣಾಮಥ ನಾರೀಣಾಮಾರಾಧನಮನುತ್ತಮಂ ॥ ೬೪ ॥

ನಭಸ್ಯೇ ಚಾಥ ವೈಶಾಖೇ ಪುಣ್ಯೇ ಮಾರ್ಗಶಿರಸ್ಯಥ ।
ಶುಕ್ಲಪಕ್ಷೇ ತೃತೀಯಾಯಾಂ ಸ್ನಾತಃ ಸನ್ಗೌರಸರ್ಷಪೈಃ ॥ ೬೫ ॥

ಗೋರೋಚನಂ ಸಗೋಮೂತ್ರಂ ಗೋಶಕೃತ್ಸಕುಶಸ್ತಥಾ ।
ದಧಿಚಂದನಸಂಮಿಶ್ರಂ ಲಲಾಟೇ ತಿಲಕಂ ನಸ್ಯೇತ್ ॥ ೬೬ ॥

ಸೌಭಾಗ್ಯಾರೋಗ್ಯಕೃದ್ಯಸ್ಮಾತ್ಸದಾ ಚ ಲಲಿತಾಪ್ರಿಯಂ ।
ಪ್ರತಿಪಕ್ಷಂ ತೃತೀಯಾಯಾಂ ಪುಮಾನ್ಸ್ವಾಥ ಸುವಾಸಿನೀ ॥ ೬೭ ॥

ಧಾರಯೇದ್ರಕ್ತವಸ್ತ್ರಾಣಿ ಕುಸುಮಾನಿ ಸಿತಾನಿ ಚ ।
ವಿಧವಾ ಶುಕ್ಲವಸ್ತ್ರಂ ವೈ ತ್ವೇಕಮೇವ ಹಿ ಧಾರಯೇತ್ ॥ ೬೮ ॥

---

೬೪. ಶಂಕರನು ಹೇಳಿದನು :—ಎಲೈ ದೇವಿಯೇ, ಹೆಂಗಸರಿಗಾಗಲಿ ಗಂಡಸರಿಗಾಗಲಿ ಬೇರೆ ರೀತಿಯಾದ ಉತ್ತಮವಾದ ಪೂಜೆಯನ್ನು ಹೇಳುತ್ತೇನೆ ಕೇಳು.

೬೫-೬೬. - ಭಾದ್ರಪದ, ವೈಶಾಖ, ಮಾರ್ಗಶಿರಗಳ ಶುಕ್ಲಪಕ್ಷ ತದಿಗೆಯ ದಿನ ಬಿಳಿಯ ಸಾಸುವೆ ಎಣ್ಣೆಯಿಂದ ಸ್ನಾನಮಾಡಿ ಗೋರೋಚನ, ಗೋವಿನಗಂಜಲ, ಗೋವಿನ ಸಗಣಿ, ದರ್ಭೆ, ಗೋವಿನ ಮೊಸರು, ಚಂದನ ಇವೆಲ್ಲವನ್ನೂ ಸೇರಿಸಿಕೊಂಡು ಹಣೆಯಲ್ಲಿ ತಿಲಕವನ್ನಿಟ್ಟುಕೊಳ್ಳಬೇಕು.

೬೭-೬೮. ಈ ತೃತೀಯೆಯು ಸೌಭಾಗ್ಯ ಆರೋಗ್ಯಗಳನ್ನುಂಟುಮಾಡುತ್ತದೆ. ಯಾವಾಗಲೂ ಲಲಿತೆಗೆ ಪ್ರಿಯವಾದುದು. ಆದಿನ ಗಂಡಸು ಸ್ನಾನಮಾಡಿ, ಒಳ್ಳೇ ಬಟ್ಟೆಗಳನ್ನೂ, ಹೂಗಳನ್ನೂ ಧರಿಸಬೇಕು. ಹೆಂಗಸೂ ಕೂಡ ಸ್ನಾನಮಾಡಿ ಬಟ್ಟೆಗಳನ್ನೂ, ಹೂಗಳನ್ನೂ ಧರಿಸಿಕೊಳ್ಳಬೇಕು. ವಿಧವೆಯಾದರೆ ಒಂದೇ ಒಂದು ಬಿಳಿಯ ಬಟ್ಟೆಯನ್ನುಟ್ಟುಕೊಳ್ಳಬೇಕು. ಕುಮಾರಿಯಾದರೆ ಸೂಕ್ಷ್ಮವಾದ ಬಿಳಿಯ ಬಟ್ಟೆಯುನ್ನುಟ್ಟು ಮತ್ತೊಂದನ್ನು ಅಂತಹದನ್ನೇ ಹೊದೆಯಬೇಕು.

**ಕುಮಾರೀ ಶುಕ್ಲಸೂಕ್ಷ್ಮೇ ಚ ವಾಸಸೀ ಸುವಿಧಾಯ ಚ ।**
**ದೇವೀಂ ಚ ಪಂಚಗವ್ಯೇನ ತತಃ ಕ್ಷೀರೇಣ ಕೇವಲಂ ॥ ೬೯ ॥**

**ಸ್ನಾಪಯೇನ್ಮಧುನಾ ತದ್ವತ್ಪುಷ್ಪಗಂಧೋದಕೇನ ತು ।**
**ಪೂಜಯೇಚ್ಛುಕ್ಲಪುಷ್ಪೈಸ್ತು ಫಲೈರ್ನಾನಾವಿಧೈರಪಿ ॥ ೭೦ ॥**

**ಧಾನ್ಯಲಾಜಾದಿಲವಣಗುಡಕ್ಷೀರಘೃತಾನ್ವಿತೈಃ ।**
**ಶುಕ್ಲಾಕ್ಷತತಿಲೈರರ್ಚಾ ಕಾರ್ಯಾ ದೇವಿ ಸದಾ ತ್ವಯಾ ॥ ೭೧ ॥**

**ಪಾದಯೋರರ್ಚನಂ ಕುರ್ಯಾತ್ಪ್ರತಿಪಕ್ಷಂ ವರಾನನೇ ।**
**ವರದಾಯೈ ನಮಃ ಪಾದೌ ತಥಾ ಗುಲ್ಫೌ ಶ್ರಿಯೇ ನಮಃ ॥ ೭೨ ॥**

**ಅಶೋಕಾಯೈ ನಮೋ ಜಂಘೇ ಪಾರ್ವತ್ಯೈ ಜಾನುನೀ ತಥಾ ।**
**ಊರೂ ಮಾಂಗಲ್ಯಕಾರಿಣ್ಯೈ ವಾಮದೇವ್ಯೈ ತಥಾ ಕಟಿಂ ॥ ೭೩ ॥**

**ಪದ್ಮೋದರಾಯೈ ಜಠರಮುರಃ ಕಾಯಶ್ರಿಯೈ ನಮಃ ।**
**ಕರೌ ಸೌಭಾಗ್ಯದಾಯಿನ್ಯೈ ಬಾಹೂ ಚ ಸಮುಖಶ್ರಿಯೇ ॥ ೭೪ ॥**

---

೬೯-೭೦. ಆ ದೇವಿಯನ್ನು ಪಂಚಗವ್ಯಗಳಿಂದಲೂ, ಅನಂತರ ಬರಿಯ ಹಾಲಿನಿಂದಲೂ ಸ್ನಾನಮಾಡಿಸಬೇಕು. ಆಮೇಲೆ ಜೇನುತುಪ್ಪದಿಂದಲೂ ಹೂ, ಗಂಧದ ಉದಕದಿಂದ ಸ್ನಾನಮಾಡಿಸಿ ಬಿಳಿಯ ಹೂ, ನಾನಾವಿಧ ಫಲಗಳಿಂದಲೂ ಪೂಜಿಸಬೇಕು.

೭೧. ಧಾನ್ಯ, ಅರಳು, ಉಪ್ಪು, ಬೆಲ್ಲ, ಹಾಲು, ತುಪ್ಪಗಳಿಂದಲೂ, ಬಿಳಿಯ ಅಕ್ಷತೆ, ಬಿಳಿಯ ಎಳ್ಳುಗಳಿಂದಲೂ ಎಲೈ ಪಾರ್ವತಿಯೇ, ನೀನು ಪೂಜಿಸಬೇಕು.

೭೨—೭೭. ಪ್ರತಿಯೊಂದು ಪಕ್ಷದಲ್ಲಿಯೂ, ಪಾದಗಳಿಗೆ ಅರ್ಚನೆಯನ್ನು ಮಾಡಬೇಕು. ವರದೆಯೆ ನಮಸ್ಕಾರವು ಎಂದು ಪಾದಗಳಿಗೂ, ಶ್ರಿಯೇ ನಮಸ್ಕಾರವು ಎಂದು ಮೊಣಕಾಲುಗಳಿಗೂ, ಅಶೋಕೆಯೇ ನಮಸ್ಕಾರವು ಎಂದು ಮಂಡಿಗಳಿಗೂ, ಪಾರ್ವತಿಯೆ ನಮಸ್ಕಾರವೆಂದು ಮಂಡಿಯ ಮೇಲುಭಾಗಗಳಿಗೂ, ಮಂಗಳಕಾರಿಣಿಯೆ ನಮಸ್ಕಾರವು ಎಂದು ತೊಡೆಗಳಿಗೂ, ವಾಮದೇವಿಯೇ ನಮಸ್ಕಾರವು ಎಂದು ಸೊಂಟವನ್ನೂ, ಪದ್ಮೋದರೆಯೇ ನಮಸ್ಕಾರವು ಎಂದು ಹೊಟ್ಟೆಗೂ,

ಮುಖಂ ದರ್ಪವಿನಾಶಿನ್ಯೈ ಸ್ಮರದಾಯ್ಯೈ ಸ್ಮಿತಂ ಪುನಃ ।
ಗೌರ್ಯೈ ನಮಸ್ತಥಾ ನಾಸಾಮುತ್ಪಲಾಯ್ಯೈ ಚ ಲೋಚನೇ ॥ ೭೫ ॥

ತುಷ್ಟ್ಯೈ ಲಲಾಟಮಲಕಂ ಕಾತ್ಯಾಯಿನ್ಯೈ ನಮಃ ಶಿರಃ ।
ನಮೋ ಗೌರ್ಯೈ ನಮಃ ಪುಷ್ಟ್ಯೈ ನಮಃ ಕಾಂತ್ಯೈ ನಮಃ ಶ್ರಿಯೇ
॥ ೭೬ ॥

ರಂಭಾಯೈ ಲಲಿತಾಯೈ ಚ ವಾಸುದೇವ್ಯೈ ನಮೋ ನಮಃ ।
ಏವಂ ಸಂಪೂಜ್ಯ ವಿಧಿವದಗ್ರತಃ ಪದ್ಮಮಾಲಿಖೇತ್ ॥ ೭೭ ॥

ಪತ್ರೈರ್ದ್ವಾದಶಭಿರ್ಯುಕ್ತಂ ಕುಂಕುಮೇನ ಸಕರ್ಣಿಕಂ ।
ಪೂರ್ವೇಣ ವಿನ್ಯಸೇದ್ಗೌರೀಮಪರ್ಣಾಂ ಚ ತತಃ ಪರಂ ॥ ೭೮ ॥

ಭವಾನೀಂ ದಕ್ಷಿಣೇ ತದ್ವದ್ರುದ್ರಾಣೀಂ ಚ ತತಃ ಪರಂ ।
ವಿನ್ಯಸೇತ್ಪಶ್ಚಿಮೇ ಭಾಗೇ ಸೌಮ್ಯಾಂ ಗದವಿನಾಶಿನೀಂ ॥ ೭೯ ॥

ವಾಯವ್ಯೇ ಪಾಟಲಾಮುಗ್ರಾಮುತ್ತರೇಣ ತಥಾ ಉಮಾಂ ।
ಸಾಧ್ಯಾಂ ಪಥ್ಯಾಂ ಶುಭಾಂ ಸೌಮ್ಯಾಂ ಮಂಗಲಾಂ ಕುಮುದಾಂ ಸತೀಂ
॥ ೮೦ ॥

---

ಕಾಯೆಗೆ ನಮಸ್ಕಾರವು ಎಂದು ಎದೆಗೂ, ಶ್ರೀಗೆ ನಮಸ್ಕಾರವು ಎಂದು ಕೈಗಳಿಗೂ, ಸೌಭಾಗ್ಯದಾಯಿನಿಯೇ ನಮಸ್ಕಾರವು ಎಂದು ತೋಳುಗಳಿಗೂ, ಸುಮುಖವುಳ್ಳ ಶ್ರಿಯೆಗೆ ನಮಸ್ಕಾರವು ಎಂದು ಮುಖಗಳಿಗೂ, ದರ್ಪವಿನಾಶಿನೇ ಎಂದು ನಗುವ ಜಾಗಕ್ಕೂ, ಗೌರಿಯೇ ನಮಸ್ಕಾರವು ಎಂದು ಮೂಗಿಗೂ, ಉತ್ಪತ್ತಿಯೇ ನಮಸ್ಕಾರವು ಎಂದು ಕಣ್ಣುಗಳಿಗೂ, ತುಷ್ಟಿಗೆ ನಮಸ್ಕಾರವು ಎಂದು ಹಣೆಗೂ, ಕಾತ್ಯಾಯಿನಿಯೇ ನಮಸ್ಕಾರವು ಎಂದು ಮುಂಗುರುಳಿಗೂ, ತಲೆಗೂ, ಪೂಜೆಮಾಡಿ ಗೌರಿಗೆ ನಮಸ್ಕಾರ, ಪುಷ್ಟಿಗೆ ನಮಸ್ಕಾರ, ಕಾಂತಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ, ರಂಭೆಗೆ ನಮಸ್ಕಾರ, ಲಲಿತೆಗೆ ನಮಸ್ಕಾರ, ವಾಸುದೇವಿಗೆ ನಮಸ್ಕಾರ ಎಂದು ವಿಧಿಯ ರೀತಿಯಿಂದ ಪೂಜಿಸಿ ಮುಂದುಗಡೆ ಪದ್ಮವನ್ನು ಬರೆಯಬೇಕು.

೭೮—೮೧. ಆ ಕಮಲವು ಹನ್ನೆರಡು ಪತ್ರಗಳುಳ್ಳದ್ದಾಗಿರಬೇಕು. ಕುಂಕುಮದಿಂದ ಅದನ್ನು ಬರೆದು ಕರ್ಣಿಕೆಯನ್ನು ಬರೆದಿರಬೇಕು. ಆದರಲ್ಲಿ ಪೂರ್ವದಲ್ಲಿ ಗೌರಿಯನ್ನೂ, ಅಪರ್ಣೆಯನ್ನೂ, ಆಗ್ನೇಯದಲ್ಲಿಯೂ ಭವಾನಿಯನ್ನೂ, ದಕ್ಷಿಣದಲ್ಲಿಯೂ ರುದ್ರಾಣಿಯನ್ನೂ, ನೈಋತ್ಯದಲ್ಲಿಯೂ ಪಶ್ಚಿಮದಲ್ಲಿಯೂ ಗದವಿನಾಶಿನಿ

ಭದ್ರಾಂ ಚ ಮಧ್ಯೇ ಸಂಸ್ಥಾಪ್ಯ ಲಲಿತಾಂ ಕರ್ಣಿಕೋಪರಿ ।
ಕುಸುಮೈರಕ್ಷತಾದ್ಭಿರ್ವಾ ನಮಸ್ಕಾರೇಣ ವಿನ್ಯಸೇತ್ ॥ ೮೧ ॥

ಗೀತಮಂಗಲಘೋಷಂ ಚ ಕಾರಯಿತ್ವಾ ಸುವಾಸಿನೀಂ ।
ಪೂಜಯೇದ್ರಕ್ತವಾಸೋಭೀ ರಕ್ತಮಾಲ್ಯಾನುಲೇಪನೈಃ ॥ ೮೨ ॥

ಸಿಂದೂರಂ ಸ್ನಾನಪೂರ್ವಂ ಚ ತಾಸಾಂ ಶಿರಸಿ ಪಾತಯೇತ್ ।
ಸಿಂದೂರಕುಂಕುಮಸ್ನಾನಮತೀವೇಷ್ಟಂ ಯತಸ್ತತಃ ॥ ೮೩ ॥

ತಥೋಪದೇಷ್ಟಾರಮಪಿ ಪೂಜಯೇದ್ಯತ್ನತೋ ಗುರುಂ ।
ನ ಪೂಜ್ಯತೇ ಗುರುರ್ಯತ್ರ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೮೪ ॥

ಪುಷ್ಪೈಶ್ಚ ಪೂಜಯೇದ್ಗೌರೀಮುತ್ಪಲೈರಸಿತೈಃ ಸದಾ ।
ಬಂಧುಜೀವೈಃ ಪ್ರಿಯೇ ಪೂಜ್ಯಾ ಕಾರ್ತಿಕೇ ಮಾಸಿ ಯತ್ನತಃ ॥ ೮೫ ॥

---

ಯನ್ನೂ, ವಾಯುವ್ಯದಲ್ಲಿ ಪಾಟಲೆಯನ್ನೂ, ಉತ್ತರದಲ್ಲಿ ಉಮೆಯನ್ನೂ, ಮಧ್ಯಭಾಗದಲ್ಲಿ ಸಾಧ್ಯೇ, ಪಥ್ಯೆ, ಶುಭೇ, ಸೌಮ್ಯೇ, ಮಂಗಳೆ, ಕುಮುದೇ, ಸತೀ, ಭದ್ರೇ, ಇವರನ್ನು ಸ್ಥಾಪಿಸಿ ಲಲಿತೆಯನ್ನು ಕರ್ಣಿಕೆಯ ಮಧ್ಯದಲ್ಲಿಡಬೇಕು. ಹೂವು, ಅಕ್ಷತೆ, ನೀರು ಇವನ್ನು ತೆಗೆದುಕೊಂಡು ನಮಸ್ಕಾರವನ್ನು ಮಾಡಿ ಆವಾಹಿಸಬೇಕು.

೮೨. ಗಾನ, ಮಂಗಳವಾದ್ಯಗಳನ್ನು ಮಾಡಿಸಿ, ಸುವಾಸಿನಿಯನ್ನು ಪೂಜಿಸಬೇಕು. ಆಕೆಗೆ ಕೆಂಪುಗಂಧ, ಕೆಂಪು ಹೂಗಳನ್ನು ಕೊಡಬೇಕು.

೮೩. ಚಂದ್ರ, ಕುಂಕುಮಗಳ ಸ್ನಾನವು ಈ ಲಲಿತೆಗೆ ಬಹು ಇಷ್ಟವಾದುದರಿಂದ ಈ ಆವಾಹಿತ ದೇವತೆಗಳ ಮೇಲೆ ಚಂದ್ರ, ಕುಂಕುಮಗಳನ್ನು ಹಾಕಬೇಕು.

೮೪. ಆ ವ್ರತವನ್ನು ಉಪದೇಶ ಮಾಡಿದವನನ್ನೂ ಪೂಜಿಸಬೇಕು. ಗುರುವನ್ನು ಪೂಜಿಸದಿದ್ದರೆ ಆ ವ್ರತದ ಫಲವು ನಮಗೆ ಸಿಕ್ಕದೇ ಫಲವಿಲ್ಲದೇ ಹೋಗುತ್ತದೆ.

೮೫. ಕಾರ್ತಿಕ ಮಾಸದಲ್ಲಿ ಬಿಳುಪಲ್ಲದೇ ಇರುವ ಕನ್ನೈದಿಲೆ, ದಾಸವಾಳ ಮುಂತಾದ ಹೂಗಳಿಂದ ಗೌರಿಯನ್ನು ಪೂಜಿಸಬೇಕು.

ಜಾತೀಪುಷ್ಪೈರ್ಮಾರ್ಗಶಿರೇ ಪೌಷೇ ಪೀತೈಃ ಕುರಂಟಕೈಃ ।
ಕುಂದೈಃ ಕುಸುಂಭಪುಷ್ಪೈಶ್ಚ ದೇವೀಂ ಮಾಘೇಽಪಿ ಪೂಜಯೇತ್ ॥ ೮೬ ॥

ಸಿಂಧುವಾರೇಣ ಜಾತ್ಯಾ ಚ ಫಾಲ್ಗುನೇ ಚಾರ್ಚಯೇನ್ನರಃ ।
ಚೈತ್ರೇ ತು ಮಲ್ಲಿಕಾಶೋಕೈರ್ವೈಶಾಖೇ ಗಂಧಪಾಟಲೈಃ ॥ ೮೭ ॥

ಜ್ಯೇಷ್ಠೇ ಕಮಲಮಂದಾರೈರಾಷಾಢೇ ಚ ಜಲಾಂಬುಜೈಃ ।
ಕದಂಬೈರಥ ಮಾಲತ್ಯಾ ಶ್ರಾವಣೇ ಪೂಜಯೇತ್ಸದಾ ॥ ೮೮ ॥

ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಃ ಕುಶೋದಕಂ ।
ಬಿಲ್ವಪತ್ರಾರ್ಕಪುಷ್ಪೇ ಚ ಯವಗೋಶೃಂಗವಾರಿ ಚ ॥ ೮೯ ॥

ಪಂಚಗವ್ಯಂ ಚ ಬಿಲ್ವಂ ಚ ಪ್ರಾಶಯೇತ್ಕ್ರಮಶಃ ಸದಾ ।
ಏತದ್ಭಾದ್ರಪದಾದ್ಯಂ ತು ಪ್ರಾಶನಂ ಸಮುದಾಹೃತಂ ॥ ೯೦ ॥

---

೮೬—೮೮. ಮಾರ್ಗಶಿರ ಮಾಸದಲ್ಲಿ ಜಾಜೀ ಹೂವಿನಿಂದಲೂ, ಪುಷ್ಯದಲ್ಲಿ ಅರಿಶಿನ ಬಣ್ಣದ ಗೊರಂಟಿಯ ಹೂವಿನಿಂದಲೂ, ಮಾಘ ಮಾಸದಲ್ಲಿ ಕಾಡುಮಲ್ಲಿಗೆ, ಕುಸುಲೆ ಹೂಗಳಿಂದಲೂ, ಫಾಲ್ಗುಣದಲ್ಲಿ ಲಕ್ಕೀ, ಜಾಜೀ ಹೂಗಳಿಂದಲೂ, ಚೈತ್ರ ಮಾಸದಲ್ಲಿ ಮಲ್ಲಿಗೆ, ಅಶೋಕಗಳ ಹೂಗಳಿಂದಲೂ, ವೈಶಾಖದಲ್ಲಿ ಗಂಧ, ಪಾದರಿ ಹೂಗಳಿಂದಲೂ, ಜ್ಯೇಷ್ಠದಲ್ಲಿ ಕಮಲ, ಕಂಚುವಾಳ ಹೂಗಳಿಂದಲೂ, ಆಷಾಢದಲ್ಲಿ ನೀರಿನಲ್ಲಿ ಬೆಳೆಯುವ ಕಮಲ ಮುಂತಾದುವುಗಳಿಂದಲೂ, ಶ್ರಾವಣದಲ್ಲಿ ಕದಂಬ, ಜಾಜೀ ಹೂಗಳಿಂದಲೂ ಗೌರಿಯನ್ನು ಪೂಜಿಸಬೇಕು.

೮೯-೯೦. ಭಾದ್ರಪದದಲ್ಲಿ ಗೋಮೂತ್ರವನ್ನೂ, ಆಶ್ವಯುಜದಲ್ಲಿ ಗೋಮಯವನ್ನೂ, ಕಾರ್ತಿಕದಲ್ಲಿ ಗೋಕ್ಷೀರವನ್ನೂ, ಮಾರ್ಗಶಿರದಲ್ಲಿ ಗೋವಿನ ಮೊಸರನ್ನೂ, ಪುಷ್ಯದಲ್ಲಿ ಹಸುವಿನ ತುಪ್ಪವನ್ನೂ, ಮಾಘದಲ್ಲಿ ಕುಶೋದಕವನ್ನೂ, ಫಾಲ್ಗುಣದಲ್ಲಿ ಬಿಲ್ವಪತ್ರ ಹೂವನ್ನೂ, ಚೈತ್ರದಲ್ಲಿ ಎಕ್ಕದ ಹೂವನ್ನೂ ಈರೀತಿಯಾಗಿ ಭಾದ್ರಪದ ಮಾಸದ ಮೊದಲುಗೊಂಡು ತಿನ್ನಬೇಕು. ನೀರನ್ನು ಇವನು ಕುಡಿದು ಅಕ್ಕಿತೊಳೆದ ನೀರನ್ನಾಗಲೀ, ಬರಿಯ ನೀರಾದರೆ ಅದಕ್ಕೆ ಹುಲ್ಲೇ ಕೊಂಬನ್ನು ತೇದು ಕದಡಿಯಾಗಲಿ ಕುಡಿಯಬೇಕು.

ಪ್ರತಿಪಕ್ಷಂ ಚ ಮಿಥುನಂ ತೃತೀಯಾಯಾಂ ವರಾನನೇ ।
ಭೋಜಯಿತ್ವಾರ್ಚಯೇದ್ಭಕ್ತ್ಯಾ ವಸ್ತ್ರಮಾಲ್ಯಾನುಲೇಪನೈಃ ॥ ೯೧ ॥

ಪುಂಸಃ ಪಟ್ಟಾಂಬರೇ ದದ್ಯಾತ್ ಸ್ತ್ರಿಯಾಃ ಕೌಶೇಯವಾಸಸೀ ।
ನಿಷ್ಪಾವಜೀರಲವಣಮಿಕ್ಷುದಂಡಗುಡಾನ್ವಿತಂ ॥ ೯೨ ॥

ಸ್ತ್ರಿಯೈ ದದ್ಯಾತ್ಫಲಂ ಪುಂಸಃ ಸುವರ್ಣೋತ್ಪಲಸಂಯುತಂ ।
ಯಥಾ ನ ದೇವಿ ದೇವಸ್ತ್ವಾಂ ಸಂಪರಿತ್ಯಜ್ಯ ಗಚ್ಛತಿ ॥ ೯೩ ॥

ತಥಾ ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ।
ಕುಮುದಾ ವಿಮಲಾ ನಂದಾ ಭವಾನೀ ವಸುಧಾ ಶಿವಾ ॥ ೯೪ ॥

ಲಲಿತಾ ಕಮಲಾ ಗೌರೀ ಸತೀ ರಂಭಾ ಚ ಪಾರ್ವತೀ ।
ನಭಸ್ಯಾದಿಷು ಮಾಸೇಷು ಪ್ರೀಯತಾಮಿತ್ಯುದೀರಯೇತ್ ॥ ೯೫ ॥

---

೯೧-೯೨. ಪ್ರತಿ ಪಕ್ಷದ ತದಿಗೆಯ ದಿನ ದಂಪತಿಗಳಿಗೆ ಊಟಕ್ಕೆ ಹೇಳಿ, ಭಕ್ತಿಯಿಂದ ಬಟ್ಟೆ, ಗಂಧ, ಹೂಮಾಲೆಗಳಿಂದ ಪೂಜಿಸಬೇಕು ಗಂಡಸಿಗೆ ಪಟ್ಟೇ ಮಡಿಯನ್ನೂ, ಹೆಂಗಸಿಗೆ ರೇಷ್ಮೆಯ ಬಟ್ಟೆಯನ್ನೂ ಕೊಡಬೇಕು. ಅವರೆ, ಜೀರಿಗೆ, ಉಪ್ಪು, ಕಬ್ಬು, ಬೆಲ್ಲಗಳಿಂದ ಕೂಡಿದ ತಿಂಡಿಗಳನ್ನು ಕೊಡಬೇಕು. ಹೆಂಗಸಿಗೆ ಫಲವನ್ನೂ, ಗಂಡಸಿಗೆ ಚಿನ್ನದ ನಾಣ್ಯವನ್ನೂ ಕೊಡಬೇಕು.

೯೩. ಎಲೈ ದೇವಿಯೇ, ಸ್ವಾಮಿಯು ನಿನ್ನನ್ನು ಬಿಟ್ಟು ಹೇಗೆ ಹೋಗುವುದಿಲ್ಲವೋ, ಹಾಗೇ ನನ್ನನ್ನು ದುಃಖಸಾಗರದಿಂದ ಉದ್ಧರಿಸು.

೯೪-೯೫. ಭಾದ್ರಪದದಲ್ಲಿ ಕುಮುದೆ, ಆಶ್ವಯುಜದಲ್ಲಿ ವಿಮಲೆ, ಕಾರ್ತಿಕದಲ್ಲಿ ನಂದೆ, ಮಾರ್ಗಶಿರದಲ್ಲಿ ಭವಾನೀ, ಪುಷ್ಯದಲ್ಲಿ ವಸುಧೆ, ಮಾಘದಲ್ಲಿ ಶಿವೆ, ಫಾಲ್ಗುಣದಲ್ಲಿ ಲಲಿತೆ, ಚೈತ್ರದಲ್ಲಿ ಕಮಲೆ, ವೈಶಾಖದಲ್ಲಿ ಗೌರೀ, ಜ್ಯೇಷ್ಠದಲ್ಲಿ ಸತೀ, ಆಷಾಢದಲ್ಲಿ ರಂಭೆ, ಶ್ರಾವಣದಲ್ಲಿ ಪಾರ್ವತಿ ಈರೀತಿಯಾಗಿ ಆಯಾ ತಿಂಗಳಲ್ಲಿ ಅವರವರನ್ನುದ್ದೇಶಿಸಿ ಅವರ ಹೆಸರನ್ನು ಹೇಳಿ ಪ್ರೀತಿಯಾಗಲೆಂದು ಹೇಳಬೇಕು.

ವ್ರತಾಂತೇ ಶಯನಂ ದದ್ಯಾತ್ಸುವರ್ಣಕಮಲಾನ್ವಿತಂ ।
ಮಿಥುನಾನಿ ಚತುರ್ವಿಂಶದ್ದ್ವಾದಶಾಥ ಸಮರ್ಚಯೇತ್ ॥ ೯೬ ॥

ಅಷ್ಟಾವಷ್ಟೌ ಚ ಮಾಸಾಂತೇ ಚಾತುರ್ಮಾಸ್ಯೇನ ಪೂಜಯೇತ್ ।
ಪೂರ್ವಂ ದತ್ವಾಥ ಗುರವೇ ಶೇಷಾನಭ್ಯರ್ಚಯೇದ್ಬುಧಃ ॥ ೯೭ ॥

ಉಕ್ತಾಽನಂತತೃತೀಯೈಷಾ ಸದಾಽನಂತಫಲಪ್ರದಾ ।
ಸರ್ವಪಾಪಹರಾ ದೇವೀ ಸೌಭಾಗ್ಯಾರೋಗ್ಯವರ್ಧಿನೀ ॥ ೯೮ ॥

ನ ಚೈನಾಂ ವಿತ್ತಶಾಠ್ಯೇನ ಕದಾಚಿದಪಿ ಲಂಘಯೇತ್ ।
ನರೋ ವಾ ಯದಿ ವಾ ನಾರೀ ಸಾಪತ್ಯಾ ವಾಽನಪತ್ಯಕಾ ॥ ೯೯ ॥

ಗರ್ಭಿಣೀ ಸೂತಿಕಾ ನಕ್ತಂ ಕುಮಾರೀ ವಾಽಥ ರೋಹಿಣೀ ।
ಯದಾಽಶುದ್ಧಾ ತದಾಽನ್ಯೇನ ಕಾರಯೇತ್ಪ್ರಯತಾ ಸ್ವಯಂ ॥ ೧೦೦ ॥

---

೯೬. ವ್ರತದ ಕೊನೆಯಲ್ಲಿ ಚಿನ್ನದ ಕಮಲದಿಂದ ಕೂಡಿರುವ, ಹಾಸಿಗೆಯನ್ನು ಕೊಡಬೇಕು. ಇಪ್ಪತ್ತುನಾಲ್ಕು ಜನ ಅಥವಾ ಹನ್ನೆರಡು ಜನ ದಂಪತಿಯರನ್ನಾಗಲೀ ಪೂಜಿಸಬೇಕು.

೯೭. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜಗಳಲ್ಲಿ ಎಂಟೆಂಟು ದಂಪತಿಗಳನ್ನು ಪೂಜಿಸಬೇಕು. ಮೊದಲು ಗುರುವಿಗೆ ಕೊಟ್ಟು ಅನಂತರ ಉಳಿದವರನ್ನು ಪೂಜಿಸಬೇಕು.

೯೮. ಸರ್ವಪಾಪಹಾರಕವಾದ ಸೌಭಾಗ್ಯ, ಆರೋಗ್ಯಗಳನ್ನು ಹೆಚ್ಚಿಸುವ, ಈ ಅನಂತಫಲವನ್ನು ಕೊಡುವ ಈ ಅನಂತ ತೃತೀಯೆಯನ್ನು ಹೇಳಿದೆನು.

೯೯-೧೦೦. ಇದನ್ನು ಲೋಭದಿಂದ ಯಾವಾಗಲೂ ಬಿಡಬಾರದು. ಗಂಡಸಾಗಲಿ, ಹೆಂಗಸಾಗಲಿ, ಪುತ್ರವತಿಯಾಗಲಿ, ಬಂಜೆಯಾಗಲಿ, ಗರ್ಭಿಣಿಯಾಗಲಿ, ಮುಟ್ಟಾದವಳಾಗಲಿ, ಮೈನೆರೆಯದವಳಾಗಲಿ, ನೆರೆದವಳಾಗಲಿ ಎಲ್ಲರೂ ಬಿಡದೇ ಮಾಡಬೇಕು. ಅಶುದ್ಧವಾಗಿರುವಾಗ ಮತ್ತೊಬ್ಬನ ಕೈಯಿಂದ ಮಾಡಿಸಬೇಕು.

ಇಮಾಮನಂತಫಲದಾಂ ತೃತೀಯಾಂ ಯಃ ಸಮಾಚರೇತ್ ।
ಕಲ್ಪಕೋಟಿಶತಂ ಸಾಗ್ರಂ ಶಿವಲೋಕೇ ಮಹೀಯತೇ ॥ ೧೦೧ ॥

ವಿತ್ತಹೀನೋಽಪಿ ಕುರ್ವೀತ ವರ್ಷಂ ತು ಸಮುಪೋಷಣೈಃ ।
ಪುಷ್ಪಮಂತ್ರವಿಧಾನೇನ ಸೋಽಪಿ ತತ್ಫಲಮಾಪ್ನುಯಾತ್ ॥ ೧೦೨ ॥

ನಾರೀ ವಾ ಕುರುತೇ ಯಾ ತು ಕುಮಾರೀ ಯಾ ತು ಚೇಚ್ಛತಿ ।
ಜನ್ಮ ಪೌರುಷಮಾಪ್ನೋತಿ ಗೌರ್ಯನುಗ್ರಹಕಾರಿತಂ ॥ ೧೦೩ ॥

ಇತಿ ಪಠತಿ ಶೃಣೋತಿ ವಾ ಯ ಇತ್ಥಂ
ಗಿರಿತನಯಾವ್ರತಮಿಂದುಲೋಕಸಂಸ್ಥಃ ।
ಮತಿಮಪಿ ಚ ದದಾತಿ ಸೋಽಪಿ ದೇವೈ-
ರಮರವಧೂಜನಕಿಂನರೈಃ ಸುಪೂಜ್ಯಃ ॥ ೧೦೪ ॥

ಅನ್ಯಾಮಪಿ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ರಸಕಲ್ಯಾಣಿನೀಮೇನಾಂ ಪುರಾ ಕಲ್ಪವಿದೋ ವಿದುಃ ॥ ೧೦೫ ॥

---

೧೦೧. ಈ ಅನಂತಫಲವುಳ್ಳ ತದಿಗೆಯನ್ನು ಯಾರು ಮಾಡುತ್ತಾರೆಯೋ ಅವರು ನೂರುಕೋಟಿ ಕಲ್ಪಗಳು ಪೂರ್ತಿಯಾಗಿ ಶಿವಲೋಕದಲ್ಲಿ ಸುಖಿಸುತ್ತಾರೆ.

೧೦೨. ಹಣವಿಲ್ಲದವನೂ ಕೂಡ ಉಪವಾಸಮಾಡಿ ಮಂತ್ರವಿಧಾನದಿಂದ ವರ್ಷದವರೆಗೂ ಪೂಜೆಮಾಡಿದರೆ ಆ ಫಲವನ್ನು ಹೊಂದುತ್ತಾನೆ.

೧೦೩. ಹೆಂಗಸು ಯಾವಳು ಮಾಡಿದರೂ ಕೂಡ ಆಕೆಯು ಗೌರ್ಯನುಗ್ರಹದಿಂದ ಪುರುಷಜನ್ಮವನ್ನು ಹೊಂದುತ್ತಾಳೆ.

೧೦೪. ಇದನ್ನು ಓದುವವನೂ, ಕೇಳುವವನೂ, ಮಾಡಿಸುವವನೂ ದೇವತೆಗಳಿಂದಲೂ, ಕಿನ್ನರಿಂದಲೂ, ಪುಜಿಸಲ್ಪಟ್ಟು ಚಂದ್ರಲೋಕವನ್ನು ಹೊಂದುತ್ತಾನೆ.

೧೦೫. ಮತ್ತೊಂದು ಪಾಪನಾಶಕವಾದ ತದಿಗೆಯನ್ನು ಹೇಳುತ್ತೇನೆ, ಕೇಳು. ಇದನ್ನು ಬಲ್ಲವರು ರಸಕಲ್ಯಾಣಿನೀ ಎಂದು ಹೇಳುತ್ತಾರೆ.

ಮಾಘಮಾಸೇ ತು ಸಂಪ್ರಾಪ್ಯ ತೃತೀಯಾಂ ಶುಕ್ಲಪಕ್ಷತಃ ।
ಪ್ರಾತರ್ಗಂಧೇನ ಪಯಸಾ ತಿಲೈಃ ಸ್ನಾನಂ ಸಮಾಚರೇತ್ ॥ ೧೦೬ ॥

ಸ್ನಾಪಯೇನ್ಮಧುನಾ ದೇವೀಂ ತಥೈವೇಕ್ಷುರಸೇನ ತು ।
ಗಂಧೋದಕೇನ ಚ ಪುನಃ ಪೂಜನಂ ಕುಂಕುಮೇನ ವೈ ॥ ೧೦೭ ॥

ದಕ್ಷಿಣಾಂಗಾನಿ ಸಂಪೂಜ್ಯ ತತೋ ವಾಮಾನಿ ಪೂಜಯೇತ್ ।
ಲಲಿತಾಯೈ ತತೋ ದೇವ್ಯೈ ಪಾದೌ ಗುಲ್ಫೌ ತತೋಽರ್ಚಯೇತ್ ॥ ೧೦೮ ॥

ಜಂಘೇ ಜಾನೂ ತಥಾ ಶಾಂತ್ಯೈ ತಥೈವೋರೂ ಶ್ರಿಯೈ ನಮಃ ।
ಮದಾಲಸಾಯೈ ಚ ಕಟಿಮಮಲಾಯೈ ತಥೋದರಂ ॥ ೧೦೯ ॥

ಸ್ತನೌ ಮದನವಾಸಿನ್ಯೈ ಕುಮುದಾಯೈ ಚ ಕಂಧರಾಂ ।
ಭುಜಭುಜಾಗ್ರಂ ಮಾಧವ್ಯೈ ಕಮಲಾಯೈ ಮುಖಸ್ಮಿತೇ ॥ ೧೧೦ ॥

---

೧೦೬-೧೦೭. ಮಾಘಮಾಸ ಶುಕ್ಲಪಕ್ಷದ ತದಿಗೆಯ ದಿನ ಬೆಳಿಗ್ಗೆ ಎಳ್ಳೆಣ್ಣೆಯನ್ನು ಒತ್ತಿಕೊಂಡು, ಗಂಧದ ವಾಸನೆಯ ನೀರಿನಿಂದ ಸ್ನಾನಮಾಡಬೇಕು. ಅನಂತರ ಗೌರಿಯನ್ನು ಜೇನು, ಕಬ್ಬಿನ ಹಾಲು, ಗಂಧೋದಕ, ಇವುಗಳಿಂದ ಅಭಿಷೇಕ ಮಾಡಿ ಕುಂಕುಮದಿಂದ ಪೂಜಿಸಿ, ಮೊದಲು ಬಲಗಡೆಯನ್ನು ಪೂಜಿಸಿ ಅನಂತರ ಎಡಗಡೆಯನ್ನು ಪೂಜಿಸಬೇಕು.

೧೦೮—೧೧೦. ಲಲಿತದೇವಿಗೆ ನಮಸ್ಕಾರವು ಎಂದು ಪಾದಗಳನ್ನೂ, ಮೊಣಕಾಲುಗಳನ್ನೂ, ಪೂಜಿಸಬೇಕು. ಶಾಂತಿಗೆ ನಮಸ್ಕಾರವು ಎಂದು ಮಂಡಿ ಕಣಕಾಲುಗಳನ್ನೂ, ಶ್ರೀಗೆ ನಮಸ್ಕಾರವು ಎಂದು ತೊಡೆಗಳನ್ನೂ, ಮದಾಲಸೆಗೆ ನಮಸ್ಕಾರವು ಎಂದು ಸೊಂಟವನ್ನೂ, ಅಮಲೆಗೆ ನಮಸ್ಕಾರವು ಎಂದು ಹೊಟ್ಟೆಯನ್ನೂ, ಮದನವಾಸಿನಿಗೆ ನಮಸ್ಕಾರವು ಎಂದು ಹೇಳಿ ಸ್ತನಗಳಿಗೂ, ಕುಮುದೆಗೆ ನಮಸ್ಕಾರವು ಎಂದು ಹೇಳಿ ಕತ್ತನ್ನೂ, ಮಾಧವಿಗೆ ನಮಸ್ಕಾರವು ಎಂದು ಹೇಳ ಭುಜಗಳನ್ನೂ, ತೋಳುಗಳನ್ನೂ, ಕಮಲೆಗೆ ನಮಸ್ಕಾರವೆಂದು ಮುಖ, ತುಟಿಗಳನ್ನೂ ಪೂಜಿಸಬೇಕು.

**ಭ್ರೂಲಲಾಟಂ ಚ ರುದ್ರಾಣ್ಯೈ ಶಂಕರಾಯ್ಯೈ ತಥಾಽಲಕಂ ।**
**ಮದನಾಯ್ಯೈ ಲಲಾಟಂ ಚ ಮೋಹನಾಯ್ಯೈ ಪುನರ್ಭ್ರುವೌ ॥ ೧೯೦ ॥**

**ನೇತ್ರೇ ಚಂದ್ರಾರ್ಧಧಾರಿಣ್ಯೈ ತುಷ್ಟ್ಯೈ ಚ ವದನಂ ಪುನಃ ।**
**ಉತ್ಕಂಠಿನ್ಯೈ ನಮಃ ಕಂಠಮಮೃತಾಯ್ಯೈ ನಮಸ್ತನುಂ ॥ ೧೧೨ ॥**

**ರಂಭಾಯ್ಯೈ ಚ ಮಹಾಬಾಹುಂ ವಿಶೋಕಾಯ್ಯೈ ನಮಃ ಕರೌ ।**
**ಹೃದಯಂ ಮನ್ಮಥಾಧಿಕ್ಯೈ ಪಾಟಲಾಯ್ಯೈ ತಥೋದರಂ ॥ ೧೧೩ ॥**

**ಕಟಿಂ ಸುರತವಾಸಿನ್ಯೈ ತಥೋರುಂ ಪಂಕಜಶ್ರಿಯ್ಯೈ ।**
**ಜಾನುಜಂಘೇ ನಮೋ ಗೌರ್ಯ್ಯೈ ಗುಲ್ಫೌ ಶಾಂತ್ಯೈ ತಥಾಽರ್ಚಯೇತ್ ॥ ೧೧೪ ॥**

**ಧರಾಧರಾಯ್ಯೈ ಪಾದಂ ತು ವಿಶ್ವಕಾಯ್ಯೈ ನಮಃ ಶಿರಃ ।**
**ನಮೋ ಭವಾನ್ಯೈ ಕಾಮಿನ್ಯೈ ವಾಸುದೇವ್ಯೈ ಜಗಚ್ಛ್ರಿಯ್ಯೈ ॥ ೧೧೫ ॥**

---

೧೧೧—೧೧೬. ರುದ್ರಾಣಿಗೆ ನಮಸ್ಕಾರವು ಎಂದು ಹುಬ್ಬು, ಹಣೆಗಳನ್ನೂ, ಶಂಕರನಿಗೆ ನಮಸ್ಕಾರವು ಎಂದು ಮುಂಗುರುಳನ್ನೂ, ಮದನನಿಗೆ ನಮಸ್ಕಾರವು ಎಂದು ಹಣೆಯನ್ನೂ, ಮೋಹನೆಗೆ ನಮಸ್ಕಾರವು ಎಂದು ಹುಬ್ಬುಗಳನ್ನೂ, ಚಂದ್ರನ ಅರ್ಧವನ್ನು ಧರಿಸಿರುವವಳಿಗೆ ನಮಸ್ಕಾರವು ಎಂದು ಕಣ್ಣುಗಳನ್ನೂ, ತುಷ್ಟಿಗೆ ನಮಸ್ಕಾರವು ಎಂದು ಮುಖವನ್ನೂ, ಉತ್ಕಂಠಿನಿಗೆ ನಮಸ್ಕಾರವು ಎಂದು ಕಂಠವನ್ನೂ, ಅಮೃತೆಗೆ ನಮಸ್ಕಾರವು ಎಂದು ದೇಹವನ್ನೂ, (ಎದೆಯನ್ನೂ) ರಂಭೆಗೆ ನಮಸ್ಕಾರವು ಎಂದು ಬಾಹುಗಳನ್ನೂ, ವಿಶೋಕೆಗೆ ನಮಸ್ಕಾರವು ಎಂದು ಕೈಗಳನ್ನೂ, ಮನ್ಮಥಾಧಿಕ್ಯೆಗೆ ನಮಸ್ಕಾರವು ಎಂದು ಹೃದಯವನ್ನೂ, ಪಾಟಲೆಗೆ ನಮಸ್ಕಾರವು ಎಂದು ಹೊಟ್ಟೆಯನ್ನೂ, ಸುರತವಾಸಿನಿಗೆ ನಮಸ್ಕಾರವು ಎಂದು ಸೊಂಟವನ್ನೂ, ಪಂಕಜಶ್ರೀಗೆ ನಮಸ್ಕಾರವು ಎಂದು ತೊಡೆಗಳನ್ನೂ, ಗೌರಿಗೆ ನಮಸ್ಕಾರವು ಎಂದು ಮಂಡಿ ಮೊಣಕಾಲುಗಳನ್ನೂ, ಶಾಂತಿಗೆ ನಮಸ್ಕಾರವು ಎಂದು ಹಿಮ್ಮಡಿಯನ್ನೂ, ಧರಾಧರೆಗೆ ನಮಸ್ಕಾರವು ಎಂದು ಪಾದವನ್ನೂ, ವಿಶ್ವಕಾಯೆಗೆ ನಮಸ್ಕಾರವೆಂದು ತಲೆಯನ್ನೂ ಪೂಜಿಸಿ, ಭವಾನಿಗೆ ನಮಸ್ಕಾರವು, ಕಾಮಿನಿಗೆ ನಮಸ್ಕಾರವು, ವಾಸುದೇವೆಗೆ ನಮಸ್ಕಾರವು, ಜಗಚ್ಛ್ರೀಗೆ ನಮಸ್ಕಾರವು, ಆನಂದದಾಯಿನಿಗೆ ನಮಸ್ಕಾರವು,

ಆನಂದದಾಯ್ಕೈ ನಂದಾಯೈ ಸುಭದ್ರಾಯೈ ನಮೋ ನಮಃ ।
ಏವಂ ಸಂಪೂಜ್ಯ ವಿಧಿವದ್ದ್ವಿಜದಾಂಪತ್ಯಮರ್ಚಯೇತ್ ॥ ೧೧೬ ॥

ಭೋಜಯಿತ್ವಾsನ್ನದಾನೇನ ಮಧುರೇಣ ವಿಮತ್ಸರಃ ।
ಸಲಡ್ಡುಕಂ ವಾರಿಕುಂಭಂ ಶುಕ್ಲವಾಸೋಯುಗದ್ವಯಂ ॥ ೧೧೭ ॥

ದತ್ವಾ ಸುವರ್ಣಕಮಲಂ ಗಂಧಮಾಲ್ಯೈರಥಾರ್ಚಯೇತ್ ।
ಪ್ರೀಯತಾಮತ್ರ ಕುಮುದಾ ಯತ್ಕೃತಂ ಲವಣವ್ರತಂ ॥ ೧೧೮ ॥

ಅನೇನ ವಿಧಿನಾ ದೇವೀಂ ಮಾಸಿ ಮಾಸಿ ಸದಾsರ್ಚಯೇತ್ ।
ಲವಣಂ ವರ್ಜಯೇನ್ಮಾಘೇ ಫಾಲ್ಗುನೇ ಚ ಗುಡಂ ಪುನಃ ॥ ೧೧೯ ॥

ಇಕ್ಷುದಂಡಂ ತಥಾ ಚೈತ್ರೇ ವರ್ಜ್ಯಂ ಚ ಮಧು ಮಾಧವೇ ।
ಪಾನೀಯಂ ಜ್ಯೇಷ್ಠಮಾಸೇ ಚ ಆಷಾಢೇ ಜೀರಕಂ ತಥಾ ॥ ೧೨೦ ॥

ಶ್ರಾವಣೇ ವರ್ಜಯೇತ್ ಕ್ಷೀರಂ ದಧಿ ಭಾದ್ರಪದೇ ತಥಾ ।
ಘೃತಮಾಶ್ವಯುಜೇ ತದ್ವದೂರ್ಜೇ ವರ್ಜ್ಯಂ ಚ ಮಾಕ್ಷಿಕಂ ॥ ೧೨೧ ॥

---

ನಂದೆಗೆ ನಮಸ್ಕಾರವು, ಸುಭದ್ರೆಗೆ ನಮಸ್ಕಾರವು ಎಂಬುದಾಗಿಯೂ ಪೂಜಿಸಿ, ಬ್ರಾಹ್ಮಣದಂಪತಿಗಳನ್ನು ಪೂಜಿಸಬೇಕು.

೧೧೭. ಮಧುರವಾದ ಅನ್ನದಿಂದ ಆ ದಂಪತಿಗಳನ್ನು ಊಟಮಾಡಿಸಿ ಲಡ್ಡು, ನೀರಿನಿಂದ ತುಂಬಿದ ಕಲಶ, ಬಿಳಿಯ ಒಂದುಜತೆ ಬಟ್ಟೆ, ಚಿನ್ನದ ಕಮಲಗಳನ್ನು ಗಂಧ ಹೂಗಳಿಂದ ಪೂಜಿಸಬೇಕು.

೧೧೮. ತಾನು ಮಾಡಿದ ಈ ಲವಣವ್ರತದಿಂದ ಕುಮುದೆಯು ಪ್ರೀತಳಾಗಲಿ ಎನ್ನಬೇಕು. ಈ ವಿಧಿಯಿಂದ ಪ್ರತಿ ತಿಂಗಳೂ ಪೂಜಿಸಬೇಕು.

೧೧೯—೧೨೨. ಮಾಘದಲ್ಲಿ ಉಪ್ಪನ್ನೂ, ಫಾಲ್ಗುಣದಲ್ಲಿ ಬೆಲ್ಲವನ್ನೂ, ಚೈತ್ರದಲ್ಲಿ ಕಬ್ಬನ್ನೂ, ವೈಶಾಖದಲ್ಲಿ ಮಧುವನ್ನೂ, ಜ್ಯೇಷ್ಠದಲ್ಲಿ ಪಾನೀಯ ಮೊಂತಾದ ಕುಡಿಯುವ ವಸ್ತುವನ್ನೂ, ಆಷಾಢದಲ್ಲಿ ಜೀರಿಗೆಯನ್ನೂ, ಶ್ರಾವಣದಲ್ಲಿ ಹಾಲನ್ನೂ, ಭಾದ್ರಪದದಲ್ಲಿ ಮೊಸರನ್ನೂ, ಆಶ್ವಯುಜದಲ್ಲಿ ತುಪ್ಪವನ್ನೂ, ಕಾರ್ತಿಕ ದಲ್ಲಿ ಜೇನುತುಪ್ಪವನ್ನೂ, ಮಾರ್ಗಶೀರ್ಷದಲ್ಲಿ ಕೊತ್ತಂಬರಿಯನ್ನೂ, ಪುಷ್ಯದಲ್ಲಿ

ಧಾನ್ಯಕಂ ಮಾರ್ಗಶೀರ್ಷೇ ತು ಪೌಷೇ ವರ್ಜ್ಯಾ ಚ ಶರ್ಕರಾ ।
ವ್ರತಾಂತೇ ಕರಕಂ ಪೂರ್ಣಮೇತೇಷಾಂ ಮಾಸಿ ಮಾಸಿ ಚ ॥ ೧೨೨ ॥

ದದ್ಯಾದ್ವಿಕಾಲವೇಲಾಯಾಂ ಭಕ್ಷಪಾತ್ರೇಣ ಸಂಯುತಂ ।
ಲಡ್ಡುಕಾಃ ಶ್ವೇತವರ್ತಿಶ್ಚ ಸಂಯಾವಮಥ ಪೂರಿಕಾ ॥ ೧೨೩ ॥

ಘಾರಿಕಾ ಘೃತಪೂರ್ಣಾಶ್ಚ ಪಿಷ್ಟಪೂರ್ಣಾಶ್ಚ ಮಂಡಕಾಃ ।
ಕ್ಷೀರಶಾಕಂ ಚ ದಧ್ಯನ್ನಂ ಪಿಂಡಶಾಕವಿವರ್ಜಿತಂ ॥ ೧೨೪ ॥

ಮಾಘಾದಿಕ್ರಮಶೋ ದದ್ಯಾದೇತಾನಿ ಕರಕೋಪರಿ ।
ಕುಮುದಾ ಮಾಧವೀ ಗೌರೀ ರಂಭಾ ಭದ್ರಾ ಜಯಾ ಶಿವಾ ॥ ೧೨೫ ॥

ಲಲಿತಾ ಕಮಲ್ಯಾನಂಗಾ ಮಂಗಲಾ ರತಿಲಾಲಸಾ ।
ಕ್ರಮಾನ್ಮಾಘಾದಿಮಾಸೇಷು ಪ್ರೀಯತಾಮಿತಿ ಕೀರ್ತಯೇತ್ ॥ ೧೨೬ ॥

---

ಸಕ್ಕರೆಯನ್ನೂ, ಬಿಟ್ಟುಬಿಡಬೇಕು. ವ್ರತ ಮುಗಿದ ಮೇಲೆ ತಿಂಗಳು ತಿಂಗಳಿಗೂ ಕಲಶವನ್ನೂ ಭಕ್ಷದಿಂದ ತುಂಬಿದ ಪಾತ್ರೆಯನ್ನೂ ಕೊಡಬೇಕು.

೧೨೩-೧೨೪. ಲಡ್ಡುಕೆಗಳು, ಬಿಳಿಯ ಕಡಬುಗಳು, ತಂಬಿಟ್ಟು, ಪೂರಿ, ಘಾರಿಗೆ, ತುಪ್ಪದ ಪದಾರ್ಥ, ಹಿಟ್ಟನ್ನು ತುಂಬಿರುವ ಭಕ್ಷ್ಯಗಳು, ಮಂಡಿಗೆ ಹಾಲಿನಿಂದ ಮಾಡಿದ ಪದಾರ್ಥ, ಕಾಯಿಪಲ್ಯಗಳ ಪದಾರ್ಥ, ಮೊಸರನ್ನ, ಗೆಡ್ಡೆಗೆಣಸುಗಳಿಲ್ಲದವು. ಈರೀತಿಯಾಗಿ ಮಾಘಮಾಸ ಮೊದಲು ಮಾಡಿಕೊಂಡು ಒಂಬೋ೦ಮು ತಿಂಗಳಲ್ಲಿಯೂ, ಒಂದೊಂದನ್ನು ಕ್ರಮವಾಗಿ ಪೂರ್ಣಕುಂಭದ ಮೇಲಿಟ್ಟು ಕೊಡಬೇಕು.

೧೨೫-೧೨೬. ಮಾಘದಲ್ಲಿ ಕುಮುದೆ, ಫಾಲ್ಗುಣದಲ್ಲಿ ಮಾಧವೀ, ಚೈತ್ರದಲ್ಲಿ ಗೌರೀ, ವೈಶಾಖದಲ್ಲಿ ರಂಭೆ, ಜ್ಯೇಷ್ಠದಲ್ಲಿ ಭದ್ರೇ, ಆಷಾಢದಲ್ಲಿ ಜಯೆ, ಶ್ರಾವಣದಲ್ಲಿ ಶಿವೇ, ಭಾದ್ರಪದದಲ್ಲಿ ಲಲಿತೆ, ಆಶ್ವಯುಜದಲ್ಲಿ ಕಮಲೆ, ಕಾರ್ತಿಕದಲ್ಲಿ ಅನಂಗೆ, ಮಾರ್ಗಶಿರದಲ್ಲಿ ಮಂಗಳೆ, ಪುಷ್ಯದಲ್ಲಿ ರತಿಲಾಲಸೆ, ಈರೀತಿ ಹೆಸರನ್ನು ಹೇಳಿ ಅವರಿಗೆ ಪ್ರೀತಿಯಾಗಲೆಂದು ಹೇಳುತ್ತ ಕೊಡಬೇಕು.

**ಸರ್ವತ್ರ ಪಂಚಗವ್ಯಂ ಚ ಪ್ರಾಶನಂ ಸಮುದಾಹೃತಂ ।**
**ಉಪವಾಸೀ ಭವೇನ್ನಿತ್ಯಮಶಕ್ತೌ ನಕ್ತಮಿಷ್ಯತೇ ॥ ೧೨೭ ॥**

**ಕುರ್ಯಾದೇವಮಿದಂ ನಾರೀ ರಸಕಲ್ಯಾಣಿನೀವ್ರತಂ ।**
**ಪುನರ್ಮಾಘೇ ತು ಸಂಪ್ರಾಪ್ತೇ ಶರ್ಕರಾಕರಕೋಪರಿ ॥ ೧೨೮ ॥**

**ಕೃತ್ವಾ ತು ಕಾಂಚನೀಂ ಗೌರೀಂ ಪಂಚರತ್ನಸಮನ್ವಿತಾಂ ।**
**ಸ್ವಕೀಯಾಂಗುಷ್ಠಮಾತ್ರಾಂ ಚ ಸಾಕ್ಷಸೂತ್ರಕಮಂಡಲಾಂ ॥ ೧೨೯ ॥**

**ಚತುರ್ಭುಜಾಮಿಂದುಯುತಾಂ ಸಿತನೇತ್ರಪಟಾವೃತಾಂ ।**
**ತದ್ವದ್ಗೋಮಿಥುನಂ ಶುಕ್ಲಂ ಸುವರ್ಣಸ್ಯ ಸಿತಾಂಬರಂ ॥ ೧೩೦ ॥**

**ಸವಸ್ತ್ರಭಾಜನಂ ದದ್ಯಾದ್ಭವಾನೀ ಪ್ರೀಯತಾಮಿತಿ ।**
**ಅನೇನ ವಿಧಿನಾ ಯಸ್ತು ರಸಕಲ್ಯಾಣಿನೀವ್ರತಂ ॥ ೧೩೧ ॥**

---

೧೨೭. ಪ್ರತಿ ತಿಂಗಳಲ್ಲಿಯೂ ಪಂಚಗವ್ಯವನ್ನು ಕುಡಿಯಬೇಕು, ಉಪವಾಸವಿರಬೇಕು. ಉಪವಾಸವಿರಲು ಸಾಧ್ಯವಿಲ್ಲದಿದ್ದರೆ ರಾತ್ರಿಯಲ್ಲಿ ಫಲಹಾರಮಾಡಬಹುದು.

೧೨೮-೧೨೯. ಈರೀತಿಯಾಗಿ ಹೆಂಗಸು ರಸಕಲ್ಯಾಣಿನೀವ್ರತವನ್ನು ಮಾಡಬೇಕು. ಮಾಘಮಾಸ ಬಂದೊಡನೆ ಎಂದರೆ ವರ್ಷ ಪೂರ್ತಿಯಾಗಲು ಸಕ್ಕರೆ ಕಡ್ಡಿಯ ಮೇಲೆ ಚಿನ್ನದಲ್ಲಿ ಒಂದು ಗೌರೀ ಪ್ರತಿಮೆಯನ್ನು ಮಾಡಿಸಬೇಕು. ಅದು ವ್ರತಮಾಡುವವರ ಅಂಗುಷ್ಠದ ಉದ್ದವಿರಬೇಕು. ಪಂಚರತ್ನಗಳನ್ನು ಅದಕ್ಕೆ ಹದ್ದಿರಬೇಕು. ಅಕ್ಷಸೂತ್ರ ಕಮಂಡಲಗಳನ್ನು ಕೈಂತೆ ಮಾಡಿರಬೇಕು. ನಾಲ್ಕು ತೋಳುಗಳಿರಬೇಕು. ತಲೆಯಲ್ಲಿ ಚಂದ್ರನಿರಬೇಕು. ಬಿಳಿಯ ನಾಲ್ಕು ಬಟ್ಟೆಯನ್ನು ಹೊದ್ದಿಸಿರಬೇಕು. ಇದನ್ನಿಟ್ಟು ದಾನಮಾಡಬೇಕು.

೧೩೦. ಅದೇ ರೀತಿಯಲ್ಲಿ ಬೆಳ್ಳಗಿರುವ ಹಸು, ಕರುಗಳನ್ನು ತಂದು ಅದಕ್ಕೆ ಚಿನ್ನದ ಗೊಣಸುಗಳನ್ನು ಹಾಕಿ ಬಟ್ಟೆಗಳನ್ನು ಹೊದ್ದಿಸಿ ಅದಕ್ಕೆ ಬೇಕಾದ ಪಾತ್ರೆಗಳೊಡನೆ ಭವಾನಿಗೆ ಪ್ರೀತಿಯಾಗಲೆಂದು ಹೇಳಿ ಕೊಡಬೇಕು.

೧೩೧-೧೩೨. ಯಾರು ಈರೀತಿ ರಸಕಲ್ಯಾಣಿನೀವ್ರತವನ್ನು ಮಾಡುವರೋ ಅವರು ಪಾಪಗಳಿಂದ ಮುಕ್ತರಾಗುತ್ತಾರೆ. ಹತ್ತುಸಾವಿರ ಅರ್ಬುದಗಳ ಜನ್ಮಗಳಲ್ಲಿ

ಕುರ್ಯಾಚ್ಚ ಸರ್ವಪಾಪೇಭ್ಯಸ್ತತ್ಕ್ಷಣಾದೇವ ಮುಚ್ಯತೇ ।
ಭವಾರ್ಬುದಸಹಸ್ರಂ ತು ನ ದುಃಖೀ ಜಾಯತೇ ಕ್ವಚಿತ್ ॥ ೧೩೨ ॥

ಅಗ್ನಿಷ್ಟೋಮಸಹಸ್ರೇಣ ಯತ್ಫಲಂ ತದವಾಪ್ನುಯಾತ್ ।
ನಾರೀ ವಾ ಕುರುತೇ ಯಾ ತು ಕುಮಾರೀ ವಾ ವರಾನನೇ ॥ ೧೩೩ ॥

ವಿಧವಾ ವಾ ವರಾಕೀ ವಾ ಸಾಪಿ ತತ್ಫಲಭಾಗಿನೀ ।
ಸೌಭಾಗ್ಯಾರೋಗ್ಯಸಂಪನ್ನಾ ಗೌರೀಲೋಕೇ ಮಹೀಯತೇ ॥ ೧೩೪ ॥

ಇತಿ ಪಠತಿ ಯ ಇತ್ಥಂ ಯಃ ಶೃಣೋತಿ ಪ್ರಸಂಗಾ-
ತ್ಸಕಲಕಲುಷಮುಕ್ತಃ ಪಾರ್ವತೀಲೋಕಮೇತಿ ।
ಮತಿಮಪಿ ಚ ವಿಧತ್ತೇ ಯೋ ನರಾಣಾಂ ಪ್ರಿಯಾರ್ಥಂ
ವಿಬುಧಪತಿಜನಾನಾಂ ನಾಯಕಃ ಸ್ಯಾದಮೋಘಂ ॥ ೧೩೫ ॥

ತಥೈವಾನ್ಯಾಂ ಪ್ರವಕ್ಷ್ಯಾಮಿ ತೃತೀಯಾಂ ಪಾಪನಾಶಿನೀಂ ।
ನಾಮ್ನಾ ಚ ಲೋಕೇ ವಿಖ್ಯಾತಾಮಾತ್ಮಾನಂದಕರೀಮಿಮಾಂ ॥ ೧೩೬ ॥

---

ದುಃಖವನ್ನು ಹೊಂದುವುದಿಲ್ಲ. ಸಾವಿರ ಅಗ್ನಿಷ್ಟೋಮಗಳನ್ನು ಮಾಡಿದರೆ ಬರುವ ಫಲವು ಆತನಿಗೆ ಬರುತ್ತದೆ.

೧೩೩-೧೩೪. ಹೆಂಗಸು, ಹುಡುಗಿ, ವಿಧವೆ, ಬಡವೆ, ಯಾರು ಮಾಡಿದರೂ ಆ ಫಲವನ್ನು ಹೊಂದುತ್ತಾರೆ. ಸೌಭಾಗ್ಯ, ಆರೋಗ್ಯದಿಂದ ಕೂಡಿ ಗೌರೀಲೋಕದಲ್ಲಿ ಸುಖಿಸುತ್ತಾರೆ.

೧೩೫. ಇದನ್ನು ಓದಿದವನೂ, ಕೇಳಿದವನೂ, ಇದನ್ನು ಮಾಡಲು ಪ್ರೇರಿಸಿದವನೂ, ಪಾಪವನ್ನು ಕಳೆದುಕೊಂಡು ಪಾರ್ವತೀಲೋಕವನ್ನು ಹೊಂದಿ ದೇವತೆಗಳಿಗೆ ಉತ್ತಮ ನಾಯಕರಾಗುತ್ತಾರೆ.

೧೩೬. ಮತ್ತೊಂದು ಪಾಪನಾಶಕವಾದ ತದಿಗೆಯನ್ನು ಹೇಳುತ್ತೇನೆ. ಅದರ ಹೆಸರು ಆತ್ಮಾನಂದಕರೀ ಎಂದು ಲೋಕದಲ್ಲಿ ಪ್ರಸಿದ್ಧವಾಗಿದೆ.

ಯದಾ ಶುಕ್ಲತೃತೀಯಾಯಾಮಷಾಢಾ ಚ ಭವೇತ್ಕ್ವಚಿತ್ ।
ರೋಹಿಣೀ ಚಾಥ ತು ಮಘಾ ಹಸ್ತೋ ಮೂಲಮಥಾಪಿ ವಾ ॥ ೧೩೭ ॥

ದರ್ಭಗಂಧೋದಕೈಃ ಸ್ನಾನಂ ತದಾ ಸಮ್ಯಕ್ಸಮಾಚರೇತ್ ।
ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ॥ ೧೩೮ ॥

ಭವಾನೀಮರ್ಚಯೇದ್ಭಕ್ತ್ಯಾ ಶುಕ್ಲಪುಷ್ಪೈಃ ಸುಗಂಧಿಭಿಃ ।
ಮಹಾದೇವಂ ಚ ಸಕಲಮುಪವಿಷ್ಟಂ ಮಹಾಸನೇ ॥ ೧೩೯ ॥

ವಾಸುದೇವ್ಯೈ ನಮಃ ಪಾದೌ ಶಂಕರಾಯ ನಮೋ ಹರೇಃ ।
ಜಂಘೇ ಶೋಕವಿನಾಶಿನ್ಯೈ ಆನಂದಾಯ ನಮಃ ಪ್ರಭೋಃ ॥ ೧೪೦ ॥

ರಂಭಾಯೈ ಪೂಜಯೇದೂರೂ ಶಿವಾಯ ಚ ಪಿನಾಕಿನಃ ।
ಆನಂದಿನ್ಯೈ ಕಟಿಂ ದೇವ್ಯಾಃ ಶೂಲಿನಃ ಶೂಲಪಾಣಯೇ ॥ ೧೪೧ ॥

ಮಾಧವ್ಯೈ ಚ ತಥಾ ನಾಭಿಮಥ ಶಂಭೋರ್ಭವಾಯ ವೈ ।
ಸ್ತನೌ ಚಾನಂತಕಾರಿಣ್ಯೈ ಶಂಕರಸ್ಯೇಂದುಧಾರಿಣೇ ॥ ೧೪೨ ॥

---

೧೩೭. ಆಷಾಢ ಶುದ್ಧ ತದಿಗೆಯ ದಿನ ರೋಹಿಣಿ, ಮಖೆ, ಹಸ್ತೆ, ಮೂಲ ಇವುಗಳಲ್ಲಿ ಯಾವುದಾದರೂ ಒಂದು ನಕ್ಷತ್ರವು ಬಂದಿದ್ದರೆ ಆಗ ದರ್ಭೆ ಗಂಧಗಳನ್ನು ಹಾಕಿ ನೀರಿನಲ್ಲಿ ಸ್ನಾನಮಾಡಬೇಕು.

೧೩೮–೧೩೯. ಬಿಳಿಯ ಹೂವನ್ನು ಮುಡಿದು, ಬಿಳಿಯ ಗಂಧವನ್ನು ಹಚ್ಚಿಕೊಂಡು ಇರಬೇಕು. ಆಗ ಭವಾನಿಯನ್ನು ಭಕ್ತಿಯಿಂದ ವಾಸನೆಯಿರುವ ಬಿಳಿಯ ಹೂಗಳಿಂದ ಪೂಜಿಸಬೇಕು. ಪಕ್ಕದಲ್ಲಿ ಮಹಾದೇವನನ್ನು ಕೂರಿಸಬೇಕು.

೧೪೦—೧೪೭. ವಾಸುದೇವಿಗೆ ನಮಸ್ಕಾರವು, ಶಂಕರನಿಗೆ ನಮಸ್ಕಾರವು ಎಂದು ಪಾದಗಳನ್ನೂ, ಶೋಕವಿನಾಶನಿಗೆ ನಮಸ್ಕಾರವು, ಆನಂದನಿಗೆ ನಮಸ್ಕಾರವು ಎಂದು ಮಂಡಿಗಳನ್ನೂ, ರಂಭೆಗೆ ನಮಸ್ಕಾರವು, ಪಿನಾಕಧಾರಿಯಾದ ಶಿವನಿಗೂ ನಮಸ್ಕಾರವೆಂದು ತೊಡೆಯನ್ನೂ, ಆನಂದಿನಿಗೂ, ಶೂಲಪಾಣಿಗೂ ನಮಸ್ಕಾರವು ಎಂದು ಸೊಂಟವನ್ನೂ, ಮಾಧವಿಗೂ, ಭವನಿಗೂ, ನಮಸ್ಕಾರವು ಎಂದು ಹೊಕ್ಕ

**ಉತ್ಕಂಠಿನ್ಯೈ ನಮಃ ಕಂಠಂ ನೀಲಕಂಠಾಯ ವೈ ಹರೇಃ ।**
**ಕರಾವುತ್ಪಲಧಾರಿಣ್ಯೈ ರುದ್ರಾಯ ಜಗತಾಂ ಪತೇಃ ॥ ೧೬೩ ॥**

**ಬಾಹೂ ಚ ಪರಿರಂಭಿಣ್ಯೈ ನೃತ್ಯಪ್ರೀತಾಯ ವೈ ಹರೇಃ ।**
**ದೇವ್ಯಾ ಮುಖಂ ವಿಲಾಸಿನ್ಯೈ ವೃಷಭಾಯ ಪುನರ್ವಿಭೋಃ ॥ ೧೬೪ ॥**

**ಸ್ಮಿತಂ ಚ ಸ್ಮರಣೀಯಾಯೈ ವಿಶ್ವವಕ್ತ್ರಾಯ ವೈ ವಿಭೋಃ ।**
**ನೇತ್ರೇ ಮಂದರವಾಸಿನ್ಯೈ ವಿಶ್ವಧಾಮ್ನೇ ತ್ರಿಶೂಲಿನೇ ॥ ೧೬೫ ॥**

**ಭ್ರುವೌ ನೃತ್ಯಪ್ರಿಯಾಯೈ ಚ ಶಂಭೋರ್ವೈ ಪಾಶಶೂಲಿನೆ ।**
**ದೇವ್ಯಾ ಲಲಾಟಮಿಂದ್ರಾಣ್ಯೈ ವೃಷವಾಹಾಯ ವೈ ವಿಭೋಃ ॥ ೧೬೬ ॥**

**ಸ್ವಾಹಾಯೈ ಮುಕುಟಂ ದೇವ್ಯಾ ವಿಭೋರ್ಗಂಗಾಧರಾಯ ವೈ ।**
**ವಿಶ್ವಕಾಯೌ ವಿಶ್ವಮುಖೌ ವಿಶ್ವಪಾದಕರೌ ಶಿವೌ ॥ ೧೬೭ ॥**

**ಪ್ರಸನ್ನವದನೌ ವಂದೇ ಪಾರ್ವತೀಪರಮೇಶ್ವರೌ ।**
**ಏವಂ ಸಂಪೂಜ್ಯ ವಿಧಿವದಗ್ರತಃ ಶಿವಯೋಃ ಪುನಃ ॥ ೧೬೮ ॥**

---

ಳನ್ನೂ, ಅನಂತವನ್ನು ಕೊಡತಕ್ಕವಳಿಗೂ, ಇಂದುಧಾರಿಗೂ ನಮಸ್ಕಾರವೆಂದು ಸ್ತನಗಳನ್ನೂ, ಉತ್ಕಂಠಿನಿಗೂ, ನೀಲಕಂಠನಿಗೂ ನಮಸ್ಕಾರವೆಂದು ಕಂಠಪ್ರದೇಶವನ್ನೂ, ಉತ್ಪಲಧಾರಿಣಿಗೂ, ಜಗತ್ಪತಿಯಾದ ರುದ್ರನಿಗೂ ನಮಸ್ಕಾರವೆಂದು ಕೈಗಳನ್ನೂ, ಪರಿರಂಭಿಣಿಗೂ, ನೃತ್ಯಪ್ರಿಯನಿಗೂ ನಮಸ್ಕಾರವೆಂದು ತೋಳುಗಳನ್ನೂ, ವಿಲಾಸಿನಿಗೂ, ವೃಷಭನಿಗೂ ನಮಸ್ಕಾರವೆಂದು ಮುಖವನ್ನೂ, ಸ್ಮರಣೀಯಳಿಗೂ, ವಿಶ್ವವಕ್ತ್ರನಿಗೂ ನಮಸ್ಕಾರವೆಂದು ತುಟಿಯನ್ನೂ, ಮಂದಾರವಾಸಿನಿಗೂ, ವಿಶ್ವಧಾಮನಾದ ತ್ರಿಶೂಲನಿಗೂ, ನಮಸ್ಕಾರವೆಂದು ಕಣ್ಣುಗಳನ್ನೂ, ನೃತ್ಯಪ್ರಿಯೆಗೂ, ಪಾಶಶೂಲಗಳನ್ನು ಹಿಡಿದಿರುವ ಶಂಭುವಿಗೂ ನಮಸ್ಕಾರವು ಎಂದು ಹುಬ್ಬುಗಳನ್ನೂ, ಇಂದ್ರಾಣಿಗೂ, ವೃಷವಾಹನನಿಗೂ ನಮಸ್ಕಾರವೆಂದು ಹಣೆಯನ್ನೂ, ಸ್ವಾಹೆಗೂ, ಗಂಗಾಧರನಿಗೂ ನಮಸ್ಕಾರವೆಂದು ಕಿರೀಟವನ್ನೂ ಪೂಜಿಸಬೇಕು. ವಿಶ್ವಕಾಯರು, ವಿಶ್ವಮುಖರು, ವಿಶ್ವಪಾದರು, ವಿಶ್ವಕರರು, ಶಿವರು, ಪ್ರಸನ್ನವದನರು ಇಂತಹ ಪಾರ್ವತೀಪರಮೇಶ್ವರರನ್ನು ನಮಸ್ಕರಿಸುತ್ತೇನೆ.

೧೬೮-೧೬೯. ಈ ರೀತಿಯಾಗಿ ಪೂಜೆ ಮಾಡಿ ಪಾರ್ವತೀಪರಮೇಶ್ವರರ

ಪದ್ಮೋತ್ಪಲಾನಿ ರಜಸಾ ನಾನಾವರ್ಣೇನ ಕಾರಯೇತ್ ।
ಶಂಖಚಕ್ರೇ ಸಕಟಿಕೇ ಸ್ವಸ್ತಿಕಂ ಶುಭಕಾರಕಂ ॥ ೧೪೯ ॥

ಯಾವಂತಃ ಪಾಂಸವಸ್ತತ್ರ ರಜಸಃ ಪತಿತಾ ಭುವಿ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥ ೧೫೦ ॥

ಚತ್ವಾರಿ ಘೃತಪಾತ್ರಾಣಿ ಸಹಿರಣ್ಯಾನಿ ಶಕ್ತಿತಃ ।
ದತ್ವಾ ದ್ವಿಜಾಯ ಕರಕಮುದಕಾನ್ನಸಮನ್ವಿತಂ ॥ ೧೫೧ ॥

ಪ್ರತಿಪಕ್ಷಂ ಚತುರ್ಮಾಸಂ ಯಾವದೇತಾನ್ನಿವೇದಯೇತ್ ।
ತತಸ್ತು ಚತುರೋ ಮಾಸಾನ್ಪೂರ್ವವತ್ಕರಕೋಪರಿ ॥ ೧೫೨ ॥

ಚತ್ವಾರಿ ಘೃತಪಾತ್ರಾಣಿ ತಿಲಪಾತ್ರಾಣ್ಯತಃ ಪರಂ ।
ಗಂಧೋದಕಂ ಪುಷ್ಪವಾರಿ ಚಂದನಂ ಕುಂಕುಮೋದಕಂ ॥ ೧೫೩ ॥

ಅಪಕ್ವದಧಿ ದುಗ್ಧಂ ಚ ಗೋಶೃಂಗೋದಕಮೇವ ಚ ।
ಅಬ್ಜೋದಕಂ ತಥಾ ವಾರಿ ಕುಷ್ಠಚೂರ್ಣಾನ್ವಿತಂ ಪುನಃ ॥ ೧೫೪ ॥

---

ಎದುರಿನಲ್ಲಿ ನಾನಾಬಣ್ಣದ ಹಿಟ್ಟುಗಳಿಂದ ಪದ್ಮ, ಕನ್ನೈದಿಲೆ, ಶಂಖ, ಚಕ್ರ, ಕೈಬಳೆ, ಸ್ವಸ್ತಿಕಪದ್ಮಗಳನ್ನು ಬರೆಯಬೇಕು.

೧೫೦. ಆ ಬರೆಯುವಿಕೆಯಲ್ಲಿ ಎಷ್ಟು ರೂಲುಗಳು (ರೇಣುಗಳು) ಭೂಮಿಯ ಮೇಲೆ ಬೀಳುತ್ತವೆಯೋ, ಅಷ್ಟು ಸಾವಿರ ವರ್ಷಗಳವರೆಗೂ ಶಿವಲೋಕದಲ್ಲಿ ಸುಖಿಸುತ್ತಾರೆ.

೧೫೧. ನಾಲ್ಕು ತುಪ್ಪದ ಪಾತ್ರೆಗಳನ್ನು, ದಕ್ಷಿಣೆಗಳೊಡನೆ ಬ್ರಾಹ್ಮಣನಿಗೆ ಕೊಡಬೇಕು. ಆ ಕಲಶವನ್ನು, ಅನ್ನದ ಪಾತ್ರೆ, ನೀರಿನ ಪಾತ್ರೆಗಳನ್ನೂ ಕೊಡಬೇಕು. ಈ ನಾಲ್ಕು ತಿಂಗಳೂ ಪ್ರತಿ ಪಕ್ಷದಲ್ಲಿಯೂ ಹೀಗೆ ಮಾಡಬೇಕು.

೧೫೨—೧೫೫. ಅನಂತರ ನಾಲ್ಕು ತಿಂಗಳು ಆ ಕಲಶದ ಜೊತೆಯಲ್ಲಿ ನಾಲ್ಕು ತುಪ್ಪದ ಪಾತ್ರೆಗಳನ್ನು, ಅನಂತರ ನಾಲ್ಕು ತಿಂಗಳು ಎಳ್ಳಿನ ನಾಲ್ಕು ಪಾತ್ರೆಗಳನ್ನು ಕೊಡಬೇಕು. ಗಂಧೋದಕ, ಪನ್ನೀರು, ಚಂದನೋದಕ, ಕುಂಕುಮೋದಕ, ಸರಿಯಾಗಿ ಪಕ್ವವಾದ ಮೊಸರು, ಹಾಲು, ಜಿಂಕೆಯ ಕೊಂಬನ್ನು ತೇದ

**ಉಶೀರಸಲಿಲಂ ತದ್ವದ್ಯವಚೂರ್ಣೋದಕಂ ತಥಾ ।**
**ತಿಲೋದಕಂ ಚ ಸಂಪ್ರಾಶ್ಯ ಸ್ವಪೇನ್ಮಾರ್ಗಶಿರಾದಿಷು ॥ ೧೫೫ ॥**

**ಮಾಸೇಷು ಪಕ್ಷದ್ವಿತಯಂ ಪ್ರಾಶನಂ ಸಮುದಾಹೃತಂ ।**
**ಸರ್ವತ್ರ ಶುಕ್ಲಪುಷ್ಪಾಣಿ ಪ್ರಶಸ್ತಾನಿ ಸದಾಽರ್ಚನೇ ॥ ೧೫೬ ॥**

**ದಾನಕಾಲೇ ಚ ಸರ್ವತ್ರ ಮಂತ್ರಮೇತಮುದೀರಯೇತ್ ।**
**ಗೌರೀ ಮೇ ಪ್ರೀಯತಾಂ ನಿತ್ಯಮಘನಾಶಾಯ ಮಂಗಲಾ ॥ ೧೫೭ ॥**

**ಸೌಭಾಗ್ಯಾಯಾಸ್ತು ಲಲಿತಾ ಭವಾನೀ ಸರ್ವಸಿದ್ಧಯೇ ।**
**ಸಂವತ್ಸರಾಂತೇ ಲವಣಂ ಗುಡಕಂ ತು ವಿಸರ್ಜಯೇತ್ ॥ ೧೫೮ ॥**

**ಚಂದನಂ ನೇತ್ರಪದ್ಮಂ ಚ ಸಹಿರಣ್ಯಾಂಬುಜೇನ ಚ ।**
**ಉಮಾಮಹೇಶ್ವರಂ ಹೈಮಂ ತದ್ವದಿಕ್ಷುಫಲೈರ್ಯುತಂ ॥ ೧೫೯ ॥**

---

ನೀರು, ಕಮಲದ ನೀರು, ಲಾಮಂಚದ ನೀರು, ಯವದ ಹಿಟ್ಟನ್ನು ಹಾಕಿದ ನೀರು, ಎಳ್ಳನ್ನು ನೆನಸಿದ ನೀರು ಇದನ್ನು ಕುಡಿದು ಮಾರ್ಗಶಿರ ಮುಂತಾದವುಗಳಲ್ಲಿ ಮಲಗಬೇಕು.

೧೫೬. ತಿಂಗಳಲ್ಲಿ ಎರಡು ಪಕ್ಷಗಳೂ ಊಟಮಾಡಬಹುದೆಂದು ಹೇಳಲ್ಪಟ್ಟಿದೆ. ಇವುಗಳಲ್ಲೆಲ್ಲಾ ಪೂಜೆಗೆ ಬಿಳಿಯ ಹೂಗಳೇ ಪ್ರಶಸ್ತಗಳೆಂದು ಹೇಳಲ್ಪಟ್ಟಿದೆ.

೧೫೭-೧೫೮. ದಾನ ಕೊಡುವಾಗಲೆಲ್ಲಾ ಗೌರಿಯು ಪ್ರೀತಿಹೊಂದಲಿ. ನನ್ನ ಪಾಪ ನಾಶವಾಗಲಿ. ಸೌಭಾಗ್ಯಲಲಿತೆಯೂ, ಭವಾನಿಯೂ, ಸರ್ವಸಿದ್ಧಿಯನ್ನು ಕೊಡಲಿ ಎಂದು ಹೇಳಬೇಕು. ವರ್ಷದ ಕೊನೆಯಲ್ಲಿ ಒಂದು ಪಕ್ಷವು ಉಪ್ಪನ್ನೂ, ಬೆಲ್ಲವನ್ನೂ ಬಿಡಬೇಕು.

೧೫೯-೧೬೦. ಚಂದನವನ್ನು, ತೂತುಮಾಡಿರುವ ಪದ್ಮದ ತಟ್ಟೆಯನ್ನೂ, ಚಿನ್ನದ ಕಮಲವನ್ನೂ, ಚಿನ್ನದ ಉಮಾಮಹೇಶ್ವರ ಮೂರ್ತಿಯನ್ನೂ, ಕಬ್ಬು ಹಣ್ಣುಗಳನ್ನೂ, ಮಗ್ಗುಲು ಹಾಸಿಗೆಯುಳ್ಳ ದೊಡ್ಡ ಹಾಸಿಗೆಯನ್ನೂ, ದಂಪತಿಗಳನ್ನು

ಸಾಸ್ತರಾಂ ಚ ವರಾಂ ಶಯ್ಯಾಂ ಸುನಿಸ್ತೀರ್ಣಾಂ ನಿವೇದಯೇತ್ ।
ಸಪತ್ನೀಕಾಯ ವಿಪ್ರಾಯ ಗೌರೀ ಮೇ ಪ್ರೀಯತಾಮಿತಿ ॥ ೧೬೦ ॥

ಆತ್ಮಾನಂದಕರೀಂ ನಾವ್ಯಾ ಪ್ರಾಪ್ನೋತಿ ನವಸಂಪದಂ ।
ಆಯುರಾರೋಗ್ಯಸಂತತ್ಯಾ ನ ಕ್ವಚಿಚ್ಛೋಕಮಾಪ್ನುಯಾತ್ ॥ ೧೬೧ ॥

ನಾರೀ ವಾ ಕುರುತೇ ಯಾ ತು ಕುಮಾರೀ ವಿಧವಾಥ ವಾ ।
ಸಾಽಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ॥ ೧೬೨ ॥

ಪ್ರತಿಪಕ್ಷಮುಪೋಷ್ಯೈವ ಮಂತ್ರಾರ್ಚನವಿಧಾನತಃ ।
ರುದ್ರಾಣೀಲೋಕಮಾಪ್ನೋತಿ ಪುನರಾವೃತ್ತಿದುರ್ಲಭಂ ॥ ೧೬೩ ॥

ಯ ಇಮಾಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಽಪಿ ಭಕ್ತಿತಃ ।
ಶಕ್ರಲೋಕಂ ಸ ಗತ್ವಾ ತು ಪೂಜ್ಯತೇ ಕಲ್ಪಸಂಸ್ಥಿತಃ ॥ ೧೬೪ ॥

---

ಕರೆದು ಪೂಜಿಸಿ ಆ ಬ್ರಾಹ್ಮಣರಿಗೆ ಗೌರಿಯು ಸುಪ್ರೀತಳಾಗಲಿ ಎಂದು ಹೇಳಿ ಕೊಡಬೇಕು.

೧೬೧. ಆತ್ಮನನ್ನು ಆನಂದ ಮಾಡುವ ಹೊಸ ಸಂಪತ್ತನ್ನು ಹೊಂದುವುದಲ್ಲದೆ ಆಯುರಾರೋಗ್ಯ ಸಂಪತ್ತುಗಳನ್ನು ಹೊಂದಿ ಶೋಕಭಾಗಿನಿಯಾಗುವುದೇ ಇಲ್ಲ.

೧೬೨. ಕುಮಾರಿಯಾಗಲಿ, ವಿಧವೆಯಾಗಲಿ, ವಯಸ್ಕರಾಗಲಿ ಯಾವಳು ಮಾಡಿದರೂ ಆಕೆ ಆ ಫಲವನ್ನು ಹೊಂದಿ, ದೇವಿಯ ಅನುಗ್ರಹದಿಂದ ಕೂಡಿರುವಳಾಗುತ್ತಾಳೆ.

೨೬೩. ಪ್ರತಿ ಪಕ್ಷದ ಆ ತೃತೀಯೆಯ ದಿನ ಉಪವಾಸವಿದ್ದು ವಿಧಿವತ್ತಾಗಿ ಮಂತ್ರದಿಂದ ಅರ್ಚಿಸಿದರೆ ರುದ್ರಾಣಿಯ ಲೋಕವನ್ನು ಹೊಂದುತ್ತಾಳೆ ಮತ್ತು ಹಿಂತಿರುಗುವುದೇಯಿಲ್ಲ.

೧೬೪. ಇದನ್ನು ಓದಿದವನೂ, ಕೇಳಿದವನೂ, ಇಂದ್ರಲೋಕವನ್ನು ಹೊಂದಿ ಒಂದು ಕಲ್ಪದವರೆಗೂ ಇರುತ್ತಾನೆ, ಪೂಜಿಸಲ್ಪಡುತ್ತಾನೆ.

॥ ಶಂಕರ ಉವಾಚ ॥

ಏವಂವಿಧಾ ಯಾ ಭವತಿ ನಾರೀ ವ್ರತಪರಾಯಣಾ ।
ಸಾವಿತ್ರೀ ಸಾ ವರಾಕೀ ಚ ತಸ್ಯಾಃ ಶಾಪಸ್ತು ಕೀದೃಶಃ ॥ ೧೬೫ ॥

ನ ಕಾಚಿದ್ಗಣನಾ ಚಾಸ್ತಿ ಯತಸ್ತ್ರೈಲೋಕ್ಯಸುಂದರೀ ।
ಸಾ ಪೂರ್ವಸ್ಯಾಪಿ ವಂದ್ಯಾ ಚ ಲಕ್ಷ್ಮೀರ್ವಿಷ್ಣುಪರಿಗ್ರಹಾತ್ ॥ ೧೬೬ ॥

ಮಯಾ ಪೂರ್ವಂ ತವಾರ್ಥಾಯ ದಕ್ಷಯಜ್ಞಸ್ತು ನಾಶಿತಃ ।
ಲಕ್ಷ್ಮ್ಯರ್ಥಂ ವಿಷ್ಣುನಾ ವಾಽಪಿ ಕ್ಷೀರಾಬ್ಧಿರ್ಮಥಿತಸ್ತಥಾ ॥ ೧೬೭ ॥

ಆಜ್ಞಾಕರೌ ಭವತ್ಯೋಶ್ಚ ಮಾ ಕುರುಷ್ವ ಭಯಂ ಕ್ವಚಿತ್ ।
ಸಾವಿತ್ರ್ಯಾ ಮಾನನಾ ಕಾರ್ಯಾ ಕುಪಿತಾಯಾಃ ಪ್ರಸಾದನಂ ॥ ೧೬೮ ॥

ಮಯಾ ಚ ವಿಷ್ಣುನಾ ಚೈವ ಬ್ರಹ್ಮಣಾ ಮಾನಮೀಪ್ಸುಭಿಃ ।
ಗಮಿಷ್ಯೇ ಬ್ರಹ್ಮಸದನಂ ತ್ವಂ ಚ ತಿಷ್ಠ ವರಾನನೇ ॥ ೧೬೯ ॥

---

೧೬೫. ಶಂಕರನು ಹೇಳಿದನು :—ಈರೀತಿಯಾದ ವ್ರತವನ್ನು ಯಾವಳು ಮಾಡುತ್ತಿರುವಳೋ ಅವಳಿಗೆ ಆ ಸಾವಿತ್ರಿಯು ಬಡಪಾಪೆಯು ಎಷ್ಟರವಳು ? ಅವಳ ಶಾಪತಾನೇ ಎಷ್ಟರದು ?

೧೬೬. ಆ ಲಕ್ಷ್ಮಿಯು ಮೂರು ಲೋಕಕ್ಕೂ ಸುಂದರಿಯಾದುವರಿಂದ ಈ ಶಾಪವು ಗಣನೆಯೇ ಇಲ್ಲ. ಅಲ್ಲದೆ ಆಕೆಯು ವಿಷ್ಣುವನ್ನು ಮದುವೆಯಾಗಿರುವುದರಿಂದ ದೊಡ್ಡವರಿಗೆಲ್ಲರಿಗೂ ಪೂಜ್ಯಳಾಗಿದ್ದಾಳೆ.

೧೬೭. ನಾನು ನಿನಗೋಸ್ಕರ ದಕ್ಷಯಜ್ಞವನ್ನು ಕೂಡ ನಾಶಮಾಡಿದೆ. ವಿಷ್ಣುವು ಲಕ್ಷ್ಮಿಗೋಸ್ಕರ ಕ್ಷೀರಸಮುದ್ರವನ್ನು ಕೂಡ ಕಡೆದನು. ನಾವಿಬ್ಬರೂ ನಿಮ್ಮಗಳ ಆಜ್ಞೆಯನ್ನು ಪಾಲಿಸುವರೆಂದು ತಿಳಿ. ಭಯವನ್ನು ಸ್ವಲ್ಪವೂ ಹೊಂದಬೇಡ.

೧೬೮-೧೬೯. ನಾನು ಮತ್ತು ವಿಷ್ಣುವೂ ಬ್ರಹ್ಮನಿಂದ ಗೌರವವನ್ನು ಅಪೇಕ್ಷಿಸುತ್ತೇವೆ. ಮತ್ತು ಇನ್ನೂ ಇತರರೂ ಅಪೇಕ್ಷಿಸುತ್ತಾರೆ. ಅವರೆಲ್ಲರೂ ಕೋಪಗೊಂಡಿರುವ ಸಾವಿತ್ರಿಯನ್ನು ಸಮಾಧಾನಪಡಿಸಬೇಕು. ಆದ್ದರಿಂದ ಬ್ರಹ್ಮನ ಮನೆಗೆ ಹೋಗುತ್ತೇನೆ. ನೀನು ಇಲ್ಲಿಯೇ ಇರು.

ಏವಮುಕ್ತ್ವಾ ಗತೋ ರುದ್ರೋ ಗೌರೀ ತತ್ರ ವ್ಯವಸ್ಥಿತಾ ।
ಕೃತಂ ಯುಗಂ ಸಮಗ್ರಂ ತು ಯಜ್ಞೇ ತಸ್ಮಿನ್ಪಿತಾಶನಃ ॥ ೧೭೦ ॥

ವಹನ್ಹವ್ಯಂ ತು ದೇವಾನಾಂ ಪ್ರೀಣಯಾಸೋ ಜಗತ್ತ್ರಯಂ ।
ಭೋಜಯನ್ ದ್ವಿಜಮುಖ್ಯಾಂಶ್ಚ ದೈವತೇಭ್ಯಃ ಸ್ವಧಾಮೃತಂ ॥ ೧೭೧ ॥

ಗಂಧಂ ಗಂಧರ್ವಮುಖ್ಯೇಷು ಭೋಗಾನ್ವಿದ್ಯಾಧರೇ ಗಣೇ ।
ಕಾಮಾವಾಪ್ತಿಂ ಮನುಷ್ಯೇಷು ಸರ್ವಮೇವ ದದೌ ಪ್ರಭುಃ ॥ ೧೭೨ ॥

ರುದ್ರೇಣೋಕ್ತಸ್ತದಾ ವಿಷ್ಣುರ್ಧರ್ಮನಿಷ್ಠಾಂ ಪ್ರಕೀರ್ತಯ ।
ಗೌರೀಧರ್ಮಾನ್ಸರಸ್ವತ್ಯಾ ವ್ರತಂ ಯತ್ಪರಿಕೀರ್ತಿತಂ ।
ಇತ್ಯೇವಮುಕ್ತೇ ರುದ್ರಂ ತು ವಿಷ್ಣುಃ ಪ್ರೋವಾಚ ಸಾದರಂ ॥ ೧೭೩ ॥

॥ ವಿಷ್ಣುರುವಾಚ ॥

ನಾಹಂ ಧರ್ಮಂ ಖ್ಯಾಪಯಿಷ್ಯೇ ಸ್ವಕೀಯಂ ಶಂಕರಾಧುನಾ ।
ಭವಾನಾಖ್ಯಾತು ಮಾಹಾತ್ಮ್ಯಂ ಮದೀಯಂ ಸುರಸತ್ತಮ ॥ ೧೭೪ ॥

---

೧೭೦—೧೭೨. ಹೀಗೆಂದು ಹೇಳಿ ರುದ್ರನು ಬ್ರಹ್ಮನಲ್ಲಿಗೆ ಹೋದನು. ಗೌರಿಯು ಅಲ್ಲಿಯೇ ನಿಂತಳು. ಬ್ರಹ್ಮನು ಸಾವಿರ ಯುಗಗಳವರೆಗೂ ಯಜ್ಞವನ್ನು ಮಾಡಿದನು. ಆ ಯಜ್ಞದಲ್ಲಿ ಅಗ್ನಿಯು ದೇವತೆಗಳಿಗೆ ಹವ್ಯವನ್ನು ಹೊತ್ತು ಕೊಟ್ಟು ಪ್ರೀತಿಪಡಿಸುತ್ತಿದ್ದನು. ಬ್ರಾಹ್ಮಣರೆಲ್ಲರೂ ಊಟಮಾಡಿ ದಣಿಯುತ್ತಿದ್ದರು. ಗಂಧರ್ವರು ಗಂಧವನ್ನು ಕುಡಿದು ಸಂತೋಷಿಸುತ್ತಿದ್ದರು. ವಿದ್ಯಾಧರರಿಗೆಲ್ಲಾ ಭೋಗವನ್ನು ಕೊಡುತ್ತಿದ್ದನು. ಮನುಷ್ಯರು ಇಷ್ಟಾರ್ಥಗಳನ್ನು ಹೊಂದುತ್ತಿದ್ದರು. ಹೀಗೇ ಬ್ರಹ್ಮನು ಕೇಳಿದುದನ್ನು ಕೊಡುತ್ತಿದ್ದನು.

೧೭೩. ಆಗ ವಿಷ್ಣುವನ್ನು ಕುರಿತು ರುದ್ರನು ಎಲೈ ವಿಷ್ಣುವೇ, ಗೌರೀ ಧರ್ಮವನ್ನೂ, ಸರಸ್ವತಿ ವ್ರತವನ್ನೂ ಹೇಳು. ಎನ್ನಲು, ಆಗ ವಿಷ್ಣುವು ರುದ್ರನನ್ನು ಕುರಿತು ಪ್ರೀತಿಯಿಂದ ಇಂತೆಂದನು.

೧೭೪. ವಿಷ್ಣುವು ಹೇಳಿದನು :—ಎಲೈ ಶಂಕರನೇ, ನಾನು ಧರ್ಮವನ್ನು ಈಗ ಪ್ರಸಿದ್ಧಿಪಡಿಸುವುದಿಲ್ಲ. ನನ್ನ ಧರ್ಮಗಳನ್ನು ನೀನೇ ಹೇಳು ಎಂದನು.

ತ್ವಯಾ ವೈ ಕಥಿತಂ ಪೂರ್ವಂ ಕೃತೇ ವೈ ಪಾಪಸಂಕ್ಷಯಃ ।
ಭವಿಷ್ಯತಿ ನ ಸಂದೇಹೋ ಭವಾನ್ಪೂತೋ ಭವಿಷ್ಯತಿ ॥ ೧೭೫ ॥

॥ ಭೀಷ್ಮ ಉವಾಚ ॥

ಮಧುರಾ ಗೀರ್ಭವೇತ್ಕೇನ ವ್ರತೇನ ಮುನಿಸತ್ತಮ ।
ತಥೈವ ಜನಸೌಭಾಗ್ಯಮತಿವಿದ್ಯಾಸುಕೌಶಲಂ ॥ ೧೭೬ ॥

ಅಭೇದ್ಯಂ ಚಾಪಿ ದಂಪತ್ಯೋಸ್ತಥಾ ಬಂಧುಜನೇನ ಚ ।
ಆಯುಶ್ಚ ವಿಪುಲಂ ಪುಂಸಾಂ ತನ್ಮೇ ಕಥಯ ಸತ್ತಮ ॥ ೧೭೭ ॥

॥ ಪುಲಸ್ತ್ಯ ಉವಾಚ ॥

ಸಮ್ಯಕ್ಪೃಷ್ಟಂ ತ್ವಯಾ ರಾಜನ್ ಶೃಣು ಸಾರಸ್ವತಂ ವ್ರತಂ ।
ಯಸ್ಯ ಸಂಕೀರ್ತನಾದೇವ ದೇವೀ ತುಷ್ಯೇತ್ಸರಸ್ವತೀ ॥ ೧೭೮ ॥

---

೧೭೫. ನೀನು ಕೃತಯುಗದಲ್ಲಿ ಪಾಪನಾಶಕವಾದ ಧರ್ಮವನ್ನು ಹೇಳಿದೆ. ಈಗಲೂ ನೀನೇ ಹೇಳು, ಹೇಳಿದರೆ ಪಾಪವು ನಾಶವಾಗುತ್ತದೆ. ನೀನು ಪವಿತ್ರನಾಗುತ್ತೀಯೆ, ಸಂದೇಹವಿಲ್ಲ.

೧೭೬. ಭೀಷ್ಮನು ಹೇಳಿದನು:—ಎಲೈ ಋಷಿಶ್ರೇಷ್ಠನೇ, ಯಾವ ವ್ರತದಿಂದ ಮಧುರವಾದ ಮಾತು ಉಂಟಾಗುತ್ತದೆ? ಅದೇರೀತಿ ಜನಗಳಿಗೆ ಸೌಭಾಗ್ಯವೂ ವಿದ್ಯೆಗಳಲ್ಲಿ ಕುಶಲತೆಯು ಬರುತ್ತದೆ, ಹೇಳು.

೧೭೭. ದಂಪತಿಗಳಿಗೂ ಬಂಧು ಜನಗಳಿಗೂ ಪ್ರೀತಿಯು ಯಾವುದರಿಂದ ಹೆಚ್ಚುತ್ತದೆ? ಹೆಚ್ಚು ಆಯಸ್ಸು ಯಾವುದರಿಂದ ಬರುತ್ತದೆ? ಅದನ್ನು ದಯವಿಟ್ಟು ಹೇಳು.

೧೭೮. ಪುಲಸ್ತ್ಯನು ಹೇಳಿದನು:—ಎಲೈ ರಾಜನೇ, ನೀನು ಸರಿಯಾಗಿ ಕೇಳಿದೆ. ಸರಸ್ವತಿ ವ್ರತವನ್ನು ಕೇಳು. ಅದನ್ನು ಹೇಳುವುದರಿಂದಲೇ ಸರಸ್ವತಿಯು ಸಂತೋಷಗೊಳ್ಳುತ್ತಾಳೆ.

ಯಾವದ್ಭಕ್ತಃ ಸ್ತವಂ ಕುರ್ಯಾದೇತದ್ವ್ರತಮನುತ್ತಮಂ ।
ಪ್ರಾಗ್ವಾಸರಾದೌ ಸಂಪೂಜ್ಯ ದಿವ್ಯಂ ಸ್ತವಂ ಸಮಾರಭೇತ್ ॥ ೧೭೯ ॥

ಅಥವಾ ರವಿವಾರೇಣ ಗ್ರಹತಾರಾಬಲೇನ ಚ ।
ಪಾಯಸಂ ಭೋಜಯೇದ್ವಿಪ್ರಾನ್ಕುರ್ಯಾದ್ಬ್ರಾಹ್ಮಣವಾಚನಂ ॥ ೧೮೦ ॥

ಶುಕ್ಲವಸ್ತ್ರಾಣಿ ದತ್ವಾ ಚ ಸಹಿರಣ್ಯಾನಿ ಭಕ್ತಿತಃ ।
ಗಾಯತ್ರೀಂ ಪೂಜಯೇದ್ಭಕ್ತ್ಯಾ ಶುಕ್ಲಮಾಲ್ಯಾನುಲೇಪನೈಃ ॥ ೧೮೧ ॥

ಯಥಾ ನ ದೇವಿ ಭಗವಾನ್ಬ್ರಹ್ಮಾ ಲೋಕಪಿತಾಮಹಃ ।
ತ್ವಾಂ ಪರಿತ್ಯಜ್ಯ ತಿಷ್ಠೇತ ತಥಾ ಭವ ವರಪ್ರದಾ ॥ ೧೮೨ ॥

ವೇದಶಾಸ್ತ್ರಾಣಿ ಸರ್ವಾಣಿ ನೃತ್ಯಗೀತಾದಿಕಂ ಚ ಯತ್ ।
ನ ವಿಹೀನಂ ತ್ವಯಾ ದೇವಿ ತಥಾ ಮೇ ಸಂತು ಸಿದ್ಧಯಃ ॥ ೧೮೩ ॥

---

೧೭೯. ಭಕ್ತನು ತಾನಾಗಿಯೇ ಈ ವ್ರತವನ್ನು ಮಾಡಬೇಕು. ವಾರದ ಆದಿಯಲ್ಲಿ ಈ ವ್ರತದ ಪೂಜೆಯನ್ನು ಮಾಡಿ ಸ್ತೋತ್ರಮಾಡಬೇಕು.

೧೮೦. ಅದಿಲ್ಲದಿದ್ದರೆ ಭಾನುವಾರ ಮೊದಲು ಮಾಡಬಹುದು. ಇಲ್ಲದೇ ತಾರಾಬಲ ಚಂದ್ರಬಲಗಳನ್ನು ನೋಡಿ ಮಾಡಬಹುದು. ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಿ ಸ್ವಸ್ತಿವಾಚನವನ್ನು ಮಾಡಿಸಬೇಕು.

೧೮೧. ಬಿಳಿಯ ಬಟ್ಟೆಗಳನ್ನೂ, ದಕ್ಷಿಣೆಯನ್ನೂ, ಶಕ್ತ್ಯನುಗುಣವಾಗಿ ಕೊಡಬೇಕು. ಬಿಳಿಯ ಹೂ, ಗಂಧಗಳಿಂದ ಗಾಯತ್ರಿಯನ್ನು ಪೂಜಿಸಬೇಕು.

೧೮೨. ಲೋಕಪಿತಾಮಹನಾದ ಬ್ರಹ್ಮನು ಹೇಗೆ ನಿನ್ನನ್ನು ಬಿಟ್ಟಿರುವುದಿಲ್ಲವೋ, ಅದೇ ರೀತಿ ನನಗೆ ನೀನು ವರಪ್ರದಳಾಗು.

೧೮೩. ಎಲ್ಲಾ ವೇದಶಾಸ್ತ್ರಗಳೂ, ನೃತ್ಯಗೀತಾದಿಗಳೂ, ನಿನ್ನನ್ನು ಬಿಟ್ಟು ಹೇಗಿರುವುದಿಲ್ಲವೋ ಅದೇ ರೀತಿ ನನಗೂ ಸಿದ್ಧಿಯಾಗಲಿ.

ಲಕ್ಷ್ಮೀರ್ಮೇಧಾ ವರಾ ಪುಷ್ಟಿರ್ಗೌರೀ ತುಷ್ಟಿಃ ಪ್ರಭಾ ಮತಿಃ ।
ಏತಾಭಿಃ ಪಾಹಿ ಚಾಷ್ಟಾಭಿಸ್ತನುಭಿರ್ಮಾಂ ಸರಸ್ವತಿ ॥ ೧೮೪ ॥

ಏವಂ ಸಂಪೂಜ್ಯ ಗಾಯತ್ರೀಂ ವೀಣಾಕ್ಷಮಣಿಧಾರಿತಾಂ ।
ಶುಕ್ಲಪುಷ್ಪಾಕ್ಷತೈರ್ಭಕ್ತ್ಯಾ ಸಕಮಂಡಲುಪುಸ್ತಕಾಂ ॥ ೧೮೫ ॥

ಮೌನವ್ರತೇನ ಭುಂಜೀತ ಸಾಯಂ ಪ್ರಾತಶ್ಚ ಧರ್ಮವಿತ್ ।
ಪಂಚಮ್ಯಾಂ ಪ್ರತಿಪಕ್ಷಂ ಚ ಪೂಜಯೇಚ್ಛಬ್ದವಾಸಿನೀಂ ॥ ೧೮೬ ॥

ತಥೈವ ತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ।
ಕ್ಷೀರಂ ದದ್ಯಾದ್ಧಿರಣ್ಯಂ ಚ ಗಾಯತ್ರೀ ಪ್ರಿಯತಾಮಿತಿ ॥ ೧೮೭ ॥

ಸಂಧ್ಯಾಯಾಂ ಚ ತಥಾ ಮೌನಮೇತತ್ಕುರ್ವನ್ಸಮಾಚರೇತ್ ।
ನ ರಾತ್ರ್ಯಾಂ ಭೋಜನಂ ಕುರ್ಯಾದ್ಯಾವನ್ಮಾಸಾಸ್ತ್ರಯೋದಶ ॥ ೧೮೮ ॥

---

೧೮೪. ಲಕ್ಷ್ಮೀ, ಮೇಧೇ, ವರೇ, ಪುಷ್ಟಿ, ಗೌರೀ, ತುಷ್ಟಿ, ಪ್ರಭೇ, ಮತಿ ಈ ಎಂಟು ದೇಹದಿಂದಲೂ ನನ್ನನ್ನು ಕಾಪಾಡು.

೧೮೫. ಈರೀತಿ ವೀಣೇ, ಅಕ್ಷಮಣಿ, ಕಮಂಡಲು ಪುಸ್ತುಕಗಳನ್ನು ಧರಿಸಿರುವ ಸರಸ್ವತಿಯನ್ನು ಭಕ್ತಿಯಿಂದ ಬಿಳಿಯ ಅಕ್ಷತೆ ಹೂಗಳಿಂದ ಪೂಜಿಸಬೇಕು.

೧೮೬. ಸಾಯಂಕಾಲ ಬೆಳಿಗ್ಗೆ ಮೌನವ್ರತದಿಂದ ಊಟಮಾಡಬೇಕು. ಪ್ರತಿ ಪಕ್ಷದ ಪಂಚಮಿಯ ದಿನ ಶಬ್ದವಾಸಿನಿಯಾದ ಸರಸ್ವತಿಯನ್ನು ಪೂಜಿಸಬೇಕು.

೧೮೭. ಅದೇರೀತಿ ಒಂದು ಕೊಳಗ ಅಕ್ಕಿ, ತುಪ್ಪದ ಪಾತ್ರೆ, ಹಾಲು, ದಕ್ಷಿಣೆ ಗಳನ್ನು ಬ್ರಾಹ್ಮಣನಿಗೆ ಗಾಯತ್ರಿಯು ಪ್ರೀತಿಗೊಳ್ಳಲಿ ಎಂದು ಕೊಡಬೇಕು.

೧೮೮. ಈ ವ್ರತ ಮಾಡುವವನು ಸಾಯಂಕಾಲದಲ್ಲಿ ಮೌನಮಾಡಬೇಕು. ಹದಿಮೂರು ತಿಂಗಳವರೆಗೂ ರಾತ್ರಿಯಲ್ಲಿ ಊಟಮಾಡಬಾರದು.

ಸಮಾಪ್ತೇ ತು ವ್ರತೇ ದದ್ಯಾದ್ಭೋಜನಂ ಶುಕ್ಲತಂಡುಲೈಃ ।
ಪೂರ್ಣೇ ಸದ್ವಸ್ತ್ರಯುಗ್ಮಂ ತು ಗಾಂ ಚ ವಿಪ್ರಾಯ ಶೋಭನಾಂ ॥ ೧೮೯ ॥

ದಿವ್ಯಾಂ ವಿತಾನಂ ಘಂಟಾಂ ಚ ಸಿತನೇತ್ರಪಟಾನ್ವಿತಾಂ ।
ಚಂದನಂ ವಸ್ತ್ರಯುಗ್ಮಂ ಚ ದಧ್ಯನ್ನಂ ಸುರಸಂ ಪುನಃ ॥ ೧೯೦ ॥

ತಥೋಪದೇಷ್ಟಾರಮಪಿ ಭಕ್ತ್ಯಾ ಸಂಪೂಜಯೇದ್ಗುರುಂ ।
ವಿತ್ತಶಾಠ್ಯೇನ ರಹಿತೋ ವಸ್ತ್ರಮಾಲ್ಯಾನುಲೇಪನೈಃ ॥ ೧೯೧ ॥

ಅನೇನ ವಿಧಿನಾ ಯಸ್ತು ಕುರ್ಯಾತ್ಸಾರಸ್ವತಂ ವ್ರತಂ ।
ವಿದ್ಯಾಸರ್ವಸ್ವಯುಕ್ತಸ್ತು ಸುಷ್ಠುಕಂಠಶ್ಚ ಜಾಯತೇ ॥ ೧೯೨ ॥

ಸರಸ್ವತ್ಯಾಃ ಪ್ರಸಾದೇನ ಬ್ರಹ್ಮಲೋಕೇ ಮಹೀಯತೇ ।
ನಾರೀ ವಾ ಕುರುತೇ ಯಾ ತು ಸಾऽಪಿ ತತ್ಫಲಭಾಗಿನೀ ॥ ೧೯೩ ॥

---

೧೮೯. ವ್ರತವು ಮುಗಿದ ದೇಲೆ ಬಿಳಿಯ ಅನ್ನದ ಊಟವನ್ನು ಮಾಡಿಸಬೇಕು. ಮತ್ತು ಒಂದುಜೊತೆ ಬಟ್ಟೆಯನ್ನೂ, ಒಳ್ಳೆಯ ಹಸುವನ್ನೂ, ದಾನ ಮಾಡಬೇಕು.

೧೯೦. ದಿವ್ಯವಾದ ಮೇಲ್ಕಟ್ಟು, ಘಂಟೆ, ಮಲ್ಲು ಬಿಳಿಯಬಟ್ಟೆ, ಚಂದನ, ಒಂದುಜೊತೆ ಬಟ್ಟೆ, ಒಳ್ಳೆಯ ಮೊಸರನ್ನಗಳನ್ನು ಕೊಡಬೇಕು.

೧೯೧. ಅದೇರೀತಿ ಉಪದೇಶಮಾಡಿದ ಗುರುವನ್ನು ವಸ್ತ್ರ ಮುಂತಾದುವುಗಳಿಂದ ಪೂಜಿಸಬೇಕು. ಲೋಭಿತನ ಮಾಡಕೂಡದು.

೧೯೨. ಈ ವಿಧಿಯಿಂದ ಸಾರಸ್ವತವ್ರತವನ್ನು ಮಾಡಿದರೆ ವಿದ್ಯೆಯಿಂದ ಕೂಡುತ್ತಾನೆ. ಕಂಠವೂ ಸುಸ್ವರವುಳ್ಳದ್ದಾಗುತ್ತದೆ.

೧೯೩. ಅವನು ಸರಸ್ವತಿಯ ಪ್ರಸಾದದಿಂದ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ. ಹೆಂಗಸು ಈ ವ್ರತವನ್ನು ಮಾಡಿದರೂ ಆ ಫಲ ಬರುತ್ತದೆ. ಬ್ರಹ್ಮಲೋಕದಲ್ಲಿ ಮೂರು ಕಲ್ಪಗಳವರೆಗೂ ಸುಖಿಸುತ್ತಾರೆ.

ಬ್ರಹ್ಮಲೋಕೇ ವಸೇದ್ರಾಜನ್ಯಾವತ್ಕಲ್ಪಶತತ್ರಯಂ ।
ಸಾರಸ್ವತಂ ವ್ರತಂ ಯಸ್ತು ಶೃಣುಯಾದಪಿ ವಾ ಪಠೇತ್ ।
ವಿದ್ಯಾಧರಪುರೇ ಸೋಽಪಿ ವಸೇದಷ್ಟಾಯುತತ್ರಯಂ ॥ ೧೯೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ
ಗೌರೀವ್ರತಕಥನಂ ನಾಮ ದ್ವಾವಿಂಶತಿತಮೋಽಧ್ಯಾಯಃ



---

೧೯೪. ಈ ಸಾರಸ್ವತವ್ರತವನ್ನು ಓದಿದವನೂ, ಕೇಳಿದವನೂ, ಕೂಡ ವಿದ್ಯಾಧರಲೋಕದಲ್ಲಿ ಎಂಟುಸಾವಿರದ ಮುನ್ನೂರು ವರ್ಷಗಳು ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಗೌರೀವ್ರತಕಥನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ತ್ರಯೋವಿಂಶೋಽಧ್ಯಾಯಃ

॥ ಭೀಷ್ಮ ಉವಾಚ ॥

ವೈಷ್ಣವಾ ಯೇ ತು ವೈ ಧರ್ಮಾ ಯಾನ್ರುದ್ರಃ ಪ್ರೋಕ್ತವಾನಿಹ ।
ತನ್ಮೇ ಕಥಯ ವಿಪ್ರೇಂದ್ರ ಕೀದೃಶಾಸ್ತೇ ಫಲಂ ತು ಕಿಂ ॥ ೧ ॥

॥ ಪುಲಸ್ತ್ಯ ಉವಾಚ ॥

ಪುರಾ ರಥಂತರೇ ಕಲ್ಪೇ ಪರಿಪೃಷ್ಟೋ ಮಹಾತ್ಮನಾ ।
ಮಂದರಸ್ಥೋ ಮಹಾದೇವಃ ಪಿನಾಕೀ ಬ್ರಹ್ಮಣಾ ಸ್ವಯಂ ॥ ೨ ॥

ಕಥಮಾರೋಗ್ಯಮೈಶ್ವರ್ಯಮನಂತಂ ಪರಮೇಶ್ವರ ।
ಅಲ್ಪೇನ ತಪಸಾ ದೇವ ಭವೇನ್ಮೋಕ್ಷಃ ಸದಾ ನೃಣಾಂ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ಭೀಷ್ಮನು ಹೇಳಿದನು:—ಎಲೈ ಋಷಿಯೇ, ರುದ್ರನು ಹೇಳಿದ ವೈಷ್ಣವ ಧರ್ಮಗಳಾವುವು? ಅವೆಲ್ಲವನ್ನು ಹೇಳು. ಅವುಗಳು ಫಲವೇನು?

೨. ಪುಲಸ್ತ್ಯನು ಹೇಳಿದನು:—ಹಿಂದಿನ ರಥಂತರ ಕಲ್ಪದಲ್ಲಿ ಮಹಾದೇವನು ಮಂದರಪರ್ವತದಲ್ಲಿರುತ್ತಿರಲು ಬ್ರಹ್ಮನು ಈರೀತಿ ಕೇಳಿದನು.

೩. ಎಲೈ ಪರಮೇಶ್ವರನೇ, ಸ್ವಲ್ಪ ತಪಸ್ಸಿನಿಂದಲೇ ಆಯುಸ್ಸು ಆರೋಗ್ಯ ಐಶ್ವರ್ಯಗಳು, ಮೋಕ್ಷವೂ ಹೇಗೆ ಬರುತ್ತವೆ? ಹೇಳು.

ಕಿಂ ತಜ್ಜ್ಞಾನಂ ಮಹಾದೇವ ತ್ವತ್ಪ್ರಸಾದಾದಧೋಕ್ಷಜ ।
ಅಲ್ಪಕೇನಾಪಿ ತಪಸಾ ಮಹಾಫಲಮಿಹೋಚ್ಯತೇ ॥ ೪ ॥

ಇತಿ ಪೃಷ್ಟಃ ಸ ವಿಶ್ವಾತ್ಮಾ ಬ್ರಹ್ಮಣಾ ಲೋಕಭಾವನಃ ।
ಉಮಾಪತಿರುವಾಚೇದಂ ಮನಸಃ ಪ್ರೀತಿಕಾರಕಂ ॥ ೫ ॥

॥ ಈಶ್ವರ ಉವಾಚ ॥

ಅಸ್ಮಾದ್ರಥಂತರಾತ್ಕಲ್ಪಾದ್ದ್ವಾಯೋ ವಿಂಶತಿಮೋ ಯದಾ ।
ವರಾಹೋ ಭವಿತಾ ಕಲ್ಪಸ್ತದಾ ಮನ್ವಂತರೇ ಶುಭೇ ॥ ೬ ॥

ವೈವಸ್ವತಾಖ್ಯೇ ಸಂಪ್ರಾಪ್ತೇ ಸಪ್ತಮೇ ಸಪ್ತಲೋಕಧೃಕ್ ।
ದ್ವಾಪರಾಖ್ಯಯುಗಂ ತಸ್ಮಿನ್ಸಪ್ತವಿಂಶತಿಮಂ ಯದಾ ॥ ೭ ॥

ತಸ್ಯಾಂತೇ ತು ಮಹಾತೇಜಾ ವಾಸುದೇವೋ ಜನಾರ್ದನಃ ।
ಭಾರಾವತಾರಣಾರ್ಥಾಯ ತ್ರಿಧಾ ವಿಷ್ಣುರ್ಭವಿಷ್ಯತಿ ॥ ೮ ॥

---

೪. ಇಂದ್ರಿಯ ನಿಗ್ರಹಿಯಾದ ದೇವನೇ, ಅಜ್ಞಾನವಾವುದು? ಅಲ್ಪ ತಪಸ್ಸಿನಿಂದ ಮಹಾಫಲವು ಪ್ರಾಪ್ತವಾಗುವುದು ಹೇಗೆ?

೫. ಬ್ರಹ್ಮನು ಹೀಗೆ ಕೇಳಲು, ಉಮಾಪತಿಯು ಮನಸ್ಸಿಗೆ ಪ್ರೀತಿಯನ್ನುಂಟುಮಾಡುವ ಧರ್ಮವನ್ನು ಇಂತೆಂದು ಹೇಳಿದನು.

೬. ಈಶ್ವರನು ಹೇಳಿದನು:—ಈ ರಥಂತರ ಕಲ್ಪಕ್ಕಿಂತಲೂ ಇಪ್ಪತ್ತನೆಯದಾದ ಒಂದು ವರಾಹಕಲ್ಪವು ಬರುತ್ತದೆ.

೭-೮. ಅದರೊಳಗೆ ವೈವಸ್ವತಮನ್ವಂತರವು ಬಂದಾಗ ಅದರೊಳಗೆ ಇಪ್ಪತ್ತೇಳನೆಯ ದ್ವಾಪರಯುಗದಲ್ಲಿ ಕೊನೆಯ ಭಾಗದಲ್ಲಿ ವಾಸುದೇವನು ಭೂಭಾರವನ್ನು ಇಳಿಸಲು ಅವತರಿಸುವನು ಆಗ ಅವನು ಮೂರು ಬಗೆಯಾಗಿ ಅವತರಿಸುವನು.

ದ್ವೈಪಾಯನ ಋಷಿಸ್ತದ್ವದ್ರೌಹಿಣೇಯೋಽಥ ಕೇಶವಃ ।
ಕಂಸಾರಿಃ ಕೇಶಿಮಥನಃ ಕೇಶವಃ ಕಲ್ಮಷಾಪಹಃ ॥ ೯ ॥

ಪುರೀ ದ್ವಾರಾವತೀ ನಾಮ ಸಾಂಪ್ರತಂ ಯಾ ಕುಶಸ್ಥಲೀ ।
ದಿವ್ಯಾನುಭಾವಸಂಯುಕ್ತಾ ಸ್ವಾಧಿವಾಸಾಯ ಶಾರ್ಙ್ಗಿಣಃ ॥ ೧೦ ॥

ತ್ವಷ್ಟ್ರಾ ತದಾಜ್ಞಯಾ ಬ್ರಹ್ಮನ್ಕರಿಷ್ಯತಿ ಜಗತ್ಪತೇ ।
ತಸ್ಯಾಂ ಕದಾಚಿದಾಸೀನಃ ಸಭಾಯಾಂ ಸೋಽಮಿತದ್ಯುತಿಃ ॥ ೧೧ ॥

ಭಾರ್ಯಾಭಿರ್ವೃಷ್ಣಿಭಿರ್ಯುಕ್ತೋ ವಿದ್ವದ್ಭಿರ್ಭೂರಿದಕ್ಷಿಣೈಃ ।
ಕುರುಭಿರ್ದೇವಗಂಧರ್ವೈರಭಿತಃ ಕೈಟಭಾರ್ದನಃ ॥ ೧೨ ॥

ಪ್ರವೃತ್ತಾಸು ಪುರಾಣಾಸು ಧರ್ಮಸಂಬಂಧಿನೀಷು ಚ ।
ಕಥಾಸು ಭೀಮಸೇನೇನ ಪರಿಪೃಷ್ಟಃ ಪ್ರತಾಪವಾನ್ ॥ ೧೩ ॥

---

೯. ಆಗ ಅವನು ದ್ವೈಪಾಯನ ಋಷಿಯೂ, ಬಲರಾಮನೂ, ಕೃಷ್ಣನೂ ಆಗಿ ಮೂರು ಬಗೆಯಾಗಿ ಅವತರಿಸುವನು. ಆಗ ಕಂಸನನ್ನೂ, ಕೇಶಿಯನ್ನೂ, ಕೊಲ್ಲುವನು. ಪಾಪಗಳನ್ನು ನಾಶಮಾಡುವನು.

೧೦. ಈಗ ಕುಶಸ್ಥಲಿಯೆಂದು ಹೆಸರುಪಡೆದಿರುವ ಮಹಿಮೆಯುಳ್ಳ ಕುಶಸ್ಥಳಿಯೇ ಆಗ ಆ ಕೇಶವನಿಗೆ ವಾಸದ ಸ್ಥಳವಾಗಿ ದ್ವಾರಾವತಿಯೆಂದು ಪ್ರಸಿದ್ಧವಾಗುವುದು.

೧೧—೧೩. ಆ ಕೇಶವನ ಅಪ್ಪಣೆಯ ಮೇಲೇನೆ ತ್ವಷ್ಟೃಬ್ರಹ್ಮನು ಆ ಊರನ್ನು ಸೃಷ್ಟಿಸಿ ಅಲ್ಲಿ ಸಭೆಯನ್ನು ಕಟ್ಟಿಕೊಡುತ್ತಾನೆ. ಆ ಸಭೆಯಲ್ಲಿ ಕೇಶವನು ಹೆಂಡತಿಯೊಡನೆಯೂ, ವೃಷ್ಣಿಗಳೊಡನೆಯೂ, ವಿದ್ವಾಂಸರೊಡನೆಯೂ, ಕುರುಗಳೊಡನೆಯೂ, ದೇವಗಂಧರ್ವರೊಡನೆಯೂ, ಕೂಡಿಕೊಂಡು ಕುಳಿತಿರುತ್ತಾನೆ. ಹೀಗೆ ಕುಳಿತಿರುವಲ್ಲಿ ಅನೇಕ ವಿಷಯಗಳು ಪ್ರಸ್ತಾಪಕ್ಕೆ ಒಳಗಾಗಲು ಭೀಮಸೇನನು ಆ ಕೇಶವನನ್ನು ಇಂತೆಂದು ಕೇಳಿದನು.

ತ್ವಯಾ ಪೃಷ್ಟಸ್ಯ ಧರ್ಮಸ್ಯ ವಕ್ತ್ವಾ ವ್ಯಾಸ್ಯ ಚ ಭೇದಕೃತ್ ।
ಭವಿತಾ ಸ ತದಾ ಬ್ರಹ್ಮಸ್ಕರ್ತಾ ಚೈವ ವೃಕೋದರಃ ॥ ೧೪ ॥

ಪ್ರವರ್ತಕೋಽಸ್ಯ ಧರ್ಮಸ್ಯ ಪಾಂಡುಸೂನುರ್ಮಹಾಬಲಃ ।
ಯಸ್ಯ ತೀಕ್ಷ್ಣೋ ವೃಕೋ ನಾಮ ಜಠರೇ ಹವ್ಯವಾಹನಃ ॥ ೧೫ ॥

ಮಯಾ ದತ್ತಃ ಸ ಧರ್ಮಾತ್ಮಾ ತೇನ ಚಾಸೌ ವೃಕೋದರಃ ।
ಅತೀವ ಸ್ವಾದುಶೀಲಸ್ಯ ನಾಗಾಯುತಬಲೋ ಮಹಾನ್ ॥ ೧೬ ॥

ಧಾರ್ಮಿಕಸ್ಯಾಪ್ಯಶಕ್ತಸ್ಯ ತೀವ್ರಾಗ್ನಿತ್ವಾದುಪೋಷಣಂ ।
ಇದಂ ವ್ರತಮಶೇಷಾಣಾಂ ವ್ರತಾನಾಮಧಿಕಂ ಯತಃ ॥ ೧೭ ॥

ಕಥಯಿಷ್ಯತಿ ವಿಶ್ವಾತ್ಮಾ ವಾಸುದೇವೋ ಜಗದ್ಗುರುಃ ।
ಅಶೇಷಯಜ್ಞಫಲದಮಶೇಷಾಘವಿನಾಶನಂ ॥ ೧೮ ॥

---

೧೪. ಆಗ ನೀನು ಕೇಳಿದ ಧರ್ಮವನ್ನು ಬಿಡಿಸಿ ಆ ವೃಕೋದರನು ಆ ಕೇಶವನನ್ನು ಕೇಳುವನು.

೧೫. ಆಗ ಈ ಧರ್ಮಗಳಿಗೆ ವೃಕೋದರನೇ ಪ್ರವರ್ತಕನಾಗುವನು. ಅವನ ಹೊಟ್ಟೆಯಲ್ಲಿ ಬಹು ಕ್ರೂರವಾದ ವೃಕವೆಂಬ ಬೆಂಕಿಯಿರುವುದು.

೧೬. ನಾನೇನೇ ಆ ಭೀಮಸೇನನಿಗೆ ಅಗ್ನಿಯನ್ನು ಕೊಟ್ಟಿರುವನು. ವೃಕೋದರನಾಗಿರುವನು. ಅವನು ಬಹಳವಾಗಿ ತಿನ್ನುವನು. ಮತ್ತು ಹತ್ತುಸಾವಿರ ಆನೆಗಳ ಬಲವುಳ್ಳವನು. ಆದ್ದರಿಂದಲೇ ಅವನಿಗೆ ಆ ಇಗ್ನಿಯನ್ನು ಕೊಟ್ಟಿರುವನು. ಅದರಿಂದಲೇ ಅವನಿಗೆ ವೃಕೋದರನೆಂಬ ಹೆಸರು ಬಂದಿರುವುದು.

೧೭. ಆ ಭೀಮಸೇನನು ಧಾರ್ಮಿಕನಾದರೂ ಉಪೋಷಣಕ್ಕೆ ಅನರ್ಹನು. ಆ ಅಗ್ನಿಯು ಅಷ್ಟು ತೀವ್ರವಾದುದು. ಆದರೂ ಅವನು ಉಪವಾಸಮಾಡಿದನು. ಈ ವ್ರತವು ಎಲ್ಲಾ ವ್ರತಕ್ಕಿಂತಲೂ ಉತ್ತಮವೂ, ಅಧಿಕವೂ ಆಗಿರುವುದು ಆದ್ದರಿಂದಲೇ ಅವನು ಉಪವಾಸಮಾಡಿದುದು.

೧೮-೧೯. ಸಮಸ್ತ ಯಜ್ಞಗಳ ಫಲವನ್ನು ಕೊಡುವ, ಎಲ್ಲಾ ಪಾಪಗಳನ್ನೂ ನಾಶಮಾಡುವ, ಎಲ್ಲ ದುಷ್ಟರನ್ನೂ ನಾಶಮಾಡುವ, ಎಲ್ಲ ದೇವತೆಗಳಿಂದಲೂ ಪೂಜಿತ

ಅಶೇಷದುಷ್ಟಶಮನಮಶೇಷಸುರಪೂಜಿತಂ ।
ಪವಿತ್ರಾಣಾಂ ಪವಿತ್ರಂ ಯನ್ಮಂಗಲಾನಾಂ ಚ ಮಂಗಲಂ ।
ಭವಿಷ್ಯಂ ಚ ಭವಿಷ್ಯಾಣಾಂ ಪುರಾಣಾನಾಂ ಪುರಾತನಂ ॥ ೧೯ ॥

॥ ವಾಸುದೇವ ಉವಾಚ ॥

ಯದ್ಯಷ್ಟಮೀಚತುರ್ದಶ್ಯೋರ್ದ್ವಾದಶೀಷ್ವಥ ಭಾರತ ।
ಅನ್ಯೇಷ್ವಪಿ ದಿನರ್ಕ್ಷೇಷು ನ ಶಕ್ತಸ್ತ್ವಮುಪೋಷಿತುಂ ॥ ೨೦ ॥

ತತಸ್ತ್ವಾಮಿಮಾಂ ಭೀಮ ತಿಥಿಂ ಪಾಪವಿನಾಶಿನೀಂ ।
ಉಪೋಷ್ಯ ವಿಧಿನಾಽನೇನ ಗಚ್ಛ ವಿಷ್ಣೋಃ ಪರಂ ಪದಂ ॥ ೨೧ ॥

ಮಾಘಮಾಸಸ್ಯ ದಶಮೀ ಯದಾ ಭೀಮ ಭವೇತ್ತದಾ ।
ಘೃತೇನಾಭ್ಯಂಜನಂ ಕೃತ್ವಾ ತಿಲೈಃ ಸ್ನಾನಂ ಸಮಾಚರೇತ್ ॥ ೨೨ ॥

ತಥೈವಮರ್ಚೇದ್ವಿಷ್ಣುಂ ಚ ನಮೋ ನಾರಾಯಣಾಯ ಚ ।
ಕೃಷ್ಣಾಯ ಪಾದೌ ಸಂಪೂಜ್ಯ ಶಿರಃ ಸರ್ವಾತ್ಮನೇಽಪಿ ಚ ॥ ೨೩ ॥

---

ವಾದ, ಪವಿತ್ರಕ್ಕೂ ಪವಿತ್ರವಾದ, ಮಂಗಳಕ್ಕೂ ಮಂಗಳವಾದ, ಭವಿಷ್ಯಗಳಿಗೂ ಭವಿಷ್ಯವಾದ, ಪುರಾಣಗಳಿಗಿಂತಲೂ ಹಿಂದಿನದಾದ ಆ ವಿಷಯವನ್ನು ವಿಶ್ವಾತ್ಮನಾದ ಸ್ವಾಮಿಯಾದ ಜಗದ್ಗುರುವಾದ ವಾಸುದೇವನು ಹೇಳುವನು.

೨೦-೨೧. ವಾಸುದೇವನು ಹೇಳಿದನು:—ಎಲೈ ಭೀಮನೇ, ಅಷ್ಟಮಿ, ಚತುರ್ದಶೀ, ಇನ್ನೂ ಉಳಿದ ದಿನಗಳೂ ನಕ್ಷತ್ರಗಳಲ್ಲಿ ಉಪವಾಸಯೋಗ್ಯವಾದ ದಿನಗಳಲ್ಲಿ ಉಪವಾಸಮಾಡಲು ನಿನ್ನ ಕೈಯ್ಯಲ್ಲಾಗುವುದಿಲ್ಲ. ಆದ್ದರಿಂದ ಎಲೈ ಭೀಮನೇ, ಪಾಪವಿನಾಶಕವಾದ ಮತ್ತೊಂದು ತಿಥಿಯನ್ನು ಹೇಳುತ್ತೇನೆ. ಅದರಲ್ಲಿ ನೀನು ಉಪವಾಸಮಾಡಿದರೆ ವಿಷ್ಣುಪದವನ್ನು ಹೊಂದುತ್ತೀಯೆ.

೨೨. ಮಾಘಮಾಸದ ದಶಮಿ ದಿನ ತುಪ್ಪದಿಂದ ಅಭ್ಯಂಜನಮಾಡಬೇಕು. ಇಲ್ಲದಿದ್ದರೆ ಒಳ್ಳೆಣ್ಣೆ ಹಾಕಿಕೊಂಡಾದರೂ ಸ್ನಾನಮಾಡಬೇಕು.

೨೩-೨೪. ಓಂ ನಮೋ ನಾರಾಯಣಾಯ ಎಂದು ಹೇಳಿ ವಿಷ್ಣುವನ್ನು ಪೂಜಿಸಬೇಕು. ಕೃಷ್ಣನಿಗೋಸ್ಕರ ನಮಸ್ಕಾರವು ಎಂದು ಪಾದಗಳನ್ನು, ಸರ್ವಾತ್ಮನೇ

ವೈಕುಂಠಾಯೇತಿ ವೈ ಕಂಠಮುರಃ ಶ್ರೀವತ್ಸಧಾರಿಣೇ ।
ಶಂಖಿನೇ ಗದಿನೇ ತದ್ವಚ್ಚಕ್ರಿಣೇ ವರದಾಯ ವೈ ॥ ೨೪ ॥

ಸರ್ವಂ ನಾರಾಯಣಸ್ತ್ವೇವಂ ಸಂಪೂಜ್ಯಾವಾಹನಕ್ರಮಾತ್ ।
ದಾಮೋದರಾಯೇತ್ಯುದರಂ ಕಟಿಂ ಪಂಚಜನಾಯ ವೈ ॥ ೨೫ ॥

ಊರೂ ಸೌಭಾಗ್ಯನಾಥಾಯ ಜಾನುನೀ ಭೂತಧಾರಿಣೇ ।
ನಮೋ ನೀಲಾಯ ವೈ ಜಂಘೇ ಪಾದೌ ವಿಶ್ವಸೃಜೇ ಪುನಃ ॥ ೨೬ ॥

ನಮೋ ದೇವ್ಯೈ ನಮಃ ಶಾಂತ್ಯೈ ನಮೋ ಲಕ್ಷ್ಮ್ಯೈ ನಮಃ ಶ್ರೀಯೈ ।
ನಮಸ್ತುಷ್ಟ್ಯೈ ನಮಃ ಪುಷ್ಟ್ಯೈ ನಮೋ ವ್ಯುಷ್ಟ್ಯೈ ನಮೋ ನಮಃ ॥ ೨೭ ॥

ನಮೋ ವಿಹಂಗನಾಥಾಯ ವಾಯುವೇಗಾಯ ಪಕ್ಷಿಣೇ ।
ವಿಷಪ್ರಮಥನಾಯೇತಿ ಗರುಡಂ ಚಾಭಿಪೂಜಯೇತ್ ॥ ೨೮ ॥

---

ನಮಃ ಎಂದು ತಲೆಯನ್ನೂ ಪೂಜಿಸಬೇಕು. ವೈಕುಂಠನಿಗೆ ನಮಸ್ಕಾರವು ಎಂದು ಹೇಳಿ ಕಂಠವನ್ನೂ ಶ್ರೀವತ್ಸಧಾರಿಗೆ ನಮಸ್ಕಾರವು ಎಂದು ಎದೆಯನ್ನು ಪೂಜಿಸಿ ಶಂಖಿಗೆ, ಚಕ್ರಿಗೆ, ಗದಿಗೆ, ವರದನಿಗೆ ಎಂದು ಹೇಳಿ ಎಲ್ಲಾ ಜಾಗಕ್ಕೂ ಆವಾಹನ ಕ್ರಮದಿಂದ ಪೂಜೆ ಮಾಡಬೇಕು.

೨೫—೨೮. ದಾಮೋದರನಿಗೆ ನಮಸ್ಕಾರವು ಎಂದು ಹೊಟ್ಟೆಯನ್ನೂ, ಪಂಚಜನನಿಗೆ ನಮಸ್ಕಾರವು ಎಂದು ಸೊಂಟವನ್ನೂ, ಸೌಭಾಗ್ಯನಾಥನಿಗೆ ನಮಸ್ಕಾರವು ಎಂದು ತೊಡೆಗಳನ್ನೂ, ಭೂತಧಾರಿಗೆ ನಮಸ್ಕಾರವು ಎಂದು ಮಂಡಿಯನ್ನೂ, ನೀಲನಿಗೆ ನಮಸ್ಕಾರವು ಎಂದು ಮೊಣಕಾಲುಗಳನ್ನೂ, ವಿಶ್ವಸೃಜನಿಗೆ ನಮಸ್ಕಾರವು ಎಂದು ಪಾದಗಳನ್ನೂ, ಪೂಜಿಸಬೇಕು. ದೇವಿಗೆ ನಮಸ್ಕಾರವು, ಶಾಂತಿಗೆ ನಮಸ್ಕಾರವು, ಲಕ್ಷ್ಮಿಗೆ ನಮಸ್ಕಾರವು, ತುಷ್ಟಿಗೆ ನಮಸ್ಕಾರವು, ಪುಷ್ಟಿಗೆ ನಮಸ್ಕಾರವು. ವ್ಯುಷ್ಟಿಗೆ ನಮಸ್ಕಾರವು ಎಂದು ಲಕ್ಷ್ಮಿಯನ್ನು ಪೂಜಿಸಬೇಕು. ವಿಹಂಗನಾಥನಿಗೆ ನಮಸ್ಕಾರವು, ವಾಯುವೇಗವುಳ್ಳವನಿಗೆ ನಮಸ್ಕಾರವು, ಪಕ್ಷಿರೂಪನಿಗೆ ನಮಸ್ಕಾರವು, ವಿಷಪ್ರಮಥನಿಗೆ ನಮಸ್ಕಾರವು, ಎಂದು ಗರುಡನನ್ನು ಪೂಜಿಸಬೇಕು.

ಏವಂ ಸಂಪೂಜ್ಯ ಗೋವಿಂದಮುಮಾಪತಿವಿನಾಯಕೌ ।
ಗಂಧಮಾಲ್ಯೈಸ್ತಥಾ ಧೂಪೈರ್ಭಕ್ಷ್ಯೈರ್ನಾನಾವಿಧೈರಪಿ ॥ ೨೯ ॥

ಗವ್ಯೇನ ಪಯಸಾ ಸಿದ್ಧಾಂ ಕೃಶರಾಮಥ ವಾಗ್ಯತಃ ।
ಸರ್ಪಿಷಾ ಸಹ ಭುಕ್ತ್ವಾ ತಾಂ ಗತ್ವಾ ಪದಶತಂ ಬುಧಃ ॥ ೩೦ ॥

ನ್ಯಗ್ರೋಧಂ ದಂತಕಾಷ್ಠಮಥವಾ ಖಾದಿರಂ ಬುಧಃ ।
ಗೃಹೀತ್ವಾ ಧಾವಯೇದ್ದಂತಾನಾಚಾಂತಃ ಪ್ರಾಗುದಙ್ಮುಖಃ ॥ ೩೧ ॥

ಬ್ರೂಯಾತ್ಸಾಯಂತನೀಂ ಕೃತ್ವಾ ಸಂಧ್ಯಾಮಸ್ತಮಿತೇ ರವೌ ।
ನಮೋ ನಾರಾಯಣಾಯೇತಿ ತ್ವಾಮಹಂ ಶರಣಂ ಗತಃ ॥ ೩೨ ॥

ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಚ ಕೇಶವಂ ।
ತಾಂ ರಾತ್ರಿಂ ಸಕಲಾಂ ಸ್ಥಿತ್ವಾ ಶೇಷಪರ್ಯಂಕಶಾಯಿನಂ ॥ ೩೩ ॥

ಸರ್ಪಿಷಾ ವಿಶ್ವದಮನಂ ಹುತ್ವಾ ಬ್ರಾಹ್ಮಣಪುಂಗವೈಃ ।
ಸಹೈವ ಪುಂಡರೀಕಾಕ್ಷ ದ್ವಾದಶ್ಯಾಂ ಕ್ಷೀರಭೋಜನಂ ॥ ೩೪ ॥

---

೨೯—೩೧. ಈರೀತಿ ಗೋವಿಂದನನ್ನು ಪೂಜಿಸಿ ಅನಂತರ ಶಿವ ವಿನಾಯಕರನ್ನು ಗಂಧ, ಧೂಪ, ದೀಪ, ಮಾಲೆ ನಾನಾವಿಧವಾದ ಭಕ್ಷ್ಯಗಳು ಇವುಗಳಿಂದ ಪೂಜಿಸಬೇಕು. ಹಸುವಿನ ಹಾಲನ್ನು ಹಾಕಿ ಮಾಡಿರುವ ಕೃಶರವೆಂಬ ತಿಂಡಿಯನ್ನು ತುಪ್ಪ ಹಾಕಿಕೊಂಡು ನಿಯಮದಿಂದ ತಿನ್ನಬೇಕು. ಆಮೇಲೆ ನೂರು ಹೆಜ್ಜೆಗೆ ಕಡಿಮೆಯಿಲ್ಲದಂತೆ ಹೊರಗೆ ಹೋಗಬೇಕು. ಆಲ ಅಥವಾ ಕಗ್ಗಲಿ ಕಡ್ಡಿಯನ್ನು ತೆಗೆದುಕೊಂಡು ಹಲ್ಲನ್ನು ತಿಕ್ಕಿಕೊಂಡು ಪೂರ್ವಮುಖನಾಗಿ ಆಚಮನ ಮಾಡಬೇಕು.

೩೨—೩೪. ಸಂಧ್ಯಾಕಾಲದ ವಂದನೆಯನ್ನು ಮಾಡಿ ಎಲೈ ನಾರಾಯಣನೇ, ನಿನಗೆ ನಮಸ್ಕಾರವು. ನಿನ್ನನ್ನು ಶರಣಹೊಂದಿದ್ದೇನೆ ಎಂದು ಹೇಳಿ ಏಕಾದಶಿಯ ದಿನ ಉಪವಾಸವಿರಬೇಕು. ಕೇಶವನನ್ನು ಪೂಜಿಸಬೇಕು. ಆ ರಾತ್ರಿಯೆಲ್ಲವೂ ಆ ಸ್ವಾಮಿಯನ್ನು ಭಜಿಸುತ್ತ ಬ್ರಾಹ್ಮಣರನ್ನು ಕರೆದು, ಶಾಸ್ತ್ರೋಕ್ತವಾಗಿ ತುಪ್ಪದಿಂದ ಅವರೊಡನೆ ಹೋಮಮಾಡುತ್ತೇನೆ. ಮತ್ತು ದ್ವಾದಶಿಯ ದಿನ ಹಾಲನ್ನವನ್ನು ಊಟಮಾಡುತ್ತೇನೆ. ಆತ್ಮನು ನಾಶವಾಗದ ರೀತಿಯಲ್ಲಿರುತ್ತೇನೆ.

ಕರಿಷ್ಯಾಮಿ ಯಥಾತ್ಮಾನಂ ನ ವಿನಾಶಮುಪೈತಿ ವೈ ।
ಏವಮುಕ್ತ್ವಾ ಸ್ವಪೇದ್ಭೂಮಾವಿತಿಹಾಸಕಥಾಂ ಪುನಃ ॥ ೩೫ ॥

ಶ್ರುತ್ವಾ ಪ್ರಭಾತೇ ಸಂಜಾತೇ ನದೀಂ ಗತ್ವಾ ವಿಶಾಂ ಪತೇ ।
ಸ್ನಾನಂ ಕೃತ್ವಾ ಮುದಾ ತದ್ವತ್ಪಾಖಂಡಾನಭಿವರ್ಜಯೇತ್ ॥ ೩೬ ॥

ಉಪಾಸ್ಯ ಸಂಧ್ಯಾಂ ವಿಧಿವತ್ಕೃತ್ವಾ ಚ ಪಿತೃತರ್ಪಣಂ ।
ಪ್ರಣಮ್ಯ ಚ ಹೃಷೀಕೇಶಂ ಶೇಷಪರ್ಯಂಕಶಾಯಿನಂ ॥ ೩೭ ॥

ಗೃಹಸ್ಯ ಪುರತೋ ಭಕ್ತ್ಯಾ ಮಂಡಪಂ ಕಾರಯೇದ್ಬುಧಃ ।
ಚತುರ್ಹಸ್ತಾಂ ಶುಭಾಂ ಕುರ್ಯಾದ್ವೇದೀಮರಿನಿಷೂದನ ॥ ೩೮ ॥

ದಶಹಸ್ತಪ್ರಮಾಣಂ ತು ವಿನ್ಯಸೇತ್ತತ್ರ ತೋರಣಂ ।
ಸುಸ್ತಂಭೇ ಕಲಶಂ ತತ್ರ ಮಾಷಮಾತ್ರೇಣ ಸಂಯುತಂ ॥ ೩೯ ॥

ಛಿದ್ರೇಣ ಜಲಸಂಪೂರ್ಣಮಧಃ ಕೃಷ್ಣಾಜಿನೇ ಸ್ಥಿತಃ ।
ತಸ್ಯ ಧಾರಾಂ ಚ ಶಿರಸಾ ಧಾರಯೇತ್ಸಕಲಾಂ ನಿಶಂ ॥ ೪೦ ॥

---

೩೫-೩೬. ಹೀಗೆಂದು ಹೇಳಿ ಭೂಮಿಯಲ್ಲಿ ಮಲಗಿಕೊಂಡು ಪುರಾಣ ಕಥೆಗಳನ್ನು ಕೇಳುತ್ತ, ಬೆಳಗಾಗುತ್ತಲೂ ನದಿಗೆ ಹೋಗಿ ಸ್ನಾನವನ್ನು ಮಾಡಿಕೊಂಡು ನಾಸ್ತಿಕರ ಸಂಗಡ ಸೇರದಿರಬೇಕು.

೩೭. ಸಂಧ್ಯಾವಂದನೆಯನ್ನು ಮಾಡಿ, ಪಿತೃ ತರ್ಪಣವನ್ನು ಮಾಡಿ, ಶೇಷಶಾಯಿಯಾದ ಸ್ವಾಮಿಯನ್ನು ನಮಸ್ಕರಿಸಿ, ಮನೆಯ ಮುಂಭಾಗದಲ್ಲಿ ಮಂಟಪವನ್ನು ಮಾಡಬೇಕು.

೩೮—೪೦. ನಾಲ್ಕು ತೋಳುಗಳಷ್ಟು ಉದ್ದ ಅಗಲವುಳ್ಳ ವೇದಿಕೆಯನ್ನು ಮಾಡಬೇಕು. ಅದಕ್ಕೆ ಹತ್ತು ತೋಳುಗಳಷ್ಟು ಎತ್ತರಕ್ಕೆ ಮೇಲುಗಡೆಯಲ್ಲಿ ಅಡ್ಡ ಮರ ಬರುವಂತೆ ಬಾಗಿಲನ್ನಿಡಬೇಕು. ಅದರ ನೇರಕ್ಕೆ ಒಂದು ಕುಂಭವನ್ನಿಡಬೇಕು. ಕೆಳಗಡೆ ಅದಕ್ಕೆ ಒಂದು ಉದ್ದಿನಷ್ಟು ರಂಧ್ರವನ್ನು ಮಾಡಬೇಕು. ಅದರ ಕೆಳಗೆ ಕೃಷ್ಣಾಜಿನದ ಮೇಲೆ ಕುಳಿತು ರಾತ್ರಿಯೆಲ್ಲಾ ಆ ನೀರನ್ನು ತಲೆಯ ಮೇಲೆ ಧರಿಸುತ್ತಿರಬೇಕು.

ಧಾರಾಭಿರ್ಭೂರಿಭಿರ್ಭೂರಿ ಫಲಂ ವೇದವಿದೋ ವಿದುಃ ।
ಯಸ್ಮಾತ್ತಸ್ಮಾತ್ಕುರುಶ್ರೇಷ್ಠ ಕಾರಯೇತ್ಪ್ರಯತೋ ದ್ವಿಜಃ ॥ ೪೧ ॥

ದಕ್ಷಿಣೇ ಚಾರ್ಧಚಂದ್ರಂ ತು ಪಶ್ಚಿಮೇ ವರ್ತುಲಂ ತಥಾ ।
ಅಶ್ವತ್ಥಪತ್ರಾಕಾರಂ ಚ ಉತ್ತರೇಣ ತು ಕಾರಯೇತ್ ॥ ೪೨ ॥

ಮಧ್ಯೇ ತು ಪದ್ಮಾಕಾರಂ ಚ ಕಾರಯೇದ್ವೈಷ್ಣವೋ ದ್ವಿಜಃ ।
ಪೂರ್ವತೋ ವೇದಿಕಾಸ್ಥಾನಂ ಸ್ಥಾನಂ ಯಾಮ್ಯೇ ಚ ಕಲ್ಪಯೇತ್ ॥ ೪೩ ॥

ಪಾನೀಯಧಾರಾಂ ಶಿರಸಿ ಧಾರಯೇದ್ವಿಷ್ಣುತತ್ಪರಃ ।
ದ್ವಿತೀಯಾ ವೇದೀ ದೇವಸ್ಯ ತತ್ರ ಪದ್ಮಂ ಸಕರ್ಣಿಕಂ ॥ ೪೪ ॥

ತಸ್ಯ ಮಧ್ಯಸ್ಥಿತಂ ದೇವಂ ಕುರ್ಯಾದ್ವೈ ಪುರುಷೋತ್ತಮಂ ।
ಹಸ್ತಮಾತ್ರಾಣಿ ಕುಂಡಾನಿ ಕೃತ್ವಾ ತತ್ರ ತ್ರಿಮೇಖಲಂ ॥ ೪೫ ॥

---

೪೧. ವೇದವಿತ್ತುಗಳು ಆ ಧಾರೆಯಿಂದ ಬಹಳ ಫಲವನ್ನು ಹೇಳುವುದರಿಂದ ಎಲೈ ಕುರುಶ್ರೇಷ್ಠನೇ, ಅದನ್ನು ನಿಯಮದಿಂದ ಮಾಡಬೇಕು.

೪೨. ಆ ವೇದಿಕೆಯಲ್ಲಿ ದಕ್ಷಿಣಕ್ಕೆ ಅರ್ಧಚಂದ್ರಾಕಾರವಾಗಿಯೂ, ಪಶ್ಚಿಮಕ್ಕೆ ವರ್ತುಳಾಕಾರವಾಗಿಯೂ, ಉತ್ತರಕ್ಕೆ ಅಶ್ವತ್ಥಪತ್ರದ ಆಕಾರವಾಗಿಯೂ ಇರಬೇಕು. ಮಧ್ಯದಲ್ಲಿ ಪದ್ಮಾಕಾರವಾಗಿಯೂ ವೈಷ್ಣವನು ಮಾಡಬೇಕು.

೪೩-೪೪. ವೇದಿಕೆಯ ಪೂರ್ವದಲ್ಲಿ ಸ್ವಲ್ಪ ದಕ್ಷಿಣಕ್ಕೆ ನೀರಿನ ಧಾರೆ ಬೀಳುವಂತೆ ಮಾಡಬೇಕು. ಮತ್ತು ಆ ಕುಂಭವನ್ನು ತಲೆಯ ಮೇಲಿರುವಂತೆ ಮಾಡಬೇಕು. ಎರಡನೆಯ ವೇದಿಕೆಯೊಂದನ್ನು ದೇವರಿಗೆ ಮಾಡಬೇಕು. ಅದಕ್ಕೆ ಕರ್ಣಿಕೆಗಳಿರಬೇಕು.

೪೫. ಆ ಕರ್ಣಿಕೆಯ ಮಧ್ಯದಲ್ಲಿ ಪುರುಷೋತ್ತಮನನ್ನು ಇಡಬೇಕು. ಅದರ ಎದುರಿಗೆ ಒಂದು ಮೊಳದುದ್ದಕ್ಕೆ ಕುಂಡಗಳನ್ನು ಮಾಡಿ ಅದಕ್ಕೆ ಮೂರು ಮಧ್ಯಭಾಗಗಳನ್ನು ಮಾಡಿರಬೇಕು.

**ಯೋನಿವಕ್ತ್ರಾಣಿ ತಾನ್ಯೇವ ಬ್ರಾಹ್ಮಣೋ ಯವಸರ್ಪಿಷೀ ।**
**ತಿಲಾಂಶ್ಚ ವಿಷ್ಣುದೈವತ್ಯೈರ್ಮಂತ್ರೈರೇವ ತತೋ ಜುಹೇತ್ ॥ ೪೬ ॥**

**ಕೃತ್ವಾ ತು ವೈಷ್ಣವಂ ಸಮ್ಯಗ್ಯಾಗಂ ತತ್ರ ಪ್ರಕಲ್ಪಯೇತ್ ।**
**ಆಜ್ಯಧಾರಾಂ ಮಧ್ಯಮೇ ತು ಕುಂಡೇ ದದ್ಯಾತ್ತು ಯತ್ನತಃ ॥ ೪೭ ॥**

**ಕ್ಷೀರಧಾರಾಂ ದೇವದೇವೇ ವಾರಿಧಾರಾತ್ಮನೋಪರಿ ।**
**ನಿಷ್ಪಾವಾರ್ಧಪ್ರಮಾಣಾಂ ವೈ ಧಾರಾಮಾಜ್ಯಸ್ಯ ಪಾತಯೇತ್ ॥ ೪೮ ॥**

**ಸ್ವೇಚ್ಛಯಾ ಕ್ಷೀರಜಲಯೋರವಿಚ್ಛಿನ್ನಾ ಚ ಶರ್ವರೀ ।**
**ಜಲಕುಂಭಾನ್ಮಹಾವೀರ್ಯ ಸ್ಥಾಪಯಿತ್ವಾ ತ್ರಯೋದಶ ॥ ೪೯ ॥**

**ಭಕ್ಷ್ಯೈರ್ನಾನಾವಿಧೈರ್ಯುಕ್ತಾನ್ಸಿತವಸ್ತ್ರೈರಲಂಕೃತಾನ್ ।**
**ಪ್ರತಾನೌದುಂಬರೈಃ ಪಾತ್ರೈಃ ಪಂಚರತ್ನಸಮನ್ವಿತೈಃ ॥ ೫೦ ॥**

---

೪೬. ಅವುಗಳ ಬಾಯನ್ನು ಯೋನಿಯ ಮುಖದಂತೆ ಮಾಡಿರಬೇಕು. ಆ ಮೇಲೆ ಬ್ರಾಹ್ಮಣನು ಯವ ಮತ್ತು ತುಪ್ಪ, ಎಳ್ಳುಗಳನ್ನು ಹೋಮಮಾಡಬೇಕು. ವಿಷ್ಣುದೈವತಕವಾದ ಮಂತ್ರಗಳನ್ನು ಹೇಳಬೇಕು.

೪೭. ವೈಷ್ಣವ ಯಾಗವನ್ನು ಅಲ್ಲಿ ಚೆನ್ನಾಗಿ ಮಾಡಬೇಕು. ಆ ತುಪ್ಪದ ಧಾರೆಯು ಮಧ್ಯದ ಕುಂಡದಲ್ಲಿ ಬೀಳುತ್ತಿರಬೇಕು.

೪೮. ಹಾಲಿನ ಧಾರೆಯು ದೇವರ ಮೇಲೆ ಬೀಳುವಂತೆಯೂ ನೀರಿನ ಧಾರೆಯು ತನ್ನ ಮೇಲೆ ಬೀಳುತ್ತಿರುವಂತೆಯೂ ಇರುತ್ತಿರಬೇಕು. ಕುಂಡದಲ್ಲಿ ಬೀಳುವ ತುಪ್ಪದ ಧಾರೆಯು ಅವರೆಯ ಕಾಳಿನ ಅರ್ಧದಷ್ಟು ಬೀಳುತ್ತಿರಬೇಕು.

೪೯—೫೧. ಹಾಲು ನೀರಿನ ಧಾರೆಗಳು ಎಷ್ಟು ಬೇಕಾದರೂ ಬೀಳಬಹುದು. ಅವು ರಾತ್ರಿಯೆಲ್ಲವೂ ನಿಲ್ಲದಂತೆ ಬೀಳುತ್ತಿರಬೇಕು. ಹದಿಮೂರು ನೀರಿನ ಕಲಶಗಳನ್ನಿಡಬೇಕು. ನಾನಾಬಗೆಯ ಭಕ್ಷ್ಯಗಳನ್ನು ಮಾಡಿರಬೇಕು. ಆ ಕಲಶಗಳಿಗೆ ಬಿಳಿಯ ವಸ್ತ್ರಗಳನ್ನು ಹೊದ್ದಿಸಿರಬೇಕು. ಅತ್ತಿಯ ಸೌಟುಗಳನ್ನು ಮಾಡಿಸಿ ಅದರಲ್ಲಿ ಹಾಕಿರಬೇಕು. ಪಂಚರತ್ನಗಳನ್ನು ಹಾಕಿರಬೇಕು. ಉತ್ತರ ಮುಖವಾಗಿ ಕುಳಿತು ನಾಲ್ಕುಜನ ಬಹ್ವೃಕ್ಕುಗಳಾದ ಋತ್ವಿಕ್ಕುಗಳು ಹೋಮ

ಚತುರ್ಭಿರ್ಬಹ್ವೃಚೈರ್ಹೋಮಃ ಕಾರ್ಯಸ್ತತ್ರ ಉದಙ್ಮುಖೈಃ ।
ರುದ್ರಜಾಪ್ಯಶ್ಚತುರ್ಭಿಶ್ಚ ಯಜುರ್ವೇದಪರಾಯಣೈಃ ॥ ೫೧ ॥

ವೈಷ್ಣವಾನಿ ಚ ಸಾಮಾನಿ ಚತುರ್ಭಿಃ ಸಾಮವೇದಿಭಿಃ ।
ಅರಿಷ್ಟವರ್ಗಸಹಿತಾನ್ಯಭಿತಃ ಪರಿಪಾಠಯೇತ್ ॥ ೫೨ ॥

ಏವಂ ದ್ವಾದಶ ವೈ ವಿಪ್ರಾನ್ವಸ್ತ್ರಮಾಲ್ಯಾನುಲೇಪನೈಃ ।
ಪೂಜಯೇದಂಗುಲೀಯೈಶ್ಚ ಕಟಕೈರ್ಹೇಮಸೂತ್ರಕೈಃ ॥ ೫೩ ॥

ವಾಸೋಭಿಃ ಶಯನೀಯೈಶ್ಚ ವಿತ್ತಶಾಠ್ಯವಿವರ್ಜಿತಃ ।
ಏವಂ ಕ್ಷಪಾಂ ತಿವಾಹ್ಯಾ ವೈ ಗೀತಮಂಗಲನಿಸ್ವನೈಃ ॥ ೫೪ ॥

ಉಪಾಧ್ಯಾಯಸ್ಯ ಚ ಪುನರ್ದ್ವಿಗುಣಂ ಸರ್ವಮೇವ ತತ್ ।
ತತಃ ಪ್ರಭಾತೇ ವಿಮಲೇ ಸಮುತ್ಥಾಯ ತ್ರಯೋದಶ ॥ ೫೫ ॥

ಗಾವೋ ದೇಯಾಃ ಕುರುಶ್ರೇಷ್ಠ ಸೌವರ್ಣೋಪಸ್ಕರಾನ್ವಿತಾಃ ।
ಪಯಸ್ವಿನ್ಯಃ ಶೀಲವತ್ಯಃ ಕಾಂಸ್ಯದೋಹಸಮನ್ವಿತಾಃ ॥ ೫೬ ॥

---

ಮಾಡಬೇಕು. ಯಜುರ್ವೇದ ಓದಿದವರು ನಾಲ್ಕು ಜನರು ರುದ್ರಪಾರಾಯಣವನ್ನು ಮಾಡುತ್ತಿರಬೇಕು.

೫೨. ನಾಲ್ಕುಜನ ಸಾಮವೇದಿಗಳು ವೈಷ್ಣವ ಸಾಮಗಳನ್ನು ಗಾನಮಾಡುತ್ತಿರಬೇಕು. ಮತ್ತೊಂದು ಕಡೆ ಅರಿಷ್ಟವರ್ಗಗಳನ್ನು ಪಾರಾಯಣಮಾಡುತ್ತಿರಬೇಕು.

೫೩-೫೪. ಈರೀತಿ ಹನ್ನೆರಡು ಜನ ಬ್ರಾಹ್ಮಣರಿಗೆ ಹೇಳಿ ಅವರಿಗೆ ವಸ್ತ್ರ, ಮಾಲೆ, ಗಂಧಗಳಿಂದಲೂ, ಉಂಗುರಗಳಿಂದಲೂ, ಬಳೆ, ಚಿನ್ನದ ಜನಿವಾರ, ಹಾಸಿಗೆ ಇವೆಲ್ಲವನ್ನೂ ಶಕ್ತ್ಯನುಗುಣವಾಗಿ ಕೊಡಬೇಕು. ಈರೀತಿ ನೃತ್ಯ ವಾದ್ಯಗಳಿಂದ ರಾತ್ರಿಯನ್ನು ಕಳೆಯಬೇಕು.

೫೫—೫೬. ಇವುಗಳೆರಡರಷ್ಟನ್ನು ಉಪಾಧ್ಯಾಯನಿಗೆ ಕೊಡಬೇಕು, ಮಾರನೆಯ ದಿನ ಬೆಳಿಗ್ಗೆ ಎದ್ದು, ಹದಿಮೂರು ಕರೆಯುವ, ಒದೆಯದಿರುವ, ಹಸುಗಳನ್ನು ತಂದು ಚಿನ್ನದ ಸಾಮಾನುಗಳಿಂದ ಕೂಡಿಸಿ ಕಂಚಿನ ಕರೆಯುವ ಪಾತ್ರೆಯನ್ನಿಟ್ಟು

**ರೌಪ್ಯಖುರಾಃ ಸವಸ್ತ್ರಾಶ್ಚ ಚಂದನೇನಾನುಭೂಷಿತಾಃ ।**
**ತಾಸ್ತು ತೇಷಾಂ ತತೋ ಭಕ್ತ್ಯಾ ಭಕ್ಷ್ಯಭೋಜ್ಯೇನ ತರ್ಪಿತಾನ್ ॥ ೫೭ ॥**

**ಕೃತ್ವಾ ವೈ ಬ್ರಾಹ್ಮಣಾನ್ಸರ್ವಾನ್ವಸ್ತ್ರೈರ್ನಾನಾವಿಧೈಸ್ತತಃ ।**
**ಭುಕ್ತ್ವಾ ಚಾಕ್ಷಾರಲವಣಮಾತ್ಮನಾ ಚ ವಿಸರ್ಜಯೇತ್ ॥ ೫೮ ॥**

**ಅನುಗಮ್ಯ ಪದಾನ್ಯಷ್ಟೌ ಪುತ್ರಭಾರ್ಯಾಸಮನ್ವಿತಃ ।**
**ಪ್ರೀಯತಾಮತ್ರ ದೇವೇಶಃ ಕೇಶವಃ ಕ್ಲೇಶನಾಶನಃ ॥ ೫೯ ॥**

**ಶಿವಸ್ಯ ಹೃದಯೇ ವಿಷ್ಣುರ್ವಿಷ್ಣೋಶ್ಚ ಹೃದಯೇ ಶಿವಃ ।**
**ಯಥಾಂತರಂ ನ ಪಶ್ಯಾಮಿ ತಥಾ ಮೇ ಸ್ವಸ್ತಿ ಚಾಯುಷಃ ॥ ೬೦ ॥**

**ಏವಮುಚ್ಚಾರ್ಯ ತಾನ್ಕುಂಭಾನ್ಗಾಶ್ಚೈವ ಶಯನಾನಿ ಚ ।**
**ವಾಸಾಂಸಿ ಚೈವ ಸರ್ವೇಷಾಂ ಗೃಹಾಣಿ ಪ್ರಾಪಯೇದ್ಬುಧಃ ॥ ೬೧ ॥**

**ಅಭಾವೇ ಬಹುಶಯ್ಯಾನಾಮೇಕಾಮಪಿ ಸುಸಂಸ್ಕೃತಾಂ ।**
**ಶಯ್ಯಾಂ ದದ್ಯಾದ್ಗೃಹೇ ಭೀಮ ಸರ್ವೋಪಸ್ಕರಸಂಯುತಾಂ ॥ ೬೨ ॥**

---

ಬೆಳ್ಳಿಯ ಗೊರಸು ಹಾಕಿರಬೇಕು. ಪಂಚೆ ಹೊದ್ದಿಸಿರಬೇಕು ಚಂದನವನ್ನು ಪೂಸಿರಬೇಕು. ಆ ಹನ್ನೆರಡು ಜನ ಬ್ರಾಹ್ಮಣರನ್ನೂ, ಗುರುವನ್ನೂ, ಭಕ್ಷಭೋಜ್ಯಗಳಿಂದ ತೃಪ್ತಿಪಡಿಸಿ, ಅವರಿಗೂ ನಾನಾಬಗೆಯಾದ ವಸ್ತ್ರಗಳನ್ನು ಕೊಟ್ಟು ಈ ಗೋವುಗಳನ್ನು ಕೊಡಬೇಕು. ತಾನು ಉಪ್ಪುಕಾರಗಳನ್ನು ಬಿಟ್ಟು ಊಟಮಾಡಬೇಕು. ಹೀಗೆ ಮಾಡಿ ಅವರನ್ನು ವಿಸರ್ಜನೆ ಮಾಡಿ ಕಳುಹಿಸಬೇಕು.

೫೯-೬೦. ಮಕ್ಕಳು ಹೆಂಡತಿಯರನ್ನು ಕರೆದುಕೊಂಡು ಎಂಟು ಹೆಜ್ಜೆಗಳ ದೂರ ಅನುಸರಿಸಿ ಹೋಗಬೇಕು. ದೇವೇಶನೂ, ಕ್ಲೇಶನಾಶನೂ ಆದ ಕೇಶವನು ಪ್ರೀತನಾಗಲಿ ಎನ್ನಬೇಕು. ಶಿವನ ಹೃದಯದಲ್ಲಿ ವಿಷ್ಣುವೂ, ವಿಷ್ಣುವಿನ ಹೃದಯದಲ್ಲ ಶಿವನೂ ಇದ್ದು ಭೇದಕಾಣದಿರುವಂತೆ ನನ್ನ ಆಯುಸ್ಸಿನಲ್ಲಿ ಒಳ್ಳೆಯದಾಗಲಿ.

೬೧. ಆರೀತಿ ಹೇಳಿ ಅವರ ಕುಂಭಗಳನ್ನೂ, ಹಸುಗಳನ್ನೂ ಹಾಸಿಗೆಯನ್ನೂ, ಬಟ್ಟೆಗಳನ್ನೂ ಅವರವರ ಮನೆಗೆ ತಲಪಿಸಬೇಕು.

೬೨. ಅನೇಕ ಹಾಸಿಗೆಗಳನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಅದರ ಸಾಮಾನುಗಳಿಂದ ಕೂಡಿದ ಒಂದು ಹಾಸಿಗೆಯನ್ನಾದರೂ ಕೊಡಬೇಕು.

ಇತಿಹಾಸಪುರಾಣಾನಿ ವಾಚಯಿತ್ವಾ ಚ ವಾಹಯೇತ್ ।
ತದ್ದಿನಂ ಕುರುಶಾರ್ದೂಲ ಯದೀಚ್ಛೇದ್ವಿಪುಲಾಂ ಶ್ರಿಯಂ ॥ ೬೩ ॥

ತಸ್ಮಾತ್ತ್ವಂ ಸತ್ತ್ವಮಾಸ್ಥಾಯ ಭೀಮಸೇನ ವಿಮತ್ಸರಃ ।
ಕುರು ವ್ರತಮಿದಂ ಸಮ್ಯಕ್ಸ್ನೇಹಾದ್ಗುಹ್ಯಂ ಮಯೋದಿತಂ ॥ ೬೪ ॥

ತ್ವಯಾ ಕೃತಮಿದಂ ವೀರ ತ್ವನ್ನಾಮಾಂಕಂ ಭವಿಷ್ಯತಿ ।
ಸಾ ಭೀಮದ್ವಾದಶೀ ಹ್ಯೇಷಾ ಸರ್ವಪಾಪಹರಾ ಶುಭಾ ।
ಯಾ ತು ಕಲ್ಯಾಣಿನೀ ನಾಮ ಪುರಾಕಲ್ಪೇಷು ಪಠ್ಯತೇ ॥ ೬೫ ॥

ತ್ವಂ ಚಾದಿಕರ್ತಾ ಭವ ಸೌರಕೋऽಸ್ಮಿ-
ನ್ಕಲ್ಪೇ ಮಹಾವೀರವರಪ್ರಧಾನ ।
ಯಸ್ಯಾಃ ಸ್ಮೃತೇಃ ಕೀರ್ತನತೋऽಪ್ಯಶೇಷಂ
ಪಾಪಂ ಪ್ರನಷ್ಟಂ ತ್ರಿದಶಾಧಿಪಸ್ಯ ॥ ೬೬ ॥

---

೬೩. ಇತಿಹಾಸ ಪುರಾಣಗಳನ್ನು ಕೇಳುತ್ತ, ಆ ದಿನವನ್ನು ಕಳೆಯಬೇಕು. ಹಾಗೆ ಮಾಡಿದರೆ ಹೆಚ್ಚಾದ ಸಂಪತ್ತು ಸಿಕ್ಕುತ್ತದೆ.

೬೪. ಆದ್ದರಿಂದ ಎಲೈ ಭೀಮಸೇನನೇ, ಕಾಮ, ಕ್ರೋಧಗಳನ್ನು ಬಿಟ್ಟು ಸತ್ವವನ್ನು ಆಶ್ರಯಿಸಿ ಈ ವ್ರತವನ್ನು ಮಾಡು. ಸ್ನೇಹದಿಂದ ಈ ಗುಟ್ಟಾದ ವ್ರತವನ್ನು ಹೇಳಿದ್ದೇನೆ.

೬೫. ಎಲೈ ವೀರನೇ, ನೀನು ಇದನ್ನು ಮಾಡಿದರೆ ನಿನ್ನ ಹೆಸರೇ ಇದಕ್ಕೆ ಬರುತ್ತದೆ. ಆದ್ದರಿಂದ ಇದು ಪಾಪಹರವಾದ ಭೀಮದ್ವಾದಶಿಯು. ಪೂರ್ವದ ಕಲ್ಪದಲ್ಲಿ ಇದಕ್ಕೆ ಕಲ್ಯಾಣಿನೀ ಎಂದು ಹೆಸರು.

೬೬. ಈ ವರಾಹಕಲ್ಪದಲ್ಲಿ ಎಲೈ ಭೀಮಸೇನನೇ. ನೀನೆ ಈ ವ್ರತಕ್ಕೆ ಮೊದಲನೆಯವನಾಗು. ಅದನ್ನು ಸ್ಮರಿಸಿಕೊಂಡು ಒಂದಾವರ್ತಿ ಹೇಳಿದುದರಿಂದಲೇ ಇಂದ್ರನಿಗೆ ಎಲ್ಲಾ ಪಾಪಗಳೂ ಹೋದುವು.

ದೃಷ್ಟ್ವಾ ಚ ತಾಮಪ್ಸರಸಾಮಭೀಷ್ಟಾಂ
ವೇಶ್ಯಾಕೃತಾಮನ್ಯಭವಾಂತರೇಷು ।
ಆಭೀರಕನ್ಯಾ ಹಿ ಕುತೂಹಲೇನ
ಸೈವೋರ್ವಶೀ ಸಂಪ್ರತಿ ನಾಕಪೃಷ್ಠೇ　　॥ ೬೭ ॥

ಜಾತಾಽಥ ವಾ ವೈಶ್ಯಕುಲೋದ್ಭವಾಽಪಿ
ಪುಲೋಮಕನ್ಯಾ ಪುರುಹೂತಪತ್ನೀ ।
ತತ್ರಾಪಿ ತಸ್ಯಾಃ ಪರಿಚಾರಿಕೇಯಂ
ಮಮ ಪ್ರಿಯಾ ಸಂಪ್ರತಿ ಸತ್ಯಭಾಮಾ　　॥ ೬೮ ॥

ಕೃತಂ ಪುರಾ ಮಂಗಲಮೇತದೇವ
ದ್ವಿಜಾತ್ಮಜಾ ವೇದವತೀ ಬಭೂವ ।
ಸ್ನಾತಃ ಪುರಾ ಮಂಡಲಮೇವ ತದ್ವ-
ತ್ತೇಜೋಮಯಂ ಸ್ವೇದಶರೀರಮಾಪ　　॥ ೬೯ ॥

---

೬೭. ಈ ಕಲ್ಯಾಣಿನೀ ಎಂಬ ಭೀಮದ್ವಾದಶಿಯನ್ನು ಪೂರ್ವದ ಕಲ್ಪದಲ್ಲಿ ಒಬ್ಬ ಗೊಲ್ಲರ ಹುಡುಗಿಯು ಅಪ್ಸರಸ್ತ್ರೀಯರು ಮಾಡುತ್ತಿದ್ದುದನ್ನು ನೋಡಿ, ತಾನೂ ಆಚರಿಸಿದುದರಿಂದ ಈಗ ಅಪ್ಸರೋತ್ತಮಳಾದ ಊರ್ವಶಿಯಾಗಿ ದೇವಲೋಕದಲ್ಲಿ ಮೆರೆಯುತ್ತಿದ್ದಾಳೆ.

೬೮. ಪೂರ್ವಜನ್ಮದಲ್ಲಿ ವೈಶ್ಯಕುಲದಲ್ಲಿ ಹುಟ್ಟಿದ್ದು ಈ ವ್ರತವನ್ನು ಮಾಡಲು ಪುಲೋಮ ಕನ್ಯೆಯಾದ ಶಚೀದೇವಿಯು ಈಗ ಇಂದ್ರನ ಹೆಂಡತಿಯಾಗಿದ್ದಾಳೆ. ಅವಳಿಗೆ ಆಗ ಪರಿಚಾರಕಳಾಗಿದ್ದ ಈಕೆಯು ಈಗ ನನಗೆ ಪ್ರೀತಿಪಾತ್ರಳಾದ ಸತ್ಯಭಾಮೆಯಾಗಿದ್ದಾಳೆ.

೬೯. ಈ ವೇದವತಿಯು ಪೂರ್ವದಲ್ಲಿ ಬ್ರಾಹ್ಮಣ ಪುತ್ರಿಯಾಗಿದ್ದಳು. ಈಕೆಯು ಈ ಉತ್ತಮವ್ರತವನ್ನು ಮಾಡಿದಳು. ಅದರಿಂದಲೇ ಈ ಉತ್ತಮ ಸ್ಥಿತಿಯು ಬಂದಿರುವುದು. ಈ ಸೂರ್ಯನೂ ಕೂಡ ಪೂರ್ವದಲ್ಲಿ ಈ ಕಲ್ಯಾಣೀ ದ್ವಾದಶಿಯಲ್ಲಿ ಸ್ನಾನಮಾಡಿದುದರಿಂದಲೇ ತೇಜೋಮಯವಾದ ಮಂಡಲವನ್ನು ಹೊಂದಿರುವನು ಮತ್ತು ಸಾವಿರ ಮೊನೆಗಳುಳ್ಳ, ಸಾವಿರ ರಶ್ಮಿಗಳುಳ್ಳ ತನ್ನ ಈ ಶರೀರವನ್ನು ಪಡೆದನು.

ಅಸ್ಯಾಂ ಚ ಕಲ್ಯಾಣತಿಥೌ ವಿವಸ್ವಾ-
ನ್ಸಹಸ್ರಧಾರೇಣ ಸಹಸ್ರರಶ್ಮಿಭಿಃ ।
ಇದಮೇವ ವ್ರತಂ ಮಹೇಂದ್ರಮುಖ್ಯೈ-
ರ್ಬಹುಭಿರ್ದೇವಸುರಾರಿಕೋಟಿಭಿಶ್ಚ ॥ ೭೦ ॥

ಫಲಮಸ್ಯೇಹ ನ ಶಕ್ಯತೇ ಪ್ರವಕ್ತುಂ
ಯದಿ ಜಿಹ್ವಾಯುತಕೋಟಯೋ ಮುಖೇ ಸ್ಯುಃ ।
ಕಲಿಕಲುಷವಿದಾರಿಣೀಮನಂತಾಮಪಿ
ಕಥಯಿಷ್ಯತಿ ಯಾದವೇಂದ್ರಸೂನುಃ ॥ ೭೧ ॥

ಅಪಿ ನರಕಗತಾನ್ಪಿತ್ರ್ಯಾನಶೈಷಾ
ಹ್ಯಲಮುದ್ಧರ್ತುಮಿಹೈವ ಯಃ ಕರೋತಿ ।
ಇದಮನಘಂ ಶೃಣೋತಿ ಚಾತಿಭಕ್ತ್ಯಾ
ಪರಿಪಠತೀಹ ಪರೋಪಕಾರಹೇತೋಃ ॥ ೭೨ ॥

ಇಹ ಪಂಕಜನಾಭಿಭಕ್ತಿಮಾನ್ಭವೇ-
ದಥ ಶಕ್ರಸ್ಯ ಸ ಪೂಜ್ಯತಾಮುಪೈತಿ ।
ಕಲ್ಯಾಣಿನೀ ನಾಮ ಪುರಾವಿಸರ್ಗೇ
ಯಾ ದ್ವಾದಶೀ ಮಾಘದಿನೇಽಭಿಪೂಜ್ಯಾ ।

---

೭೦-೭೧. ಮಹೇಂದ್ರನೇ ಮುಂತಾದ ದೇವತೆಗಳೂ ಕೂಡ ಈ ವ್ರತವನ್ನೇ ಆಚರಿಸಿರುವರು. ಇದರ ಫಲವನ್ನು ಹೇಳಲು ಬಾಯೊಳಗೆ ಹತ್ತುಸಾವಿರಕೋಟಿ ನಾಲಿಗೆಗಳಿದ್ದರೂ ಸಾಕಾಗುವುದಿಲ್ಲ. ಕಲಿಯುಗದ ಪಾಪನಾಶಕವಾದ ಈ ಉತ್ತಮ ವಾದ ದ್ವಾದಶೀ ವ್ರತವನ್ನು ಯದುಕುಲದಲ್ಲಿ ಕೇಶವನು ಹೇಳುತ್ತಾನೆ.

೭೨. ಇದನ್ನು ಆಚರಿಸಿದವನು ನರಕದಲ್ಲಿ ಬಿದ್ದಿರುವ ತಮ್ಮ ಪಿತೃಗಳನ್ನು ಎತ್ತುತ್ತಾನೆ. ಈ ಉತ್ತಮವಾದ ವ್ರತವನ್ನು ಭಕ್ತಿಯಿಂದ ಕೇಳಿದವನೂ ಓದಿದವನೂ ಪರೋಪಕಾರಮಾಡಿದವನೂ ಈ ಜನ್ಮದಲ್ಲಿ ವಿಷ್ಣುಭಕ್ತನಾಗಿದ್ದುಕೊಂಡು ಸತ್ತನಂತರ ಇಂದ್ರನಿಗೆ ಪೂಜ್ಯನಾಗುತ್ತಾನೆ.

೭೩. ಮಾಘ ದ್ವಾದಶಿಯು ಪೂರ್ವಕಲ್ಪದಲ್ಲಿ ಕಲ್ಯಾಣಿನೀ ಎಂಬ ಹೆಸರು

ಸಾ ಪಾಂಡುಪುತ್ರೇಣ ಕೃತಾ ಭವಿಷ್ಯ-
ತ್ಯನಂತಪುಣ್ಯಾಽನಘ ಭೀಮಪೂರ್ವಾ ॥ ೭೩ ॥

॥ ಬ್ರಹ್ಮೋವಾಚ ॥

ವರ್ಣಾಶ್ರಮಾಣಾಂ ಪ್ರಭವಃ ಪುರಾಣೇಷು ಮಯಾ ಶ್ರುತಃ ।
ಸದಾಚಾರಶ್ಚ ಭಗವನ್ಧರ್ಮಶಾಸ್ತ್ರಾಂಗವಿಸ್ತರೈಃ ।
ಪಣ್ಯಸ್ತ್ರೀಣಾಂ ಸಮಾಚಾರಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೭೦ ॥

॥ ಮಹೇಶ್ವರ ಉವಾಚ ॥

ತಸ್ಮಿನ್ನೇವ ಯುಗೇ ಬ್ರಹ್ಮನ್ಸಹಸ್ರಾಣಿ ತು ಷೋಡಶ ।
ವಾಸುದೇವಸ್ಯ ನಾರೀಣಾಂ ಭವಿಷ್ಯಂತ್ಯಬ್ಜಸಂಭವ ॥ ೭೫ ॥

ತಾಭಿರ್ವಸಂತಸಮಯೇ ಕೋಕಿಲಾಲಿಕುಲಾಕುಲೇ ।
ಪುಷ್ಪಿತೋಪವನೇ ಫುಲ್ಲಕಲ್ಹಾರಸರಸಸ್ತಟೇ ॥ ೭೬ ॥

ನಿರ್ಭರಂ ಸಹ ಪತ್ನೀಭಿಃ ಪ್ರಶಸ್ತಾಭಿರಲಂಕೃತಃ ।
ರಮಯಿಷ್ಯತಿ ವಿಶ್ವಾತ್ಮಾ ಕೃಷ್ಣೋ ಯದುಕುಲೋದ್ವಹಃ ॥ ೭೭ ॥

---

ಪಡೆದಿತ್ತು. ಈಗ ಪಾಂಡುಪುತ್ರನಾದ ಭೀಮನು ಮಾಡುವುದರಿಂದ ಭೀಮದ್ವಾದಶಿ ಯಾಗುವುದು.

೭೪. ಬ್ರಹ್ಮನು ಹೇಳಿದನು :—ಎಲೈ ಸ್ವಾಮಿಯೇ, ವರ್ಣಾಶ್ರಮಗಳ ಉತ್ಪತ್ತಿಯನ್ನು ಹೇಳಿದೆ. ಅದನ್ನು ಪುರಾಣದಲ್ಲಿ ಕೇಳಿದ್ದೇನೆ. ಸದಾಚಾರಗಳನ್ನು ಕೇಳಿದ್ದೇನೆ. ಧರ್ಮಶಾಸ್ತ್ರಗಳನ್ನು ಅಂಗಸಹಿತನಾಗಿ ಕೇಳಿದ್ದೇನೆ. ಈಗ ಸೂಳೆ ಯರ ವೃತ್ತಾಂತವೇನೆಂಬುದನ್ನು ಕೇಳಬೇಕೆಂದಿದ್ದೇನೆ.

೭೫—೭೭ ಮಹೇಶ್ವರನು ಹೇಳಿದನು :—ಎಲೈ ಬ್ರಹ್ಮನೇ, ಆ ಯುಗ ದಲ್ಲಿಯೇ ಹದಿನಾರು ಸಾವಿರ ಜನ ಹೆಂಡತಿಯರು ಶ್ರೀಕೃಷ್ಣನಿಗಿರುತ್ತಾರೆ. ಕೋಗಿ ಲೆಯ ಗಾನವುಳ್ಳ, ವಸಂತ ಸಮಯದಲ್ಲಿ ಕಲ್ಹಾರಗಳಿಂದ ಕೂಡಿರುವ ಸರೋವರದ ದಡದಲ್ಲಿ ಅವರೊಡನೆ ವಿಶ್ವಾತ್ಮನಾದ ಕೃಷ್ಣನು ರಮಿಸುತ್ತಾನೆ.

ಕುರಂಗನಯನಃ ಶ್ರೀಮಾನ್ಮಾಲತೀಕೃತಶೇಖರಃ ।
ಗಚ್ಛನ್ಸಮೀಪಮಾರ್ಗೇಣ ಸಾಂಬಃ ಪರಪುರಂಜಯಃ ॥ ೭೮ ॥

ಸಾಕ್ಷಾತ್ಕಂದರ್ಪರೂಪೇಣ ಸರ್ವಾಭರಣಭೂಷಿತಃ ।
ಅನಂಗಶರತಪ್ತಾಭಿಃ ಸಾಭಿಲಾಷಮವೇಕ್ಷಿತಃ ॥ ೭೯ ॥

ಪ್ರವೃದ್ಧೋ ಮನ್ಮಥಸ್ತಾಸಾಂ ಭವಿಷ್ಯತಿ ಯದಾತ್ಮನಿ ।
ತದಾsವೇಕ್ಷ್ಯ ಜಗನ್ನಾಥೋ ದೇವೇಶೋ ಧ್ಯಾನಚಕ್ಷುಷಾ ॥ ೮೦ ॥

ಸ್ವಯಂ ವಕ್ಷ್ಯತಿ ತಾಃ ಸರ್ವಾ ವೋ ಹರಿಷ್ಯಂತಿ ದಸ್ಯವಃ ।
ಅಪರೋಕ್ಷಂ ಯತಸ್ತ್ವೇವಂ ಸ್ನಿಗ್ಧಮೇತದ್ವಿಚಿಂತಿತಂ ॥ ೮೧ ॥

ತತಃ ಪ್ರಸಾದಿತೋ ದೇವ ಇದಂ ವಕ್ಷ್ಯತಿ ಶಾರ್ಙ್ಗಭೃತ್ ।
ತಾಭಿಃ ಶಾಪಾಭಿತಪ್ತಾಭಿರ್ಭಗವಾನ್ಭೂತಭಾವನಃ ॥ ೮೨ ॥

ಉತ್ತರಾಶ್ರಿತದಾಶಾನಾಮುದ್ಧರ್ತಾ ಬ್ರಾಹ್ಮಣಪ್ರಿಯಃ ।
ಉಪದೇಕ್ಷ್ಯತ್ಯನಂತಾತ್ಮಾ ಭಾವಿಕಲ್ಯಾಣಕಾರಕಂ ।
ಭವತೀನಾಮೃಷಿರ್ದಾಲ್ಭ್ಯೋ ಯದ್ವ್ರತಂ ಕಥಯಿಷ್ಯತಿ ॥ ೮೩ ॥

---

೭೮—೮೦. ಜಿಂಕೆಯ ಕಣ್ಣುಗಳಂತೆ ಕಣ್ಣುಳ್ಳ ಕೃಷ್ಣನ ಮಗನಾದ ಸಾಂಬನು ಆ ಮಾರ್ಗವಾಗಿ ಬರುತ್ತಿದ್ದನು. ಅವನು ಸುಂದರನಾಗಿದ್ದು ಜಾಜೀ ಪುಷ್ಪವನ್ನು ಮುಡಿದುಕೊಂಡು ಎಲ್ಲಾ ಒಡವೆಯನ್ನೂ ಹಾಕಿಕೊಂಡು ಬರುತ್ತಿರುವುದನ್ನು ನೋಡಿ ಆ ಕೃಷ್ಣನ ಹೆಂಡತಿಯರೆಲ್ಲರೂ ಅವನಲ್ಲಿ ಕಾಮಬುದ್ಧಿಯಿಂದ ನೋಡಿ ಮನ್ಮಥ ಪೀಡಿತರಾದರು. ಇದನ್ನು ನೋಡಿ ಆ ಕೃಷ್ಣನು ಧ್ಯಾನಚಕ್ಷುಸ್ಸಿನಿಂದ ತಿಳಿದನು.

೮೧. ಆಗ ಕೃಷ್ಣನು ನೀವು ಬೇರೆಯವರಲ್ಲಿ ಮನಸ್ಸಿಟ್ಟು ಯೋಚಿಸಿದುದರಿಂದ ನಿಮ್ಮನ್ನು ಕಳ್ಳರು ಕದ್ದುಕೊಂಡು ಹೋಗಲಿ ಎಂದು ಶಪಿಸುವನು.

೮೨-೮೩. ಅವರೆಲ್ಲರೂ ಆಮೇಲೆ ಆ ಸ್ವಾಮಿಯನ್ನು ಬಹುವಿಧವಾಗಿ ಬೇಡಿಕೊಳ್ಳುತ್ತಾರೆ. ಆಗ ಆ ಕೃಷ್ಣನು ಉತ್ತರ ಕುರುದೇಶವನ್ನು ಆಶ್ರಯಿಸಿರುವ ಬೆಸ್ತರನ್ನು ಒಬ್ಬ ಬ್ರಾಹ್ಮಣಪ್ರಿಯನಾದ ದಾಲ್ಭ್ಯನೆಂಬ ಋಷಿಯು ಉದ್ಧಾರಮಾಡಲು ಬರುತ್ತಾನೆ. ಅವನು ನಿಮ್ಮೆಲ್ಲರನ್ನೂ ಉದ್ಧಾರಮಾಡಲು ವ್ರತೋಪದೇಶವನ್ನು ಮಾಡುತ್ತಾನೆ. ಆಗ ನೀವು ಉದ್ಧಾರವಾಗುವಿರಿ. ಎಂದೆನ್ನುತ್ತಾನೆ.

॥ ಪುಲಸ್ತ್ಯ ಉವಾಚ ॥

ಇತ್ಯುಕ್ತ್ವಾ ತಾಃ ಪರಿತ್ಯಜ್ಯ ಗತೋಽಂತರ್ಧಾನಮೀಶ್ವರಃ ।
ತತಃ ಕಾಲೇನ ಮಹತಾ ಭಾರಾವತರಣೇ ಕೃತೇ ॥ ೮೪ ॥

ನಿರ್ವೃತ್ತೇ ಮೌಸಲೇ ತದ್ವತ್ಕೇಶವೇ ದಿವಮಾಗತೇ ।
ಶೂನ್ಯೇ ಯದುಕುಲೇ ಚೈವ ಚೌರೈರಪಿ ಜಿತೇಽರ್ಜುನೇ ॥ ೮೫ ॥

ಹೃತಾಸು ಕೃಷ್ಣಪತ್ನೀಷು ದಾಸಭೋಗ್ಯಾಸು ಚಾರ್ಬುದೇ ।
ತಿಷ್ಠಂತೀಷು ಚ ದೌರ್ಗತ್ಯಸಂತಪ್ತಾಸು ಚತುರ್ಮುಖಃ ॥ ೮೬ ॥

ಪ್ರೇಷಯಿಷ್ಯತಿ ಯೋಗಾತ್ಮಾ ದಾಲ್ಭ್ಯಂ ನಾಮ ಮಹಾಮುನಿಂ ।
ತಾಸ್ತಮರ್ಘೇಣ ಸಂಪೂಜ್ಯ ಪ್ರಣಿಪತ್ಯ ಪುನಃ ಪುನಃ ॥ ೮೭ ॥

ಆಲಪ್ಯಮಾನಾ ಬಹುಶೋ ಬಾಷ್ಪಪರ್ಯಾಕುಲೇಕ್ಷಣಾಃ ।
ಸ್ಮರಂತ್ಯೋ ವಿಪುಲಾನ್ಭೋಗಾನ್ದಿವ್ಯಮಾಲ್ಯಾನುಲೇಪನೈಃ ॥ ೮೮ ॥

---

೮೪—೮೬. ಪುಲಸ್ತ್ಯನು ಹೇಳಿದನು :—ಹೀಗೆಂದು ಅವರೊಡನೆ ಹೇಳಿ ಆ ಸ್ವಾಮಿಯು ಹೊರಟುಹೋಗುವನು. ಅನಂತರ ಭೂಭಾರವನ್ನೆಲ್ಲಾ ನಿವೃತ್ತಿ ಮಾಡಿ ಮುಸಲಯುದ್ಧವು ಆ ಯಾದವರಲ್ಲಿ ನಡೆದು ಅವರೆಲ್ಲರೂ ಸತ್ತು, ಕೇಶವನು ಸ್ವರ್ಗವನ್ನು ಸೇರಲು, ಯದುಕುಲಕ್ಕೆ ಯಾರೂ ರಕ್ಷಕರಿಲ್ಲದೇ ಹೋಗಲು, ಅರ್ಜುನನು ಅವರೆಲ್ಲರನ್ನು ಕರೆದುಕೊಂಡು ಹೋಗುತ್ತಿರುವಾಗ ಕಳ್ಳರು ಬಂದು ಅರ್ಜುನನನ್ನು ಜಯಿಸಿ ಆ ಹೆಂಗಸರೆಲ್ಲರನ್ನೂ ಕದ್ದುಕೊಂಡು ಹೋಗುವರು. ಹೀಗೆ ಆ ದಾಸರಿಂದ ಭೋಗವನ್ನು ಹೊಂದುತ್ತಾ ಖಿನ್ನರಾಗುತ್ತಿರಲು ಚತುರ್ಮುಖನು ಯೋಗದಿಂದ ಅದನ್ನು ತಿಳಿದು ದಾಲ್ಭ್ಯನೆಂಬ ಋಷಿಯನ್ನು ಅವರನ್ನುದ್ಧಾರಮಾಡಲು ಕಳುಹಿಸುತ್ತಾನೆ.

೮೭—೯೦ ಆ ಹೆಂಗಸರು ಅವನನ್ನು ಅರ್ಘ್ಯದಿಂದ ಪೂಜಿಸಿ, ಅನೇಕಬಾರಿ ನಮಸ್ಕರಿಸಿ ಮಾತನಾಡುತ್ತ ಕಣ್ಣೀರನ್ನು ಸುರಿಸುತ್ತ ಆ ಬಹುವಾದ ಭೋಗಗಳನ್ನೂ ಆ ಒಡವೆ, ಗಂಧ, ಹೂಗಳನ್ನೂ ಜಗದೀಶನಾದ ಗಂಡನನ್ನೂ, ಉತ್ತಮವಾದ ಪಟ್ಟಣ

ಭರ್ತಾರಂ ಜಗತಾಮೀಶಮನಂತಮಪರಾಜಿತಂ ।
ದಿವ್ಯಾನುಭಾವಾಂ ಚ ಪುರೀಂ ನಾನಾರತ್ನಗೃಹಾಣಿ ಚ ॥ ೮೯ ॥

ದ್ವಾರಕಾವಾಸಿನಃ ಸರ್ವಾನ್ದೇವರೂಪಾನ್ಕುಮಾರಕಾನ್ ।
ಪ್ರಶ್ನಮೇತಂ ಕರಿಷ್ಯಂತಿ ಮುನೇರಭಿಮುಖಂ ಸ್ಥಿತಾಃ ॥ ೯೦ ॥

॥ ಕೃಷ್ಣಪತ್ನ್ಯ ಊಚುಃ ॥

ದಸ್ಯುಭಿರ್ಭಗವನ್ಸರ್ವಾಃ ಪರಿಭುಕ್ತಾ ವಯಂ ಬಲಾತ್ ।
ಅಧರ್ಮವ್ಯಸನೇಽಸ್ಮಾಕಮಸ್ತಿ ವೈ ಶರಣಂ ಭವಾನ್ ॥ ೯೧ ॥

ಆದಿಷ್ಟೋಽಸಿ ಪುರಾ ಬ್ರಹ್ಮನ್ಕೇಶವೇನ ಚ ಧೀಮತಾ ।
ಕಸ್ಮಾದೀಶೇನ ಸಂಯೋಗಂ ಪ್ರಾಪ್ಯ ವೇಶ್ಯಾತ್ವಮಾಗತಾಃ ॥ ೯೨ ॥

ವೇಶ್ಯಾನಾಮಪಿ ಯೋ ಧರ್ಮಸ್ತಂ ನೋ ಬ್ರೂಹಿ ತಪೋಧನ ।
ಕಥಯಿಷ್ಯೇ ತತಸ್ತಾಸಾಂ ಯದ್ದಾಲ್ಭ್ಯಶ್ಚೈಕಿತಾಯನಃ ॥ ೯೩ ॥

---

ವನ್ನೂ, ಮನೋಹರವಾದ ಮನೆಗಳನ್ನೂ, ದ್ವಾರಕೆಯಲ್ಲಿರುವ ಜನಗಳನ್ನೂ, ದೇವತೆಗಳಂತಿದ್ದ ಮಕ್ಕಳನ್ನೂ, ಜ್ಞಾಪಿಸಿಕೊಂಡು ಆ ಋಷಿಯನ್ನು ಕುರಿತು ಈರೀತಿ ಪ್ರಶ್ನಿಸುತ್ತಾರೆ.

೯೧. ಕೃಷ್ಣನ ಹೆಂಡತಿಯರು ಹೇಳಿದರು :—ಎಲೈ ಋಷಿಯೇ, ಈ ಕಳ್ಳರು ಬಲಾತ್ಕಾರದಿಂದ ನಮ್ಮನ್ನು ಅನುಭವಿಸಿದರು. ಈ ಅಧರ್ಮವನ್ನು ತಪ್ಪಿಸಲು ನೀನೇ ನಮಗೆ ರಕ್ಷಕನು.

೯೨. ಎಲೈ ಋಷಿಯೇ, ಸ್ವಾಮಿಯೊಡನೆ ಸಂಯೋಗವನ್ನು ಹೊಂದಿ ನಾವು ಬೇರೆ ರೀತಿಯ ಮನಸ್ಸನ್ನು ಹೊಂದಿದಾಗ ಆ ಸ್ವಾಮಿಯು ನೀವು ವೇಶ್ಯೆಯರಾಗಿರೆಂದು ಶಾಪವನ್ನು ಕೊಟ್ಟು ಅನಂತರ ದಾಲ್ಭ್ಯನೆಂಬ ಋಷಿಯು ಬಂದು ನಿಮ್ಮನ್ನು ಉದ್ಧಾರಮಾಡುವನೆಂದು ಹೇಳಿದ್ದಾನೆ. ಅದೇ ರೀತಿ ನೀನು ಬಂದಿದ್ದೀಯೆ.

೯೩. ಆಗ ಅವರು ವೇಶ್ಯೆಯರಾದ ನಮಗೆ ಇರುವ ಧರ್ಮವನ್ನು ಹೇಳೆನಲು, ಆ ಚೈಕಿತಾಯನಾದ ದಾಲ್ಭ್ಯನು ಹೇಳಿದುದನ್ನು ನಿಮಗೆ ಹೇಳುತ್ತೇವೆ.

॥ ದಾಲ್ಭ್ಯ ಉವಾಚ ॥

ಜಲಕ್ರೀಡಾವಿಹಾರೇಷು ಪುರಾ ಸರಸಿ ಮಾನಸೇ ।
ಭವತೀನಾಂ ಸಗರ್ವಾಣಾಂ ನಾರದೋಽಭ್ಯಾಶಮಾಗತಃ ॥ ೯೪ ॥

ಹುತಾಶನಸುತಾಃ ಸರ್ವಾ ಭವತ್ಯೋಽಪ್ಸರಸಃ ಪುರಾ ।
ಅಪ್ರಣಮ್ಯಾವಲೇಪೇನ ಪರಿಪೃಷ್ಟಃ ಸ ಯೋಗಭೃತ್ ॥ ೯೫ ॥

ಕಥಂ ನಾರಾಯಣೋಽಸ್ಮಾಕಂ ಭರ್ತಾ ಸ್ಯಾದಿತ್ಯುಪಾದಿಶ ।
ತಸ್ಮಾದ್ವರಪ್ರದಾನಂ ಚ ಶಾಪಶ್ಚಾಯಮಭೂತ್ಪುರಾ ॥ ೯೬ ॥

ಶಯ್ಯಾದ್ವಯಪ್ರದಾನೇನ ಮಧುಮಾಧವಮಾಸಯೋಃ ।
ಸುವರ್ಣೋಪಸ್ಕರೋತ್ಸಂಗಾದ್ದ್ವಾದಶ್ಯಾಂ ಶುಕ್ಲಪಕ್ಷತಃ ॥ ೯೭ ॥

ಭರ್ತಾ ನಾರಾಯಣೋ ನೂನಂ ಭವಿಷ್ಯತ್ಯನ್ಯಜನ್ಮನಿ ।
ಯದಕೃತ್ವಾ ಪ್ರಣಾಮಂ ಮೇ ರೂಪಸೌಭಾಗ್ಯಮತ್ಸರಾತ್ ॥ ೯೮ ॥

---

೯೪. ದಾಲ್ಭ್ಯನು ಹೇಳುತ್ತಾನೆ:—ಹಿಂದೆ ನೀವು ಮಾನಸ ಸರೋವರದಲ್ಲಿ ವಿಹರಿಸುತ್ತ ಗರ್ವದಿಂದ ಕೂಡಿರಲು ಅಲ್ಲಿಗೆ ನಾರದನು ಬಂದನು.

೯೫. ಅಗ್ನಿಯ ಮಕ್ಕಳಾದ ನೀವೆಲ್ಲರೂ ಆಗ ಆ ನಾರದನನ್ನು ಪೊಗರಿನಿಂದ ನಮಸ್ಕರಿಸದೇ ಇಂತೆಂದು ಕೇಳಿದಿರಿ.

೯೬. ನಮಗೆ ನಾರಾಯಣನು ಗಂಡನಾಗುವ ರೀತಿಯನ್ನು ಹೇಳು ಎಂದಿರಿ. ಆಗ ಆ ನಾರದನಿಂದ ವರವೂ, ಶಾಪವೂ ಎರಡೂ ಕೊಡಲ್ಪಟ್ಟಿತು.

೯೭—೯೯. ಚೈತ್ರ, ವೈಶಾಖ ಮಾಸಗಳ ಶುಕ್ಲಪಕ್ಷದ ದ್ವಾದಶಿಗಳಲ್ಲಿ ಎರಡು ಹಾಸಿಗೆಗಳನ್ನೂ, ಅದಕ್ಕೆ ಬೇಕಾದ ಸಲಕರಣೆಗಳನ್ನೂ ದಕ್ಷಿಣೆಯೊಡನೆ ಕೊಟ್ಟರೆ ಖಂಡಿತವಾಗಿಯೂ ಬೇರೆ ಜನ್ಮದಲ್ಲಿ ನಾರಾಯಣನು ಗಂಡನಾಗುತ್ತಾನೆ. ನೀವು ನಿಮ್ಮ ಸೌಂದರ್ಯಮದದಿಂದ ನನಗೆ ನಮಸ್ಕಾರಮಾಡದೇ ಕೇಳಿದುದರಿಂದ

ಪರಿಸ್ಪೃಷ್ಟೋಽಸ್ಮಿ ತೇನಾಶು ವಿಯೋಗೋ ವೋ ಭವಿಷ್ಯತಿ ।
ಚೌರೈರಪಹೃತಾಃ ಸರ್ವಾ ವೇಶ್ಯಾತ್ವಂ ಸಮವಾಪ್ಸ್ಯಥ ॥ ೯೯ ॥

ಏವಂ ನಾರದಶಾಪೇನ ಕೇಶವಸ್ಯ ಚ ಧೀಮತಃ ।
ವೇಶ್ಯಾತ್ವಮಾಗತಾಃ ಸರ್ವಾ ಭವತ್ಯಃ ಶಾಪಮೋಹಿತಾಃ ॥ ೧೦೦ ॥

ಇದಾನೀಮಪಿ ವೋ ವಕ್ಷ್ಯೇ ತಚ್ಛೃಣುಧ್ವಂ ವರಾಂಗನಾಃ ।
ಪುರಾ ದೇವಾಸುರೇ ಯುದ್ಧೇ ಹತೇಷು ಶತಶಃ ಸುರೈಃ ॥ ೧೦೧ ॥

ದಾನವಾಸುರದೈತ್ಯೇಷು ರಾಕ್ಷಸೇಷು ತತಸ್ತತಃ ।
ತೇಷಾಂ ದಾರಸಹಸ್ರಾಣಿ ಶತಶೋಽಥ ಸಹಸ್ರಶಃ ॥ ೧೦೨ ॥

ಪರಿಣೀತಾನಿ ಯಾನಿ ಸ್ಯುರ್ಬಲಾದ್ಭುಕ್ತಾನಿ ಯಾನಿ ವೈ ।
ತಾನಿ ಸರ್ವಾಣಿ ದೇವೇಶಃ ಪ್ರೋವಾಚ ವದತಾಂ ವರಃ ॥ ೧೦೩ ॥

ವೇಶ್ಯಾಧರ್ಮೇಣ ವರ್ತಧ್ವಮಧುನಾ ನೃಪಮಂದಿರೇ ।
ಭಕ್ತಿಮತ್ಯೋ ವರಾರೋಹಾಸ್ತಥಾ ದೇವಕುಲೇಷು ಚ ॥ ೧೦೪ ॥

---

ನಿಮ್ಮೆಲ್ಲರನ್ನೂ ಕಳ್ಳರು ಹೊತ್ತುಕೊಂಡು ಹೋಗುತ್ತಾರೆ. ನೀವು ಸೂಳೆಯರಾಗುತ್ತೀರಿ.

೧೦೦. ಈರೀತಿ ನಾರದನ ಶಾಪದಿಂದಲೂ ಕೇಶವನ ಶಾಪದಿಂದಲೂ ಶಾಪಮೋಹಿತರಾಗಿ ನೀವೆಲ್ಲರೂ ಸೂಳೆಯರಾದಿರಿ.

೧೦೧—೧೦೩. ಈವಾಗ ಮತ್ತೊಂದು ವಿಷಯವನ್ನು ಹೇಳುತ್ತೇನೆ. ಕೇಳಿರಿ, ಹಿಂದೆ ದೇವಾಸುರ ಯುದ್ಧದಲ್ಲಿ ರಾಕ್ಷಸರೂ, ದೇವತೆಗಳೂ, ಅನೇಕವಾಗಿ ಕೊಲ್ಲಲ್ಪಟ್ಟರು. ಹಾಗೇ ಸತ್ತವರ ಹೆಂಡರುಗಳು ಸಾವಿರಗಟ್ಟಲೆಯಾಗಿ ಅನಾಥರಾಗಿ ಅಲ್ಲಲ್ಲಿ ಓಡಾಡುತ್ತಿದ್ದುದರಿಂದ ಕೆಲವರು ಅವರನ್ನು ಬಲಾತ್ಕಾರದಿಂದ ಭೋಗಿಸಿದರು. ಆಗವರೆಲ್ಲರನ್ನೂ ಕುರಿತು ಸ್ವಾಮಿಯು ಇಂತೆಂದನು.

೧೦೪—೧೦೬. ನೀವುಗಳೆಲ್ಲರೂ ಇನ್ನು ಮೇಲೆ ಅರಮನೆಗಳಲ್ಲಿಯೂ, ದೇವಸ್ಥಾನಗಳಲ್ಲಿಯೂ, ಭಕ್ತಿಯಿಂದ ಇದ್ದುಕೊಂಡಿರಿ. ರಾಜರುಗಳನ್ನೂ ಬಹಳ ಜ್ಞಾನಿ

ರಾಜಾನಃ ಸ್ವಾಮಿನಸ್ತುಲ್ಯಂ ಬ್ರಾಹ್ಮಣಾ ಯೇ ಬಹುಶ್ರುತಾಃ ।
ತೇಷಾಂ ಗೃಹೇಷು ತಿಷ್ಠಧ್ವಂ ಭೃತಕಂ ಚಾಪಿ ತತ್ಸಮಂ ॥ ೧೦೫ ॥

ಭವಿಷ್ಯತಿ ಚ ಸೌಭಾಗ್ಯಂ ಸರ್ವಾಸಾಮಪಿ ಭಕ್ತಿತಃ ।
ನ ಚೈಕಸ್ಮಿನ್ರತಿಃ ಕಾರ್ಯಾ ಪುರುಷೇ ಧನವರ್ಜಿತೇ ॥ ೧೦೬ ॥

ಅನುಮಾನ್ಯಃ ಪ್ರಸಾಧ್ಯಶ್ಚ ಶುಕ್ರದೋ ದೇವವತ್ಸಲಾ ।
ಸುರೂಪೋ ವಾ ವಿರೂಪೋ ವಾ ದ್ರವ್ಯಮೇವ ಪ್ರಯೋಜನಂ ॥ ೧೦೭ ॥

ನ ತದ್ವ್ಯತಿಕ್ರಮಃ ಕಾರ್ಯೋ ಬ್ರಹ್ಮಹತ್ಯಾಮವಾಪ್ನುಯಾತ್ ।
ನ ವ್ಯಾತಿಮತ್ಸರಾಭಿಶ್ಚ ಭಾವ್ಯಂ ಕೌಟಿಲ್ಯಬುದ್ಧಿಭಿಃ ॥ ೧೦೮ ॥

ಯಃ ಕಶ್ಚಿಚ್ಛುಲ್ಕಮಾದಾಯ ಗೃಹಾನೇಷ್ಯತಿ ವಃ ಸದಾ ।
ನಿಶ್ಛದ್ಮನೈವೋಪಚರ್ಯಃ ಶುದ್ಧೋ ವ್ಯಾಪ್ಯಥ ದಾಂಭಿಕಃ ॥ ೧೦೯ ॥

---

ಗಳಾದ ಬ್ರಾಹ್ಮಣರನ್ನೂ, ಸ್ವಾಮಿಗೆ ಸಮವಾಗಿ ಕಾಣಿರಿ. ಅವರುಗಳ ಮನೆಯಲ್ಲಿರಿ. ಅವರು ಅವರ ಮನೆಯ ಆಳುಗಳಂತೆ ನಿಮ್ಮನ್ನು ಕಾಪಾಡಲಿ. ಹಾಗಿದ್ದರೆ ನಿಮಗೆ ಸೌಭಾಗ್ಯವು ಹೆಚ್ಚಾಗಲಿ. ಸ್ವಾಮಿಭಕ್ತಿಯಿರಲಿ. ಬಡವನಾದವನೊಬ್ಬನಲ್ಲಿಯೂ ಸುಖಿಸಬೇಡಿರಿ.

೧೦೭. ಹಣವನ್ನು ಕೊಡತಕ್ಕವನನ್ನು ಗೌರವಿಸಿರಿ, ಅಲಂಕರಿಸಿ. ದೇವರಂತೆ ನೋಡಿಕೊಳ್ಳಿರಿ. ಅವನು ಸುಂದರನಾಗಲಿ ಕುರೂಪಿಯಾಗಲಿ ಹಣವೊಂದೇ ಅವನಿಂದ ನಿಮಗೆ ಪ್ರಯೋಜನವು.

೧೦೮. ಇದನ್ನು ಮಾತ್ರ ಮೀರಬೇಡಿರಿ. ಹಾಗೇ ಮೀರಿದರೆ ಬ್ರಹ್ಮ ಹತ್ಯೆಯು ಬರುತ್ತದೆ. ಅವರಲ್ಲಿ ಹೊಟ್ಟೆಕಿಚ್ಚನ್ನು ಪಡಬೇಡಿ. ವಕ್ರತೆಯಿಂದಿರ ಬೇಡಿ.

೧೦೯. ಯಾವನಾದರೂ ನಿಮಗೆ ಕೊಡಬೇಕಾದ ಹಣವನ್ನು ತಂದು ನಿಮ್ಮ ಮನೆಗೆ ಬಂದರೆ ಅವನು ಶುದ್ಧನಾಗಲಿ ಅಶುದ್ಧನಾಗಲಿ ಕಪಟಿಯಾಗಲಿ, ಕಪಟವನ್ನು ಬಿಟ್ಟು ಉಪಚರಿಸಿರಿ.

ದೇವತಾನಾಂ ಪಿತೄಣಾಂ ಚ ಪುಣ್ಯೇಽಹ್ನಿ ಸಮುಪಸ್ಥಿತೇ ।
ಗೋಭೂಹಿರಣ್ಯಧಾನ್ಯಾನಿ ಪ್ರದೇಯಾನಿ ಚ ಶಕ್ತಿತಃ ॥ ೧೧೦ ॥

ಯದ್ವ್ರತಂ ಚೋಪದೇಕ್ಷ್ಯಾಮಿ ತತ್ಕುರುಧ್ವಂ ಚ ಸರ್ವಶಃ ।
ಸಂಸಾರೋತ್ತಾರಣಾಯಾಲಮೇತದ್ವೇದವಿದೋ ವಿದುಃ ॥ ೧೧೧ ॥

ಯದಾ ಸೂರ್ಯದಿನೇ ಹಸ್ತಃ ಪುಷ್ಯೋ ವಾಽಥ ಪುನರ್ವಸುಃ ।
ಭವೇತ್ಸರ್ವೌಷಧಿಸ್ನಾನಂ ಸಮ್ಯಙ್ನಾರೀ ಸಮಾಚರೇತ್ ॥ ೧೧೨ ॥

ತದಾ ಪಂಚಶರಸ್ಯಾಪಿ ಸಂನಿಧಾತೃತ್ವಮಿಷ್ಯತೇ ।
ಅರ್ಚಯೇತ್ಪುಂಡರೀಕಾಕ್ಷಮನಂಗಸ್ಯಾನುಕೀರ್ತನೈಃ ॥ ೧೧೩ ॥

ಕಾಮಾಯ ಪಾದೌ ಸಂಪೂಜ್ಯ ಜಂಘೇ ವೈ ಮೋಹಕಾರಿಣೇ ।
ಮೇಢ್ರಂ ಕಂದರ್ಪನಿಧಯೇ ಕಟಿಂ ಪ್ರೀತಿಮತೇ ನಮಃ ॥ ೧೧೪ ॥

---

೧೧೦. ದೇವತೆಗಳ ಮತ್ತು ಪಿತೃಗಳ ಪುಣ್ಯದಿವಸಗಳಲ್ಲಿ ಗೋವು, ಭೂಮಿ, ಹಣ, ಧಾನ್ಯಗಳನ್ನು ಶಕ್ತಿಗನುಗುಣವಾಗಿ ಕೊಡಿರಿ.

೧೧೧. ನಾನು ನಿಮಗೆ ಉಪದೇಶಿಸುವ ವ್ರತವನ್ನು ಪೂರ್ತಿಯಾಗಿ ಮಾಡಿರಿ. ಅದು ನಿಮಗೆ ಈ ಜನ್ಮಮರಣಗಳನ್ನು ತಪ್ಪಿಸುವುದಕ್ಕೆ ಸಮರ್ಥನವು ಎಂದು ತಿಳಿದವರ ಅಭಿಪ್ರಾಯವಾಗಿದೆ.

೧೧೨. ಭಾನುವಾರದ ದಿನ ಹಸ್ತ, ಪುಷ್ಯ, ಪುನರ್ವಸು ನಕ್ಷತ್ರಗಳು ಬಂದರೆ ಆಗ ಹೆಂಗಸು ಎಲ್ಲಾ ಔಷಧಿಗಳನ್ನೂ ನೀರಿಗೆ ಹಾಕಿ ಸ್ನಾನಮಾಡಬೇಕು. ಹಾಗೆ ಸ್ನಾನಮಾಡಿದರೆ ಮನ್ಮಥನು ಸಮೀಪಕ್ಕೆ ಬರುತ್ತಾನೆ. ಆ ದಿನವು ಮನ್ಮಥನು ಪ್ರಸನ್ನನಾಗತಕ್ಕ ದಿನವು.

೧೧೩. ಆ ದಿನ ಶ್ರೀ ವಿಷ್ಣುವನ್ನು ಮನ್ಮಥನ ಹೆಸರನ್ನು ಹೇಳಿಕೊಂಡು ಪೂಜಿಸಬೇಕು.

೧೧೪—೧೧೭. ಕಾಮನಿಗೆ ನಮಸ್ಕಾರವು ಎಂದು ಪಾದಗಳನ್ನೂ, ಮೋಹಕಾರಿಗೆ ನಮಸ್ಕಾರವೆಂದು ಮಂಡಿಗಳನ್ನೂ, ಕಂದರ್ಪನಿಧಿಗೆ ನಮಸ್ಕಾರವೆಂದು ಶಿಶ್ನ

**ನಾಭಿಂ ಸೌಖ್ಯಸಮುದ್ರಾಯ ರಾಮಾಯ ಚ ತಥೋದರಂ ।**
**ಹೃದಯಂ ಹೃದಯೇಶಾಯ ಸ್ತನಾವಾಹ್ಲಾದಕಾರಿಣೇ ॥ ೧೧೫ ॥**

**ಉತ್ಕಂಠಾಯೇತಿ ವೈ ಕಂಠಮಾಸ್ಯಮಾನಂದಕಾರಿಣೇ ।**
**ವಾಮಾಂಗಂ ಪುಷ್ಪಚಾಪಾಯ ಪುಷ್ಪಬಾಣಾಯ ದಕ್ಷಿಣಂ ॥ ೧೧೬ ॥**

**ನಮೋಽನಂಗಾಯ ವೈ ಮೌಲಿಂ ಸುಲೋಮಾಯೇತಿ ದೇಹಕಂ ।**
**ಸರ್ವಾತ್ಮನೇ ಶಿರಸ್ತದ್ವದ್ದೇವದೇವಸ್ಯ ಪೂಜಯೇತ್ ॥ ೧೧೭ ॥**

**ನಮಃ ಶ್ರೀಪತಯೇ ತಾರ್ಕ್ಷ್ಯಧ್ವಜಾಂಕುಶಧರಾಯ ಚ ।**
**ಗದಿನೇ ಪೀತವಸ್ತ್ರಾಯ ಶಂಖಚಕ್ರಧರಾಯ ಚ ॥ ೧೧೮ ॥**

**ನಮೋ ನಾರಾಯಣಾಯೇತಿ ಕಾಮದೇವಾತ್ಮನೇ ನಮಃ ।**
**ನಮಃ ಶಾಂತ್ಯೈ ನಮಃ ಪ್ರೀತ್ಯೈ ನಮೋ ರತ್ಯೈ ನಮಃ ಶ್ರಿಯೇ ॥ ೧೧೯ ॥**

**ನಮಃ ಪುಷ್ಟ್ಯೈ ನಮಸ್ತುಷ್ಟ್ಯೈ ನಮಃ ಸರ್ವಾರ್ಥಸಂಪದೇ ।**
**ಏವಂ ಸಂಪೂಜ್ಯ ಗೋವಿಂದಮನಂಗಾತ್ಮಕಮೀಶ್ವರಂ ॥ ೧೨೦ ॥**

---

ವನ್ನೂ, ಪ್ರೀತಿವಂತನಿಗೆ ನಮಸ್ಕಾರವೆಂದು ಸೊಂಟವನ್ನೂ, ಸೌಖ್ಯಪ್ರದನಿಗೆ ನಮಸ್ಕಾರವೆಂದು ಹೊಕ್ಕಳನ್ನೂ, ರಾಮನಿಗೆ ನಮಸ್ಕಾರವೆಂದು ಹೊಟ್ಟೆಯನ್ನೂ, ಪುಷ್ಪಚಾಪನಿಗೆ ನಮಸ್ಕಾರವೆಂದು ಎಡಗಡೆಯನ್ನೂ, ಪುಷ್ಪಬಾಣನಿಗೆ ನಮಸ್ಕಾರವೆಂದು ಬಲಗಡೆಯನ್ನೂ, ಅನಂಗನಿಗೆ ನಮಸ್ಕಾರವೆಂದು ತಲೆಯನ್ನೂ, ಸುಲೋಮನಿಗೆ ನಮಸ್ಕಾರವೆಂದು ದೇಹವನ್ನೂ, ಸರ್ವಾತ್ಮನಿಗೆ ನಮಸ್ಕಾರವೆಂದು ತಲೆಯನ್ನೂ ಈರೀತಿ ಆ ದೇವದೇವನಿಗೆ ಪೂಜಿಸಬೇಕು.

೧೧೮—೧೨೦. ಶ್ರೀಪತಿಗೆ ನಮಸ್ಕಾರ, ತಾರ್ಕ್ಷ್ಯಧ್ವಜನಿಗೆ ನಮಸ್ಕಾರ, ಅಂಕುಶಧರನಿಗೆ ನಮಸ್ಕಾರ, ಗದಿಗೆ ನಮಸ್ಕಾರ, ಪೀತವಸ್ತ್ರನಿಗೆ ನಮಸ್ಕಾರ, ಶಂಖಚಕ್ರಧರನಿಗೆ ನಮಸ್ಕಾರ, ನಾರಾಯಣನಿಗೆ ನಮಸ್ಕಾರ, ಕಾಮದೇವಾತ್ಮನಿಗೆ ನಮಸ್ಕಾರ, ಶಾಂತಿಗೆ ನಮಸ್ಕಾರವು, ಪ್ರೀತಿಗೆ ನಮಸ್ಕಾರ, ರತಿಗೆ ನಮಸ್ಕಾರ, ಶ್ರೀಗೆ ನಮಸ್ಕಾರ, ಪುಷ್ಟಿಗೆ ನಮಸ್ಕಾರ, ತುಷ್ಟಿಗೆ ನಮಸ್ಕಾರ, ಸರ್ವಾರ್ಥಸಂಪದನಿಗೆ ನಮಸ್ಕಾರ, ಎಂಬುದಾಗಿ ಅನಂಗರೂಪಿಯಾದ ಆ ವಿಷ್ಣುವನ್ನು ಪೂಜಿಸಬೇಕು.

ಗಂಧಮಾಲ್ಯೈಸ್ತಥಾ ಧೂಪೈರ್ನೈವೇದ್ಯೈೇನ ಚ ಭಾಮಿನೀ ।
ತತ ಆಹೂಯ ಧರ್ಮಜ್ಞಂ ಬ್ರಾಹ್ಮಣಂ ವೇದಪಾರಗಂ ॥ ೧೨೧ ॥

ಅನಂಗಾಯೈವಂ ಸಂಪೂಜ್ಯ ಗಂಧಪುಷ್ಪಾರ್ಚನಾದಿಭಿಃ ।
ಪ್ರದೇಯಂ ತಂಡುಲಪ್ರಸ್ಥಂ ಘೃತಪಾತ್ರೇಣ ಸಂಯುತಂ ॥ ೧೨೨ ॥

ತಸ್ಮೈ ವಿಪ್ರಾಯ ವೈ ದದ್ಯಾನ್ಮಾಧವಃ ಪ್ರೀಯತಾಮಿತಿ ।
ಯಥೇಷ್ಟಾಹಾರಂ ಕುರ್ವೀತ ಏವಂ ದ್ವಿಜಮನುತ್ತಮಂ ॥ ೧೨೩ ॥

ರತ್ಯರ್ಥಂ ಕಾಮದೇವೋಽಯಮಿತಿ ಚಿತ್ತೇಽವಧಾರಯೇತ್ ।
ಯದ್ಯದಿಚ್ಛತಿ ವಿಪ್ರೇಂದ್ರಸ್ತತ್ತತ್ಕುರ್ಯಾದ್ವಿಲಾಸಿನೀ ॥ ೧೨೪ ॥

ಸರ್ವಭಾವೇನ ಚಾತ್ಮಾನಮರ್ಪಯೇತ್ಸ್ಮಿತಭಾಷಿಣೀ ।
ಏವಮಾದಿತ್ಯವಾರೇಣ ಸರ್ವಮೇತತ್ಸಮಾಚರೇತ್ ॥ ೧೨೫ ॥

ತಂಡುಲಪ್ರಸ್ಥದಾನಂ ಚ ಯಾವನ್ಮಾಸಾಸ್ತ್ರಯೋದಶ ।
ತತಸ್ತ್ರಯೋದಶೇ ಮಾಸಿ ಸಂಪ್ರಾಪ್ತೇ ಚಾಸ್ಯ ಭಾಮಿನೀ ॥ ೧೨೬ ॥

---

೧೨೧-೧೨೨. ಅನಂತರ ಆ ಸ್ವಾಮಿಯನ್ನು ಗಂಧ, ಧೂಪ, ದೀಪಗಳಿಂದಲೂ, ಮಾಲೆಯಿಂದಲೂ ಪೂಜಿಸಬೇಕು. ಆಮೇಲೆ ಧರ್ಮವನ್ನು ತಿಳಿದ ವೇದಪಾರಗನಾದ ಬ್ರಾಹ್ಮಣನನ್ನು ಕರೆದು ಅನಂಗನನ್ನು ಆವಾಹಿಸಿ ಗಂಧ, ಪುಷ್ಪಾದಿಗಳಿಂದ ಪೂಜಿಸಿ, ಒಂದು ಕೊಳಗ ಅಕ್ಕಿಯನ್ನೂ, ಅದರ ಜೊತೆಗೆ ತುಪ್ಪದ ಪಾತ್ರೆಯನ್ನೂ, ಇಟ್ಟು ಮಾಧವನು ಸಂತುಷ್ಟನಾಗಲೆಂದು ಆ ಬ್ರಾಹ್ಮಣನಿಗೆ ದಾನಮಾಡಬೇಕು.

೧೨೩-೧೨೪. ಆ ಬ್ರಾಹ್ಮಣನಿಗೆ ಬೇಕಾದ ಹಾಗೆ ಪೂಜೆಮಾಡಬೇಕು. ರತಿಯ ವಿಷಯದಲ್ಲಿ ನನಗೆ ಇವನು ಕಾಮದೇವನೆಂದು ಮನಸ್ಸಿನಲ್ಲಿ ತಿಳಿದುಕೊಳ್ಳಬೇಕು. ಆ ಬ್ರಾಹ್ಮಣನು ಏನು ಏನು ಕೇಳಿದರೂ ಅವನ್ನೆಲ್ಲಾ ಕೊಡಬೇಕು.

೧೨೫. ಆಕೆಯು ಎಲ್ಲಾ ವಿಧದಿಂದಲೂ ತನ್ನನ್ನು ಆ ಬ್ರಾಹ್ಮಣನಿಗೆ ಅರ್ಪಿಸಬೇಕು. ಈರೀತಿ ಆದಿತ್ಯವಾರದಲ್ಲಿ ಆಕೆಯು ಎಲ್ಲವನ್ನೂ ಮಾಡಬೇಕು.

೧೨೬-೧೨೭. ಹದಿಮೂರು ತಿಂಗಳುಗಳವರೆಗೂ, ತಿಂಗಳು ತಿಂಗಳಲ್ಲಿಯೂ, ಅಕ್ಕಿಯನ್ನು ಒಂದೊಂದು ಕೊಳಗದಷ್ಟು ದಾನಮಾಡುತ್ತಿರಬೇಕು. ಹದಿಮೂರ

ವಿಪ್ರಸ್ಯೋಪಕರ್ತೈರ್ಯುಕ್ತಾಂ ಶಯ್ಯಾಂ ದದ್ಯಾದ್ವಿಚಕ್ಷಣಾ ।
ಸೋಪಧಾನಾಂ ಸವಿನ್ಯಾಸಾಂ ಸ್ವಾಸ್ತರಾವರಣಾಂ ಶುಭಾಂ ॥ ೧೨೭ ॥

ದೀಪಿಕೋಪಾನಹಚ್ಛತ್ರಪಾದುಕಾಸನಸಂಯುತಾಂ ।
ಸಪತ್ನೀಕಮಲಂಕೃತ್ಯ ಹೇಮಸೂತ್ರಾಂಗುಲೀಯಕೈಃ ॥ ೧೨೮ ॥

ಸೂಕ್ಷ್ಮವಸ್ತ್ರೈಃ ಸಕಟಕೈರ್ಧೂಪಮಾಲ್ಯಾನುಲೇಪನೈಃ ।
ಕಾಮದೇವಂ ಸಪತ್ನೀಕಂ ಗುಡಕುಂಭೋಪರಿ ಸ್ಥಿತಂ ॥ ೧೨೯ ॥

ತಾಮ್ರಪಾತ್ರೇ ಸಮಾರೋಪ್ಯ ಹೇಮನೇತ್ರಪಟಾವೃತಂ ।
ಸಕಾಂಸ್ಯಭಾಜನೋಪೇತ ಮಿಕ್ಷುದಂಡಸಮನ್ವಿತಂ ॥ ೧೩೦ ॥

ದದ್ಯಾದೇತೇನ ಮಂತ್ರೇಣ ತಥೈವಂ ಗಾಂ ಪಯಸ್ವಿನೀಂ ।
ಯಥಾಂತರಂ ನ ಪಶ್ಯಾಮಿ ಕಾಮಕೇಶವಯೋಃ ಸದಾ ॥ ೧೩೧ ॥

ತಥೈವ ಸರ್ವಕಾಮಾಪ್ತಿರಸ್ತು ವಿಷ್ಣೋ ಸದಾ ಮಮ ।
ಯಥಾ ನ ಕಾಮಿನೀ ದೇಹಂ ಪ್ರಯಾತಿ ತವ ಕೇಶವ ॥ ೧೩೨ ॥

---

ನೆಯ ತಿಂಗಳಲ್ಲಿ ಉತ್ತಮವಾದ ಹಾಸಿಗೆಯನ್ನೂ ಅದಕ್ಕೆ ದಿಂಬು ಮಗ್ಗುಲ ಹಾಸಿಗೆ ಮುಂತಾದುವೆಲ್ಲವನ್ನೂ ಸಿದ್ಧಪಡಿಸಿ ದಾನಮಾಡಬೇಕು.

೧೨೮—೧೩೦. ದೀಪ, ಕೆರ, ಛತ್ರಿ, ಪಾದುಕೆ, ಆಸನ, ಚಿನ್ನದ ಜನಿವಾರ, ಚಿನ್ನದ ಉಂಗುರ, ಮಲ್ಲುಬಟ್ಟೆ, ಕೈಬಳೆಗಳನ್ನು ದಾನಮಾಡಬೇಕು. ಧೂಪ, ದೀಪ, ಅನುಲೇಪನಗಳಿಂದ ಆ ಬ್ರಾಹ್ಮಣನನ್ನು, ಅವನ ಹೆಂಡತಿಯನ್ನು ಪೂಜಿಸಬೇಕು. ಕಾಮದೇವನ ಪ್ರತಿಮೆಯನ್ನು ಮಾಡಿಸಿ ಬೆಲ್ಲದ ಮೇಲೆ ಕಲಶವನ್ನಿಡಬೇಕು. ಕಲಶವನ್ನು ತಾಮ್ರದ ಪಾತ್ರೆಯಲ್ಲಿಟ್ಟು ಅದಕ್ಕೆ ಸರಿಗೆಬಟ್ಟೆಯನ್ನು ಹೊದ್ದಿಸಬೇಕು. ಕಂಚಿನ ಪಾತ್ರೆಯನ್ನೂ, ಕಬ್ಬಿನ ಕೋಲನ್ನೂ, ಇವೆಲ್ಲವನ್ನೂ ಒಂದು ಕರೆಯುವ ಹಸುವನ್ನೂ ಮುಂದೆ ಹೇಳುವ ಮಂತ್ರದಿಂದ ದಾನಮಾಡಬೇಕು.

೧೩೧-೧೩೨. ಕಾಮಕೇಶವರಿಗೆ ಹೇಗೆ ವ್ಯತ್ಯಾಸವಿಲ್ಲವೋ, ಅದರಂತೆ ಎಲೈ ವಿಷ್ಣುವೇ ನನಗೆ ಎಲ್ಲಾ ಕಾಮಗಳು ಲಭಿಸಲಿ. ಎಲೈ ಕೇಶವನೇ, ನನ್ನ ದೇಹವು ಹೇಗೆ ಹೆಂಗಸಿನ ದೇಹವಾಗುವುದಿಲ್ಲವೋ ಅದರಂತೆ ನನ್ನ ದೇಹವನ್ನು ಹೊಂದುವಂತೆ ಮಾಡು.

**ತಥಾ ಮಮಾಪಿ ದೇವೇಶ ಶರೀರೇಷು ಕುರು ಪ್ರಭೋ ।**
**ತಥಾ ಚ ಕಾಂಚನಂ ದೇವಂ ಪ್ರತಿಗೃಹ್ಯ ದ್ವಿಜೋತ್ತಮಃ ॥ ೧೩೩ ॥**

**ಕೋಽದಾತ್ಕಾಮೋಽದಾದಿತಿ ವೈದಿಕಂ ಮಂತ್ರಮುದೀರಯೇತ್ ।**
**ತತಃ ಪ್ರದಕ್ಷಿಣೀಕೃತ್ಯ ವಿಸರ್ಜ್ಯ ದ್ವಿಜಪುಂಗವಂ ॥ ೧೩೪ ॥**

**ಶಯ್ಯಾಸನಾದಿಕಂ ಸರ್ವಂ ಬ್ರಾಹ್ಮಣಸ್ಯ ಗೃಹಂ ನಯೇತ್ ।**
**ತತಃ ಪ್ರಭೃತಿ ಯೋಽಸ್ಯೋಽಪಿ ರತ್ಯರ್ಥಂ ಗೇಹಮಾಗತಃ ॥ ೧೩೫ ॥**

**ಸ ಮಾನ್ಯಃ ಸೂರ್ಯವಾರೇಣ ಸ ಸಂಪೂಜ್ಯೋ ಭವೇತ್ಸದಾ ।**
**ಏವಂ ತ್ರಯೋದಶಂ ಯಾವನ್ಮಾಸಮೇಕಂ ದ್ವಿಜೋತ್ತಮಂ ॥ ೧೩೬ ॥**

**ತರ್ಪಯೇಚ್ಚ ಯಥಾಕಾಮಂ ಪ್ರೇಷಯೇಚ್ಚೈವ ಮಂದಿರಂ ।**
**ತದನುಜ್ಞಯಾ ರೂಪವಂತಂ ಯಾವದಸ್ಯಾಗಮೋ ಭವೇತ್ ॥ ೧೩೭ ॥**

**ಆತ್ಮನೋಽಪಿ ಯದಾ ವಿಘ್ನಂ ಗರ್ಭಸೂತಕರಾಜಕಂ ।**
**ದೈವಂ ವಾ ಮಾನುಷಂ ವಾ ಸ್ಯಾದುಪರಾಗೇಣ ವಾ ತತಃ ॥ ೧೩೮ ॥**

---

೧೩೩. ಆ ಬ್ರಾಹ್ಮಣನು ಕಾಮನ ಚಿನ್ನದ ಪ್ರತಿಮೆಯನ್ನು ತೆಗೆದುಕೊಂಡು ಕೊದಾತ್ (ಯಾರು ಕೊಟ್ಟ) ಎಂಬ ವೇದೋಕ್ತವಾದ ಮಂತ್ರವನ್ನು ಹೇಳಬೇಕು.

೧೩೪. ಆಮೇಲೆ ಪ್ರದಕ್ಷಿಣೆ ಮಾಡಿ ಆ ಬ್ರಾಹ್ಮಣನನ್ನು ಕಳುಹಿಸಬೇಕು. ಅವನಿಗೆ ಕೊಟ್ಟ ಹಾಸಿಗೆಗಳು ಮುಂತಾದುವನ್ನೆಲ್ಲಾ ಅವನ ಮನೆಗೆ ಕಳುಹಿಸಬೇಕು.

೧೩೫—೧೩೭. ಅದಾದ ಮೇಲೆ ಆದಿನ ಮೊದಲುಗೊಂಡು ರತಿಗೋಸ್ಕರವಾಗಿ ಮನೆಗೆ ಬಂದರೆ ಅವನನ್ನು ಆದಿತ್ಯವಾರದಲ್ಲಿ ಗೌರವಿಸಬೇಕು. ಪೂಜಿಸಲೂ ಬೇಕು. ಈರೀತಿ ಹದಿಮೂರು ತಿಂಗಳಲ್ಲಿಯೂ, ತಿಂಗಳಿಗೆ ಒಬ್ಬೊಬ್ಬನಂತೆ ಕರೆದುಕೊಳ್ಳಬೇಕು ಅವನನ್ನು ತೃಪ್ತಿಪಡಿಸಿ, ಮನೆಗೆ ಕಳುಹಿಸಬೇಕು. ಅವನ ಅಪ್ಪಣೆಯಿಂದ ಅವನು ಬರುವವರೆಗೂ ಬೇರೆಯೊಬ್ಬ ರೂಪವಂತನನನ್ನು ಕರೆದುಕೊಳ್ಳಬೇಕು.

೧೩೮. ತನಗೆ ಗರ್ಭ, ಮುಟ್ಟು, ಸೂತಕ, ಸೂರ್ಯಗ್ರಹಣ, ಚಂದ್ರಗ್ರಹಣ ಇವು ದೈವಿಕವಾಗಲಿ, ಮಾನುಷಿಕವಾಗಲಿ, ಒಂದು ವಿಘ್ನ ಬಂದರೆ ಅನಂತರ ಐವತ್ತು ಜನ ದಂಪತಿಗಳನ್ನು ಕರೆದು ಅವರಿಗೆ ಶಕ್ತ್ಯನುಸಾರವಾಗಿ ಪೂಜಿಸಬೇಕು.

ಸಧಾರಾಸಥ ಪಂಚಾಶದ್ಯಥಾಶಕ್ತ್ಯಾ ಸಮರ್ಚಯೇತ್ ।
ಏತದ್ವೈ ಕಥಿತಂ ಸಮ್ಯಗ್ಘನತೀನಾಂ ವಿಶೇಷತಃ ॥ ೧೩೯ ॥

ಸ್ವಧರ್ಮೋಽಯಂ ತತೋ ಭವ್ಯೋ ವೇಶ್ಯಾನಾಮಿಹ ಸರ್ವದಾ ।
ಶಯ್ಯಯಾ ತ್ಯಜ್ಯತೇ ದೇವ ನ ಕಥಂಚಿದ್ಯಥಾ ಭವಾನ್ ॥ ೧೪೦ ॥

ಶಯ್ಯಾ ಮಮಾಪ್ಯಶೂನ್ಯೇಯಂ ತಥಾಽಸ್ತು ಮಧುಸೂಧನ ।
ಗೀತವಾದಿತ್ರನಿರ್ಘೋಷಂ ದೇವದೇವಸ್ಯ ಕಾರಯೇತ್ ॥ ೧೪೧ ॥

ಏತದ್ವಃ ಕಥಿತಂ ಸರ್ವಂ ವೇಶ್ಯಾಧರ್ಮಮಶೇಷತಃ ।
ಪುರುಹೂತೇನ ಯತ್ಪ್ರೋಕ್ತಂ ದಾನವೀಷು ಪುರಾ ಮಯಾ ॥ ೧೪೨ ॥

ತದೇತತ್ಸಾಂಪ್ರತಂ ಸರ್ವಂ ಭವತೀಷ್ವಪಿ ಯುಜ್ಯತೆ ।
ಸರ್ವಪಾಪಪ್ರಶಮನಮನಂತಫಲದಾಯಕಂ ॥ ೧೪೩ ॥

ಕಲ್ಯಾಣಿನೀನಾಂ ಕಥಿತಂ ತದೇತದ್ದುಶ್ಚರಂ ವ್ರತಂ ।
ಏತತ್ಪಾರ್ಥ ಮಯಾ ಪೂರ್ವಂ ಗೋಪೀನಾಂ ತು ಪ್ರಕಾಶಿತಂ ।
ಪುರಾಣಂ ಧರ್ಮಸರ್ವಸ್ವಂ ವೇಶ್ಯಾಜನಸುಖಪ್ರದಂ ॥ ೧೪೪ ॥

---

೧೩೯-೧೪೦. ಇದೆಲ್ಲವನ್ನು ನಿಮಗೆ ಹೇಳಿದ್ದೇನೆ. ಇವು ವೇಶ್ಯೆಯರಿಗೆ ಸ್ವಧರ್ಮವು, ಮಂಗಳಕರವು. ಎಲೈ ಸ್ವಾಮಿಯೇ, ನೀನು ಹಾಸಿಗೆಯಿಂದ ಹೇಗೆ ಬಿಡಲ್ಪಡುವುದಿಲ್ಲವೋ, ಹಾಗೇ ಆಕೆಯೂ ಬಿಡಲ್ಪಡುವುದಿಲ್ಲ.

೧೪೧. ಎಲೈ ಮಧುಸೂದನನೇ, ನನ್ನ ಶಯ್ಯೆಯೂ ಕೂಡ ಯಾವಾಗಲೂ ಶೂನ್ಯವಾಗಿಲ್ಲದಿರಲಿ ಎಂದು ಪ್ರಾರ್ಥಿಸಿ, ಹಾಡು, ವಾದ್ಯಗಳ ಧ್ವನಿಯನ್ನು ಆ ದೇವರ ಮುಂದೆ ಮಾಡಬೇಕು.

೧೪೨. ವೇಶ್ಯಾ ಧರ್ಮವೆಲ್ಲವನ್ನು ನಿಮಗೆ ಹೇಳಿದ್ದೇನೆ. ಹಿಂದೆ ದಾನವರಿಗೂ ದೇವತೆಗಳಿಗೂ ಇಂದ್ರನು ಹೇಳಿರುವುದನ್ನೇ ನಿಮಗೂ ಹೇಳಿದ್ದೇನೆ. ಅದೆಲ್ಲವೂ ಕೂಡ ಈಗ ನಿಮಗೂ ಹೊಂದುತ್ತದೆ.

೧೪೩-೧೪೪. ಇದು ಸಮ ಪಾಪಗಳನ್ನು ನಾಶಮಾಡುತ್ತದೆ. ಅನಂತ ಫಲವನ್ನು ಕೊಡುತ್ತದೆ. ಆ ಹೆಂಗಸರೆಲ್ಲರಿಗೂ, ಈ ವ್ರತವನ್ನು ಹೇಳಿದ್ದೇನೆ. ಪುರಾಣದ ಧರ್ಮವಾದ, ವೇಶ್ಯಾಜನಗಳಿಗೆ ಸುಖವನ್ನುಂಟುಮಾಡುವ ಈ ವ್ರತವನ್ನು ಉಪದೇಶಿಸಿದ್ದೇನೆ.

ಕರೋತಿ ಯಾಽಶೇಷಮಖಂಡಮೇತ-
ತ್ಕಲ್ಯಾಣಿನೀ ಮಾಧವಲೋಕಸಂಸ್ಥಾ ।
ಸಾ ಪೂಜಿತಾ ದೇವಗಣೈರಶೇಷೈ-
ರಾನಂದಕೃತ್ಸ್ಥಾನಮುಪೈತಿ ವಿಷ್ಣೋಃ ॥ ೧೪೫ ॥

ತಪೋಧನಃ ಸೋಽಪ್ಯಭಿಧಾಯ ಚೈತ-
ದನಂಗದಾನವ್ರತಮಂಗನಾನಾಂ ।
ಸ್ವಸ್ಥಾನಮೇಷ್ಯಂತಿ ಸಮಸ್ತಮಿತ್ಥಂ
ವ್ರತಂ ಕರಿಷ್ಯಂತಿ ಚ ದೇವಯೋನೇ ॥ ೧೪೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇಽನಂಗದಾನವೇಶ್ಯಾವ್ರತ
ಕಥನಂ ನಾಮ ತ್ರಯೋವಿಂಶತಿತಮೋಧ್ಯಾಯಃ



೧೪೫. ಯಾವ ಕಲ್ಯಾಣಿನಿಯು ಇದನ್ನು ಅಖಂಡವಾಗಿ ಪೂರ್ತಿಗೊಳಿಸುತ್ತಾಳೆಯೋ ಅವಳು ಮಾಧವನ ಲೋಕವನ್ನು ಸೇರಿ ದೇವತೆಗಳಿಂದ ಪೂಜಿತಳಾಗಿ ಆನಂದವನ್ನುಂಟುಮಾಡುವ ಸ್ಥಾನವನ್ನು ಹೊಂದುತ್ತಾಳೆ.

೧೪೬. ಎಲೈ ಭೀಷ್ಮನೇ, ದಾಲ್ಭ್ಯನು ಈ ರೀತಿ ಆ ಸ್ತ್ರೀಯರಿಗೆ ಅನಂಗದಾನವ್ರತವನ್ನು ಉಪದೇಶಿಸಿ ತನ್ನ ಸ್ಥಾನಕ್ಕೆ ಹೋಗುತ್ತಾನೆ. ಆ ಹೆಂಗಸರೂ ಹಾಗೆಯೇ ಮಾಡುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಸೃಷ್ಟಿಖಂಡದಲ್ಲಿ ಅನಂಗದಾನ ವೇಶ್ಯಾವ್ರತ
ಕಥನವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಸೃಷ್ಟಿಖಂಡೇ ಚತುರ್ವಿಂಶೋಽಧ್ಯಾಯಃ

॥ ಬ್ರಹ್ಮೋವಾಚ ॥

ಭಗವಾನ್ಪುರಷಸ್ಯೇಹ ಸ್ತ್ರಿಯಾಶ್ಚ ವಿರಹಾದಿಕಂ ।
ಶೋಕವ್ಯಾಧಿಭಯಂ ದುಃಖಂ ನ ಭವೇದ್ಯೇನ ತದ್ವದ ॥ ೧ ॥

॥ ಶಂಕರ ಉವಾಚ ॥

ಶ್ರಾವಣಸ್ಯ ದ್ವಿತೀಯಾಯಾಂ ಕೃಷ್ಣಾಯಾಂ ಮಧುಸೂದನಃ ।
ಕ್ಷೀರಾರ್ಣವೇ ಸಲಕ್ಷ್ಮೀಕಃ ಸದಾ ವಸತಿ ಕೇಶವಃ ॥ ೨ ॥

ತಸ್ಯಾಂ ಸಂಪೂಜ್ಯ ಗೋವಿಂದಂ ಸರ್ವಾನ್ಕಾಮಾನವಾಪ್ನುಯಾತ್ ।
ಗೋಭೂಹಿರಣ್ಯದಾನಾನಿ ಸಪ್ತಕಲ್ಪಶತಾನುಗಂ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಬ್ರಹ್ಮನು ಹೇಳಿದನು:—ಎಲೈ ಭಗವಂತನೇ, ಗಂಡಸಿಗಾಗಲಿ, ಹೆಂಗಸಿಗಾಗಲಿ, ವಿರಹ, ಶೋಕ, ರೋಗ, ಭಯ, ದುಃಖಗಳು ಯಾವುದನ್ನಾಚರಿಸಿದರೆ ಬರುವುದಿಲ್ಲವೆಂಬುದನ್ನು ತಿಳಿಸು.

೨. ಶಂಕರನು ಹೇಳಿದನು:—ಶ್ರಾವಣ ಕೃಷ್ಣ ದ್ವಿತೀಯೆಯ ದಿವಸ ಕ್ಷೀರ ಸಮುದ್ರದಲ್ಲಿ ಲಕ್ಷ್ಮಿಯೊಡನೆ ಮಲಗಿರುವ ಕೇಶವನನ್ನು ಪೂಜೆಮಾಡಿದರೆ ಎಲ್ಲಾ ಕಷ್ಟಗಳೂ, ಹೋಗಿ ಇಷ್ಟಾರ್ಥಗಳು ಕೈಗೂಡುತ್ತವೆ.

೩-೪ ಗೋವು, ಭೂಮಿ, ಹಿರಣ್ಯ ಮುಂತಾದ ದಾನಗಳನ್ನು ಕೊಡತಕ್ಕದ್ದು.

ಅಶೂನ್ಯಶಯನಾ ನಾಮ ದ್ವಿತೀಯಾ ಸಾ ಪ್ರಕೀರ್ತಿತಾ ।
ತಸ್ಯಾಂ ಸಂಪೂಜಯೇದ್ವಿಷ್ಣುಮೇಭಿರ್ಮಂತ್ರೈರ್ವಿಧಾನತಃ ॥ ೪ ॥

ಶ್ರೀವತ್ಸಧಾಮ ಶ್ರೀಕಾಂತ ಶ್ರೀಧಾಮ ಶ್ರೀಪತೇಽವ್ಯಯ ।
ಗಾರ್ಹಸ್ಥ್ಯಂ ಮಾ ಪ್ರಣಾಶಂ ಮೇ ಯಾತು ಧರ್ಮಾರ್ಥಕಾಮದಂ ॥ ೫ ॥

ಅಗ್ನಯೋ ಮಾ ಪ್ರಣಶ್ಯಂತು ಮಾ ಪ್ರಣಶ್ಯಂತು ದೇವತಾಃ ।
ಪಿತರೋ ನ ಪ್ರಣಶ್ಯಂತು ಮಮ ದಾಂಪತ್ಯಭೇದತಃ ॥ ೬ ॥

ಲಕ್ಷ್ಮ್ಯಾ ವಿಯುಜ್ಯತೇ ದೇವೋ ನ ಕದಾಚಿದ್ಯಥಾ ಹರಿಃ ।
ತಥಾ ಕಲತ್ರಸಂಬಂಧೋ ದೇವ ಮಾ ಮೇ ವಿಯುಜ್ಯತಾಂ ॥ ೭ ॥

ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ ।
ಶಯ್ಯಾ ಮಮಾಪ್ಯಶೂನ್ಯಾಽಸ್ತು ತಥೈವ ಮಧುಸೂದನ ॥ ೮ ॥

ಗೀತವಾದಿತ್ರನಿರ್ಘೋಷಂ ದೇವದೇವಸ್ಯ ಕಾರಯೇತ್ ।
ಘಂಟಾಽಭಾವೇ ತು ಸರ್ವೇಷಾಂ ಸರ್ವವಾದ್ಯಮಯೀ ಯತಃ ॥ ೯ ॥

---

ಏಳುನೂರು ಕಲ್ಪಗಳಿಂದಲೂ ಬಂದಿದೆ. ಇದಕ್ಕೆ ಅಶೂನ್ಯ ಶಯನ ದ್ವಿತೀಯ ಎಂದು ಹೆಸರು. ಅದರಲ್ಲಿ ವಿಷ್ಣುವನ್ನು ಈ ಮಂತ್ರಗಳಿಂದ ಪೂಜಿಸಬೇಕು.

೫-೬. ಶ್ರೀವತ್ಸಕ್ಕೆ ಧಾಮನೆ, ಶ್ರೀಕಾಂತನೆ, ಶ್ರೀಧಾಮನೇ, ಶ್ರೀಪತಿಯೇ, ಅವ್ಯಯನೇ, ನನ್ನ ದಾಂಪತ್ಯ ಭೇದದಿಂದ ನನ್ನ ಗೃಹಸ್ಥ ಧರ್ಮವು ಹೋಗ ಕೂಡದು. ಅಗ್ನಿಗಳು ನಾಶವಾಗಕೂಡದು. ದೇವತೆಗಳು ನಾಶವಾಗಕೂಡದು. ಪಿತೃಗಳು ನಾಶವಾಗಕೂಡದು.

೭. ಹರಿಯು ಲಕ್ಷ್ಮಿಯಿಂದ ಹೇಗೆ ವಿಯೋಗವನ್ನು ಹೊಂದುವುದಿಲ್ಲವೋ ಹಾಗೆ ನಾನು ನನ್ನ ಕಳತ್ರದಿಂದ ವಿಯೋಗವನ್ನು ಹೊಂದಕೂಡದು.

೮. ಎಲೈ ವರದನೇ, ಲಕ್ಷ್ಮೀಯಿಂದ ನಿನ್ನ ಶಯನವು ಹೇಗೆ ಶೂನ್ಯವಾಗು ವುದಿಲ್ಲವೋ ಹಾಗೇ ನನ್ನ ಶಯನವೂ ಶೂನ್ಯವಾಗದೇ ಇರಲಿ.

೯. ಗೀತವಾದ್ಯಗಳ ಧ್ವನಿಯನ್ನು ಆ ದೇವದೇವನ ಮುಂದೆ ಮಾಡಿಸಬೇಕು. ಆ ಗೀತವಾದಿತ್ರಗಳಿಲ್ಲದಿದ್ದರೆ ಘಂಟಾನಾದವನ್ನು ಮಾಡಬೇಕು. ಆ ಘಂಟೆಯು ಎಲ್ಲಾ ವಾದ್ಯಗಳ ಸ್ವರೂಪವಾದುದು.

ಏವಂ ಸಂಪೂಜ್ಯ ಗೋವಿಂದಮಶ್ನೀಯಾತ್ತೈಲವರ್ಜಿತಂ ।
ನಕ್ತಮಕ್ಷಾರಲವಣಂ ಯಾವನ್ಮಾಸಚತುಷ್ಟಯಂ ॥ ೧೦ ॥

ತತಃ ಪ್ರಭಾತೇ ಸಂಜಾತೇ ಲಕ್ಷ್ಮೀಪತಿಸಮನ್ವಿತಾಂ ।
ದೀಪಾನ್ನಭೋಜನೈರ್ಯುಕ್ತಾಂ ಶಯ್ಯಾಂ ದದ್ಯಾದ್ವಿಲಕ್ಷಣಾಂ ॥ ೧೧ ॥

ಪಾದುಕೋಪಾನಹಚ್ಛತ್ರಚಾಮರಾಸನಸಂಯುತಾಂ ।
ಅಭೀಷ್ಟೋಪಸ್ಕರೈರ್ಯುಕ್ತಾಂ ಶುಕ್ಲಪುಷ್ಪಾಂಬರಾವೃತಾಂ ॥ ೧೨ ॥

ಅವ್ಯಂಗಾಯ ಚ ವಿಪ್ರಾಯ ವೈಷ್ಣವಾಯ ಕುಟುಂಬಿನೇ ।
ದಾತವ್ಯಾ ವೇದವಿದುಷೇ ನ ಚ ಕುವ್ರತಿನೇ ಕ್ವಚಿತ್ ॥ ೧೩ ॥

ತತ್ರೋಪವಿಶ್ಯ ದಾಂಪತ್ಯಮಲಂಕೃತ್ಯ ವಿಧಾನತಃ ।
ಪತ್ನ್ಯಾಸ್ತು ಭಾಜನಂ ದದ್ಯಾದ್ಭಕ್ಷ್ಯಭೋಜ್ಯಸಮನ್ವಿತಂ ॥ ೧೪ ॥

ಬ್ರಾಹ್ಮಣಸ್ಯಾಪಿ ಸೌವರ್ಣಾಮುಪಸ್ಕಾರಸಮನ್ವಿತಾಂ ।
ಪ್ರತಿಮಾಂ ದೇವದೇವಸ್ಯ ಸೋದಕುಂಭಾಂ ನಿವೇದಯೇತ್ ॥ ೧೫ ॥

---

೧೦. ಈರೀತಿ ಗೋವಿಂದನನ್ನು ಪೂಜಿಸಿ ಎಣ್ಣೆಯನ್ನು ಬಿಟ್ಟುಬಿಟ್ಟು ಊಟ ಮಾಡಬೇಕು. ನಾಲ್ಕು ತಿಂಗಳವರೆಗೂ ಕಾರ ಉಪ್ಪುಗಳನ್ನು ತಿನ್ನದೆ ನಿಯಮ ದಿಂದಿರಬೇಕು.

೧೧—೧೩. ಬೆಳಿಗ್ಗೆ ಎದ್ದು ದೀಪ, ಅನ್ನ ಊಟಗಳಿಂದ ಕೂಡಿದ ಹಾಸಿಗೆ ಯಲ್ಲಿ ಲಕ್ಷ್ಮೀಸಹಿತನಾದ ವಿಷ್ಣುವನ್ನು ಕೂರಿಸಿ, ದಾನಮಾಡಬೇಕು. ಜೊತೆಗೆ ಕೆರ, ಪಾದುಕೆ, ಛತ್ರಿ, ಚಾಮರ ಆಸನಗಳನ್ನು ಕೊಡಬೇಕು. ಅಲ್ಲದೇ, ತನಗೆ ಬೇಕಾದ ಆದರ ಸಾಮಾನುಗಳೊಂದಿಗೆ ಬಿಳಿ ಹೂ ಮಾಲೆಯನ್ನು ಇಟ್ಟು ಅಂಗಹೀನ ನಾಗದ, ವೈಷ್ಣವನಾದ, ಕುಟುಂಬಿಯಾದ, ವೇದ ಓದಿದ, ಕೆಟ್ಟ ವ್ರತಗಳನ್ನು ಮಾಡದ ಬ್ರಾಹ್ಮಣನಿಗೆ ಕೊಡಬೇಕು.

೧೪-೧೫. ಆ ಹಾಸಿಗೆಯ ಮೇಲೆ ದಂಪತಿಗಳನ್ನು ಕೂರಿಸಿ ಅವರಿಗೆ ಅಲಂಕಾರ ಮಾಡಿ, ಹೆಂಡತಿಗೆ ಭಕ್ಷ್ಯಭೋಜ್ಯಗಳಿಂದ ಕೂಡಿದ ಪಾತ್ರೆಗಳನ್ನು ಕೊಡಬೇಕು. ಬ್ರಾಹ್ಮಣನಿಗೆ ಪರಿಕರಗಳಿಂದ ಕೂಡಿ ಚಿನ್ನದ ಪ್ರತಿಮೆಯನ್ನೂ ಕಲಶವನ್ನೂ ದಾನಮಾಡಬೇಕು.

ಏವಂ ಯಸ್ತು ಪುಮಾನ್ಕುರ್ಯಾದಶೂನ್ಯಶಯನವ್ರತಂ ।
ವಿತ್ತಶಾಠ್ಯೇನ ರಹಿತೋ ನಾರಾಯಣಪರಾಯಣಃ ॥ ೧೬ ॥

ನ ತಸ್ಯ ಪತ್ನ್ಯಾ ವಿರಹಃ ಕದಾಚಿದಪಿ ಜಾಯತೇ ।
ನಾರೀ ವಾ ವಿಧವಾ ಬ್ರಹ್ಮನ್ಯಾವಚ್ಚಂದ್ರಾರ್ಕತಾರಕಂ ॥ ೧೭ ॥

ನ ವಿರೂಪೌ ನ ಶೋಕಾಢ್ಯೌ ದಂಪತೀ ಜಾಯತೇ ಕ್ವಚಿತ್ ।
ನ ಪುತ್ರಪಶುರತ್ನಾನಿ ಕ್ಷಯಂ ಯಾಂತಿ ಪಿತಾಮಹ ॥ ೧೮ ॥

ಸಪ್ತ ಕಲ್ಪಸಹಸ್ರಾಣಿ ಸಪ್ತಕಲ್ಪಶತಾನಿ ಚ ।
ಕುರ್ವನ್ನಶೂನ್ಯಶಯನಂ ವಿಷ್ಣುಲೋಕೇ ಮಹೀಯತೇ ॥ ೧೯ ॥

॥ ಬ್ರಹ್ಮೋವಾಚ ॥

ಕಥಮಾರೋಗ್ಯಮೈಶ್ವರ್ಯಂ ಮತಿರ್ಧರ್ಮೇ ಸ್ಥಿತಾ ತಥಾ ।
ಅವ್ಯಂಗಾಽಥ ಪರೇ ಭಕ್ತಿರ್ವಿಷ್ಣೌ ವಾಽಪಿ ಭವೇತ್ಕಥಂ ॥ ೨೦ ॥

---

೧೬. ಹೀಗೆ ಯಾವ ಮನುಷ್ಯನು ಲೋಭಿಯಾಗದೆ ನಾರಾಯಣನಲ್ಲಿಯೇ ಮನಸ್ಸಿಟ್ಟು ಈ ಅಶೂನ್ಯಶಯನ ವ್ರತವನ್ನು ಮಾಡುತ್ತಾನೋ ಅವನಿಗೆ ಹೆಂಡತಿಯ ವಿರಹವು ಯಾವಾಗಲೂ ಉಂಟಾಗುವುದಿಲ್ಲ.

೧೭-೧೮. ಹೆಂಗಸಾಗಲಿ, ಗಂಡಸಾಗಲಿ ಈ ವ್ರತವನ್ನು ಮಾಡಿದರೆ ಚಂದ್ರ, ಸೂರ್ಯ, ನಕ್ಷತ್ರಗಳಿರುವವರೆಗೂ ಕುರೂಪಿಗಳಾಗುವುದಿಲ್ಲ. ಆ ದಂಪತಿಗಳು ಶೋಕವನ್ನು ಹೊಂದುವುದೂ ಇಲ್ಲ. ಮಕ್ಕಳು, ಪಶು, ರತ್ನಗಳ ನಾಶವನ್ನೂ ಹೊಂದುವುದಿಲ್ಲ.

೧೯. ಆ ದಂಪತಿಗಳು ಏಳುಸಾವಿರ ಏಳುನೂರು ಕಲ್ಪಗಳವರೆಗೂ ಹಾಸಿಗೆಯಲ್ಲಿ ಶೂನ್ಯತೆಯನ್ನು ಹೊಂದದೆ ಇದ್ದು ಕೊನೆಗೆ ವಿಷ್ಣುವಿನ ಲೋಕದಲ್ಲಿ ಸುಖಿಸುತ್ತಾರೆ.

೨೦. ಬ್ರಹ್ಮನು ಹೇಳಿದನು :—ಆರೋಗ್ಯ, ಐಶ್ವರ್ಯ, ಧರ್ಮದಲ್ಲಿ ಬುದ್ಧಿ ಇರುವಿಕೆ, ಕುರೂಪವಾಗದಿರುವಿಕೆ, ವಿಷ್ಣುವಿನಲ್ಲಿ ಅತಿಶಯವಾದ ಭಕ್ತಿ ಇವು ಹೇಗೆ ಉಂಟಾಗುತ್ತವೆ ?

॥ ಈಶ್ವರ ಉವಾಚ ॥

ಸಾಧು ಬ್ರಹ್ಮಂಸ್ತ್ವಯಾ ಪೃಷ್ಟಮಿದಾನೀಂ ಕಥಯಾಮಿ ತೇ ।
ವಿರೋಚನಸ್ಯ ಸಂವಾದಂ ಭಾರ್ಗವಸ್ಯ ಚ ಧೀಮತಃ ॥ ೨೧ ॥

ಪ್ರಹ್ಲಾದಸ್ಯ ಸುತಂ ದೃಷ್ಟ್ವಾ ದ್ವಿರಷ್ಟಪರಿವತ್ಸರಂ ।
ತಸ್ಯ ರೂಪಮಿದಂ ಬ್ರಹ್ಮನ್ ಜಹಾಸ ಭೃಗುನಂದನಃ ॥ ೨೨ ॥

॥ ಭಾರ್ಗವ ಉವಾಚ ॥

ಸಾಧು ಸಾಧು ಮಹಾಬಾಹೋ ವಿರೋಚನ ಶಿವಂ ತವ ।
ತತ್ತಥಾ ಹಸಿತಂ ತಸ್ಯ ಪಪ್ರಚ್ಛ ಸುರಸೂದನಃ ॥ ೨೩ ॥

॥ ವಿರೋಚನ ಉವಾಚ ॥

ಬ್ರಹ್ಮನ್ಕಿಮರ್ಥಮೇತತ್ತೇ ಹಾಸ್ಯಮಾಕಾಲಿಕಂ ಕೃತಂ ।
ಸಾಧು ಸಾಧ್ವಿತಿ ಮಾಮೇವಮುಕ್ತವಾಂಸ್ತ್ವಂ ವದಸ್ವ ಮೇ ॥ ೨೪ ॥

---

೨೧. ಈಶ್ವರನು ಹೇಳಿದನು :—ಎಲೈ ಬ್ರಹ್ಮನೇ, ನೀನು ಕೇಳಿದುದು ಸರಿ. ವಿರೋಚನನಿಗೂ, ಭಾರ್ಗವನಿಗೂ ನಡೆದ ಸಂವಾದವನ್ನು ಈಗ ಹೇಳುತ್ತೇನೆ ಕೇಳು.

೨೨. ಶುಕ್ರನು ಪ್ರಹ್ಲಾದನ ಮಗನಾದ, ಹದಿನೆಂಟು ವರ್ಷ ವಯಸ್ಸುಳ್ಳ ವಿರೋಚನನನ್ನು ನೋಡಿ ಇದು ನಿನ್ನ ರೂಪವೋ ಎಂದು ನಕ್ಕನು.

೨೩. ಶುಕ್ರನು ಹೇಳಿದನು :—ಎಲೈ ಮಹಾಬಾಹುವಾದ ವಿರೋಚನನೇ, ಚೆನ್ನಾಗಿದೆ, ಚೆನ್ನಾಗಿದೆ. ಎಂದು ನಗಲು ಆ ವಿರೋಚನನು ಆ ನಗುವಿಗೆ ಕಾರಣವನ್ನು ಕೇಳಿದನು.

೨೪. ವಿರೋಚನನು ಹೇಳಿದನು :—ಎಲೈ ಬ್ರಾಹ್ಮಣನೇ, ನಿನ್ನ ಈ ಅಕಾಲದ ನಗುವು ಏತಕ್ಕೋಸ್ಕರ ಮಾಡಲ್ಪಟ್ಟಿತು ? ನನ್ನನ್ನು ಕುರಿತು ಸಾಧು, ಸಾಧು ಎಂದು ಹೇಳಲು ಕಾರಣವೇನು ? ಹೇಳೆಂದನು.

ತವಮೇವಂನಾದಿನಂ ಶುಕ್ರ ಉವಾಚ ವದತಾಂ ವರಃ ।
ವಿಸ್ಮಯೋದ್ವ್ರತಮಾಹಾತ್ಮ್ಯಾದ್ವಾಕ್ಯಮೇತತ್ಛ್ರುತಂ ಮಯಾ ॥ ೨೫ ॥

ಪುರಾ ದಕ್ಷವಿನಾಶಾಯ ಕುಪಿತಸ್ಯ ತ್ರಿಶೂಲಿನಃ ।
ಅಪತದ್ಭೀಮವಕ್ತ್ರಸ್ಯ ಸ್ವೇದಬಿಂದುರ್ಲಲಾಟತಃ ॥ ೨೬ ॥

ಭಿತ್ವಾ ಸಮಸ್ತಪಾತಾಲಮದಹತ್ಸಪ್ತ ಸಾಗರಾನ್ ।
ಅನೇಕವಕ್ತ್ರನಯನೋ ಜ್ವಲಜ್ಜ್ವಲನಭೀಷಣಃ ॥ ೨೭ ॥

ವೀರಭದ್ರ ಇತಿ ಖ್ಯಾತಃ ಕರಪಾದಾಯುತೈರ್ಯುತಃ ।
ಕೃತ್ವಾ ಸ ಯಜ್ಞಮಥನಂ ಪುನರ್ಭೂತಸ್ಯ ಸಂಪ್ಲವಂ ॥ ೨೮ ॥

ತ್ರಿಜಗನ್ನಿರ್ದಹನ್ಭೂಯಃ ಶಿವೇನ ವಿನಿವಾರಿತಃ ॥ ೨೯ ॥

॥ ಶಿವ ಉವಾಚ ॥

ಕೃತಂ ತ್ವಯಾ ವೀರಭದ್ರ ದಕ್ಷಯಜ್ಞವಿನಾಶನಂ ।
ಇದಾನೀಮಲಮೇತೇನ ಲೋಕದಾಹೇನ ಕರ್ಮಣಾ ॥ ೩೦ ॥

---

೨೫. ಹೀಗೆ ಹೇಳುತ್ತಿರುವ ಆ ವಿರೋಚನನನ್ನು ಕುರಿತು, ಶುಕ್ರನು ಎಲೈ ವಿರೋಚನನೇ, ನಿನ್ನ ವ್ರತದ ಮಹಿಮೆಯನ್ನು ನೋಡಿ ಆಶ್ಚರ್ಯಗೊಂಡು ಇಂತು ನಕ್ಕೆನು ಎಂದನು.

೨೬. ಹಿಂದೆ ದಕ್ಷನ ವಿನಾಶಕಾಲದಲ್ಲಿ ಶಿವನು ಕೋಪಗೊಳ್ಳಲು ಅವನ ಭಯಂಕರವಾದ ಮುಖದಿಂದ ಬೆವರಿನ ಹನಿಗಳು ಬಿದ್ದುವು.

೨೭. ಆ ಬೆವರಿನ ಹನಿಯು ಏಳು ಪಾತಾಳ ಲೋಕಗಳನ್ನೂ ಭೇದಿಸುತ್ತ, ಏಳು ಸಮುದ್ರಗಳನ್ನೂ ಶೋಷಿಸಿತು. ಆಗ ಬಹು ಮುಖವೂ, ಕಣ್ಣುಗಳೂ ಉಳ್ಳ, ಜ್ವಲಿಸುತ್ತಿರುವ ಬೆಂಕಿಯಂತೆ ಭಯಂಕರನಾದ, ಸಾವಿರ ಕೈ, ಸಾವಿರ ಕಾಲುಗಳುಳ್ಳ ವೀರಭದ್ರನೆಂಬವನು ಹುಟ್ಟಿದನು.

೨೮-೨೯. ಅವನು ಆ ದಕ್ಷಯಜ್ಞವನ್ನು ನಾಶಮಾಡಿ, ಅಲ್ಲಿನ ಪ್ರಾಣಿಗಳನ್ನೆಲ್ಲಾ ಕೊಂದು, ಮೂರು ಲೋಕವನ್ನೂ ಸುಡುತ್ತಿರಲು ಶಿವನು ಅದನ್ನು ತಡೆದನು.

೩೦-೩೧. ಶಿವನು ಹೇಳಿದನು:—ಎಲೈ ವೀರಭದ್ರನೇ, ನೀನು ದಕ್ಷಯಜ್ಞ

**ಶಾಂತಿಪ್ರದಾನಾತ್ಸರ್ವೇಷಾಂ ಗ್ರಹಾಣಾಂ ಪ್ರಥಮೋ ಭವ ।**
**ಪ್ರಕೃಷ್ಟಾಂ ತೇ ಜನಾಃ ಪೂಜಾಂ ಕರಿಷ್ಯಂತಿ ಕೃತಾತ್ಮನಃ ॥ ೩೧ ॥**

**ಅಂಗಾರಕ ಇತಿ ಖ್ಯಾತಿಂ ಗಮಿಷ್ಯಸಿ ಧರಾತ್ಮಜ ।**
**ದೇವಲೋಕೇ ದ್ವಿತೀಯಂ ಚ ತ್ವತ್ಸ್ವರೂಪಂ ಭವಿಷ್ಯತಿ ॥ ೩೨ ॥**

**ಯೇ ಚ ತ್ವಾಂ ಪೂಜಯಿಷ್ಯಂತಿ ಚತುರ್ಥ್ಯಾಂ ತು ದಿನೇ ನರಾಃ ।**
**ರೂಪಮಾರೋಗ್ಯಮೈಶ್ವರ್ಯಂ ತೇಷ್ವನಂತಂ ಭವಿಷ್ಯತಿ ॥ ೩೩ ॥**

**॥ ಭಾರ್ಗವ ಉವಾಚ ॥**

**ಏವಮುಕ್ತಸ್ತದಾ ಶಾಂತಿಮಗಮತ್ಕಾಮರೂಪಧೃಕ್ ।**
**ಸಂಜಾತಸ್ತತ್ಕ್ಷಣಾದ್ರಾಜನ್ಗ್ರಹತ್ವಮಗಮತ್ಪುನಃ ॥ ೩೪ ॥**

**ಸ ಕದಾಚಿದ್ಭವಾಂಸ್ತಸ್ಯ ಪೂಜಾರ್ಚಾದಿಕಮುತ್ತಮಂ ।**
**ದೃಷ್ಟವಾನ್ಕ್ರಿಯಮಾಣಂ ಚ ಶೂದ್ರೇಣ ತ್ವಂ ವ್ಯವಸ್ಥಿತಃ ॥ ೩೫ ॥**

---

ವನ್ನು ನಾಶಮಾಡಿದೆ. ಸಾಕು. ಈ ಲೋಕನಾಶಕ ಕೆಲಸವನ್ನು ಇನ್ನು ಬಿಟ್ಟುಬಿಡು. ಎಲ್ಲರಿಗೂ ಶಾಂತಿಯನ್ನು ಕೊಡುತ್ತ ಗ್ರಹಗಳಲ್ಲಿ ಮೊದಲನೆಯವನಾಗು. ಕೃತಕೃತ್ಯನಾದ ನಿನಗೆ ಜನಗಳು ಉತ್ತಮವಾದ ಪೂಜೆಯನ್ನು ಮಾಡುತ್ತಾರೆ,

೩೨. ನೀನು ಅಂಗಾರಕನೆಂಬ ಹೆಸರನ್ನು ಹೊಂದುತ್ತೀಯೆ, ದೇವಲೋಕದಲ್ಲಿ ನಿನ್ನ ರೂಪವು ಅದ್ವಿತೀಯವಾಗಿರುತ್ತದೆ.

೩೩. ಯಾರು ನಿನ್ನನ್ನು ಚತುರ್ಥಿಯ ದಿನ ಪೂಜೆಮಾಡುತ್ತಾರೋ ಅವರಿಗೆ ರೂಪ, ಆರೋಗ್ಯ, ಐಶ್ವರ್ಯ, ಇವು ಬಹುವಾಗಿಯೂ ಅನಂತವಾಗಿಯೂ ಆಗುತ್ತವೆ.

೩೪. ಭಾರ್ಗವನು ಹೇಳಿದನು :—ಶಿವನು ಹೀಗೆ ಹೇಳಲು ಆ ವೀರಭದ್ರನು ಶಾಂತನಾದನು. ಒಡನೆಯೇ, ಮನೋಹರವಾದ ರೂಪವನ್ನು ಹೊಂದಿ ಗ್ರಹವೂ ಆದನು.

೩೫. ಒಬ್ಬ ಶೂದ್ರನು ಅಂಗಾರಕನ ಪೂಜೆಯನ್ನು ಮಾಡುತ್ತಿದ್ದಾಗ ಅದನ್ನು ನೀನು ನೋಡಿದೆ.

ತೇನ ತ್ವಂ ರೂಪವಾನ್ ಜಾತೋಽಸುರಃ ಶತ್ರುಕುಲಾಶನಿಃ ।
ವಿವಿಧಾ ಚ ರುಚಿರ್ಜಾತಾ ಯಸ್ಮಾತ್ತ್ವ ವಿದೂರಗಾ ॥ ೩೬ ॥

ವಿರೋಚನ ಇತಿ ಪ್ರಾಹುಸ್ತಸ್ಮಾತ್ತ್ವಾಂ ದೇವದಾನವಾಃ ।
ಶೂದ್ರೇಣ ಕ್ರಿಯಮಾಣಸ್ಯ ಚತುರ್ಥ್ಯಾಂ ತವ ದರ್ಶನಾತ್ ॥ ೩೭ ॥

ಈದೃಶೀ ರೂಪಸಂಪತ್ತಿರಿತಿ ವಿಸ್ಮಿತವಾನಹಂ ।
ಸಾಧು ಸಾಧ್ವಿತಿ ತೇನೋಕ್ತಮಹೋ ಮಾಹಾತ್ಮ್ಯಮುತ್ತಮಂ ।
ಪಶ್ಯತೋಽಪಿ ಭವೇದ್ರೂಪಮೈಶ್ವರ್ಯಂ ಕಿಮು ಕುರ್ವತಃ ॥ ೩೮ ॥

ಯಸ್ಮಾಚ್ಚ ಭಕ್ತ್ಯಾ ಧರಣೀಸುತಸ್ಯ
ವಿನಿಂದ್ಯಮಾನೇನ ಗವಾದಿದಾನಂ ॥
ಆಲೋಕಿತಂ ತೇನ ಸುರಾರಿಗರ್ಭೇ
ಸಂಭೂತಿರೇಷಾ ತವ ದೈತ್ಯ ಜಾತಾ ॥ ೩೯ ॥

---

೩೬. ಅದರಿಂದ ನೀನು ರೂಪವಂತನಾದೆ. ಶತ್ರುಗಳ ಗುಂಪಿಗೆ ಸಿಡಿಲಾದೆ. ಅದರಿಂದಲೇ ನಿನಗೆ ಬಹು ದೂರ ಹೋಗುವ ಆಸೆಯೂ ಹುಟ್ಟಿತು.

೩೭. ಅದರಿಂದಲೇ ನಿನಗೆ ವಿರೋಚನನೆಂಬ ಹೆಸರನ್ನಿಟ್ಟು, ದೇವದಾನವರು ಕರೆಯುವರು. ಶೂದ್ರನು ಮಾಡುತ್ತಿದ್ದ ಆ ಚತುರ್ಥ್ಯಂಗಾರ ಪೂಜೆಯನ್ನು ನೀನು ನೋಡಿದುದರಿಂದಲೇ, ನಿನಗೆ ಇಂತಹ ರೂಪು ಉಂಟಾಯಿತೆಂದು ನಾನು ಆಶ್ಚರ್ಯ ಗೊಂಡೆನು.

೩೮. ಆ ವ್ರತವನ್ನು ನೋಡುತ್ತಿದ್ದ ನಿನಗೆ ಈ ರೀತಿಯಾದ ಸೌಂದರ್ಯವು ಬಂದಮೇಲೆ ಮಾಡತಕ್ಕವನಿಗೆ ಹೇಳುವುದೇನಿದೆ? ಚೆನ್ನಾಗಿದೆ. ವ್ರತದ ಮಹಿ ಮೆಯು ಉತ್ತಮವಾದುದು.

೩೯. ನಿಂದ್ಯನಾದ ಕೀಳು ಜಾತಿಯವನು ಮಾಡುತ್ತಿದ್ದ ಅಂಗಾರಕ ಪೂಜೆ ಯನ್ನೂ ಅವನು ಕೊಡುತ್ತಿದ್ದ ಗೋದಾನ ಮುಂತಾದುವುಗಳನ್ನೂ ನೀನು ನೋಡಿ ದುದರಿಂದ ಈ ದೈತ್ಯ ಜಾತಿಯಲ್ಲಿ ಹುಟ್ಟಿದೆ.

॥ ಈಶ್ವರ ಉವಾಚ ॥

**ಅಥ ತದ್ವಚನಂ ಶ್ರುತ್ವಾ ಭಾರ್ಗವಸ್ಯ ಮಹಾತ್ಮನಃ ।**
**ಪ್ರಹ್ಲಾದನಂದನೋ ವೀರಃ ಪುನಃ ಪಪ್ರಚ್ಛ ತಂ ಕವಿಂ ॥ ೪೦ ॥**

॥ ವಿರೋಚನ ಉವಾಚ ॥

**ಭಗವಂಸ್ತದ್ವ್ರತಂ ಸಮ್ಯಕ್ಶ್ರೋತುಮಿಚ್ಛಾಮಿ ತತ್ತ್ವತಃ ।**
**ದೀಯಮಾನಂ ತು ತದ್ದಾನಂ ಮಯಾ ದೃಷ್ಟಂ ಭವಾಂತರೇ ॥ ೪೧ ॥**

**ಮಾಹಾತ್ಮ್ಯಂ ಚ ವಿಧಿಂ ತಸ್ಯ ಯಥಾವದ್ವಕ್ತುಮರ್ಹಸಿ ।**
**ಇತಿ ತದ್ವಚನಂ ಶ್ರುತ್ವಾ ವಿಪ್ರಃ ಪ್ರೋವಾಚ ವಿಸ್ತರಾತ್ ॥ ೪೨ ॥**

॥ ಭಾರ್ಗವ ಉವಾಚ ॥

**ಚತುರ್ಥ್ಯಂಗಾರಕದಿನೇ ಯದಾ ಭವತಿ ದಾನವ ।**
**ಮೃದಾ ಸ್ನಾನಂ ತದಾ ಕುರ್ಯಾತ್ಪದ್ಮರಾಗವಿಭೂಷಿತಃ ॥ ೪೩ ॥**

**ಅಗ್ನಿರ್ಮೂರ್ಧಾ ದಿವೋ ಮಂತ್ರಂ ಜಪೇತ್ಸ್ನಾತ ಉದಙ್ಮುಖಃ ।**
**ಶೂದ್ರಸ್ತೂಷ್ಣೀಂ ಸ್ಮರೇದ್ಭೌಮಮಾಸ್ತೇ ಭೋಗವಿವರ್ಜಿತಃ ॥ ೪೪ ॥**

---

೪೦. ಈಶ್ವರನು ಹೇಳಿದನು:—ಮಹಿಮವಂತನಾದ ಆ ಶುಕ್ರನ ಮಾತನ್ನು ಕೇಳಿ ಪ್ರಹ್ಲಾದನ ಮಗನಾದ ವಿರೋಚನನು ಮತ್ತೆ ಆ ಶುಕ್ರನನ್ನು ಕುರಿತು ಇಂತೆಂದು ಪ್ರಶ್ನಿಸಿದನು.

೪೧-೪೨. ವಿರೋಚನನು ಹೇಳಿದನು:—ಎಲೈ ಸ್ವಾಮಿಯೇ, ಆ ವ್ರತವನ್ನು ಸರಿಯಾಗಿ ಕೇಳಬೇಕೆಂದು ಇಚ್ಛಿಸುತ್ತೇನೆ. ಬೇರೆಯ ಜನ್ಮದಲ್ಲಿ ಅವನು ಕೊಡುತ್ತಿದ್ದ ದಾನವನ್ನು ನೋಡಿದೆನಷ್ಟೆ? ಅದರ ಮಹಿಮೆಯನ್ನು ಕ್ರಮವಾಗಿ ಹೇಳು ಎಂದನು. ಈ ರೀತಿಯಾದ ಮಾತನ್ನು ಕೇಳಿ, ಆ ಶುಕ್ರನು ವಿಸ್ತಾರವಾಗಿ ಹೇಳಿದನು.

೪೩. ಶುಕ್ರನು ಹೇಳಿದನು:—ಮಂಗಳವಾರ ಚತುರ್ಥಿ ಬಂದಾಗ ಮೃತ್ತಿಕಾ ಸ್ನಾನವನ್ನು ಮಾಡಿ ಪದ್ಮರಾಗದಿಂದ ಅಲಂಕಾರ ಮಾಡಿಕೊಳ್ಳಬೇಕು.

೪೪. ದ್ವಿಜನಾದವನು. "ಅಗ್ನಿರ್ಮೂರ್ಧಾದಿವಃ" ಎಂಬ ಮಂತ್ರವನ್ನು ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತುಕೊಂಡು ಜಪಿಸಬೇಕು. ಶೂದ್ರನಾದರೆ, ಅಂಗಾರಕನನ್ನು ಸ್ಮರಿಸುತ್ತಿರಬೇಕು. ಭೋಗಗಳೆಲ್ಲವನ್ನೂ, ಬಿಟ್ಟುಬಿಡಬೇಕು.

ಅಥಾಸ್ತಮಿತ ಆದಿತ್ಯೇ ಗೋಮಯೇನಾನುಲೇಪಯೇತ್ ।
ಪ್ರಾಂಗಣಂ ಪುಷ್ಪಮಾಲಾಭಿರಕ್ಷತಾಢ್ಯೈಃ ಸಮಂತತಃ ॥ ೪೫ ॥

ತದಭ್ಯರ್ಚ್ಯಾಲಿಖೇತ್ಪದ್ಮಂ ಕುಂಕುಮೇನಾಷ್ಟಪತ್ರಕಂ ।
ಕುಂಕುಮಸ್ಯಾಪ್ಯಭಾವೇನ ರಕ್ತಚಂದನಮಿಷ್ಯತೇ ॥ ೪೬ ॥

ಚತ್ವಾರಃ ಕರಕಾಃ ಕಾರ್ಯಾ ಭಕ್ಷ್ಯಭೋಜ್ಯಸಮನ್ವಿತಾಃ ।
ತಂಡಲೈ ರಕ್ತಶಾಲೇಯೈಃ ಪದ್ಮರಾಗಸಮನ್ವಿತೈಃ ॥ ೪೭ ॥

ಚತುಷ್ಕೋಣೇಷು ತಾನ್ಕುರ್ಯಾತ್ಫಲಾನಿ ವಿವಿಧಾನಿ ಚ ।
ಗಂಧಮಾಲ್ಯಾದಿಕಂ ಸರ್ವಂ ತಥೈವ ವಿನಿವೇದಯೇತ್ ॥ ೪೮ ॥

ಸುವರ್ಣಶೃಂಗಾಂ ಕಪಿಲಾಮಥಾಽರ್ಚ್ಯ
ರೌಪ್ಯೈಃ ಖುರೈಃ ಕಾಂಸ್ಯದೋಹಾಂ ಸವಸ್ತ್ರಾಂ ।

---

೪೫. ಸೂರ್ಯನು ಅಸ್ತಮಿಸಲು, ಮನೆಯ ಅಂಗಳವನ್ನು ಸಗಣಿಯಿಂದ ಸಾರಿಸಬೇಕು. ಮತ್ತು ಹೂ, ಚಿಗುರು, ಅಕ್ಷತೇ, ನೀರು, ಮುಂತಾದುವುಗಳಿಂದ ಅಲಂಕರಿಸಬೇಕು.

೪೬. ಹೀಗೆ ಆ ಅಂಗಳವನ್ನಲಂಕರಿಸಿ ಕುಂಕುಮದಿಂದ ಎಂಟು ದಳದ ಪದ್ಮವನ್ನು ಬರೆಯಬೇಕು. ಕುಂಕುಮವಿಲ್ಲದಿದ್ದರೆ, ರಕ್ತಚಂದನದಿಂದ ಬರೆಯ ಬಹುದು.

೪೭-೪೮. ನಾಲ್ಕು ಕಲಶಗಳನ್ನಿಡಬೇಕು. ಅವುಗಳಿಗನುಗುಣವಾಗಿ ಭಕ್ಷ್ಯ ಭೋಜ್ಯಗಳನ್ನು ಇಡಬೇಕು. ಕೆಂಪು ಬಣ್ಣದ ಮಂತ್ರಾಕ್ಷತೆಯನ್ನು ಮಾಡಿ, ಪದ್ಮ ರಾಗಗಳನ್ನು, ಅದರೊಡನೆ ಸೇರಿಸಬೇಕು. ನಾಲ್ಕು ಮೂಲೆಗಳಲ್ಲಿ, ಅವುಗಳನ್ನು ಇಟ್ಟು, ನಾನಾ ಫಲಗಳನ್ನು ಇಡಬೇಕು. ಗಂಧ, ಹೂ, ಎಲ್ಲವನ್ನೂ ಅದಕ್ಕೆ ಸಮ ರ್ಪಿಸಬೇಕು.

೪೯. ಒಂದು ಕಪಿಲೆಬಣ್ಣದ ಕರೆಯುವ ಹಸುವನ್ನು ತಂದು ಅದಕ್ಕೆ ಬೆಳ್ಳಿಯ ಗೊರಸುಗಳನ್ನು ಮಾಡಿಸಿರಬೇಕು. ಕಂಚಿನ ಕರೆಯುವ ಪಾತ್ರೆಯನ್ನಿಟ್ಟಿರಬೇಕು.

ಧುರಂಧರಂ ರಕ್ತಖುರಂ ಚ ಸೌಮ್ಯಂ
ಧಾನ್ಯಾನಿ ಸಪ್ತಾಂಬರಸಂಯುತಾನಿ ॥ ೪೯ ॥

ಅಂಗುಷ್ಠಮಾತ್ರಂ ಪುರುಷಂ ತಥೈವ
ಸೌವರ್ಣಮತ್ಯಾಯತಬಾಹುದಂಡಂ ।
ಚತುರ್ಭುಜಂ ಹೇಮಮಯಂ ಚ ತಾಮ್ರ-
ಪಾತ್ರೇ ಗುಡಸ್ಯೋಪರಿ ಸರ್ಪಿಯುಕ್ತಂ ॥ ೫೦ ॥

ಸವೇದಶಾಸ್ತ್ರಾಯ ಜಿತೇಂದ್ರಿಯಾಯ
ವಾಗ್ರೂಪಶೀಲಾನ್ವಯಸಂಯುತಾಯ ।
ದಾತವ್ಯಮೇತತ್ಸಕಲಂ ದ್ವಿಜಾಯ
ಕುಟುಂಬಿನೇ ನೈವ ತು ದಂಭಯುಕ್ತೇ ॥ ೫೧ ॥

ಭೂಮಿಪುತ್ರ ಮಹಾಭಾಗ ದೇಹೋದ್ಭವ ಪಿನಾಕಿನಃ ।
ರೂಪಾರ್ಥೀ ತ್ವಾಂ ಪ್ರಪನ್ನೋಽಹಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೫೨ ॥

---

ಅದು ಸಾಧುವಾಗಿರಬೇಕು. ಮತ್ತು ಅನೇಕ ಬಗೆಯ ಧಾನ್ಯಗಳನ್ನು ಇಟ್ಟು, ಏಳು ಜೊತೆ ಬಟ್ಟೆಗಳನ್ನು ಇಟ್ಟಿರಬೇಕು.

೫೦. ಅಂಗುಷ್ಠದುದ್ದಕ್ಕೆ ಒಂದು ಅಂಗಾರಕ ಪ್ರತಿಮೆಯನ್ನು ಮಾಡಿಸಿರಬೇಕು. ನಾಲ್ಕು ಭುಜಗಳಿರಬೇಕು. ಒಂದು ತಾಮ್ರದ ಪಾತ್ರೆಯಲ್ಲಿ ತುಪ್ಪವನ್ನು ಹಾಕಿ ಅದರಲ್ಲಿ ಬೆಲ್ಲವನ್ನಿಟ್ಟು, ಆ ಬೆಲ್ಲದ ಮೇಲೆ ಈ ಮೂರ್ತಿಯನ್ನಿಡಬೇಕು.

೫೧. ವೇದ ಶಾಸ್ತ್ರಗಳನ್ನೋದಿದ ಜಿತೇಂದ್ರಿಯನಾದ, ಮಾತು, ರೂಪ, ಶೀಲಗಳು ಚೆನ್ನಾಗಿರುವ ಕುಟುಂಬಿಯಾದ ಬ್ರಾಹ್ಮಣನಿಗೆ ಇವೆಲ್ಲವನ್ನೂ, ದಾನ ಮಾಡಬೇಕು. ದಂಭಾಚಾರಿಗೆ ಖಂಡಿತವಾಗಿ ಕೊಡಕೂಡದು.

೫೨. ಮಹಾಭಾಗನಾದ ಭೂಮಿಪುತ್ರನೇ, ಪಿನಾಕಿಯ ದೇಹದಿಂದ ಹುಟ್ಟಿದವನೇ, ನಾನು ರೂಪಾರ್ಥಿಯಾಗಿ ಶರಣು ಹೊಕ್ಕಿದ್ದೇನೆ. ಅರ್ಘ್ಯವನ್ನು ತೆಗೆದುಕೋ, ನಿನಗೆ ನಮಸ್ಕಾರವು.

ಕುಜಾಯ ಲೋಹಿತಾಂಗಾಯ ಗ್ರಹಮಧ್ಯಸ್ಥಿತಾಯ ಚ
ಕಾರ್ತಿಕೇಯಾನುರೂಪಾಯ ಸುರೂಪಾಯ ನಮೋ ನಮಃ ॥ ೫೩ ॥

ಶಿವಲಲಾಟಸಂಭೂತ ಧರಣೀಗರ್ಭಸಂಭವ ।
ರೂಪಾರ್ಥೀ ತ್ವಾಂ ಪ್ರಪನ್ನೋಽಸ್ಮಿ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೫೪ ॥

ಮಂತ್ರೈರೇಭಿಸ್ತು ದತ್ವಾಽರ್ಘ್ಯಂ ರಕ್ತಚಂದನವಾರಿಣಾ ।
ತತೋಽರ್ಚಯೇದ್ವಿಪ್ರವರಂ ರಕ್ತಮಾಲ್ಯಾಂಬರಾದಿಭಿಃ ॥ ೫೫ ॥

ದದ್ಯಾದನೇನ ಮಂತ್ರೇಣ ಭೌಮಂ ಗೋಮಿಥುನಾನ್ವಿತಂ ।
ಶಯ್ಯಾಂ ಚ ಶಕ್ತಿಮಾನ್ದದ್ಯಾತ್ಸರ್ವೋಪಸ್ಕರಸಂಯುತಾಂ ॥ ೫೬ ॥

ಯದ್ಯದಿಷ್ಟತಮಂ ಲೋಕೇ ಯಚ್ಚಾಸ್ಯ ದಯಿತಂ ಗೃಹೇ ।
ತತ್ತದ್ಗುಣವತೇ ದೇಯಂ ತದ್ವಸ್ಯಾಕ್ಷಯಮಿಚ್ಛತಾ ॥ ೫೭ ॥

---

೫೩. ಕುಜನಿಗೆ, ಕೆಂಪು ಮೈಯುಳ್ಳವನಿಗೆ, ಗ್ರಹಗಳ ಮಧ್ಯದಲ್ಲಿರುವವನಿಗೆ. ಕುಮಾರಸ್ವಾಮಿಗೆ, ಅನುರೂಪನಾದವನಿಗೆ, ಸುರೂಪುಳ್ಳವನಿಗೆ ನಮಸ್ಕಾರವು.

೫೪. ಶಿವನ ಹಣೆಯಿಂದ ಹುಟ್ಟಿದವನೆ, ಭೂಮಿಯ ಗರ್ಭದಲ್ಲಿ ಹುಟ್ಟಿದವನೇ, ನಾನು ರೂಪವನ್ನು ಅಪೇಕ್ಷಿಸಿ ನಿನಗೆ ಶರಣುಬಂದಿದ್ದೇನೆ. ಅರ್ಘ್ಯವನ್ನು ತೆಗೆದುಕೋ. ನಿನಗೆ ನಮಸ್ಕಾರವು.

೫೫-೫೬. ರಕ್ತಚಂದನದಿಂದ ಕೂಡಿರುವ ನೀರಿನಿಂದ, ಮೇಲಿನ ಮಂತ್ರಗಳಿಂದ ಅರ್ಘ್ಯವನ್ನು ಕೊಟ್ಟು ಆಮೇಲೆ ಆ ಬ್ರಾಹ್ಮಣನನ್ನು ಕೆಂಪು ಹೂ, ಕೆಂಪು ಬಟ್ಟೆಗಳಿಂದ ಅಲಂಕರಿಸಬೇಕು. ಆಮೇಲೆ, ಮಂತ್ರಗಳನ್ನು ಹೇಳುತ್ತ, ಚಿನ್ನದ ಅಂಗಾರಕ ಪ್ರತಿಮೆಯನ್ನೂ, ಎರಡು ಗೋವುಗಳನ್ನೂ, ಉಪಕರಣಗಳಿಂದ ಕೂಡಿದ ಹಾಸಿಗೆಯನ್ನೂ, ಅವನಿಗೆ ದಾನಮಾಡಬೇಕು.

೫೭. ತನಗೆ ಬೇಕಾದುದು, ಅವನಿಗೆ ಬೇಕಾದುವುಗಳಲ್ಲಿ, ನಮ್ಮ ಮನೆಯಲ್ಲಿರುವುದು. ಅವೆಲ್ಲವನ್ನು ಗುಣವುಳ್ಳ ಬ್ರಾಹ್ಮಣನಿಗೆ ಕೊಟ್ಟರೆ ಅಕ್ಷಯವಾಗುತ್ತದೆ.

**ತತಃ ಪ್ರದಕ್ಷಿಣಂ ಕೃತ್ವಾ ವಿಸರ್ಜ್ಯ ದ್ವಿಜಸತ್ತಮಂ ।**
**ನಕ್ತಮಕ್ಷಾರಲವಣಮಶ್ನೀಯಾನ್ನಂಯುತಂ ತತಃ ॥ ೫೮ ॥**

**ಭಕ್ತ್ಯಾ ಯಸ್ತು ಪುಮಾನ್ಕುರ್ಯಾದೇವಮಂಗಾರಕಾಷ್ಟಕಂ ।**
**ಚತುರೋ ವಾಽಥ ವಾ ತಸ್ಯ ಯತ್ಪುಣ್ಯಂ ತದ್ವದಾಮಿ ತೇ ॥ ೫೯ ॥**

**ರೂಪಸೌಭಾಗ್ಯಸಂಪನ್ನಃ ಪುನರ್ಜನ್ಮನಿ ಜನ್ಮನಿ ।**
**ವಿಷ್ಣೌ ಚಾಥ ಶಿವೇ ಭಕ್ತಃ ಸಪ್ತದ್ವೀಪಾಧಿಪೋ ಭವೇತ್ ॥ ೬೦ ॥**

**ಸಪ್ತ ಕಲ್ಪಸಹಸ್ರಾಣಿ ರುದ್ರಲೋಕೇ ಮಹೀಯತೇ ।**
**ತಸ್ಮಾತ್ತ್ವಮಪಿ ದೈತ್ಯೇಂದ್ರ ವ್ರತಮೇತತ್ಸಮಾಚರ ॥ ೬೧ ॥**

**॥ ಪುಲಸ್ತ್ಯ ಉವಾಚ ॥**

**ಇತ್ಯೇವಮುಕ್ತ್ವಾ ಭೃಗುನಂದನೋಽಪಿ**
**ಜಗಾಮ ದೈತ್ಯೋಽಪಿ ಚಕಾರ ಸರ್ವಂ ।**

---

೫೮. ಅನಂತರ ಆ ಬ್ರಾಹ್ಮಣನಿಗೆ ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡಿ, ಅವನನ್ನು ಕಳುಹಿಸಿ, ಉಪ್ಪು ಕಾರಗಳಿಲ್ಲದ ಊಟವನ್ನು ಬಂಧುಗಳೊಡನೆ ಮಾಡಬೇಕು.

೫೯. ಈ ರೀತಿ ಯಾವನು ಭಕ್ತಿಯಿಂದ ಎಂಟು ಅಂಗಾರಚತುರ್ಥಿಗಳನ್ನು ಮಾಡುತ್ತಾನೋ ಅಥವಾ, ನಾಲ್ಕನ್ನಾದರೂ ಮಾಡುವನೋ, ಅವನಿಗೆ ಬರುವ ಪುಣ್ಯವನ್ನು ಹೇಳುತ್ತೇನೆ ಕೇಳು.

೬೦-೬೧. ಜನ್ಮ ಜನ್ಮಗಳಲ್ಲಿಯೂ, ರೂಪಸೌಭಾಗ್ಯಗಳಿಂದ, ಕೂಡಿದವನಾಗಿ ವಿಷ್ಣು ಅಥವಾ ಶಿವನಲ್ಲಿ, ಭಕ್ತಿಯುಳ್ಳವನಾಗಿ ಏಳು, ದ್ವೀಪಗಳಿಗೂ, ಅಧಿಪತಿಯಾಗುವನು. ಏಳು, ಕಲ್ಪಗಳವರೆಗೂ, ರುದ್ರಲೋಕದಲ್ಲಿ ಸುಖಿಸುತ್ತಾನೆ. ಆದ್ದರಿಂದ ಎಲೈ ದೈತ್ಯೇಂದ್ರನೇ, ನೀನೂ ಕೂಡ ಈ ವ್ರತವನ್ನು ಮಾಡು.

೬೨. ಪುಲಸ್ತ್ಯನು ಹೇಳಿದನು ;—ಹೀಗೆಂದು ಹೇಳಿ, ಆ ಶುಕ್ರನು ಹೊರಟು ಹೋದನು. ವಿರೋಚನನೂ ಕೂಡ, ಅದರಂತೆಯೇ ಮಾಡಿದನು. ಎಲೈ ರಾಜನೇ,

ತ್ವಂ ಚಾಪಿ ರಾಜನ್ಕುರು ಸರ್ವಮೇತ-
ದ್ಯತೋಽಕ್ಷಯಂ ವೇದವಿದೋ ವದಂತಿ ॥ ೬೨ ॥

ತಥೇತಿ ಸಂಪೂಜ್ಯ ಸ ಭಾರ್ಗವಂ ತ-
ದ್ವಾಕ್ಯಂ ಚಕಾರಾದ್ಭುತವೀರ್ಯಕರ್ಮಾ ।
ಶೃಣೋತಿ ಯಶ್ಚೈತದನನ್ಯಚೇತಾ-
ಸ್ತಸ್ಯಾಪಿ ಸಿದ್ಧಿಂ ಭಗವಾನ್ವಿಧತ್ತೇ ॥ ೬೩ ॥

॥ ಭೀಷ್ಮ ಉವಾಚ ॥

ಉಪವಾಸೇಷ್ವಶಕ್ತಸ್ಯ ತದೇವ ಫಲಮಿಚ್ಛತಃ ।
ಅನಭ್ಯಾಸೇನ ರೋಗಾದ್ವಾ ಕಿಮಿಷ್ಟಂ ವ್ರತಮುಚ್ಯತಾಂ ॥ ೬೪ ॥

॥ ಪುಲಸ್ತ್ಯ ಉವಾಚ ॥

ಉಪವಾಸೇಷ್ವಶಕ್ತಾನಾಂ ನಕ್ತಭೋಜನಮಿಷ್ಯತೇ ।
ಯಸ್ಮಿನ್ವ್ರತೇ ತದಪ್ಯತ್ರ ಶ್ರೂಯತಾಂ ವೈ ವ್ರತಂ ಮಹತ್ ॥ ೬೫ ॥

---

ನೀನು ಕೂಡ ಇದನ್ನು ಮಾಡು. ಇದನ್ನು ಮಾಡಿದರೆ, ಅಕ್ಷಯ ಫಲ ಬರುವು ದೆಂದು ವೇದವನ್ನು ಬಲ್ಲವರು ಹೇಳುತ್ತಾರೆ.

೬೩. ಪರಾಕ್ರಮಿಯಾದ ಆ ವಿರೋಚನನು ಅದೇರೀತಿ ಈ ಶುಕ್ರನನ್ನು ಪೂಜಿಸಿ, ಅವನ ಮಾತಿನಂತೆ, ಎಲ್ಲವನ್ನೂ ಮಾಡಿದನು. ಈ ವ್ರತವನ್ನು ಯಾವನು ಒಂದೇ ಮನಸ್ಸಿನಿಂದ ಕೇಳುತ್ತಾನೆಯೋ, ಅವನು ಸರ್ವ ಸಿದ್ಧಿಯನ್ನು ಹೊಂದುವಂತೆ ಭಗವಂತನು ಮಾಡುತ್ತಾನೆ.

೬೪. ಭೀಷ್ಮನು ಹೇಳಿದನು:—ಉಪವಾಸದಲ್ಲಿ ಅಶಕ್ತರಾಗಿ ಆ ವ್ರತದ ಫಲವನ್ನು ಇಚ್ಛಿಸುವವರಾಗಲಿ, ಅಭ್ಯಾಸವಿಲ್ಲದೆ ಇರುವುದರಿಂದಾಗಲಿ, ರೋಗದಿಂದಾ ಗಲಿ, ಇರತಕ್ಕವರು ಯಾವ ವ್ರತವನ್ನು ಮಾಡಬೇಕು ಅದನ್ನು ಹೇಳು.

೬೫. ಪುಲಸ್ತ್ಯನು ಹೇಳಿದನು:— ಉಪವಾಸ ಮಾಡಲು ಆಗದವರಿಗೆ ರಾತ್ರಿ ಯಲ್ಲಿ ಫಲಾಹಾರವು ಹೇಳಲ್ಪಟ್ಟಿದೆ. ಈ ವ್ರತದಲ್ಲಿ, ಅದನ್ನು ಹೇಳುತ್ತೇನೆ ಕೇಳು.

ಆದಿತ್ಯಶಯನಂ ನಾಮ ಯಥಾವಚ್ಛಂಕರಾರ್ಚನಂ ।
ಯೇಷು ನಕ್ಷತ್ರಯೋಗೇಷು ಪುರಾಣಜ್ಞಾಃ ಪ್ರಚಕ್ಷತೇ ॥ ೬೬ ॥

ಯದಾ ಹಸ್ತೇನ ಸಪ್ತಮ್ಯಾಮಾದಿತ್ಯಸ್ಯ ದಿನಂ ಭವೇತ್ ।
ಸೂರ್ಯಸ್ಯ ವಾಥ ಸಂಕ್ರಾಂತಿಸ್ತಿಥಿಃ ಸಾ ಸಾರ್ವಕಾಮಿಕೀ ॥ ೬೭ ॥

ಉಮಾಮಹೇಶ್ವರೌ ದೇವಾವರ್ಚಯೇತ್ಸೂರ್ಯನಾಮಭಿಃ ।
ಸೂರ್ಯಾರ್ಚಾಂ ಶಿವಲಿಂಗಂ ಚ ಭಕ್ತಿತಃ ಪೂಜಯೇದ್ಯತಃ ॥ ೬೮ ॥

ಉಮಾಪತೇ ರವೇಶ್ಚಾಪಿ ನ ಭೇದಃ ಕ್ವಚಿದಿಷ್ಯತೇ ।
ಯಸ್ಮಾತ್ತಸ್ಮಾನ್ನೃಪಶ್ರೇಷ್ಠ ಗೃಹೇ ಭಾನುಂ ಸಮರ್ಚಯೇತ್ ॥ ೬೯ ॥

ಹಸ್ತೇನ ಸೂರ್ಯಾಯ ನಮೋಽಸ್ತು ಪಾದಾ-
ವರ್ಕಾಯ ಚಿತ್ರಾಸು ಚ ಗುಲ್ಫದೇಶಂ ।
ಸ್ವಾತೀಷು ಜಂಘೇ ಪುರುಷೋತ್ತಮಾಯ
ಧಾತ್ರೇ ವಿಶಾಖಾಸು ಚ ಜಾನುದೇಶಂ ॥ ೭೦ ॥

---

೬೬. ಶಂಕರನ ಪೂಜೆಯೊಂದಿರುವುದು, ಅದಕ್ಕೆ ಆದಿತ್ಯಶಯನ ವ್ರತವೆಂದು ಹೆಸರು. ಅದು ಕೆಲವು ನಕ್ಷತ್ರಗಳ ಯೋಗವಿದ್ದಾಗ ಬರುತ್ತದೆಯೆಂದು ಕೆಲವರು ಹೇಳುತ್ತಾರೆ.

೬೭. ಭಾನುವಾರ ಸಪ್ತಮಿಯ ದಿನ ಹಸ್ತನಕ್ಷತ್ರ ಬಂದರೆ ಸೂರ್ಯನಿಗೆ ಬರುವ ಸಂಕ್ರಮಣವಾದರೆ, ಅವು ಎಲ್ಲಾ ಇಷ್ಟಗಳನ್ನು ಕೊಡತಕ್ಕವುಗಳು.

೬೮. ಸೂರ್ಯನ ಹೆಸರುಗಳಿಂದ ಉಮಾಮಹೇಶ್ವರ ದೇವರನ್ನು ಪೂಜಿಸ ಬೇಕು. ಆಗ ಸೂರ್ಯನ ಪೂಜೆಯನ್ನೂ, ಶಿವಲಿಂಗವನ್ನೂ, ಭಕ್ತಿಯಿಂದ ಪೂಜೆ ಮಾಡಬೇಕು.

೬೯. ಶಿವನಿಗೂ, ರವಿಗೂ, ಭೇದವೇನೂ, ಇರುವುದೇ ಇಲ್ಲ, ಆದ್ದರಿಂದ ಮನೆಯಲ್ಲಿ, ಆದಿತ್ಯನನ್ನು ಪೂಜಿಸಬೇಕು.

೭೦-೮೦. ನಕ್ಷತ್ರದ ದಿನ ಸೂರ್ಯಾಯ ನಮಃ ಎಂದು ಪಾದಗಳನ್ನೂ, ಚಿತ್ತೆಯ ದಿನ, ಅರ್ಕಾಯ ನಮಃ, ಎಂದು ಹಿಮ್ಮಡಿಗಳನ್ನೂ, ಸ್ವಾತಿಯ ದಿನ,

ತಥಾಽನುರಾಧಾಸು ನಮೋಽಭಿಪೂಜ್ಯ-
ಮೂರುದ್ವಯಂ ಚೈವ ಸಹಸ್ರಭಾನೋಃ ।
ಜ್ಯೇಷ್ಠಾಸ್ವನಂಗಾಯ ನಮೋಽಸ್ತು ಗುಹ್ಯ-
ಮಿಂದ್ರಾಯ ಭೀಮಾಯ ಕಟಿಂ ಚ ಮೂಲೇ ॥ ೭೧ ॥

ಪೂರ್ವೋತ್ತರಾಷಾಢಯುಗೇ ಚ ನಾಭಿಂ
ತ್ವಾಷ್ಟ್ರೇ ನಮಃ ಸಪ್ತತುರಂಗಮಾಯ ।
ತೀಕ್ಷ್ಣಾಂಶವೇ ಶ್ರವಣೇ ಚಾಥ ಕುಕ್ಷಿಂ
ಕಕ್ಷೌ ಧನಿಷ್ಠಾಸು ವಿಕರ್ತನಾಯ ॥ ೭೨ ॥

ವಕ್ಷಸ್ಥಲಂ ಧ್ವಾಂತವಿನಾಶನಾಯ
ಜಲಾಧಿಪರ್ಕ್ಷೇ ಪ್ರತಿಪೂಜನೀಯಂ ।
ಪೂರ್ವೋತ್ತರಾಭದ್ರಪದದ್ವಯೇ ಚ
ಬಾಹೂ ನಮಶ್ಚಂಡಕರಾಯ ಪೂಜ್ಯೌ ॥ ೭೩ ॥

ಸಾಮ್ನಾಮಧೀಶಾಯ ಕರದ್ವಯಂ ಚ
ಸಂಪೂಜನೀಯಂ ನೃಪ ರೇವತೀಷು ।
ನಖಾನಿ ಪೂಜ್ಯಾನಿ ತಥಾಽಶ್ವಿನೀಷು
ನಮೋಽಸ್ತು ಸಪ್ತಾಶ್ವಧುರಂಧರಾಯ ॥ ೭೪ ॥

---

ಪುರುಷೋತ್ತಮಾಯನಮಃ, ಎಂದು ಮಂಡಿಯನ್ನೂ, ವಿಶಾಖೆಯ ದಿನ, ಧಾತ್ರೇ ನಮಃ ಎಂದು ಮಂಡಿಯ ಮೇಲುಭಾಗವನ್ನೂ, ಅನೂರಾಧೆಯ-ದಿನ, ಸಹಸ್ರಭಾನವೇ ನಮಃ ಎಂದು ತೊಡೆಗಳನ್ನೂ, ಜ್ಯೇಷ್ಠೆಯ ದಿನ ಅನಂಗಾಯನಮಃ ಎಂದು ಗುಹ್ಯ ಪ್ರದೇಶವನ್ನೂ, ಮೂಲದಲ್ಲಿ, ಇಂದ್ರಾಯನಮಃ ಎಂದು ಸೊಂಟ ಪ್ರದೇಶವನ್ನೂ, ಪೂರ್ವಾಷಾಢ, ಉತ್ತರಾಷಾಡಗಳೆರಡರಲ್ಲಿಯೂ, ಭೀಮಾಯನಮಃ, ತ್ವಷ್ಟ್ರೇನಮಃ ಸಪ್ತ ತುರಂಗಾಯನಮಃ ಎಂದು ನಾಭಿಯನ್ನೂ, ಶ್ರವಣದಲ್ಲಿ, ತೀಕ್ಷ್ಣಾಂಶವೇನಮಃ ಎಂದು ಕುಕ್ಷಿ ಪ್ರದೇಶವನ್ನೂ, ಧನಿಷ್ಠೆಯಲ್ಲಿ, ವಿಕರ್ತನಾಯನಮಃ ಎಂದು ಕಕ್ಷ ಪ್ರದೇಶಗಳಗಳನ್ನೂ, ಶತಭಿಷೆಯಲ್ಲಿ, ಧ್ವಾಂತವಿನಾಶಾಯನಮಃ ಎಂದು ವಕ್ಷಸ್ಥಳ ವನ್ನೂ, ಪೂರ್ವಾಭಾದ್ರ, ಉತ್ತರಾಭಾದ್ರಪದಗಳಲ್ಲಿ, ಚಂಡಕಾಯನಮಃ ಎಂದು ಬಾಹುಗಳನ್ನು, ರೇವತಿಯಲ್ಲಿ, ಸಾಮ್ನಾಮಧೀಶಾಯನಮಃ, ಎಂದು ಎರಡು ಕೈ

ಕಂಠ ಚ ಭಾನೋರ್ಭರಣೀಷು ಪೂಜ್ಯೋ
ದಿವಾಕರಾಯೇತ್ಯಭಿಪೂಜನೀಯಃ ।
ಗ್ರೀವಾಽಗ್ನಿ ಪಕ್ಷೇಽಧರಸಂಪುಟೇ ತು
ಸಂಪೂಜಯೇದ್ವಾರತ ರೋಹಿಣೀಷು ॥ ೭೫ ॥

ಮೃಗೇಽರ್ಚನೀಯಾ ರಸನಾ ಪುರಾರೇ
ರೌದ್ರೇ ತು ದಂತಾ ಹರಯೇ ನಮಸ್ತೇ ।
ನಮಃ ಸವಿತ್ರೇ ಇತಿ ಶಂಕರಸ್ಯ
ನಾಸಾಽಭಿಪೂಜ್ಯಾ ಚ ಪುನರ್ವಸೌ ಚ ॥ ೭೬ ॥

ಲಲಾಟಮಂಭೋರುಹವಲ್ಲಭಾಯ
ಪುಷ್ಯೇಽಲಕಾನ್ವೇದಶರೀರಧಾರಿಣೇ ।
ಸಾರ್ಪೇಽಥ ಮೌಲಿಂ ವಿಬುಧಪ್ರಿಯಾಯ
ಮಾಘಾಸು ಕರ್ಣಾವಿತಿ ಪೂಜನೀಯೌ ॥ ೭೭ ॥

ಪೂರ್ವಾಸು ಗೋಬ್ರಾಹ್ಮಣನಂದನಾಯ
ಗಾತ್ರಾಣಿ ಸಂಪೂಜ್ಯತಮಾನಿ ಶಂಭೋಃ ।
ಅಥೋತ್ತರಾಫಾಲ್ಗುನಿಭೇ ಭ್ರುವೌ ಚ
ವಿಶ್ವೇಶ್ವರಾಯೇತಿ ಚ ಪೂಜನೀಯೇ ॥ ೭೮ ॥

---

ಗಳನ್ನೂ, ಅಶ್ವಿನಿಯಲ್ಲಿ, ಸಪ್ತಾಶ್ವಧುರಂಧರಾಯನಮಃ, ಎಂದು ನಖಗಳನ್ನೂ, ಭರಣಿಯಲ್ಲಿ, ದಿವಾಕರಾಯನಮಃ. ಎಂದು ಕಂಠವನ್ನೂ, ಕೃತ್ತಿಕೆಯಲ್ಲಿ, ಕತ್ತನ್ನೂ, ರೋಹಿಣಿಯಲ್ಲಿ, ತುಟಿಗಳನ್ನೂ, ಮೃಗಶಿರೆಯಲ್ಲಿ, ನಾಲಿಗೆಯನ್ನೂ, ಆರ್ದ್ರೆಯಲ್ಲಿ, ಹರಯೇನಮಃ ಎಂದು ಹಲ್ಲುಗಳನ್ನೂ ಪುನರ್ವಸುವಿನಲ್ಲಿ, ಸವಿತ್ರೇನಮಃ ಎಂದು ಶಂಕರನ ಮೂಗುಗಳನ್ನೂ, ಪುಷ್ಯದಲ್ಲಿ, ಅಂಭೋರುಹವಲ್ಲಭಾಯನಮಃ ಎಂದು ಹಣೆಯನ್ನೂ, ಆಶ್ಲೇಷೆಯಲ್ಲಿ, ವೇದಶರೀರಧಾರಿಣೇನಮಃ, ಎಂದು ಮುಂಗುರು ಳನ್ನೂ, ಮಘೆಯಲ್ಲಿ, ವಿಬುಧಪ್ರಿಯಾಯನಮಃ, ಎಂದು ತಲೆಯನ್ನೂ, ಪುಬ್ಬೆಯಲ್ಲಿ ಗೋಬ್ರಾಹ್ಮಣನಂದನಾಯನಮಃ ಎಂದು ಕರ್ಣಗಳನ್ನೂ, ಉತ್ತರಫಲ್ಗುನಿಯಲ್ಲಿ, ವಿಶ್ವೇಶ್ವರಾಯನಮಃ ಎಂದು ಹುಬ್ಬುಗಳನ್ನೂ, ಪೂಜೆಮಾಡಿ, ಪಾಶ, ಅಂಕುಶ, ಪದ್ಮ, ಶೂಲ, ಕಪಾಲ, ಸರ್ಪ, ಇಂದು ಧನಸ್ಸುಗಳನ್ನು ಧರಿಸಿರುವ, ಗಯಾಸುರ, ಅನಂಗ,

ನಮೋಽಸ್ತು ಪಾಶಾಂಕುಶಪದ್ಮಶೂಲ-
ಕಪಾಲಸರ್ಪೇಂದುಧನುರ್ಧರಾಯ ।
ಗಯಾಸುರಾನಂಗಪುರಾಂಧಕಾದಿ-
ವಿನಾಶಮೂಲಾಯ ನಮಃ ಶಿವಾಯ ॥ ೭೯ ॥

ಇತ್ಯಾದಿಗಾತ್ರಾಣಿ ಚ ಪೂಜಯಿತ್ವಾ
ವಿಶ್ವೇಶ್ವರಾಯೇತಿ ಶಿರೋಽಭಿಪೂಜ್ಯಂ ।
ಪಶ್ಚಾಚ್ಚ ಭೋಕ್ತವ್ಯಮತೈಲಮನ್ನ-
ಮಮಾಂಸಮಕ್ಷಾರಮಭುಕ್ತಶೇಷಂ ॥ ೮೦ ॥

ಇತ್യೇವಂ ದ್ವಿಜಭಕ್ತ್ಯೋ ಯಃ ಕೃತ್ವಾ ದದ್ಯಾತ್ಪುನರ್ವಸೌ ।
ಶಾಲೇಯತಂಡುಲಪ್ರಸ್ಥಮೌದುಂಬರಮಥೋ ಘೃತಂ ॥ ೮೧ ॥

ಸಂಸ್ಥಾಪ್ಯ ಪಾತ್ರೇ ವಿಪ್ರಾಯ ಸಹಿರಣ್ಯಂ ನಿವೇದಯೇತ್ ।
ಸಪ್ತಮೇ ವಸ್ತ್ರಯುಗ್ಮಂ ತು ಪಾರಣೇ ತ್ವಧಿಕಂ ಭವೇತ್ ॥ ೮೨ ॥

ಚತುರ್ದಶೇ ತು ಸಂಪ್ರಾಪ್ತೇ ಪಾರಣೇ ಭಾರತಾದಿಕೇ ।
ಬ್ರಾಹ್ಮಣಂ ಭೋಜಯೇದ್ಭಕ್ತ್ಯಾ ಗುಡಕ್ಷೀರಘೃತಾದಿಭಿಃ ॥ ೮೩ ॥

---

ತ್ರಿಪುರ, ಅಂಧಕ, ಇವರೇ ಮುಂತಾದವರ ನಾಶಕ್ಕೆ ಕಾರಣನಾದ ಶಿವನಿಗೆ ನಮಸ್ಕಾರವು ಎಂದು, ದೇಹಗಳನ್ನೆಲ್ಲಾ ಪೂಜಿಸಿ, ವಿಶ್ವೇಶ್ವರಾಯನಮಃ ಎಂದು ತಲೆಯನ್ನು ಪೂಜಿಸಬೇಕು. ಆಮೇಲೆ, ಎಣ್ಣೆ, ಮಾಂಸಗಳು, ಕಾರಗಳನ್ನು ಬಿಟ್ಟು, ಮೀಸಲಾಗಿರುವ ಅನ್ನವನ್ನು ಊಟಮಾಡಬೇಕು.

೮೧. ಈ ರೀತಿ ಪೂಜೆಮಾಡಿ ನಿಷ್ಠನಾದ ಬ್ರಾಹ್ಮಣನನ್ನು ಪುನರ್ವಸು ನಕ್ಷತ್ರದ ದಿನ ಕರೆದು ಒಂದು ಕೊಳಗ ಅಕ್ಕಿಯನ್ನು, ಅತ್ತಿಯ ಪಾತ್ರೆಯಲ್ಲಿ ತುಪ್ಪವನ್ನಿಟ್ಟು, ಇವೆಲ್ಲವನ್ನೂ, ಒಂದು ದೊಡ್ಡ ತಟ್ಟೆಯಲ್ಲಿಟ್ಟು, ದಕ್ಷಿಣೆಯಿಟ್ಟು, ಆತನಿಗೆ ದಾನ ಮಾಡಬೇಕು,

೮೨-೮೩. ಎಲೈ ಭರತ ವಂಶೋತ್ಪನ್ನನಾದ ಭೀಷ್ಮನೇ, ವ್ರತವನ್ನು ಮಾಡುತ್ತಿರಲು ಏಳನೆಯ ಬಾರಿ ಒಂದು ಜೊತೆ ವಸ್ತ್ರಗಳನ್ನು ಕೊಡಬೇಕು. ಆಗಲೇ ಮುಗಿಸುವುದಾದರೆ, ಇನ್ನೂ ಹೆಚ್ಚಾಗಿ ಕೊಡಬೇಕಾಗುವುದು. ಹದಿನಾಲ್ಕನೆಯ

ಕೃತ್ವಾಽಥ ಕಾಂಚನಂ ಪದ್ಮಮಷ್ಟಪತ್ರಂ ಸಕರ್ಣಿಕಂ ।
ಶುದ್ಧಮಷ್ಟಾಂಗುಲಂ ತಚ್ಚ ಪದ್ಮರಾಗದಲಾಂಕಿತಂ ॥ ೮೪ ॥

ಶಯ್ಯಾಂ ಸುಲಕ್ಷಣಾಂ ಕೃತ್ವಾ ವಿರುದ್ಧಗ್ರಂಥಿವರ್ಜಿತಾಂ ।
ಸೋಪಧಾನವಿತಾನಾಂ ಚ ಸುಸ್ತರಾಂ ವ್ಯಜನಾಶ್ರಿತಾಂ ॥ ೮೫ ॥

ಪಾದುಕೋಪಾನಹಚ್ಛತ್ರಚಾಮರಾಸನದರ್ಪಣೈಃ ।
ಭೂಷಣೈರಪಿ ಸಂಯುಕ್ತಾಂ ಫಲವಸ್ತ್ರಾನುಲೇಪನೈಃ ॥ ೮೬ ॥

ತಸ್ಯಾಂ ನಿಧಾಯ ತತ್ಪದ್ಮಮಲಂಕೃತ್ಯ ಗುಣಾನ್ವಿತಾಂ ।
ಕಪಿಲಾಂ ವಸ್ತ್ರಸಂಯುಕ್ತಾಮತಿಶೀಲಾಂ ಪಯಸ್ವಿನೀಂ ॥ ೮೭ ॥

ರೌಪ್ಯಖುರಾಂ ಹೇಮಶೃಂಗೀಂ ಸವತ್ಸಾಂ ಕಾಂಸ್ಯದೋಹನಾಂ ।
ದದ್ಯಾನ್ಮಂತ್ರೇಣ ಪೂರ್ವಾಹ್ಣೇ ನೇಲಾಂ ನೈವಾಭಿಲಂಘಯೇತ್ ॥ ೮೮ ॥

---

ಬಾರಿ, ಎಂದರೆ ವರ್ಷ ಪೂರ್ತಿಯಲ್ಲಿ ಬ್ರಾಹ್ಮಣರಿಗೆ ಉತ್ತಮವಾದ ಅನ್ನಸಂತರ್ಪಣೆ ಮಾಡಿಸಿ. ಪಾರಣೆ ಮಾಡಬೇಕು.

೮೪-೮೮. ಚಿನ್ನದಲ್ಲಿ, ಪದ್ಮವನ್ನು ಮಾಡಿಸಬೇಕು. ಅದಕ್ಕೆ, ಎಂಟು ದಳಗಳಿರಬೇಕು, ಆ ಚಿನ್ನವು ಶುದ್ಧವಾಗಿರಬೇಕು ಮತ್ತು ಎಂಟು ಅಂಗುಲಗಳಿರಬೇಕು. ದಳಗಳಲ್ಲಿ, ಪದ್ಮರಾಗಗಳನ್ನು, ಲಕ್ಷಣವಾಗಿ ಮಾಡಿರಬೇಕು. ಹಾಸಿಗೆಯಲ್ಲಿ ಅದರಲ್ಲಿ, ಬಿಚ್ಚುವಂತೆ ಗಂಟುಗಳಿರಬಾರದು. ಮಗ್ಗಲು ಹಾಸಿಗೆಯೂ, ಮೇಲ್ಕಟ್ಟು ಇರಬೇಕು. ದೊಡ್ಡದಾಗಿರಬೇಕು. ಮತ್ತು ಅದಕ್ಕೆ ಬೇಕಾದ ಪದಾರ್ಥಗಳೆಲ್ಲವೂ, ಇರಬೇಕು. ಕೆರ, ಪಾದುಕೆ, ಛತ್ರಿ, ಚಾಮರ, ಆಸನ, ಕನ್ನಡಿಗಳಿಂದ ಅಲಂಕೃತವಾಗಿರಬೇಕು. ಫಲಗಳು, ವಸ್ತ್ರಗಳು, ಇರಬೇಕು. ಆ ಹಾಸಿಗೆಯಲ್ಲಿ, ಆ ಪದ್ಮವನ್ನಿಡಬೇಕು. ಒಳ್ಳೆಯ ಗುಣಗಳುಳ್ಳ ಒಂದು ಕರೆಯುವ ಹಸುವನ್ನು ತರಬೇಕು. ಅದಕ್ಕೆ ಬೆಳ್ಳಿಯ ಗೊರಸು, ಚಿನ್ನದ ಗೊಣಸು, ಹಾಕಿರಬೇಕು. ಕಂಚಿನ ಪಾತ್ರೆಯನ್ನು ಕರೆಯಲು ಇಟ್ಟಿರಬೇಕು. ಇವುಗಳೆಲ್ಲವನ್ನೂ, ಮಂತ್ರಪೂರ್ವಕವಾಗಿ ಪೂರ್ವಾಹ್ಣದಲ್ಲಿ ಬ್ರಾಹ್ಮಣನಿಗೆ ದಾನಮಾಡಬೇಕು. ಕಾಲವನ್ನು ಮೀರಬಾರದು.

ಯಥೈವಾಽದಿತ್ಯಶಯನಮಶೂನ್ಯಂ ತವ ಸರ್ವದಾ ।
ಕಾಂತ್ಯಾ ಧೃತ್ಯಾ ಶ್ರಿಯಾ ಪುಷ್ಟ್ಯಾ ತಥಾ ಮೇ ಸಂತು ವೃದ್ಧಯಃ ॥ ೮೯ ॥

ಯಥಾ ನ ವೇದವಿದುಷಸ್ತ್ವದನ್ಯಮನಘಂ ವಿದುಃ ।
ತಥಾ ಮಾಮುದ್ಧರಾಶೇಷದುಃಖಸಂಸಾರಸಾಗರಾತ್ ॥ ೯೦ ॥

ತತಃ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ವಿಸರ್ಜಯೇತ್ ।
ಶಯ್ಯಾಂ ಗವಾದಿ ತತ್ಸರ್ವಂ ದ್ವಿಜಸ್ಯ ಭವನಂ ನಯೇತ್ ॥ ೯೧ ॥

ನೈತದ್ವಿಶೀಲಾಯ ನ ದಾಂಭಿಕಾಯ
ಪ್ರಕಾಶನೀಯಂ ವ್ರತಮಿಂದುಮೌಲೇಃ ।
ಗೋವಿಪ್ರದೇವಾತಿಥಿಧಾರ್ಮಿಕಾಣಾಂ
ಯಶ್ಚಾಪಿ ನಿಂದಾಮಧಿಕಾಂ ವಿಧತ್ತೇ ॥ ೯೨ ॥

ಭಕ್ತಾಯ ದಾಂತಾಯ ಚ ಗುಹ್ಯಮೇತ-
ದಾಖ್ಯೇಯಮಾನಂದಕರಂ ಶಿವಂ ಚ ।

---

೮೯-೯೦. ಆದಿತ್ಯಶಯನವು ಹೇಗೆ ಯಾವಾಗಲೂ ಅಶೂನ್ಯವಾಗಿರುವುದೋ, ಹಾಗೆ ಕಾಂತಿ, ಧೈರ್ಯ, ಶ್ರೀ, ಪುಷ್ಟಿಗಳಿಂದ ನನಗೆ ವೃದ್ಧಿಯಾಗಲಿ. ವೇದವಿತ್ತುಗಳು ನೀನಿಲ್ಲದಿರುವುದನ್ನು ಪವಿತ್ರವಾದುದನ್ನಾಗಿ ತಿಳಿಯುವುದಿಲ್ಲವೋ ಹಾಗೇ ನನ್ನನ್ನು ಈ ದುಃಖವೆಂಬ ಸಂಸಾರಸಾಗರದಿಂದ ಉದ್ಧರಿಸು.

೯೧. ಅನಂತರ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಆ ಬ್ರಾಹ್ಮಣನನ್ನು ಕಳುಹಿಸಿ ಕೊಡಬೇಕು. ಹಾಸಿಗೆ, ಹಸು ಮುಂತಾದುವನ್ನು ಅವನ ಮನೆಗೆ ಕಳುಹಿಸಿ ಕೊಡಬೇಕು.

೯೨. ಶೀಲಹೀನ, ದಂಭಾಚಾರಿಗಳಿಗೂ, ಗೋವು, ಬ್ರಾಹ್ಮಣರು, ದೇವರು, ಅತಿಥಿಗಳು, ಧಾರ್ಮಿಕರು, ಇವರನ್ನು ನಿಂದಿಸುವವನಿಗೂ, ಕೂಡ ಈ ಆದಿತ್ಯಶಯನ ವ್ರತವನ್ನು ಹೇಳಕೂಡದು.

೯೩, ದೇವಗುರುಗಳಲ್ಲಿ ಭಕ್ತನು, ಇಂದ್ರಿಯ ನಿಗ್ರಹಿ, ಇವರಿಗೆ ಇದನ್ನು

ಇದಂ ಮಹಾಪಾತಕಿನಾಂ ನರಾಣಾ
ಮಘಕ್ಷಯಂ ವೇದವಿದೋ ವದಂತಿ                    ॥ ೯೩ ॥

ನ ಬಂಧುಪುತ್ರೈರ್ನ ಧನೈರ್ವಿಯುಕ್ತಾಃ
ಪತ್ನೀಭಿರಾನಂದಕರಾಃ ಸುರಾಣಾಂ ।
ನಾಭ್ಯೇತಿ ರೋಗಂ ನ ಚ ದುಃಖಮೋಹಂ
ಯಾ ಚಾಥ ನಾರೀ ಕುರುತೇಽಥ ಭಕ್ತ್ಯಾ                    ॥ ೯೪ ॥

ಇದಂ ವಸಿಷ್ಠೇನ ಪುರಾರ್ಜುನೇನ
ಕೃತಂ ಕುಬೇರೇಣ ಪುರಂದರೇಣ ।
ಯತ್ಕೀರ್ತನಾದಪ್ಯಖಿಲಾನಿ ನಾಶ-
ಮಾಯಾಂತಿ ಪಾಪಾನಿ ನ ಸಂಶಯೋಽತ್ರ                    ॥ ೯೫ ॥

ಇತಿ ಪಠತಿ ಶೃಣೋತಿ ವಾ ಯ ಇತ್ಥಂ
ರವಿಶಯನಂ ಪುರುಹೂತವಲ್ಲಭಃ ಸ್ಯಾತ್ ।
ಅಪಿ ನರಕಗತಾನ್ಪಿತ್ರ್ಯಾನಶೇಷಾ-
ನಪಿದಿವಮಾನಯತೀಹ ಯಃ ಕರೋತಿ                    ॥ ೯೬ ॥

---

ಹೇಳಬೇಕು. ಇದು ಆನಂದಕರ. ಮಂಗಳಕರವು. ಇದು ಮಹಾಪಾತಕಗಳನ್ನು ನಾಶಮಾಡುತ್ತದೆ ಎಂದು ವೇದವನ್ನು ಬಲ್ಲವರು ಹೇಳುತ್ತಾರೆ.

೯೪. ಯಾವ ಹೆಂಗಸು ಇದನ್ನು ಭಕ್ತಿಯಿಂದ ಮಾಡುತ್ತಾಳೆಯೋ, ಆಕೆಯ ಬಂಧುಗಳು, ಮಕ್ಕಳು, ಗಂಡಂದಿರು, (ಗಂಡಸಾದರೆ ಹೆಂಡಂದಿರು) ಇವರಿಂದ ಅಗಲದೆ ದೇವತೆಗಳಿಗೆ ಆನಂದಕರವಾಗಿರುತ್ತಾರೆ. ರೋಗ, ದುಃಖ, ಮೋಹಗಳನ್ನು ಹೊಂದುವುದಿಲ್ಲ.

೯೫. ವಸಿಷ್ಠನೂ, ಕಾರ್ತವೀರ್ಯನೂ, ಕುಬೇರನೂ, ಇಂದ್ರನೂ, ಇದನ್ನು ಪೂರ್ವದಲ್ಲಿ ಮಾಡಿದ್ದಾರೆ. ಇದರ ಹೆಸರನ್ನು ಹೇಳಿದರೇನೇ ಸಕಲ ಪಾಪಗಳು ನಾಶವಾಗುತ್ತವೆ. ಇದರಲ್ಲಿ ಸಂಶಯವಿಲ್ಲ.

೯೬. ಈ ರವಿಯ ವ್ರತವನ್ನು ಕೇಳಿದವನೂ, ಓದುವವನೂ, ಇಂದ್ರಪಟ್ಟ ವನ್ನು ಹೊಂದುತ್ತಾನೆ. ಮತ್ತು ನರಕದಲ್ಲಿ ಬಿದ್ದಿರುವ ಪಿತೃಗಳೆಲ್ಲರನ್ನೂ ವ್ರತ ಮಾಡುವವನು ಸ್ವರ್ಗವನ್ನು ಹೊಂದಿಸುತ್ತಾನೆ.

ಅಶ್ವತ್ಥಂ ಚ ವಟಂ ಚೈವೋದುಂಬರಂ ಪ್ಲಕ್ಷಮೇವ ಚ ।
ನಂದೀಶಂ ಜಂಬುವೃಕ್ಷಂ ಚ ವಿದುಃ ಷಷ್ಠಂ ಮಹರ್ಷಯಃ ॥ ೯೭ ॥

ಮಾರ್ಗಶೀರ್ಷಾದಿಮಾಸಾಭ್ಯಾಂ ದ್ವಾಭ್ಯಾಂ ದ್ವಾಭ್ಯಾಮಥ ಕ್ರಮಾತ್ ।
ಏಕೈಕಂ ದಂತಧಾವನಂ ವೃಕ್ಷೇಷ್ವೇತೇಷು ಕಾರಯೇತ್ ॥ ೯೮ ॥

ದದ್ಯಾತ್ಸಮಾಪ್ತೇ ದಧ್ಯನ್ನಂ ವಿತಾನಧ್ವಜಚಾಮರಂ ।
ದ್ವಿಜಾನಾಮುದಕುಂಭಾಂಶ್ಚ ಪಂಚರತ್ನಸಮನ್ವಿತಾನ್ ॥ ೯೯ ॥

ನ ವಿತ್ತಶಾಠ್ಯಂ ಕುರ್ವೀತ ಕುರ್ವನ್ದೋಷಾನವಾಪ್ನುಯಾತ್ ॥ ೧೦೦ ॥

॥ ಭೀಷ್ಮ ಉವಾಚ ॥

ದೀರ್ಘಾಯುರಾರೋಗ್ಯಕುಲಾತಿವೃದ್ಧಿಭಿ-
ರ್ಯುಕ್ತಃ ಪುಮಾನ್ರೂಪಕುಲಾನ್ವಿತಃ ಸ್ಯಾತ್ ।
ಮುಹುರ್ಮುಹುರ್ಜನ್ಮನಿ ಯೇನ ಸಮ್ಯ-
ಗ್ವ್ರತಂ ಸಮಾಚಕ್ಷ್ವ ಚ ಶೀತರಶ್ಮೇಃ ॥ ೧೦೧ ॥

---

೯೭-೯೮. ಅರಳಿ, ಆಲ, ಅತ್ತಿ, ಬಸರಿ, ನಂದಿ, ನೇರಳೆ, ಇವು ಉತ್ತಮ ವೃಕ್ಷಗಳೆಂದು ಋಷಿಗಳು ಹೇಳುತ್ತಾರೆ. ಮಾರ್ಗಶೀರ್ಷ, ಪುಷ್ಯಗಳಲ್ಲಿ ಅರಳಿ ಕಡ್ಡಿಗಳಿಂದಲೂ, ಮಾಘ, ಫಾಲ್ಗುಣಗಳಲ್ಲಿ ಆಲದ ಕಡ್ಡಿಯಿಂದಲೂ, ಚೈತ್ರ, ವೈಶಾಖಗಳಲ್ಲಿ ಅತ್ತಿಯ ಕಡ್ಡಿಯಿಂದಲೂ, ಜ್ಯೇಷ್ಠ, ಆಷಾಢಗಳಲ್ಲಿ ಬಸರಿ ಕಡ್ಡಿಯಿಂದಲೂ, ಶ್ರಾವಣ, ಭಾದ್ರಪದಗಳಲ್ಲಿ ನಂದಿ ಕಡ್ಡಿಯಿಂದಲೂ, ಆಶ್ವಯುಜ, ಕಾರ್ತಿಕಗಳಲ್ಲಿ ನೇರಳೆ ಕಡ್ಡಿಯಿಂದಲೂ ಹಲ್ಲನ್ನು ತಿಕ್ಕಬೇಕು.

೯೯-೧೦೦. ಇದು ಮುಗಿದ ಮೇಲೆ ಮೊಸರನ್ನವನ್ನು, ಬಟ್ಟೆ, ಧ್ವಜ, ಚಾಮರಗಳನ್ನು, ಪಂಚರತ್ನಗಳಿಂದ ಕೂಡಿದ ಕಲಶಗಳನ್ನೂ, ಬ್ರಾಹ್ಮಣರಿಗೆ ಕೊಡಬೇಕು. ಲೋಭತನ ಮಾಡಬಾರದು. ಹಾಗೆ ಮಾಡಿದರೆ ದೋಷಬರುತ್ತದೆ.

೧೦೧. ಭೀಷ್ಮನು ಹೇಳಿದನು :—ದೀರ್ಘಾಯುಸ್ಸು, ಆರೋಗ್ಯ ಕುಲವೃದ್ಧಿ, ರೂಪ, ಒಳ್ಳೆಯ ಕುಲ ಇವು ಜನ್ಮವೆತ್ತಿದಾಗಲೆಲ್ಲವೂ ಆಗಬೇಕಾದರೆ ಏನು ಮಾಡಬೇಕು? ಅಂತಹ ಚಂದ್ರನ ಒಂದು ವ್ರತವನ್ನು ಹೇಳು.

॥ ಪುಲಸ್ತ್ಯ ಉವಾಚ ॥

ತ್ವಯಾ ಪೃಷ್ಟಮಿದಂ ಸಮ್ಯಗಕ್ಷಯಸ್ವರ್ಗಕಾರಕಂ ।
ರಹಸ್ಯಂ ತು ಪ್ರವಕ್ಷ್ಯಾಮಿ ಯತ್ಪುರಾಣವಿದೋ ವಿದುಃ ॥ ೧೦೨ ॥

ರೋಹಿಣೀಚಂದ್ರಶಯನಂ ನಾಮ ವ್ರತಮಿಹೋತ್ತಮಂ ।
ತಸ್ಮಿನ್ನಾರಾಯಣಸ್ಯಾರ್ಚಾಮರ್ಚಯೇದಿಂದುನಾಮಭಿಃ ॥ ೧೦೩ ॥

ಯದಾ ಸೋಮದಿನೇ ಶುಕ್ಲೇ ಭವೇತ್ಪಂಚದಶೀ ಕ್ವಚಿತ್ ।
ಅಥ ಬ್ರಾಹ್ಮಂ ಚ ನಕ್ಷತ್ರಂ ಪೌರ್ಣಮಾಸ್ಯಾಂ ಪ್ರಜಾಯತೇ ॥ ೧೦೪ ॥

ತದಾ ಸ್ನಾನಂ ನರಃ ಕುರ್ಯಾತ್ಪಂಚಗವ್ಯೇನ ಸರ್ಷಪೈಃ ।
ಆಪ್ಯಾಯಸ್ವೇತಿ ಚ ಜಪೇದ್ವಿದ್ವಾನಷ್ಟಶತಂ ಪುನಃ ॥ ೧೦೫ ॥

ಶೂದ್ರೋಽಪಿ ಪರಯಾ ಭಕ್ತ್ಯಾ ಪಾಖಂಡಾಲಾಪವರ್ಜಿತಃ ।
ಸೋಮಾಯ ವರದಾಯಾಥ ವಿಷ್ಣವೇ ಚ ನಮೋ ನಮಃ ॥ ೧೦೬ ॥

---

೧೦೨. ಪುಲಸ್ತ್ಯನು ಹೇಳಿದನು :—ಅಕ್ಷಯ ಸ್ವರ್ಗವನ್ನು ಕೊಡುವ ಈ ವಿಷಯವನ್ನು ನೀನು ಕೇಳಿದುದು ಚೆನ್ನಾಗಿದೆ. ಇದು ರಹಸ್ಯವಾದುದು. ಎಂದು ವಿದ್ವಾಂಸರು ತಿಳಿದಿರುವರು. ಹೇಳುತ್ತೇನೆ ಕೇಳು.

೧೦೩. ರೋಹಿಣೀಚಂದ್ರಶಯನವೆಂಬ ಒಂದು ವ್ರತವಿದೆ. ಉತ್ತಮವಾದುದು. ಅದರಲ್ಲಿ ನಾರಾಯಣನನ್ನು ಚಂದ್ರನ ಹೆಸರಿನಿಂದ ಪೂಜಿಸಬೇಕು.

೧೦೪-೧೦೫. ಶುಕ್ಲಪಕ್ಷದ ಸೋಮವಾರದ ದಿನ ಹುಣ್ಣಿಮೆಯು ಬಂದರೆ, ಆ ದಿನವಾಗಲಿ ಅಥವಾ ಹುಣ್ಣಿಮೆಯ ದಿನ ರೋಹಿಣೀ ನಕ್ಷತ್ರವಾಗಲಿ ಬಂದರೆ ಆ ದಿನ ಪಂಚಗವ್ಯದಿಂದಲೂ, ಬಿಳಿಸಾಸುವೆಯೆಣ್ಣೆಯಿಂದಲೂ ಮನುಷ್ಯನು ಸ್ನಾನಮಾಡಿ ಆಪ್ಯಾಯಸ್ವ ಎಂಬ ಮಂತ್ರವನ್ನು ನೂರೆಂಟುಬಾರಿ ಜಪಿಸಬೇಕು.

೧೦೬-೧೦೭. ಶೂದ್ರನೂ ಕೂಡ, ಹೆಚ್ಚು ಭಕ್ತಿಯಿಂದ ಸ್ನಾನಮಾಡಿ ನಾಸ್ತಿಕಾದಿಗಳೊಡನೆ ಮಾತಾಡದೆ ಸೋಮನಿಗೆ ನಮಸ್ಕಾರವು, ವರದನಿಗೆ ನಮ

ಕೃತಜಪ್ಯಶ್ಚ ಭವನಮಾಗತ್ಯ ಮಧುಸೂದನಂ ।
ಪೂಜಯೇತ್ಫಲಪುಷ್ಪೈಶ್ಚ ಸೋಮನಾಮಾನಿ ಕೀರ್ತಯೇತ್ ॥ ೧೦೭ ॥

ಸೋಮಾಯ ಶಾಂತಾಯ ನಮೋಽಸ್ತು ಪಾದಾ-
ವನಂತಧಾಮ್ನೇ ತು ಚ ಜಾನುಜಂಘೇ ।
ಊರುದ್ವಯಂ ಚಾಪಿ ಜಲೋದರಾಯ
ಸಂಪೂಜಯೇನ್ಮೇಢ್ರಮನಂತಬಾಹೋಃ ॥ ೧೦೮ ॥

ನಮೋ ನಮಃ ಕಾಮಸುಖಪ್ರದಾಯ
ಕಟಿಃ ಶಶಾಂಕಸ್ಯ ಸದಾಽರ್ಚನೀಯಾ ।
ಅಥೋಽದರಂ ಚಾಪ್ಯಮೃತೋದರಾಯ
ನಾಭಿಃ ಶಶಾಂಕಾಯ ನಮೋಽಭಿಪೂಜ್ಯಾ ॥ ೧೦೯ ॥

ನಮೋಽಸ್ತು ಚಂದ್ರಾಯ ಮುಖಂ ಚ ನಿತ್ಯಂ
ದಂತಾ ದ್ವಿಜಾನಾಮಧಿಪಾಯ ಪೂಜ್ಯಾಃ ।

---

ಸ್ಕಾರವು, ವಿಷ್ಣುವಿಗೆ ನಮಸ್ಕಾರವು, ಎಂದು ಹೇಳುತ್ತಿರಬೇಕು. ಜಪವನ್ನು ಮುಗಿಸಿ ಕೊಂಡು ಮನೆಗೆ ಬಂದು ವಿಷ್ಣುವನ್ನು ಹಣ್ಣುಗಳಿಂದ ಪೂಜಿಸಬೇಕು. ಚಂದ್ರನ ಹೆಸರುಗಳನ್ನು ಹೇಳಬೇಕು.

೧೦೮. ಸೋಮನಿಗೂ, ಶಾಂತನಿಗೂ ನಮಸ್ಕಾರವೆಂದು ಪಾದಗಳನ್ನು, ಅನಂತರ ಧಾಮನಿಗೆ ನಮಸ್ಕಾರವು ಎಂದು ಮೊಣಕಾಲು ಮುಂಡಿಗಳನ್ನು, ಜಲೋದರ ನಿಗೆ ನಮಸ್ಕಾರವೆಂದು ಎರಡು ತೊಡೆಗಳನ್ನು, ಅನಂತರ ಬಾಹುಗೆ ನಮಸ್ಕಾರವೆಂದು ಗುಹ್ಯಪ್ರದೇಶವನ್ನು ಪೂಜಿಸಬೇಕು.

೧೦೯. ಕಾಮಸುಖವನ್ನು ಕೊಡುವವನಿಗೆ ನಮಸ್ಕಾರವು ಎಂದು ಸೊಂಟ ವನ್ನೂ, ಅಮೃತೋದರನಿಗೆ ನಮಸ್ಕಾರವು ಎಂದು ಹೇಳಿ ಹೊಟ್ಟೆಯನ್ನೂ, ಶಶಾಂಕ ನಿಗೆ ನಮಸ್ಕಾರವು ಎಂದು ನಾಭಿಪ್ರದೇಶವನ್ನು ಪೂಜಿಸಬೇಕು.

೧೧೦. ಚಂದ್ರನಿಗೆ ನಮಸ್ಕಾರವು ಎಂದು ಮುಖವನ್ನೂ, ದ್ವಿಜಾಧಿಪನಿಗೆ ನಮಸ್ಕಾರವೆಂದು ಹಲ್ಲುಗಳನ್ನೂ, ಚಂದ್ರಮಸನಿಗೆ ನಮಸ್ಕಾರವೆಂದು ಮುಖವನ್ನೂ,

ಆಸ್ಯಂ ನಮಶ್ಚಂದ್ರಮಸೇಽಭಿಪೂಜ್ಯ-
ಮೋಷ್ಠೌ ತು ಕೌಮೋದವನಪ್ರಿಯಾಯ ॥ ೧೧೦ ॥

ನಾಸಾಽಧಿನಾಥಾಯ ವನೌಷಧೀನಾ-
ಮಾನಂದಬೀಜಾಯ ಪುನರ್ಭ್ರುವೌ ಚ ।
ನೇತ್ರದ್ವಯಂ ಪದ್ಮನಿಭಂ ತಥೇಂದೋ-
ರಿಂದೀವರವ್ಯಾಸಕರಾಯ ಶೌರೇಃ ॥ ೧೧೧ ॥

ನಮಃ ಸಮಸ್ತಾಸುರವಂದಿತಾಯ
ಕರ್ಣದ್ವಯಂ ದೈತ್ಯನಿಷೂದನಾಯ ।
ಲಲಾಟಮಿಂದೋರುದಧಿಪ್ರಿಯಾಯ
ಕೇಶಾಃ ಸುಷುಮ್ನಾಧಿಪತೇಃ ಪ್ರಪೂಜ್ಯಾಃ ॥ ೧೧೨ ॥

ಶಿರಃ ಶಶಾಂಕಾಯ ನಮೋ ಮುರಾರೇ-
ರ್ವಿಶ್ವೇಶ್ವರಾಯೇತಿ ನಮಃ ಕಿರೀಟಂ ।
ಪದ್ಮಶ್ರಿಯೇ ರೋಹಿಣಿನಾಮಲಕ್ಷ್ಮೀ-
ಸೌಭಾಗ್ಯಸೌಖ್ಯಾಮೃತಸಾಗರಾಯ ॥ ೧೧೩ ॥

---

ಕುಮುದವನಕ್ಕೆ ಪ್ರೀತಿಪಾತ್ರನಾದವನಿಗೆ ನಮಸ್ಕಾರವು ಎಂದು ತುಟಿಗಳನ್ನೂ ಪೂಜಿಸಬೇಕು.

೧೧೧. ವನಕ್ಕೂ, ಓಷಧಿಗಳಿಗೂ, ನಾಥನಿಗೆ ನಮಸ್ಕಾರ ಎಂದು ಮೂಗನ್ನೂ, ಆನಂದಬೀಜನಿಗೆ ನಮಸ್ಕಾರವು ಎಂದು ಹುಬ್ಬುಗಳನ್ನೂ, ಇಂದೀವರಗಳನ್ನು ಅರಳಿಸುವ ಇಂದುವಿಗೆ ನಮಸ್ಕಾರವೆಂದು ಕಣ್ಣುಗಳನ್ನೂ ಪೂಜಿಸಬೇಕು.

೧೧೨. ದೇವದಾನವರಿಂದ ನಮಸ್ಕೃತನಾದವನಿಗೆ ನಮಸ್ಕಾರವು ಎಂದು ಎರಡು ಕಿವಿಗಳನ್ನೂ, ದೈತ್ಯರನ್ನು ನಾಶಮಾಡುವವನಿಗೆ ನಮಸ್ಕಾರವು ಎಂದು ಹಣೆಯನ್ನೂ, ಉದಧಿಪ್ರಿಯನಿಗೆ ನಮಸ್ಕಾರವು ಎಂದು ಕೂದಲನ್ನೂ ಪೂಜಿಸಬೇಕು.

೧೧೩. ಶಶಾಂಕನಿಗೆ ನಮಸ್ಕಾರವು ಎಂದು ತಲೆಯನ್ನೂ, ವಿಶ್ವೇಶ್ವರನಿಗೆ ನಮಸ್ಕಾರವು ಎಂದು ಕಿರೀಟವನ್ನೂ, ಪದ್ಮದಂತೆ ಕಾಂತಿಯುಳ್ಳ ರೋಹಿಣಿ ಎಂಬ ಲಕ್ಷ್ಮಿಗೆ ಸೌಭಾಗ್ಯಸಂಪತ್ತಿನ ಸಾಗರರೂಪನಾದವನಿಗೆ ನಮಸ್ಕಾರವು ಎಂದು ಸರ್ವಾಂಗವನ್ನೂ ಪೂಜಿಸಬೇಕು.

ದೇವೀಂ ಚ ಸಂಪೂಜ್ಯ ಸುಗಂಧಿಪುಷ್ಪೈ-
ರ್ನೈವೇದ್ಯಧೂಪಾದಿಭಿರಿಂದುಪತ್ನೀಂ ।
ಸುಪ್ತ್ವಾಽಥ ಭೂಮೌ ಪುನರುತ್ಥಿತೋ ಯಃ
ಸ್ನಾತ್ವಾಽಥ ವಿಪ್ರಾಯ ಹವಿಷ್ಯಯುಕ್ತಃ ॥ ೧೧೪ ॥

ದದ್ಯಾತ್ಪ್ರಭಾತೇ ಸಹಿರಣ್ಯವಾರಿ-
ಕುಂಭಂ ನಮಃ ಪಾಪವಿನಾಶನಾಯ ।
ಸಂಪ್ರಾಶ್ಯ ಗೋಮೂತ್ರಮಮಾಂಸಮನ್ನ-
ಮಕ್ಷಾರಮಷ್ಟಾವಥ ವಿಂಶತಿಂ ಚ ॥ ೧೧೫ ॥

ಗ್ರಾಸಾಂಶ್ಚ ತ್ರೀನ್ಸರ್ಪಿಯುತಾನುಪೋಷ್ಯ
ಭುಕ್ತ್ವೇತಿಹಾಸಂ ಶೃಣುಯಾನ್ಮುಹೂರ್ತಂ ।
ಕದಂಬನೀಲೋತ್ಪಲಕೇತಕಾನಿ
ಜಾತೀಸರೋಜೇ ಶತಪತ್ರಿಕಾ ಚ ॥ ೧೧೬ ॥

ಅಮ್ಲಾನಕುಬ್ಜಾನ್ಯಥ ಸಿಂದುವಾರಂ
ಪುಷ್ಪಂ ಪುನರ್ಭಾರತ ಮಲ್ಲಿಕಾಯಾಃ ।
ಶುಕ್ಲಂ ಚ ಪುಷ್ಪಂ ಕರವೀರಪುಷ್ಪಂ
ಶ್ರೀಚಂಪಕಂ ಚಂದ್ರಮಸೇ ಪ್ರದೇಯಂ ॥ ೧೧೭ ॥

---

೧೧೪. ವಾಸನೆಯುಳ್ಳ ಹೂಗಳಿಂದಲೂ, ಧೂಪ, ದೀಪಗಳಿಂದಲೂ, ಇಂದು ಪತ್ನಿಯಾದ ರೋಹಿಣಿಯನ್ನು ಪೂಜಿಸಿ ಆ ದಿನ ನೆಲದ ಮೇಲೆ ಮಲಗಿದ್ದು, ಎದ್ದು ಸ್ನಾನಮಾಡಿ, ಹೋಮಾದಿಗಳನ್ನು ಮಾಡಿ, ಪಾಪವಿನಾಶನನಿಗೆ ಪ್ರೀತಿಯಾಗಲೆಂದು ಕಲಶ ದಕ್ಷಿಣೆಗಳನ್ನು ಬ್ರಾಹ್ಮಣನಿಗೆ ಕೊಡಬೇಕು.

೧೧೫. ಆದಿನ ಗೋಮೂತ್ರವನ್ನು ಕುಡಿದು ಮಾಂಸ, ಕಾರವಿಲ್ಲದ ಅನ್ನವನ್ನು ಎಂಟು ಅಥವಾ ಇಪ್ಪತ್ತು ಕವಳಗಳನ್ನು ತುಪ್ಪ ಹಾಕಿಕೊಂಡು ತಿನ್ನಬೇಕು. ಅನಂತರ ಮಾರನೆಯ ದಿನದವರೆಗೂ ಏನನ್ನೂ ತಿನ್ನಬಾರದು. ಅಂದು ಇತಿಹಾಸ ಪುರಾಣಗಳನ್ನು ಕೇಳಬೇಕು.

೧೧೬-೧೧೭. ಕದಂಬ, ನೀಲೋತ್ಪಲ, ತಾಳೆ, ಜಾಜಿ, ಕಮಲ, ಶತಪತ್ರ ತಾವರೆ, ಬಾಡದ ಸಣ್ಣ ಹೂಗಳು, ಲಕ್ಕಿ, ಮಲ್ಲಿಗೆ, ಬಿಳೀ ಹೂಗಳು, ಕಣಿಗಲು, ಸಂಪಿಗೆ ಇವನ್ನು ಚಂದ್ರನಿಗೆ ಪೂಜೆಮಾಡಬೇಕು.

ಶ್ರಾವಣಾದಿಷು ಮಾಸೇಷು ಕ್ರಮಾದೇತಾನಿ ಸರ್ವದಾ ।
ಯಸ್ಮಿನ್ಮಾಸೇ ವ್ರತಾದಿಃ ಸ್ಯಾತ್ತತ್ಪುಷ್ಪೈರರ್ಚಯೇದ್ಧರಿಂ ॥ ೧೧೮ ॥

ಏವಂ ಸಂವತ್ಸರಂ ಯಾವದುಪೋಷ್ಯ ವಿಧಿವನ್ನರಃ ।
ವ್ರತಾಂತೇ ಶಯನಂ ದದ್ಯಾಚ್ಛಯನೋಪಸ್ಕರಾನ್ವಿತಂ ॥ ೧೧೯ ॥

ರೋಹಿಣೀಚಂದ್ರಮಿಥುನಂ ಕಾರಯಿತ್ವಾ ತು ಕಾಂಚನಂ ।
ಚಂದ್ರಃ ಷಡಂಗುಲಃ ಕಾರ್ಯೋ ರೋಹಿಣೀ ಚತುರಂಗುಲಾ ॥ ೧೨೦ ॥

ಮುಕ್ತಾಫಲಾಷ್ಟಕಯುತಾಂ ಸಿತನೇತ್ರಸಮನ್ವಿತಾಂ ।
ಕ್ಷೀರಕುಂಭೋಪರಿ ಪುನಃ ಕಾಂಸ್ಯಪಾತ್ರಾಕ್ಷತಾನ್ವಿತಾಂ ॥ ೧೨೧ ॥

ದದ್ಯಾನ್ಮಂತ್ರೇಣ ಪೂರ್ವಾಹ್ಣೇ ಶಾಲೀಕ್ಷುಫಲಸಂಯುತಾಂ ।
ಶ್ವೇತಾಮಥ ಸುವರ್ಣಾಸ್ಯಾಂ ರೌಪ್ಯಖುರಸಮನ್ವಿತಾಂ ॥ ೧೨೨ ॥

---

೧೧೮. ಶ್ರಾವಣ ಮಾಸ ಮೊದಲುಗೊಂಡು ಇದನ್ನು ಕ್ರಮದಿಂದ ಪೂಜೆ ಮಾಡಬೇಕು. ಯಾವ ತಿಂಗಳಿನಲ್ಲಿ ವ್ರತವನ್ನು ಮೊದಲು ಮಾಡುತ್ತೇವೆಯೋ ಆ ತಿಂಗಳು ಹೂವಿನಿಂದ ಆಗ ಹರಿಯನ್ನು ಪೂಜಿಸಬೇಕು.

೧೧೯. ಈರೀತಿ ವರ್ಷದವರೆಗೂ ಈ ವ್ರತವನ್ನು ಮಾಡುತ್ತ ಉಪವಾಸ ವನ್ನು ಆ ಕಾಲದಲ್ಲಿ ಹೇಳಿದ ರೀತಿಯಿಂದ ಮಾಡುತ್ತ ವ್ರತ ಮುಗಿದ ಮೇಲೆ ಅದರ ಪರಿಕರಗಳಿಂದ ಕೂಡಿದ ಹಾಸಿಗೆಯನ್ನು ದಾನಮಾಡಬೇಕು.

೧೨೦-೧೨೧. ಆರು ಅಂಗುಲವಿರುವ ಚಂದ್ರನ ಪ್ರತಿಮೆಯನ್ನೂ, ನಾಲ್ಕು ಅಂಗುಲವಿರುವ ರೋಹಿಣೀ ಪ್ರತಿಮೆಯನ್ನೂ ಚಿನ್ನದಿಂದ ಮಾಡಿಸಬೇಕು. ಎಂಟು ಮುತ್ತುಗಳೂ, ಬಿಳಿಯ ಮಲ್ಲುಬಟ್ಟೆಯಿಂದಲೂ ಕೂಡಿದ ಆ ಪ್ರತಿಮೆಗಳನ್ನು ಹಾಲಿನ ಕಲಶದ ಮೇಲಿಟ್ಟು, ಕಂಚಿನ ಪಾತ್ರೆಯಲ್ಲಿ ಅಕ್ಷತೆಯನ್ನು ತುಂಬಿ ಅದನ್ನು ಅಕ್ಕಿ, ಕಬ್ಬು, ಫಲಗಳನ್ನು ಸೇರಿಸಿ ಮಂತ್ರ ಹೇಳಿ ಪೂರ್ವಾಹ್ಣದಲ್ಲಿ ದಾನಮಾಡಬೇಕು.

೧೨೨-೧೨೩. ಬೆಳ್ಳಗಿರುವ ಕರೆಯುವ ಹಸುವನ್ನು ತರಬೇಕು. ಚಿನ್ನದ ಮುಖವನ್ನೂ, ಬೆಳ್ಳಿಯ ಗೊರಸನ್ನೂ ಮಾಡಿಸಿ ಹಾಕಬೇಕು. ವಸ್ತ್ರ, ಕರೆಯುವ ಪಾತ್ರೆಗಳು, ಶಂಖ ಇವನ್ನು ಅದರ ಜೊತೆಯಲ್ಲಿಡಬೇಕು. ಒಂದು ಬ್ರಾಹ್ಮಣ

ಸವಸ್ತ್ರಭಾಜನಾಂ ಧೇನುಂ ತಥಾ ಶಂಖಂ ಚ ಭಾಜನಂ ।
ಭೂಷಣೈರ್ದ್ವಿಜದಾಂಪತ್ಯಮಲಂಕೃತ್ಯ ಗುಣಾನ್ವಿತಂ ॥ ೧೨೩ ॥

ಚಂದ್ರೋಽಯಂ ವಿಪ್ರರೂಪೇಣ ಸಭಾರ್ಯ ಇತಿ ಕಲ್ಪಯೇತ್ ।
ಯಥಾ ತೇ ರೋಹಿಣೀ ಕೃಷ್ಣ ಶಯ್ಯಾಂ ತ್ಯಕ್ತ್ವಾ ನ ಗಚ್ಛತಿ ॥ ೧೨೪ ॥

ಸೋಮರೂಪಸ್ಯ ತೇ ತದ್ವನ್ಮಮ ಭೇದೋ ವಿಭೂತಿಭಿಃ ।
ಯಥಾ ತ್ವಮೇವ ಸರ್ವೇಷಾಂ ಪರಮಾನಂದಮುಕ್ತಿದಃ ॥ ೧೨೫ ॥

ಭುಕ್ತಿರ್ಮುಕ್ತಿಸ್ತಥಾ ಭಕ್ತಿಸ್ತ್ವಯಿ ಚಂದ್ರ ದೃಢಾಽಸ್ತು ಮೇ ।
ಇತಿ ಸಂಸಾರಭೀತಸ್ಯ ಮುಕ್ತಿಕಾಮಸ್ಯ ಚಾಽನಘ ॥ ೧೨೬ ॥

ರೂಪಾರೋಗ್ಯಪ್ರದಂ ಚೇತಿ ವ್ರತಮೇಕಮನುತ್ತಮಂ ।
ಇದಮೇವ ಪಿತೄಣಾಂ ಚ ಸರ್ವದಾ ವಲ್ಲಭಂ ನೃಪ ॥ ೧೨೭ ॥

ತ್ರೈಲೋಕ್ಯಾಧಿಪತಿರ್ಭೂತ್ವಾ ಸಪ್ತಕಲ್ಪಶತತ್ರಯಂ ।
ಚಂದ್ರಲೋಕಮವಾಪ್ನೋತಿ ವಿದ್ಯುದ್ಭೂತ್ವಾ ವಿಮುಚ್ಯತೇ ॥ ೧೨೮ ॥

---

ದಂಪತಿಗಳನ್ನು ಕರೆದು ಅವರಿಗೆ ಒಡವೆಗಳಿಂದ ಅಲಂಕರಿಸಬೇಕು. ಅವರು ಗುಣವಂತರಾಗಿರಬೇಕು. ಚಂದ್ರನೇ ಈರೀತಿ ಹೆಂಡತಿಯೊಡನೆ ಬಂದಿರುವನೆಂದು ತಿಳಿದು ಆವಾಹಿಸಬೇಕು.

೧೨೪-೧೨೫. ಎಲೈ ಸೋಮರೂಪನಾದ ಕೃಷ್ಣನೇ, ನಿನ್ನ ಹಾಸಿಗೆಯನ್ನು ರೋಹಿಣಿಯು ಬಿಟ್ಟು ಹೇಗೆ ಹೋಗುವುದಿಲ್ಲವೋ, ನಿನಗೂ ಅವನಿಗೂ ಐಶ್ವರ್ಯಾದಿಗಳಲ್ಲಿ ಹೇಗೆ ಭೇದವಿಲ್ಲವೋ, ನೀನೇ ಹೇಗೆ ಎಲ್ಲರಿಗೂ ಆನಂದವನ್ನೂ, ಮುಕ್ತಿಯನ್ನೂ, ಕೊಡುತ್ತೀಯೋ ಹಾಗೆಯೇ ನೀನು ನನಗೆ ಊಟವನ್ನೂ, ಮುಕ್ತಿಯನ್ನೂ ಕೊಡು. ನಿನ್ನಲ್ಲಿ ನನಗೆ ಭಕ್ತಿಯು ದೃಢವಾಗಿರಲಿ.

೧೨೬—೧೨೮. ಈರೀತಿಯಾಗಿ ಸಂಸಾರದಿಂದ ಮುಕ್ತಿಯನ್ನಪೇಕ್ಷಿಸುವವನಿಗೆ ರೂಪು ಆರೋಗ್ಯವನ್ನು ಕೊಡುವ ಉತ್ತಮ ವ್ರತವು. ಇದೇನೇ ಪಿತೃಗಳಿಗೂ, ಪ್ರೀತಿದಾಯಕವಾದ ವ್ರತವು. ಇವನು ಮೂರು ಲೋಕಕ್ಕೂ ಅಧಿಪತಿಯಾಗಿ ಮುನ್ನೂರೇಳು ಕಲ್ಪಗಳವರೆಗೂ ಇರುತ್ತಾನೆ. ಅನಂತರ ಚಂದ್ರಲೋಕವನ್ನು ಹೊಂದಿ ಮಿಂಚಾಗಿರುತ್ತಾನೆ. ಅನಂತರ ಮುಕ್ತಿಯನ್ನು ಹೊಂದುತ್ತಾನೆ.

ಸಾರೀ ವಾ ರೋಹಿಣೀಚಂದ್ರಶಯನಂ ಯಾ ಸಮಾಚರೇತ್ ।
ಸಾಽಪಿ ತತ್ಫಲಮಾಪ್ನೋತಿ ಪುನರಾವೃತ್ತಿದುರ್ಲಭಂ ॥ ೧೨೯ ॥

ಇತಿ ಪಠತಿ ಶೃಣೋತಿ ವಾ ಯ ಇತ್ಥಂ
ಮಧುಮಥನಾರ್ಚನಮಿಂದುಕೀರ್ತನೇನ ।
ಮತಿಮಪಿ ಚ ದದಾತಿ ಸೋಽಪಿ ಶೌರೇ-
ರ್ಭವನಗತಃ ಪರಿಪೂಜ್ಯತೇಽಮರೌಘೈಃ ॥ ೧೩೦ ॥

॥ ಭೀಷ್ಮ ಉವಾಚ ॥

ಜಲಸ್ಥಾನೇ ಕಥಂ ವಿಷ್ಣುರ್ದೇವೀ ವಾ ಪಾರ್ವತೀ ಕಥಂ ।
ತಡಾಗಾರಾಮಕೂಪೇಷು ವಾಪೀಷು ನಲಿನೀಷು ಚ ॥ ೧೩೧ ॥

ವಿಧಿಂ ವದಸ್ವ ಮೇ ಬ್ರಹ್ಮನ್ದೇವತಾಯತನೇಷು ಚ ।
ಕೇ ತತ್ರ ಋತ್ವಿಜೋ ವಿಪ್ರಾ ವೇದೀ ವಾ ಕೀದೃಶೀ ಭವೇತ್ ॥ ೧೩೨ ॥

---

೧೨೯. ಯಾವ ಹೆಂಗಸು ರೋಹಿಣೀಚಂದ್ರಶಯನ ವ್ರತವನ್ನು ಮಾಡುತ್ತಾಳೆಯೋ ಅವಳು ಆ ಫಲವನ್ನು ಹೊಂದುವುದಲ್ಲದೆ ಮತ್ತೆ ಬರದಿರುವ ಮುಕ್ತಿಯನ್ನು ಹೊಂದುತ್ತಾಳೆ.

೧೩೦. ಈರೀತಿ ಚಂದ್ರನ ಹೆಸರನ್ನು ಹೇಳಿಕೊಂಡು ವಿಷ್ಣುವಿನ ಪೂಜೆ ಮಾಡುವ ವ್ರತವನ್ನು ಕೇಳಿದವನೂ, ಓದಿದವನೂ, ಮಾಡುವಂತೆ ಬೋಧಿಸಿದವನೂ ದೇವತೆಗಳಿಂದ ಪೂಜ್ಯರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ.

೧೩೧. ಭೀಷ್ಮನು ಹೇಳಿದನು :—ಎಲೈ ಬ್ರಾಹ್ಮಣನೇ, ವಿಷ್ಣುವಾಗಲಿ ಪಾರ್ವತಿಯಾಗಲಿ ನೀರಿರುವ ಭಾವಿ, ಕೊಳಗಳಲ್ಲಿ, ಕೆರೆ ವನಗಳಲ್ಲಿ ಹೇಗೆ ಇರುವರು? ಅವರನ್ನು ಉಪಚರಿಸುವುದು ಹೇಗೆ? ಅದರ ವಿಧಿಯನ್ನು ನನಗೆ ಹೇಳು. ಮತ್ತು ದೇವಸ್ಥಾನಗಳಲ್ಲಿ ಹೇಗಿರಬೇಕು? ಅದರ ವಿಧಿಯೇನು?

೧೩೨-೧೩೩. ಅದಕ್ಕೆ ಋತ್ವಿಕ್ಕುಗಳಾರು? ವೇದಿಕೆಯು ಹೇಗಿರಬೇಕು? ದಕ್ಷಿಣೆಯು ಎಷ್ಟಾಗಬೇಕು? ಸ್ಥಾನವು ಹೇಗಿರಬೇಕು? ಆಚಾರ್ಯನು ಹೇಗಿರ

ದಕ್ಷಿಣಾ ಚ ಭವೇತ್ಕಿಂದೃಕ್ಸ್ಥಾನಮಾಚಾರ್ಯ ಏವ ಚ ।
ದ್ರವ್ಯಾಣಿ ಕಾನಿ ಶಸ್ತಾನಿ ಸರ್ವಮಾಚಕ್ಷ್ವ ಸುವ್ರತ ॥ ೧೩೩ ॥

॥ ಪುಲಸ್ತ್ಯ ಉವಾಚ ॥

ಶೃಣು ರಾಜನ್ಮಹಾಬಾಹೋ ತಡಾಗಾದಿಷು ಯೋ ವಿಧಿಃ ।
ಪುರಾಣೇಷ್ವಿತಿಹಾಸೋಽಯಂ ಪಠ್ಯತೇ ರಾಜಸತ್ತಮ ॥ ೧೩೪ ॥

ಪ್ರಾಪ್ಯ ಪಕ್ಷಂ ಶುಭಂ ಶುಕ್ಲಂ ಸಂಪ್ರಾಪ್ತೇ ಚೋತ್ತರಾಯಣೇ ।
ಪುಣ್ಯೇಽಹ್ನಿ ವಿಪ್ರಕಥಿತೇ ಕೃತ್ವಾ ಬ್ರಾಹ್ಮಣವಾಚನಂ ॥ ೧೩೫ ॥

ಅಶುಭೈರ್ವರ್ಜಿತೇ ದೇಶೇ ತಡಾಗಸ್ಯ ಸಮೀಪತಃ ।
ಚತುರ್ಹಸ್ತಾಂ ಸಮಾಂ ವೇದಿಂ ಚತುರಸ್ರಾಂ ಚತುರ್ಮುಖಾಂ ॥ ೧೩೬ ॥

ತಥಾ ಷೋಡಶಹಸ್ತಃ ಸ್ಯಾನ್ಮಂಡಪಶ್ಚ ಚತುರ್ಮುಖಃ ।
ವೇದ್ಯಾಸ್ತು ಪರಿತೋ ಗರ್ತಾ ರತ್ನಿಮಾತ್ರಾಸ್ತ್ರಿಮೇಖಲಾಃ ॥ ೧೩೭ ॥

---

ಬೇಕು ? ಯಾವ ಯಾವ ದ್ರವ್ಯಗಳು ಯೋಗ್ಯವಾದುವು ? ಎಲ್ಲವನ್ನೂ ದಯವಿಟ್ಟು ತಿಳಿಸು.

೧೩೪. ಪುಲಸ್ತ್ಯನು ಹೇಳಿದನು :—ಎಲೈ ರಾಜನೇ, ಕೆರೆ ಮುಂತಾದುವುಗಳಲ್ಲಿ ಮಾಡುವ ವಿಧಿಯನ್ನು ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂ, ಹೇಳಿರುವಂತೆ ಹೇಳುತ್ತೇನೆ.

೧೩೫. ಉತ್ತರಾಯಣ ಬರುತ್ತಲೂ ಅದರ ಶುಭವಾದ ಶುಕ್ಲಪಕ್ಷದಲ್ಲಿ ಒಳ್ಳೆಯ ತಿಥಿಯಲ್ಲಿ ಬ್ರಾಹ್ಮಣರನ್ನು ಕರೆಸಿ ಪುಣ್ಯಾಹವನ್ನು ಮಾಡಿಸಬೇಕು.

೧೩೬—೧೩೭. ಕೆರೆಯ ಬಳಿ ಒಳ್ಳೆಯದಾಗಿರುವ ಜಾಗದಲ್ಲಿ ನಾಲ್ಕುಮೊಳಗಟ್ಟಿಗಿರುವ, ನಾಲ್ಕು ಮೂಲೆಗಳುಳ್ಳ, ನಾಲ್ಕು ಕಡೆಗೂ ಮುಖವುಳ್ಳ ವೇದಿಕೆಯನ್ನು ಮಾಡಬೇಕು. ಮಂಡಪವನ್ನು ಹದಿನಾರು ಮೊಳಗಳಷ್ಟು ಹಾಕಿ ನಾಲ್ಕು ಕಡೆಗೂ, ಮುಖಗಳನ್ನು ಮಾಡಿರಬೇಕು. ಆ ವೇದಿಕೆಯ ಸುತ್ತಲೂ ಗುದ್ದು ಮೊಳದಷ್ಟಿರುವ ಹಳ್ಳಗಳನ್ನು ಮಾಡಿರಬೇಕು. ಅದಕ್ಕೆ ಮೂರು ಜಗಲಿಯ ಕಟ್ಟುಗಳಿರಬೇಕು. ಈ ಹಳ್ಳಗಳು ಒಂಬತ್ತಾಗಲೀ, ಏಳಾಗಲೀ ಅಥವಾ ಐದಾಗಲಿ ಇರಬೇಕು. ಇವು

**ನವ ಸಪ್ತಾಥ ವಾ ಪಂಚ ಯೋನಿವಕ್ತ್ರಾ ನೃಪಾತ್ಮಜ ।**
**ವಿತಸ್ತಿಮಾತ್ರಾ ಯೋನಿಃ ಸ್ಯಾತ್ ಷಟ್ಸಪ್ತಾಂಗುಲವಿಸ್ತೃತಾ ॥ ೧೩೮ ॥**

**ಸರ್ವಾಶ್ಚ ಹಸ್ತಮಾತ್ರಾಃ ಸ್ಯುಸ್ತ್ರಿಪರ್ವೋಚ್ಛ್ರಿತಮೇಖಲಾಃ ।**
**ಸರ್ವಾಃ ಸ್ಯುಃ ಸರ್ವವರ್ಣಾಃ ಸ್ಯುಃ ಪತಾಕಾಧ್ವಜಸಂಯುತಾಃ ॥ ೧೩೯ ॥**

**ಅಶ್ವತ್ಥೋದುಂಬರಪ್ಲಕ್ಷವಟಶಾಖಾಕೃತಾನಿ ಚ ।**
**ಮಂಡಪಸ್ಯ ಪ್ರತಿದಿಶಂ ದ್ವಾರಾಣ್ಯೇತಾನಿ ಕಾರಯೇತ್ ॥ ೧೪೦ ॥**

**ಶುಭಾಸ್ತತ್ರಾಷ್ಟ ಹೋತಾರೋ ದ್ವಾರಪಾಲಾಸ್ತಥಾಷ್ಟ ವೈ ।**
**ಅಷ್ಟೌ ತು ಜಾಪಕಾಃ ಕಾರ್ಯಾ ಬ್ರಾಹ್ಮಣಾ ವೇದಪಾರಗಾಃ ॥ ೧೪೧ ॥**

**ಸರ್ವಲಕ್ಷಣಸಂಪೂರ್ಣಾನ್ಮಂತ್ರಜ್ಞಾನ್ವಿಜಿತೇಂದ್ರಿಯಾನ್ ।**
**ಕುಲಶೀಲಸಮಾಯುಕ್ತಾನ್ಸ್ಥಾಪಯೇದ್ದ್ವಿಜಸತ್ತಮಾನ್ ॥ ೧೪೨ ॥**

---

ಯೋನಿ ಮುಖವುಳ್ಳವುಗಳಾಗಿರಬೇಕು. ಹನ್ನೆರಡು ಅಂಗುಲಕ್ಕೆ ವಿತಸ್ತಿ ಎಂದು ಹೆಸರು. ಆರು ಅಥವಾ ಏಳು ಅಂಗುಲ ವಿಸ್ತಾರವುಳ್ಳದ್ದಾಗಿರಬೇಕು. ಹನ್ನೆರಡು ಅಂಗುಲ ಆಳವಿರಬೇಕು.

೧೩೯. ಎಲ್ಲವೂ ಕೂಡ ಹೀಗೆ ಒಂದು ಮೊಳದುದ್ದವಿದ್ದು ಮೂರು ರೀತಿಯಲ್ಲಿ ಕೆಳಗೆ ಸಣ್ಣನಾಗಿ ಅದಕ್ಕೆ ಮೇಲಕ್ಕೆ ಬರುತ್ತ ದೊಡ್ಡದಾಗಿರುವಂತೆ ಮೂರು ಅಂತಸ್ತುಗಳುಳ್ಳವಾಗಿರಬೇಕು. ಎಲ್ಲಕ್ಕೂ ಬಗೆಬಗೆಯ ಬಟ್ಟೆಗಳನ್ನು ಹಾಕಿರಬೇಕು. ಪತಾಕೆ, ಧ್ವಜಗಳು ಹಾಕಿ ಶೃಂಗರಿಸಿರಬೇಕು.

೧೪೦. ಅರಳಿ, ಅತ್ತಿ, ಬಸರಿ, ಆಲ ಇವುಗಳ ಕೊಂಬೆಗಳಿಂದ ಆ ಮಂಡಪದ ಎಲ್ಲಾ ಕಡೆಯಲ್ಲೂ ಬಾಗಲುಗಳನ್ನು ಮಾಡಬೇಕು.

೧೪೧. ಅಲ್ಲಿ ಎಂಟುಜನ ಹೋಮಮಾಡುವವರೂ, ಎಂಟು ಮಂದಿ ದ್ವಾರಪಾಲಕರೂ, ಇರಬೇಕು. ಎಂಟು ಜನರು ಜಪಮಾಡುವವರೂ ಇರಬೇಕು. ಇವರೆಲ್ಲರೂ ವೇದಪಾರಗರಾಗಿರಬೇಕು.

೧೪೨. ಅವರು ಎಲ್ಲ ಲಕ್ಷಣದಿಂದಲೂ ಕೂಡಿರಬೇಕು. ಮಂತ್ರವನ್ನು ಬಲ್ಲವರಾಗಿರಬೇಕು. ಜಿತೇಂದ್ರಿಯರಾಗಿರಬೇಕು. ಕುಲಶೀಲಗಳುಳ್ಳವರಾಗಿರಬೇಕು. ಇಂತಹ ಬ್ರಾಹ್ಮಣರನ್ನು ಇಟ್ಟಿರಬೇಕು.

ಪ್ರತಿಗರ್ತೇಷು ಕಲಶಾನ್ಯಜ್ಞೋಪಕರಣಾನಿ ಚ ।
ವಿಮಲಂ ಚಾಸನಂ ದಿವ್ಯಂ ತಾಮ್ರಪಾತ್ರಂ ಸುವಿಸ್ತರಂ ॥ ೧೪೩ ॥

ತತಸ್ತ್ವನೇಕವರ್ಣಾಃ ಸ್ಯುರ್ಬಲಯಃ ಪ್ರತಿದೈವತಂ ।
ಆಚಾರ್ಯಃ ಪ್ರಕ್ಷಿಪೇದ್ಭೂಮಾವನುಮಂತ್ರ್ಯ ವಿಚಕ್ಷಣಃ ॥ ೧೪೪ ॥

ಅರತ್ನಿಮಾತ್ರೋ ಯೂಪಃ ಸ್ಯಾತ್ಕ್ಷೀರವೃಕ್ಷವಿನಿರ್ಮಿತಃ ।
ಯಜಮಾನಪ್ರಮಾಣೋ ವಾ ಸಂಸ್ಥಾಪ್ಯೋ ಭೂತಿಮಿಚ್ಛತಾ ॥ ೧೪೫ ॥

ಹೇಮಾಲಂಕಾರಿಣಃ ಕಾರ್ಯಾಃ ಪಂಚವಿಂಶತಿರೃತ್ವಿಜಃ ।
ಕುಂಡಲಾನಿ ಚ ಹೈಮಾನಿ ಕೇಯೂರಕಟಕಾನಿ ಚ ॥ ೧೪೬ ॥

ತಥಾಂಗುಲಿಪವಿತ್ರಾಣಿ ವಾಸಾಂಸಿ ವಿವಿಧಾನಿ ಚ ।
ದದ್ಯಾತ್ಸಮಾನಿ ಸರ್ವೇಷಾಮಾಚಾರ್ಯೇ ದ್ವಿಗುಣಂ ಪುನಃ ॥ ೧೪೭ ॥

---

೧೪೩. ಎಲ್ಲ ಹಳ್ಳಗಳಲ್ಲಿಯೂ ಯಾಗದ ಸಾಮಾನುಗಳೂ, ಆಸನಗಳೂ, ತ್ರಾಮದ ಪಾತ್ರೆಗಳೂ, ಕಲಶಗಳೂ ಇರಬೇಕು.

೧೪೪. ಅನಂತರ ಪ್ರತಿ ದೇವರಿಗೂ, ಅನೇಕ ಬಣ್ಣದ ಬಲಿಗಳನ್ನು ಹಾಕಿರಬೇಕು. ಆಚಾರ್ಯನು ಬುದ್ಧಿವಂತಿಕೆಯಿಂದ ಮಂತ್ರಿಸಿ ಭೂಮಿಯಲ್ಲಿ ಆ ಬಲಿಯನ್ನು ಹಾಕಿರಬೇಕು.

೧೪೫. ಯೂಪದ ಕಂಬವು ಗುದ್ದುವೇಳದಷ್ಟಿರಬೇಕು. ಇಲ್ಲವೇ ಯಜಮಾನನು ಇರುವಷ್ಟು ಉದ್ದವಿರಬೇಕು. ಅದನ್ನು ಹಾಲು ಬರುವ ಮರದಿಂದ ಮಾಡಿರಬೇಕು. ಇಂತಹದನ್ನು ನೆಟ್ಟಿರಬೇಕು.

೧೪೬-೧೪೭. ಆ ಇಪ್ಪತ್ತೈದು ಜನ ಋತ್ವಿಕ್ಕುಗಳಿಗೂ ಚಿನ್ನದ ಕುಂಡಲ, ಕೇಯೂರ ಕಟಕಗಳನ್ನೂ ಕೊಡಬೇಕು. ಅಲ್ಲದೇ ಪವಿತ್ರದ ಉಂಗುರಗಳನ್ನೂ, ಬಗೆಬಗೆಯ ಪಂಚೆಗಳನ್ನೂ, ಕೊಡಬೇಕು. ಎಲ್ಲರಿಗೂ ಒಂದೇ ಸಮನಾಗಿ ಎಲ್ಲವನ್ನೂ ಕೊಡಬೇಕು. ಆಚಾರ್ಯನಿಗೆ ಎರಡರಷ್ಟನ್ನು ಕೊಡಬೇಕು. ಅಲ್ಲದೆ ಹಾಸಿಗೆಗಳನ್ನೂ ತನಗೆ ಪ್ರೀತಿಯಾದುವುಗಳನ್ನೂ ಕೊಡಬೇಕು.

ದದ್ಯಾಚ್ಛಯನಸಂಯುಕ್ತಮಾತ್ಮನಶ್ಚಾಪಿ ಯತ್ಪ್ರಿಯಂ ।
ಸೌವರ್ಣೌ ಕೂರ್ಮಮಕರೌ ರಾಜತೌ ಮತ್ಸ್ಯದುಂದುಭೌ ॥ ೧೪೮ ॥

ತಾಮ್ರೌ ಕುಲೀರಮಂಡೂಕಾವಾಯಸೌ ಶಿಶುಮಾರಕೌ ।
ಏವಮಾಸಾದ್ಯ ತತ್ಸರ್ವಂ ಸ್ವರ್ಣಪಾತ್ರೇ ವಿಶಾಂ ಪತೇ ॥ ೧೪೯ ॥

ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ।
ಸರ್ವೌಷಧ್ಯುದಕಸ್ನಾತಃ ಸ್ನಾಪಿತೋ ವೇದಪಾರಗೈಃ ॥ ೧೫೦ ॥

ಯಜಮಾನಃ ಸಪತ್ನೀಕಃ ಪುತ್ರಪೌತ್ರಸಮನ್ವಿತಃ ।
ಪಶ್ಚಿಮದ್ವಾರಮಾಸಾದ್ಯ ಪ್ರವೇಶೇದ್ಯಾಗಮಂಡಪಂ ॥ ೧೫೧ ॥

ತತೋ ಮಂಗಲಶಬ್ದೇನ ಭೇರೀಣಾಂ ನಿಸ್ವನೇನ ಚ ।
ರಜೋಭಿರ್ಮಂಡಲಂ ಕುರ್ಯಾತ್ಪಂಚವರ್ಣಸಮನ್ವಿತಂ ॥ ೧೫೨ ॥

ಷೋಡಶಾರಂ ತತಶ್ಚಕ್ರಂ ಪದ್ಮಗರ್ಭಂ ಸುಲೋಚನಂ ।
ಚತುರಸ್ರಂ ತು ಪರಿತೋ ವೃತಂ ಮಧ್ಯೇ ಸುಶೋಭನಂ ॥ ೧೫೩ ॥

---

೧೪೮-೧೪೯. ಚಿನ್ನದ ಆಮೆ, ಮೊಸಳೆಗಳನ್ನೂ, ಬೆಳ್ಳಿಯ ಮೀನು, ದೊಡ್ಡ ಮೀನುಗಳನ್ನೂ, ತಾಮ್ರದ ಏಡಿ, ಕಪ್ಪೆಗಳನ್ನೂ, ಕಬ್ಬಿಣ ಶಿಂಶುಮಾರಕವೆಂಬ ಜಲ ಜಂತುಗಳನ್ನೂ ಮಾಡಿಸಿ ಅವನ್ನು ಚಿನ್ನದ ಪಾತ್ರೆಯಲ್ಲಿಟ್ಟುಕೊಂಡು ಸಿದ್ಧನಾಗ ಬೇಕು.

೧೫೦-೧೫೧. ಎಲ್ಲಾ ಓಷಧಿಗಳನ್ನೂ ನೀರಿನಲ್ಲಿ ಹಾಕಿದ್ದ ಆ ನೀರಿನಿಂದ ಸ್ನಾನಮಾಡಿ ಅನಂತರ ವೇದಪಾರಗರಿಂದಲೂ ಸ್ನಾನಮಾಡಿಸಿಕೊಂಡು ಯಜ ಮಾನನು ಹೆಂಡತಿ ಮಕ್ಕಳೊಡನೆ ಪಶ್ಚಿಮದ್ವಾರದಿಂದ ಪೂರ್ವಮುಖನಾಗಿ ಮಂಟಪ ದೊಳಕ್ಕೆ ಬರಬೇಕು.

೧೫೨—೧೫೪. ಅನಂತರ ಭೇರಿ ಮುಂತಾದುವುಗಳ ಶಬ್ದದೊಡನೆ ಪುಡಿ ಮಣ್ಣನ್ನೂ, ಮತ್ತು ಬಗೆಬಗೆಯ ಪುಡಿಗಳನ್ನು ತಂದು ಐದು ವರ್ಣದಿಂದ ಕೂಡಿರುವ ಮಂಡಲವನ್ನು ಮಾಡಬೇಕು. ಹದಿನಾರು ಹಾರೆಯ ಕಾಲುಗಳುಳ್ಳ ಚಕ್ರವನ್ನು ಮಾಡಬೇಕು. ಮಧ್ಯದಲ್ಲಿ ಪದ್ಮವಿರಬೇಕು. ಅದರ ಸುತ್ತಲೂ ನಾಲ್ಕು

ವೇದ್ಯಾಶ್ಚೋಽಪರಿ ತತ್ಕೃತ್ವಾ ಗ್ರಹಾಂಲ್ಲೋಕಪತೀಂಸ್ತತಃ ।
ಸನ್ಯಸೇನ್ಮಂತ್ರತಃ ಸರ್ವಾನ್ಪ್ರತಿದಿಕ್ಷು ವಿಚಕ್ಷಣಃ ॥ ೧೫೪ ॥

ಕಲಶಂ ಸ್ಥಾಪಯೇನ್ಮಧ್ಯೇ ವಾರುಣಂ ಮಂತ್ರಮಾಶ್ರಿತಂ ।
ಬ್ರಹ್ಮಾಣಂ ಚ ಶಿವಂ ವಿಷ್ಣುಂ ತತ್ರೈವ ಸ್ಥಾಪಯೇದ್ಬುಧಃ ॥ ೧೫೫ ॥

ವಿನಾಯಕಂ ಚ ವಿನ್ಯಸ್ಯ ಕಮಲಾಮಂಬಿಕಾಂ ತಥಾ ।
ಶಾಂತ್ಯರ್ಥಂ ಸರ್ವಲೋಕಾನಾಂ ಭೂತಗ್ರಾಮಂ ನ್ಯಸೇತ್ತತಃ ॥ ೧೫೬ ॥

ಪುಷ್ಪಗಂಧಫಲೈರ್ಯುಕ್ತಮೇವಂ ಕೃತ್ವಾಽಧಿವಾಸನಂ ।
ಕುಂಭಾಂಶ್ಚ ರತ್ನಗರ್ಭಾಂಸ್ತಾನ್ವಾಸೋಭಿಃ ಪರಿವೇಷ್ಟಯೇತ್ ॥ ೧೫೭ ॥

ಪುಷ್ಪಗಂಧೈರಲಂಕೃತ್ಯ ದ್ವಾರಪಾಲಾಂಸ್ತಥೈವ ಚ ।
ಪಠಧ್ವಮಿತಿ ತಾನ್ಬ್ರೂಯಾದಾಚಾರ್ಯಂ ತ್ವಭಿಪೂಜಯೇತ್ ॥ ೧೫೮ ॥

---

ಮೂಲೆಗಳಿರುವಂತೆ ವೇದಿಕೆಯನ್ನು ಮಾಡಬೇಕು. ಆ ವೇದಿಕೆಯ ಮೇಲೆ ಇವೆಲ್ಲ ವನ್ನೂ ಮಾಡಿ ನವಗ್ರಹಗಳನ್ನೂ, ಇಂದ್ರಾದಿ ಲೋಕಪಾಲಕರನ್ನೂ ಆಯಾಯ ದಿಕ್ಕುಗಳಲ್ಲಿಟ್ಟು ಆವಾಹನೆ ಮಾಡಬೇಕು.

೧೫೫. ಅದರ ಮಧ್ಯದಲ್ಲಿ ಕಲಶವನ್ನಿಟ್ಟು ವರುಣನ ಮಂತ್ರದಿಂದ ವರುಣ ನನ್ನು, ಬ್ರಹ್ಮನ ಮಂತ್ರದಿಂದ ಬ್ರಹ್ಮನನ್ನು, ಶಿವ, ವಿಷ್ಣುಗಳನ್ನು ಅವರವರ ಮಂತ್ರ ಗಳಿಂದ ಆ ಕಲಶದಲ್ಲಿ ಆವಾಹಿಸಬೇಕು.

೧೫೬. ವಿನಾಯಕ, ಲಕ್ಷ್ಮೀ, ಅಂಬಿಕೆಯರನ್ನು ಅವರವರ ಮಂತ್ರಗಳಿಂದ ಆವಾಹಿಸಬೇಕು. ಎಲ್ಲಾ ಲೋಕಗಳ ಶಾಂತಿಗೋಸ್ಕರ ಇವರೆಲ್ಲರನ್ನೂ ಈರೀತಿ ಇಡಬೇಕು.

೧೫೭-೧೫೮. ಆ ಕಲಶಗಳೆಲ್ಲವನ್ನೂ ಗಂಧ, ಪುಷ್ಪಾದಿಗಳಿಂದ ಪೂಜಿಸಿ ಕುಂಭಕ್ಕೆ ಸುವಾಸನೆಯ ಹೊಗೆಯನ್ನು ಕೊಟ್ಟು, ರತ್ನಗಳನ್ನು ಹಾಕಿ ಬಟ್ಟೆಗಳನ್ನು ಹೊದ್ದಿಸಿ ಹೂ, ಗಂಧಗಳಿಂದ ಅಲಂಕರಿಸಿ, ದ್ವಾರಪಾಲಕರನ್ನೂ ಹೀಗೆಯೇ ಅಲಂಕರಿಸಿ ಆಚಾರ್ಯನನ್ನು ಪೂಜಿಸಿ, ಪಾಠಕರನ್ನು ಮಂತ್ರಪಠನಮಾಡಿರೆಂದು ಹೇಳಬೇಕು.

**ಬಹ್ವೃಚೌ ಪೂರ್ವತಃ ಸ್ಥಾಪ್ಯೌ ದಕ್ಷಿಣೇ ಯಾಜುಷೌ ಕ್ರಮಾತ್ ।**
**ಪಶ್ಚಿಮೇ ಸಾಮಗೌ ಸ್ಥಾಪ್ಯಾವುತ್ತರೇಽಥರ್ವಣೌ ತಥಾ ॥ ೧೫೯ ॥**

**ಉದಙ್ಮುಖೋ ದಕ್ಷಿಣತೋ ಯಜಮಾನ ಉಪಾವಿಶೇತ್ ।**
**ಪಠಧ್ವಮಿತಿ ತಾನ್ಬ್ರೂಯಾದ್ಯಜಧ್ವಮಿತಿ ಯಾಜಕಂ ॥ ೧೬೦ ॥**

**ಉತ್ಕೃಷ್ಟಮಂತ್ರಜಾಪ್ಯೇನ ತಿಷ್ಠಧ್ವಮಿತಿ ಜಾಪಕಾನ್ ।**
**ಏವಮಾದಿಶ್ಯ ತಾನ್ಸರ್ವಾನ್ಸಂಧುಕ್ಷ್ಯಾಗ್ನಿಂ ಸ ಮಂತ್ರವಿತ್ ॥ ೧೬೧ ॥**

**ಜುಹುಯಾದಾಹುತೀರ್ಮಂತ್ರೈರಾಜ್ಯಂ ಚ ಸಮಿಧಸ್ತಥಾ ।**
**ಋತ್ವಿಗ್ಭಿಶ್ಚೈವ ಹೋತವ್ಯಂ ವಾರುಣೈರೇವ ಸರ್ವತಃ ॥ ೧೬೨ ॥**

**ಗ್ರಹೇಭ್ಯೋ ವಿಧಿವದ್ಧುತ್ವಾ ತಥೇಂದ್ರಾಯೇಶ್ವರಾಯ ಚ ।**
**ಮರುದ್ಭ್ಯೋ ಲೋಕಪಾಲೇಭ್ಯೋ ವಿಧಿವತ್ತತ್ರ ಕರ್ಮಣಿ ॥ ೧೬೩ ॥**

**ಶಾಂತಿಸೂಕ್ತಂ ಚ ರೌದ್ರಂ ಚ ಪಾವಮಾನಂ ಸುಮಂಗಲಂ ।**
**ಜಪೇಚ್ಚ ಪೌರುಷಂ ಸೂಕ್ತಂ ಪೂರ್ವತೋ ಬಹ್ವೃಚಃ ಪೃಥಕ್ ॥ ೧೬೪ ॥**

---

೧೫೯-೧೬೦. ಋಗ್ವೇದಿಗಳನ್ನು ಪೂರ್ವದಿಕ್ಕಿನಲ್ಲಿಯೂ, ಯಜುರ್ವೇದಿಗಳನ್ನು ದಕ್ಷಿಣದಲ್ಲಿಯೂ, ಸಾಮಗರನ್ನು ಪಶ್ಚಿಮದಿಕ್ಕಿನಲ್ಲಿಯೂ, ಅಥರ್ವಣಿಕರನ್ನು ಉತ್ತರದಿಕ್ಕಿನಲ್ಲಿಯೂ ಕೂರಿಸಿ, ಯಜಮಾನನು ಉತ್ತರಮುಖವಾಗಿ ದಕ್ಷಿಣದಿಕ್ಕಿನಲ್ಲಿ ಕುಳಿತುಕೊಳ್ಳಬೇಕು. ಪಾಠಕರನ್ನು ಪಾರಾಯಣ ಮಾಡಿರೆಂದು ಯಾಜಕರನ್ನು ಯಾಗಮಾಡಿರೆಂದೂ ಹೇಳಬೇಕು.

೧೬೧-೧೬೨. ಪಠನೆ ಮಾಡುವರನ್ನು ಒಳ್ಳೆಯ ಮಂತ್ರಗಳನ್ನು ಹೇಳಿರಿ ಎಂದು ಹೇಳಬೇಕು. ಆಮೇಲೆ ಅಗ್ನಿಯನ್ನು ಪ್ರತಿಷ್ಠಾಪಿಸಬೇಕು. ತಾನು ಋತ್ವಿಕ್ಕುಗಳೊಡನೆ ಆಯಾ ಮಂತ್ರಗಳಿಂದಲೂ, ವರುಣ ಮಂತ್ರಗಳಿಂದಲೂ ಹೋಮಮಾಡಬೇಕು.

೧೬೩-೧೬೪. ಗ್ರಹಗಳಿಗೂ, ಇಂದ್ರಾದಿಗಳಿಗೂ, ಈಶ್ವರನಿಗೂ, ಮರುತ್ತುಗಳಿಗೂ, ಲೋಕಪಾಲರಿಗೂ, ವಿಧಿವತ್ತಾಗಿ ಹೋಮ ಮಾಡಬೇಕು. ಪೂರ್ವದಿಕ್ಕಿನಲ್ಲಿರುವ ಋಗ್ವೇದಿಗಳು ಶಾಂತಿಸೂಕ್ತವನ್ನೂ, ರುದ್ರಸೂಕ್ತವನ್ನೂ, ಪವಮಾನವನ್ನೂ, ಪುರುಷಸೂಕ್ತವನ್ನೂ, ಜಪಿಸಬೇಕು.

ಶಾಕ್ರಂ ರೌದ್ರಂ ಚ ಸೌಮ್ಯಂ ಚ ಕೌಷ್ಮಾಂಡಂ ಜಾತವೇದಸಂ ।
ಸೌರಂ ಸೂಕ್ತಂ ಜಪೇದಂತೇ ದಕ್ಷಿಣೇನ ಯಜುರ್ವಿದಃ ॥ ೧೬೫ ॥

ವೈರಾಜಂ ಪೌರುಷಂ ಸೂಕ್ತಂ ಸೌಪರ್ಣಂ ರುದ್ರಸಂಹಿತಂ ।
ಶೈಶವಂ ಪಂಚನಿಧನಂ ಗಾಯತ್ರಂ ಜ್ಯೇಷ್ಠಸಾಮ ಚ ॥ ೧೬೬ ॥

ವಾಮದೇವ್ಯಂ ಬೃಹತ್ಸಾಮ ರೌರವಂ ಚ ರಥಂತರಂ ।
ಗವಾಂ ವ್ರತಂ ವಿಕೀರ್ಣಂ ಚ ರಕ್ಷೋಘ್ನಂ ಚ ಯಮಂ ತಥಾ ॥ ೧೬೭ ॥

ಗಾಯೇಯುಃ ಸಾಮಗಾ ರಾಜನ್ಪಶ್ಚಿಮಂ ದ್ವಾರಮಾಶ್ರಿತಾಃ ।
ಅಥರ್ವಣಾಶ್ಚೋತ್ತರತಃ ಶಾಂತಿಕಂ ಪೌಷ್ಟಿಕಂ ತಥಾ ॥ ೧೬೮ ॥

ಜಪೇಯುರ್ಮನಸಾ ದೇವಮಾಶ್ರಿತಾ ವರುಣಂ ಪ್ರಭುಂ ।
ಪೂರ್ವೇದ್ಯುರಭಿತೋ ಮಂತ್ರೈರೇವಂ ಕೃತ್ವಾಧಿವಾಸನಂ ॥ ೧೬೯ ॥

ಗಜಾಶ್ವರಥ್ಯಾವಲ್ಮೀಕಸಂಗಮಾದ್ವ್ರಜಗೋಕುಲಾತ್ ।
ಮೃದಮಾದಾಯ ಕುಂಭೇಷು ಪ್ರಕ್ಷಿಪೇದೌಷಧೀಸ್ತಥಾ ॥ ೧೭೦ ॥

---

೧೬೫. ಇಂದ್ರಸೂಕ್ತ, ರುದ್ರ, ಸೋಮಸೂಕ್ತ, ಕೂಷ್ಮಾಂಡಸೂಕ್ತ, ಅಗ್ನೇಯ ಸೂಕ್ತ, ಸೌರಸೂಕ್ತ ಇವುಗಳನ್ನು ದಕ್ಷಿಣದಿಕ್ಕಿನಲ್ಲಿ ಯಜುರ್ವೇದಿಗಳು ಪಠನ ಮಾಡಬೇಕು.

೧೬೬-೧೬೭. ವೈರಾಜ, ಪುರುಷಸೂಕ್ತ, ಸೌಪರ್ಣ, ರುದ್ರಸಂಹಿತೆ, ಶೈಶವ, ಪಂಚನಿಧನ, ಗಾಯತ್ರೀಸಾಮ, ಜ್ಯೇಷ್ಠಸಾಮ, ವಾಮದೇವ್ಯಸಾಮ, ಬೃಹತ್ಸಾಮ, ರೌರವ, ರಥಂತರಸಾಮಗಳು, ಗೋವ್ರತ, ವಿಕೀರ್ಣ, ರಕ್ಷೋಘ್ನ, ಯಮಸೂಕ್ತ ಈ ಸಾಮಗಳನ್ನು ಸಾಮಗರು ಪಶ್ಚಿಮದ್ವಾರದಲ್ಲಿ ಗಾನಮಾಡಬೇಕು.

೧೬೮-೧೬೯. ಅಥರ್ವಣ ವೇದದವರು ಉತ್ತರದಿಕ್ಕಿನಲ್ಲಿದ್ದುಕೊಂಡು ಶಾಂತಿ ಪುಷ್ಟಿಕರ್ಮಗಳನ್ನು ವರುಣನನ್ನುದ್ದೇಶಿಸಿ ಮನಸ್ಸಿನಿಂದ ಮಾಡಬೇಕು. ಈರೀತಿ ಹಿಂದಿನ ದಿವಸ ಮಂತ್ರಗಳಿಂದ ಅಧಿವಾಸವನ್ನು ಮಾಡಿರಬೇಕು.

೧೭೦-೧೭೧. ಆನೆ, ಕುದುರೆಗಳ ಲಾಯದ ಮಣ್ಣು, ನಾಲ್ಕು ಬೀದಿಗಳು ಕೂಡಿರುವ ಚೌಕದ ಮಣ್ಣು, ಹುತ್ತದ ಮಣ್ಣು, ಗೋವಿನ ಕೊಟ್ಟಿಗೆಯ ಮಣ್ಣು,

**ರೋಚನಾಂ ಚ ಸಸಿದ್ಧಾರ್ಥಾಂ ಗಂಧಗುಗ್ಗುಲಮೇವ ಚ ।**
**ಸ್ನಪನಂ ತಸ್ಯ ಕರ್ತವ್ಯಂ ಪಂಚಗವ್ಯಸಮನ್ವಿತಂ । ॥ ೧೭೧ ॥**

**ಪೂರ್ವಂ ಕರ್ತುರ್ಮಹಾಮಂತ್ರೈರೇವಂ ಕೃತ್ವಾ ವಿಧಾನತಃ ।**
**ಅತಿವಾಹ್ಯ ಕ್ಷಪಾಮೇವಂ ವಿಧಿಯುಕ್ತೇನ ಕರ್ಮಣಾ ॥ ೧೭೨ ॥**

**ತತಃ ಪ್ರಭಾತೇ ವಿಮಲೇ ಸಂಜಾತೇ ತು ಶತಂ ಗವಾಂ ।**
**ಬ್ರಾಹ್ಮಣೇಭ್ಯಃ ಪ್ರದಾತವ್ಯಂ ಹೋಮಾಂತೇ ವಾಥವಾ ಪುನಃ ॥ ೧೭೩ ॥**

**ಪಂಚಾಶದ್ವಾಥ ಷಟ್ತ್ರಿಂಶತ್ಪಂಚವಿಂಶತಿರ್ವಾ ಪುನಃ ।**
**ತತಃ ಸಂವತ್ಸರೇ ಪ್ರಾಪ್ತೇ ಶುದ್ಧೇ ಲಗ್ನೇ ಸುಶೋಭನೇ ॥ ೧೭೪ ॥**

**ವೇದಶಬ್ದೈಃ ಸಗಂಧರ್ವೈರ್ವಾದ್ಯೈಶ್ಚ ವಿವಿಧೈಃ ಪುನಃ ।**
**ಕನಕಾಲಂಕೃತಾಂ ಕೃತ್ವಾ ಜಲೇ ಗಾಮವತಾರಯೇತ್ ॥ ೧೭೫ ॥**

---

ಇವುಗಳನ್ನು ತಂದು ಆ ಕಲಶದಲ್ಲಿ ಹಾಕಬೇಕು. ಮತ್ತು ಮೂಲಿಕೆಗಳನ್ನು (ಔಷಧಿಗಳನ್ನು) ಹಾಕಬೇಕು. ಗೋರೋಚನ, ಬಿಳಿಯ ಸಾಸುವೆ, ಗಂಧ, ಗುಗ್ಗುಳ, ಇವೆಲ್ಲವನ್ನೂ ಹಾಕಬೇಕು. ಪಂಚಗವ್ಯದಿಂದ ಸ್ನಾನವನ್ನು ಮಾಡಿಸಬೇಕು.

೧೭೨. ಈರೀತಿ ಮಾಡಿದ ಕಲಶೋದಕದಿಂದ ಮೊದಲು ವಿಧಿವತ್ತಾಗಿ ಮಹಾಮಂತ್ರಗಳಿಂದ ಯಜಮಾನನಿಗೆ ಸ್ನಾನಮಾಡಿಸಬೇಕು. ಈರೀತಿ ವಿಧ್ಯುಕ್ತವಾದ ಕರ್ಮಗಳಿಂದ ಆ ರಾತ್ರಿಯನ್ನು ಕಳೆಯಬೇಕು.

೧೭೩. ಬೆಳಗಾಗುತ್ತಲೂ ಬ್ರಾಹ್ಮಣರಿಗೆ ನೂರು ಹಸುಗಳನ್ನಾಗಲಿ, ಐವತ್ತನ್ನಾಗಲಿ, ಕೊನೆಗೆ ಇಪ್ಪತ್ತನ್ನಾಗಲಿ ದಾನಮಾಡಬೇಕು. ಹೋಮವಾದ ಮೇಲೆ ಬೇಕಾದರೂ ಕೊಡಬಹುದು.

೧೭೪-೧೭೫. ಆಮೇಲೆ ಒಂದು ವರ್ಷ ಪೂರ್ಣವಾಗಲು ಶುದ್ಧವಾದ ದಿನದಲ್ಲಿ ಒಳ್ಳೆಯ ಲಗ್ನದಲ್ಲಿ ವೇದಘೋಷದಿಂದಲೂ, ವಾದ್ಯನೃತ್ಯಗಳಿಂದಲೂ ಕೂಡಿಕೊಂಡು ಒಂದು ಹಸುವಿಗೆ ಚಿನ್ನದ ಒಡವೆಗಳಿಂದ ಅಲಂಕರಿಸಿ ನೀರಿನಲ್ಲಿ ಇಳಿಸಬೇಕು. ಅದನ್ನು ಸಾಮವೇದದ ಬ್ರಾಹ್ಮಣನಿಗೆ ದಾನಕೊಡಬೇಕು.

ಸಾಮಗಾಯ ಚ ಸಾ ದೇಯಾ ಬ್ರಾಹ್ಮಣಾಯ ವಿಶಾಂ ಪತೇ
ಪಾತ್ರೀಮಾದಾಯ ಸೌವರ್ಣೀಂ ಪಂಚರತ್ನಸಮನ್ವಿತಾಂ ॥ ೧೭೬ ॥

ತತೋ ನಿಕ್ಷಿಪ್ಯ ಮಕರಂ ಮತ್ಸ್ಯಾದೀಂಶ್ಚೈವ ಸರ್ವಶಃ ।
ಧೃತಾಂ ಚತುರ್ಭಿರ್ವಿಪ್ರೈಸ್ತು ವೇದವೇದಾಂಗಪಾರಗೈಃ ॥ ೧೭೭ ॥

ಮಹಾನದೀಜಲೋಪೇತಾಂ ದಧ್ಯಕ್ಷತವಿಭೂಷಿತಾಂ ।
ಉತ್ತರಾಭಿಮುಖಾಂ ನ್ಯುಬ್ಜಾಂ ಜಲಮಧ್ಯೇ ತು ಕಾರಯೇತ್ ॥ ೧೭೮ ॥

ಅಥರ್ವಣೇನ ಸುಸ್ನಾತಾಂ ಪುನರ್ಮಾಯಾಂ ತಥೈವ ಚ ।
ಆಪೋ ಹಿಷ್ಠೇತಿಮಂತ್ರೇಣ ಕ್ಷಿಪ್ತ್ವಾಗತ್ಯ ಚ ಮಂಡಪಂ ॥ ೧೭೯ ॥

ಪೂಜಯಿತ್ವಾ ಸದಸ್ಯಾನ್ವೈ ಬಲಿಂ ದದ್ಯಾತ್ಸಮಂತತಃ ।
ಪುನರ್ದಿನಾನಿ ಹೋತವ್ಯಂ ಚತ್ವಾರಿ ರಾಜಸತ್ತಮ ॥ ೧೮೦ ॥

ಚತುರ್ಥೀಕರ್ಮ ಕರ್ತವ್ಯಂ ದೇಯಂ ತತ್ರಾಪಿ ಶಕ್ತಿತಃ ।
ಕೃತ್ವಾ ತು ಯಜ್ಞಪಾತ್ರಾಣಿ ಯಜ್ಞೋಪಕರಣಾನಿ ಚ ॥ ೧೮೧ ॥

೧೭೬—೧೭೮. ಒಂದು ಚಿನ್ನದ ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿ ಪಂಚರತ್ನಗಳನ್ನು ಹಾಕಿ, ಅದರೊಳಕ್ಕೆ ಆ ಮೀನು ಮೊಸಳೆ ಮುಂತಾದುವನ್ನು ಹಾಕಿ, ಆ ಪಾತ್ರೆಯನ್ನು ವೇದಪಾರಗರಾದ ನಾಲ್ಕುಜನ ಬ್ರಾಹ್ಮಣರು ಹಿಡಿದು ಕೊಂಡು, ಆ ಪಾತ್ರೆಯಲ್ಲಿ ಮಹಾನದಿಯ ನೀರನ್ನೂ, ಮೊಸರು, ಅಕ್ಷತೆಗಳನ್ನೂ ಹಾಕಿ, ನೀರಿಗೆ ಹೋಗಿ ಅಲ್ಲಿ ಉತ್ತರಾಭಿಮುಖವಾಗಿ ನಿಂತು ನೀರಿನ ಮಧ್ಯೆ ಬಗ್ಗಿ ಕೊಂಡು ಹಳ್ಳಕ್ಕೆ ಬಿಡಬೇಕು.

೧೭೯-೧೮೦. ಅಥರ್ವಣಿಕ ಮಂತ್ರಗಳಿಂದ ಅವುಗಳಲ್ಲಿ ಯಾವುದಾದರೂ ಈಚೆಗೆ ಬಿದ್ದಿದ್ದರೆ ಅವನ್ನು ಮತ್ತೆ ಸ್ನಾನಮಾಡಿಸಿ ಆಪೋಹಿಷ್ಠ ಎಂಬ ಮಂತ್ರದಿಂದ ನೀರಿನಲ್ಲಿ ಮತ್ತೆ ಹಾಕಬೇಕು. ಅನಂತರ ಮಂಡಪಕ್ಕೆ ಬಂದು ಪೂಜೆಮಾಡಿ ಎಲ್ಲಾ ಕಡೆಗೆ ಬಲಿಯನ್ನು ಹಾಕಬೇಕು. ಅನಂತರ ನಾಲ್ಕು ದಿನಗಳವರೆಗೂ ಹೋಮ ಮಾಡಬೇಕು.

೧೮೧. ನಾಲ್ಕನೆಯ ದಿನ ಅವಭೃತ ಕರ್ಮವನ್ನು ಮಾಡಬೇಕು. ಆಗಲೂ ಶಕ್ತ್ಯನುಸಾರ ದಾನಮಾಡಬೇಕು. ಯಜ್ಞಪಾತ್ರೆಗಳನ್ನೂ ಯಜ್ಞೋಪಕರಣ

**ಋತ್ವಿಗ್ಭ್ಯಶ್ಚ ಸಮಂ ದದ್ಯಾನ್ಮಂಡಪಂ ವಿಭಜೇತ್ಪುನಃ ।**
**ಹೇಮಪಾತ್ರಂ ಚ ಶಯ್ಯಾಂ ಚ ವಿಪ್ರಾಯ ಚ ನಿವೇದಯೇತ್ ॥ ೧೮೨ ॥**

**ತತಃ ಸಹಸ್ರಂ ವಿಪ್ರಾಣಾಮಥವಾಷ್ಟಶತಂ ತಥಾ ।**
**ಭೋಜಯೇಚ್ಚ ಯಥಾಶಕ್ತಿ ಪಂಚಾಶದ್ವಾಥ ವಿಂಶತಿಂ ॥ ೧೮೩ ॥**

**ಏವಮೇಷ ಪುರಾಣೇಷು ತಡಾಗವಿಧಿರುಚ್ಯತೇ ।**
**ಕೂಪವಾಪೀಷು ಸರ್ವಾಸು ತಥಾ ಪುಷ್ಕರಿಣೀಷು ಚ ॥ ೧೮೪ ॥**

**ಏಷ ಏವ ವಿಧಿರ್ದೃಷ್ಟಃ ಪ್ರತಿಷ್ಠಾಸು ತಥೈವ ಚ ।**
**ಮಂತ್ರತಸ್ತು ವಿಶೇಷಃ ಸ್ಯಾತ್ಪ್ರಾಸಾದೋದ್ಯಾನಭೂಮಿಷು ॥ ೧೮೫ ॥**

**ಅಯಂ ತ್ವಶಕ್ತಾವರ್ಧೇನ ವಿಧಿರ್ದೃಷ್ಟಃ ಸ್ವಯಂಭುವಾ ।**
**ಅನ್ಯೇಷ್ವೇಕಾಗ್ನಿವತ್ಕಾರ್ಯಂ ವಿತ್ತಶಾಠ್ಯಾದೃತೇ ನೃಣಾಂ ॥ ೧೮೬ ॥**

---

ಗಳನ್ನೂ ಋತ್ವಿಕ್ಕುಗಳಿಗೆ ಕೊಡಬೇಕು. ಮಂಟಪವನ್ನು ಎಲ್ಲರಿಗೂ ಭಾಗ ಮಾಡಬೇಕು.

೧೮೨. ಚಿನ್ನದ ಪಾತ್ರೆ, ಹಾಸಿಗೆಗಳನ್ನು ಒಬ್ಬ ಬ್ರಾಹ್ಮಣನಿಗೆ ಕೊಡಬೇಕು.

೧೮೩. ಅನಂತರ ಸಾವಿರ ಜನ ಬ್ರಾಹ್ಮಣರಿಗೆ ಇಲ್ಲವೇ ಎಂಟುನೂರು ಜನಕ್ಕೆ ಅದಕ್ಕೂ ಶಕ್ತಿಯಿಲ್ಲದಿದ್ದರೆ ಐವತ್ತು ಜನರಿಗೆ ಅದೂ ಆಗದಿದ್ದರೆ ಇಪ್ಪತ್ತು ಜನಕ್ಕಾದರೂ ಸಂತರ್ಪಣೆಮಾಡಿಸಿ ಊಟಮಾಡಬೇಕು.

೧೮೪-೧೮೫. ಕೆರೆಯನ್ನು ಕಟ್ಟುವುದಕ್ಕೆ ಪುರಾಣಗಳಲ್ಲಿ ಇದೇ ವಿಧಿಯು ಹೇಳಲ್ಪಟ್ಟಿದೆ. ಭಾವಿ, ಕೊಳ, ದೊಡ್ಡಕೊಳ ಇವು ಯಾವುವನ್ನು ನಿರ್ಮಿಸಿದರೂ ಇವುಗಳ ಇದೇ ವಿಧಿಯಾದರೂ ಮಂತ್ರಗಳಲ್ಲಿ ವ್ಯತ್ಯಾಸವು ಇರುತ್ತದೆ.

೧೮೬. ಶಕ್ತಿಯಿಲ್ಲದಿದ್ದರೆ ಇದರಲ್ಲಿ ಅರ್ಧವನ್ನಾದರೂ ಮಾಡಬೇಕೆಂದು ಬ್ರಹ್ಮನು ಹೇಳಿದ್ದಾನೆ. ಮಿಕ್ಕ ವಿಷಯಗಳಲ್ಲಿ ಏಕಾಗ್ನಿಕಾಂಡದಲ್ಲಿ ಹೇಳಿರುವಂತೆ ಮಾಡಬೇಕು. ಲೋಭಿತನವನ್ನು ಮಾಡಬಾರದು.

ಪ್ರಾವೃಟ್ಕಾಲಸ್ಥಿತಂ ತೋಯಮಗ್ನಿಷ್ಟೋಮಶತಂ ಸ್ಮೃತಂ ।
ಶರತ್ಕಾಲಸ್ಥಿತಂ ತೋಯಂ ತದುಕ್ತಫಲದಾಯಕಂ ॥ ೧೮೭ ॥

ವಾಜಪೇಯಾತಿರಾತ್ರಾಭ್ಯಾಂ ಹೇಮಂತೇ ಶಿಶಿರೇ ಸ್ಥಿತಂ ।
ಅಶ್ವಮೇಧಸಮಂ ಪ್ರಾಹುರ್ವಸಂತಸಮಯಸ್ಥಿತಂ ।
ಗ್ರೀಷ್ಮೇಽಪಿ ಯತ್ಸ್ಥಿತಂ ತೋಯಂ ರಾಜಸೂಯಫಲಾಧಿಕಂ ॥ ೧೮೮ ॥

ಏತಾನ್ಮಹಾರಾಜ ವಿಶೇಷಧರ್ಮಾ-
ನ್ಕರೋತಿ ಚೋರ್ವ್ಯಾಮಥ ಶುದ್ಧಬುದ್ಧಿಃ ।
ಸ ಯಾತಿ ಬ್ರಹ್ಮಾಲಯಮೇವ ಶುದ್ಧಃ
ಕಲ್ಪಾನನೇಕಾನ್ದಿವಿ ಮೋದತೇ ಚ ॥ ೧೮೯ ॥

ಅನೇಕಲೋಕಾನ್ವಿಚರನ್ಸ್ವರಾದೀ-
ನ್ಭುಕ್ತ್ವಾ ಪರಾರ್ಧದ್ವಯಮಂಗನಾಭಿಃ ।
ಸಹೈವ ವಿಷ್ಣೋಃ ಪರಮಂ ಪದಂ ಯ-
ತ್ಪ್ರಾಪ್ನೋತಿ ತದ್ಯೋಗಬಲೇನ ಭೂಯಃ ॥ ೧೯೦ ॥

---

೧೮೭-೧೮೮. ಮಳೆಗಾಲದಲ್ಲಿ ಮಾತ್ರ ನೀರಿರುವುದಾದರೆ ನೂರು ಅಗ್ನಿಷ್ಟೋಮಗಳ ಫಲ ಬರುತ್ತದೆ. ಶರದೃತುವಿನಲ್ಲಿ ನೀರಿರುವಂತಿದ್ದರೆ ಅದೂ ನೂರು ಅಗ್ನಿಷ್ಟೋಮಗಳ ಫಲವನ್ನು ಕೊಡುತ್ತದೆ. ಹಿಮಂತಋತುವಿನಲ್ಲಿ ನೀರು ನಿಲ್ಲುವುದಾದರೆ ವಾಜಪೇಯ ಅತಿರಾತ್ರಗಳ ಫಲವನ್ನು ಕೊಡುತ್ತದೆ. ವಸಂತದಲ್ಲಿ ನೀರಿರುವುದಾದರೆ ಅಶ್ವಮೇಧಯಾಗ ಫಲವನ್ನು ಕೊಡುತ್ತದೆ. ಗ್ರೀಷ್ಮಕಾಲದಲ್ಲಿ ನೀರಿರುವುದಾದರೆ ರಾಜಸೂಯಯಾಗದ ಫಲಕ್ಕಿಂತಲೂ ಹೆಚ್ಚು ಫಲವನ್ನು ಕೊಡುತ್ತದೆ.

೧೮೯. ಎಲೈ ದೊರೆಯೇ, ಶುದ್ಧ ಮನಸ್ಸುಳ್ಳ ಯಾವನು ಈ ವಿಶೇಷ ಧರ್ಮಗಳನ್ನು ಮಾಡುತ್ತಾನೆಯೋ ಅವನು ಶುದ್ಧವಾಗಿ ಬ್ರಹ್ಮಲೋಕವನ್ನು ಹೊಂದುತ್ತಾನೆ ಅನೇಕ ಕಲ್ಪಗಳ ವರಿಗೂ ಅಲ್ಲಿ ಸುಖಿಸುತ್ತಾನೆ.

೧೯೦. ಸ್ವರ್ಗವೇ ಮೊಂತಾದ ಅನೇಕ ಲೋಕಗಳಲ್ಲಿ ಕಾಮಿನಿಯರೊಡನೆ ಸಂಚರಿಸುತ್ತ ಪರಾರ್ಧ ಸಂಖ್ಯೆಯ ಕಾಲಗಳವರೆಗೂ ಇದ್ದು ತನ್ನ ಯೋಗಬಲದಿಂದ ಮತ್ತೆ ವಿಷ್ಣುಪಾದವನ್ನು ಹೊಂದುತ್ತಾನೆ.

॥ ಭೀಷ್ಮ ಉವಾಚ ॥

ಪಾದಾಪಾನಾಂ ವಿಧಿಂ ಬ್ರಹ್ಮನ್ಯಥಾವದ್ವಿಸ್ತರಾದ್ವದ ।
ವಿಧಿನಾ ಯೇನ ಕರ್ತವ್ಯಂ ಪಾದಪಾರೋಪಣಂ ಬುಧೈಃ ।
ಯೇ ಚ ಲೋಕಾಃ ಸ್ಮೃತಾ ಯೇಷಾಂ ತಾನಿದಾನೀಂ ವದಸ್ವ ಮೇ
॥ ೧೯೧ ॥

॥ ಪುಲಸ್ತ್ಯ ಉವಾಚ ॥

ಪಾದಪಾನಾಂ ವಿಧಿಂ ವಕ್ಷ್ಯೇ ತಥೈವೋದ್ಯಾನಭೂಮಿಷು ।
ತಡಾಗವಿಧಿವತ್ಸರ್ವಂ ಸಮಾಪ್ಯ ಜಗತೀಶ್ವರ ॥ ೧೯೨ ॥

ಋತ್ವಿಙ್ಮಂಡಪಸಂಭಾರಮಾಚಾರ್ಯಂ ಚಾಪಿ ತದ್ವಿಧಂ ।
ಪೂಜಯೇದ್ಬ್ರಾಹ್ಮಣಾಂಸ್ತದ್ವದ್ಧೇಮವಸ್ತ್ರಾನುಲೇಪನೈಃ ॥ ೧೯೩ ॥

ಸರ್ವೌಷಧ್ಯುದಕೈಃ ಸಿಕ್ತಾನ್ದಧ್ಯಕ್ಷತವಿಭೂಷಿತಾನ್ ।
ವೃಕ್ಷಾನ್ಮಾಲ್ಯೈರಲಂಕೃತ್ಯ ವಾಸೋಭಿರಭಿವೇಷ್ಟಯೇತ್ ॥ ೧೯೪ ॥

---

೧೯೧. ಭೀಷ್ಮನು ಹೇಳಿದನು:—ಪಾದಪಗಳ ವಿಧಿಯನ್ನು ವಿಸ್ತಾರವಾಗಿ ನನಗೆ ಹೇಳು. ಯಾವ ವಿಧಿಯಿಂದ ಮರಗಳನ್ನು ನೆಡಬೇಕು ? ಅವರಿಗೆ ಯಾವ ಯಾವ ಪುಣ್ಯಲೋಕಗಳು ಸಿಕ್ಕುತ್ತವೆ, ತಿಳಿಸು.

೧೯೨. ಪುಲಸ್ತ್ಯನು ಹೇಳಿದನು:—ಉದ್ಯಾನಗಳಲ್ಲಿ ಮರಗಳನ್ನು ನೆಡುವ ವಿಧಿಯನ್ನು ಹೇಳುತ್ತೇನೆ. ಎಲ್ಲವನ್ನೂ ತಟಾಕ ವಿಧಿಯಂತೆ ಮಾಡಬೇಕು. ಇದರಲ್ಲಿ ಋತ್ವಿಕ್ಕು ಮಂಡಪಗಳ ಸಾಮಾನೆಂದೂ, ಆಚಾರ್ಯನೆಂದೂ ಎರಡು ವಿಧವು.

೧೯೩. ಅದರಂತೆಯೇ ಬ್ರಾಹ್ಮಣರಿಗೆ ದಕ್ಷಿಣೆ, ಬಟ್ಟೆ, ಗಂಧ, ಹೂಗಳನ್ನು ಕೊಟ್ಟು ಪೂಜಿಸಬೇಕು. ಎಲ್ಲಾ ಮೂಲಿಕೆಗಳನ್ನೂ ಹಾಕಿದ ನೀರಿನಿಂದ ಸ್ನಾನ ಮಾಡಿಸಬೇಕು. ಮತ್ತು ಅಕ್ಷತಾದಿಗಳಿಂದ ಅಲಂಕರಿಸಬೇಕು.

೧೯೪—೧೯೬. ಮರಗಳಿಗೆ ಮಾಲೆಗಳಿಂದ ಅಲಂಕಾರಮಾಡಿ ಬಟ್ಟೆಗಳನ್ನು ಸುತ್ತಬೇಕು. ಚಿನ್ನದ ಸೂಜಿಯಿಂದ ಎಲ್ಲಕ್ಕೂ ಕಿವಿಯನ್ನು ಚುಚ್ಚಬೇಕು.

ಸೂಚ್ಯಾ ಸೌವರ್ಣಯಾ ಕಾರ್ಯಂ ಸರ್ವೇಷಾಂ ಕರ್ಣವೇಧನಂ ।
ಅಂಜನಂ ಚಾಪಿ ಕರ್ತವ್ಯಂ ತದ್ವದ್ಧೇಮಶಲಾಕಯಾ ॥ ೧೯೫ ॥

ಫಲಾನಿ ಸಪ್ತ ಚಾಷ್ಟೌ ವಾ ಕಲಧೌತಾನಿ ಕಾರಯೇತ್ ।
ಪ್ರತ್ಯೇಕಂ ಸರ್ವವೃಕ್ಷಾಣಾಂ ವೇದ್ಯಾಂ ತಾನಧಿವಾಸಯೇತ್ ॥ ೧೯೬ ॥

ಧೂಪೋತ್ರ ಗುಗ್ಗುಲಃ ಶ್ರೇಷ್ಠಸ್ತಾಮ್ರಪಾತ್ರೇಷ್ವಧಿಷ್ಠಿತಾನ್ ।
ಸರ್ವಧಾನ್ಯವೃತಾನ್ಕೃತ್ವಾ ವಸ್ತ್ರಗಂಧಾನುಲೇಪನೈಃ ॥ ೧೯೭ ॥

ಕುಂಭಾನ್ಸರ್ವೇಷು ವೃಕ್ಷೇಷು ಸ್ಥಾಪಯಿತ್ವಾವನೀಶ್ವರ ।
ಪೂಜಯಿತ್ವಾ ದಿನಾಂತೇ ತು ಕೃತ್ವಾ ಬಲಿನಿವೇದನಂ ॥ ೧೯೮ ॥

ಯಥಾವಲ್ಲೋಕಪಾಲಾನಾಮಿಂದ್ರಾದೀನಾಂ ವಿಧಾನತಃ ।
ವನಸ್ಪತೇರಧಿವಾಸ ಏವಂ ಕಾರ್ಯೋ ದ್ವಿಜಾತಿಭಿಃ ॥ ೧೯೯ ॥

ತತಃ ಶುಕ್ಲಾಂಬರಧರಾಂ ಸೌವರ್ಣಕೃತಶೇಖರಾಂ ।
ಸಕಾಂಸ್ಯದೋಹಾಂ ಸೌವರ್ಣಶೃಂಗಾಭ್ಯಾಮತಿಶಾಲಿನೀಂ ॥ ೨೦೦ ॥

---

ಚಿನ್ನದ ಸಲಾಕಿಯಿಂದ ಕಣ್ಣುಕಪ್ಪನ್ನು ಹಚ್ಚಬೇಕು. ಏಳೋ, ಎಂಟೋ ಚಿನ್ನದ ಫಲಗಳನ್ನು ಮಾಡಿಡಬೇಕು. ಎಲ್ಲಾ ಮರಗಳಿಗೂ ವೇದಿಕೆಯನ್ನು ಮಾಡಿರಬೇಕು.

೧೯೭. ಗುಗ್ಗುಲ ಧೂಪವು ಶ್ರೇಷ್ಠವು. ಪಾತ್ರೆಗಳಲ್ಲಿ ಎಲ್ಲಾ ಧಾನ್ಯಗಳನ್ನೂ ಇಟ್ಟು ವಸ್ತ್ರ, ಗಂಧ, ಹೂಗಳಿಂದ ಪೂಜಿಸಬೇಕು.

೧೯೮. ಎಲೈ ಭೀಷ್ಮನೇ, ಎಲ್ಲಾ ಮರಗಳ ಬುಡದಲ್ಲಿಯೂ ಒಂದೊಂದು ಕುಂಭವನ್ನಿಡಬೇಕು. ಸಾಯಂಕಾಲದಲ್ಲಿ ಪೂಜೆಮಾಡಿ ಬಲಿಯನ್ನು ಹಾಕಿ ನಿವೇದಿಸಬೇಕು.

೧೯೯. ಲೋಕಪಾಲಕರಾದ ಇಂದ್ರಾದಿಗಳನ್ನು ವಿಧಿವತ್ತಾಗಿ ಆವಾಹನೆ ಮಾಡಬೇಕು. ಈ ರೀತಿಯಾಗಿ ಆ ವೃಕ್ಷಗಳಿಗೆ ಅಧಿವಾಸವನ್ನು ಮಾಡಬೇಕು.

೨೦೦. ಆಮೇಲೆ ಬಿಳಿಯಬಟ್ಟೆಯನ್ನು ಹೊದ್ದಿಸಿರುವ, ತಲೆಗೆ ಚಿನ್ನದ ಒಡವೆಯನ್ನು ಕಟ್ಟಿರುವ, ಕಂಚಿನ ಕರೆಯುವ ಪಾತ್ರೆಯುಳ್ಳ, ಕೊಂಬುಗಳು ಚಿನ್ನಾಗಿರುವ ಕರೆಯುವ ಹಸುವನ್ನು ಆ ಮರಗಳ ಮಧ್ಯದಲ್ಲಿ ಉತ್ತರಮುಖವಾಗಿ ಬಿಡಬೇಕು.

ಪಯಸ್ವಿನೀಂ ವೃಕ್ಷಮಧ್ಯಾದುತ್ಸೃಜೇದ್ಗಾಮುದಙ್ಮುಖೀಂ ।
ತತೋಽಭಿಷೇಕಮಂತ್ರೇಣ ವಾದ್ಯಮಂಗಲಗೀತಕೈಃ ॥ ೨೦೧ ॥

ಋಗ್ಯಜುಃಸಾಮಮಂತ್ರೈಶ್ಚ ವಾರುಣೈರಭಿತಸ್ತದಾ ।
ತೈರೇವ ಕುಂಭೈಃ ಸ್ನಪನಂ ಕುರ್ಯುರ್ಬ್ರಾಹ್ಮಣಪುಂಗವಾಃ ॥ ೨೦೨ ॥

ಸ್ನಾತಃ ಶುಕ್ಲಾಂಬರಸ್ತದ್ವದ್ಯಜಮಾನೋಽಭಿಪೂಜಯೇತ್ ।
ಗೋಭಿರ್ವಿಭವತಃ ಸರ್ವಾನೃತ್ವಿಜಃ ಸುಸಮಾಹಿತಾನ್ ॥ ೨೦೩ ॥

ಹೇಮಸೂತ್ರೈಃ ಸಕಟಕೈರಂಗುಲೀಯಪವಿತ್ರಕೈಃ ।
ವಾಸೋಭಿಃ ಶಯನೀಯೈಶ್ಚ ತಥೋಪಸ್ಕರಪಾದುಕೈಃ ॥ ೨೦೪ ॥

ಕ್ಷೀರಾಭಿಷೇಚನಂ ಕುರ್ಯಾದ್ಯಾವದ್ದಿನಚತುಷ್ಟಯಂ ।
ಹೋಮಶ್ಚ ಸರ್ಪಿಷಾ ಕಾರ್ಯೋ ಯವೈಃ ಕೃಷ್ಣತಿಲೈರಪಿ ॥ ೨೦೫ ॥

ಪಾಲಾಶಸಮಿಧಃ ಶಸ್ತಾಶ್ಚತುರ್ಥೇಽಹ್ನಿ ತಥೋತ್ಸವಃ ।
ದಕ್ಷಿಣಾ ಚ ಪುನಸ್ತದ್ವದ್ದೇಯಾ ತತ್ರಾಪಿ ಶಕ್ತಿತಃ ॥ ೨೦೬ ॥

---

೨೦೧-೨೦೨. ಆಮೇಲೆ ವಾದ್ಯಗಳು ಮೊಳಗುತ್ತಿರಲು ಋಗ್ಯಜುಸ್ಸಾಮ ಮಂತ್ರಗಳ ಅಭಿಷೇಕ ಮಂತ್ರಗಳಿಂದಲೂ, ವರುಣ ದೇವತಾಕ ಮಂತ್ರಗಳಿಂದಲೂ, ಆ ಕಲಶಗಳಿಂದ ಬ್ರಾಹ್ಮಣರು ಸ್ನಾನಮಾಡಬೇಕು.

೨೦೩-೨೦೪. ಯಜಮಾನನೂ ಕೂಡ ಸ್ನಾನಮಾಡಿ ಮಡಿಬಟ್ಟೆಯನ್ನುಟ್ಟು ಋತ್ವಿಜರನ್ನು ಗೋಗಳಿಂದಲೂ, ಚಿನ್ನದ ಜನಿವಾರ, ಬಳೆ, ಪವಿತ್ರದುಂಗುರ, ಬಟ್ಟೆ, ಹಾಸಿಗೆ, ಆದಕ್ಕೆ ಬೇಕಾದ ಇತರ ಪದಾರ್ಥಗಳು ಇವನ್ನು ಕೊಟ್ಟು ಪೂಜಿಸಬೇಕು. ನಾಲ್ಕು ದಿನಗಳವರೆಗೂ ಮರಗಳಿಗೆ ಹಾಲನೆರೆಯುತ್ತಿರಬೇಕು.

೨೦೫-೨೦೬. ತುಪ್ಪ, ಯವ, ಕರಿಎಳ್ಳು, ಮುತ್ತುಗದ ಕಡ್ಡಿ, ಇವುಗಳಿಂದ ಹೋಮಮಾಡಬೇಕು. ನಾಲ್ಕನೆಯ ದಿನ ಉತ್ಸವವನ್ನು ಮಾಡಬೇಕು. ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು.

ಯದ್ಯದಿಷ್ಟತಮಂ ಕಿಂಚಿತ್ತತ್ತದ್ದದ್ಯಾದಮತ್ಸರೀ ।
ಆಚಾರ್ಯೇ ದ್ವಿಗುಣಂ ದತ್ವಾ ಪ್ರಣಿಪತ್ಯ ಸಮಾಪಯೇತ್ ॥ ೨೦೭ ॥

ಅನೇನ ವಿಧಿನಾ ಯಸ್ತು ಕುರ್ಯಾದ್ವೃಕ್ಷೋತ್ಸವಂ ಬುಧಃ ।
ಸರ್ವಾನ್ಕಾಮಾನವಾಪ್ನೋತಿ ಫಲಂ ಚಾನಂತಮಶ್ನುತೇ ॥ ೨೦೮ ॥

ಯಶ್ಚೈವಮಪಿ ರಾಜೇಂದ್ರ ವೃಕ್ಷಂ ಸಂಸ್ಥಾಪಯೇದ್ಬುಧಃ ।
ಸೋಽಪಿ ಸ್ವರ್ಗೇ ವಸೇದ್ರಾಜನ್ಯಾವದಿಂದ್ರಾಯುತತ್ರಯಂ ॥ ೨೦೯ ॥

ಭೂತಾನ್ಭವ್ಯಾಂಶ್ಚ ಮನುಜಾಂಸ್ತಾರಯೇದ್ರೋಮಸಂಮಿತಾನ್ ।
ಪರಮಾಂ ಸಿದ್ಧಿಮಾಪ್ನೋತಿ ಪುನರಾವೃತ್ತಿದುರ್ಲಭಾಂ ॥ ೨೧೦ ॥

ಯ ಇದಂ ಶೃಣುಯಾನ್ನಿತ್ಯಂ ಶ್ರಾವಯೇದ್ವಾಽಪಿ ಮಾನವಃ ।
ಸೋಽಪಿ ಸಂಪೂಜ್ಯತೇ ದೇವೈರ್ಬ್ರಹ್ಮಲೋಕೇ ಮಹೀಯತೇ ॥ ೨೧೧ ॥

---

೨೦೭. ತನಗೆ ಯಾವಯಾವುದು ಇಷ್ಟವಾಗಿದೆಯೋ ಅವೆಲ್ಲವನ್ನೂ ಸ್ವಲ್ಪವೂ ಹೊಟ್ಟೆಕಿಚ್ಚಿಲ್ಲದೆ ದಾನಮಾಡಬೇಕು. ಆಚಾರ್ಯನಿಗೆ ಎರಡರಷ್ಟನ್ನು ಕೊಟ್ಟು ಪೂಜೆಯನ್ನು ಮುಗಿಸಬೇಕು.

೨೦೮. ಈ ವಿಧಿಯಿಂದ ವೃಕ್ಷೋತ್ಸವವನ್ನು ಮಾಡಿದವನು ತನ್ನ ಇಷ್ಟವೆಲ್ಲ ವನ್ನೂ ಹೊಂದಿ ಅನಂತವಾದ ಫಲವನ್ನು ಹೊಂದುತ್ತಾನೆ.

೨೦೯. ಯಾವನು ಈರೀತಿ ವೃಕ್ಷಗಳನ್ನು ನೆಡುತ್ತಾನೆಯೋ ಅವನು ಸಾವಿರ ಇಂದ್ರರ ಕಾಲದವರೆಗೂ ಸ್ವರ್ಗದಲ್ಲಿರುತ್ತಾನೆ.

೨೧೦. ತನ್ನ ಹಿಂದಿನ ಮುಂದಿನ ಮನುಷ್ಯರನ್ನು, ತನ್ನ ಮೈಯ್ಯಲ್ಲಿರುವ ರೋಮಗಳಷ್ಟು ಜನರನ್ನು ಉದ್ಧಾರಮಾಡುತ್ತಾನೆ. ಪುನರಾವೃತ್ತಿಯಿಲ್ಲದ ಶಾಶ್ವತ ಲೋಕಗಳನ್ನು ಹೊಂದುತ್ತಾನೆ.

೨೧೧. ಇದನ್ನು ಕೇಳಿದವನೂ, ಹೇಳಿದವನೂ ದೇವತೆಗಳಿಂದ ಪೂಜಿಸಲ್ಪಟ್ಟು ಬ್ರಹ್ಮಲೋಕದಲ್ಲಿ ವಾಸಿಸುತ್ತಾರೆ.

**ಅಪುತ್ರಸ್ಯ ಚ ಪುತ್ರಿತ್ವಂ ಪಾದಪಾ ಇಹ ಕುರ್ವತೇ ।**
**ತೀರ್ಥೇಷು ಪಿಂಡದಾನಾದೀನ್ರೋಪಕಾಣಾಂ ದದಂತಿ ತೇ ॥ ೧೧೨ ॥**

**ಯತ್ನೇನಾಪಿ ಚ ರಾಜೇಂದ್ರ ಅಶ್ವತ್ಥಾರೋಪಣಂ ಕುರು ।**
**ಸ ತೇ ಪುತ್ರಸಹಸ್ರಾಣಾಮೇಕ ಏವ ಕರಿಷ್ಯತಿ ॥ ೨೧೩ ॥**

**ಧನೀ ಚಾಶ್ವತ್ಥವೃಕ್ಷೇಣ ಅಶೋಕಃ ಶೋಕನಾಶನಃ ।**
**ಪ್ಲಕ್ಷೋ ಯಜ್ಞಪ್ರದಃ ಪ್ರೋಕ್ತೋ ನಿಂಬ ಆಯುಷ್ಪ್ರದಃ ಸ್ಮೃತಃ ॥೨೧೪॥**

**ಜಂಬುಕೀ ಕನ್ಯದಾ ಪ್ರೋಕ್ತಾ ಭಾರ್ಯಾದಾ ದಾಡಿಮೀ ತಥಾ ।**
**ಅಶ್ವತ್ಥೋ ರೋಗನಾಶಾಯ ಪಲಾಶೋ ಬ್ರಹ್ಮದಸ್ತಥಾ ॥ ೨೧೫ ॥**

**ಪ್ರೇತತ್ವಂ ಜಾಯತೇ ಪುಂಸೋ ರೋಪಯೇದ್ಯೋ ವಿಭೀತಕಂ ।**
**ಅಂಕೋಲೇ ಕುಲವೃದ್ಧಿಸ್ತು ಖಾದಿರೇ ಚಾಪ್ಯರೋಗತಾ ॥ ೨೧೬ ॥**

**ನಿಂಬಪ್ರರೋಹಕಾಣಾಂ ತು ತೇಷಾಂ ತುಷ್ಯೇದ್ದಿವಾಕರಃ ।**
**ಶ್ರೀವೃಕ್ಷೇ ಶಂಕರೋ ದೇವಃ ಪಾಟಲಾಯಾಂ ತು ಪಾರ್ವತೀ ॥ ೨೧೭ ॥**

---

೨೧೨. ಮಕ್ಕಳಿಲ್ಲದವರಿಗೆ ಮಕ್ಕಳಫಲವನ್ನು ಮರಗಳು ಕೊಡುತ್ತವೆ. ಅವರು ಮರಗಳನ್ನೆಬ್ಬಿಸಿದವರಿಗೆ ಪಿಂಡದಾನವನ್ನು ಕೊಡುತ್ತಾರೆ.

೨೧೩. ಎಲ್ಲೈ ದೊರೆಯೇ ಪ್ರಯತ್ನಪಟ್ಟು ಅರಳಿಯ ಮರವನ್ನು ನೆಟ್ಟು ಎಬ್ಬಿಸು. ಆ ಮರವು ನಿನಗೆ ಸಾವಿರ ಮಕ್ಕಳು ಮಾಡುವ ಕೆಲಸವನ್ನು ಮಾಡುತ್ತದೆ.

೨೧೪-೨೧೫. ಅರಳಿ ಮರವನ್ನೆಬ್ಬಿಸುವುದರಿಂದ ಧನವುಳ್ಳವನೂ, ಅಶೋಕವನ್ನೆಬ್ಬಿಸುವುದರಿಂದ ಶೋಕನಾಶಕನೂ, ಆಗುತ್ತಾನೆ. ಬಸುರಿಯ ಮರವು ಯಜ್ಞದ ಫಲವನ್ನು ಕೊಡುತ್ತದೆ. ಬೇವಿನ ಮರವು ಆಯಸ್ಸನ್ನು ಕೊಡುತ್ತದೆ. ದಾಳಿಂಬೆಯು ಹೆಂಡತಿಯನ್ನು ಕೊಡುತ್ತದೆ. ಅಶ್ವತ್ಥವು ರೋಗವನ್ನು ನಾಶಮಾಡುತ್ತದೆ. ಮುತ್ತುಗವು ಬ್ರಹ್ಮವರ್ಚಸ್ಸನ್ನು ಕೊಡುತ್ತದೆ.

೨೧೬. ಗೇರು ಮರವನ್ನೆಬ್ಬಿಸಿದರೆ ಅವನಿಗೆ ಪ್ರೇತತ್ವವು ಬರುತ್ತದೆ. ಅಂಕೋಲೆಯು ಕುಲವನ್ನು ಬೆಳೆಸುತ್ತದೆ. ಕಗ್ಗಲಿಯು ರೋಗನಾಶಕವು.

೨೧೭-೨೨೧. ಬೇವಿನ ಮರವನ್ನು ಎಬ್ಬಿಸುವುದರಿಂದ ಸೂರ್ಯನೂ, ಬಿಲ್ವಪತ್ರವನ್ನು ಎಬ್ಬಿಸಿದರೆ ಶಂಕರನೂ, ಪಾದರಿಯನ್ನು ಎಬ್ಬಿಸಿದರೆ ಪಾರ್ವತಿಯೂ,

ಏಂಶಪಾಯಾಮಪ್ಸರಸಃ ಕುಂದೇ ಗಂಧರ್ವಸತ್ತಮಾಃ ।
ತಿಂತಿಡೀಕೇ ದಾಸವರ್ಗಾ ವಂಜುಲೋ ದಸ್ಯುದಸ್ತಥಾ ॥ ೨೧೮ ॥

ಪುಣ್ಯಪ್ರದಃ ಶ್ರೀಪ್ರದಶ್ಚ ಚಂದನಃ ಪನಸಸ್ತಥಾ ।
ಸೌಭಾಗ್ಯದಶ್ಚಂಪಕಸ್ತು ಕರೀರಃ ಪಾರದಾರಿಕಃ ॥ ೨೧೯ ॥

ಅಪತ್ಯನಾಶಕಸ್ತಾಲೋ ಬಕುಲಃ ಕುಲವರ್ಧನಃ ।
ಬಹುಭಾರ್ಯಾ ನಾಲಿಕೇಲೀ ದ್ರಾಕ್ಷಾ ಸರ್ವಾಂಗಸುಂದರೀ ॥ ೨೨೦ ॥

ರತಿಪ್ರದಾ ತಥಾ ಕೋಲೀ ಕೇತಕೀ ಶತ್ರುನಾಶಿನೀ ।
ಏವಮಾದಿನಗಾಶ್ಚಾನ್ಯೇ ಯೇ ನೋಕ್ತಾಸ್ತೇಽಪಿ ದಾಯಕಾಃ ।
ಪ್ರತಿಷ್ಠಾಂ ತೇ ಗಮಿಷ್ಯಂತಿ ಯೇ ನರಾ ವೃಕ್ಷರೋಪಕಾಃ ॥ ೨೨೧ ॥

॥ ಪುಲಸ್ತ್ಯ ಉವಾಚ ॥

ತಥೈವಾನ್ಯತ್ಪ್ರವಕ್ಷ್ಯಾಮಿ ಸರ್ವಕಾಮಫಲಪ್ರದಂ ।
ಸೌಭಾಗ್ಯಶಯನಂ ನಾಮ ಯತ್ಪುರಾಣವಿದೋ ವಿದುಃ ॥ ೨೨೨ ॥

---

ಅಶೋಕವೃಕ್ಷದಿಂದ ಅಪ್ಸರಸ್ತ್ರೀಯರೂ, ಮಲ್ಲಿಗಿಡವನ್ನು ಎಬ್ಬಿಸುವುದರಿಂದ ಗಂಧರ್ವರೂ, ಹುಣಿಸೇ ಮರವನ್ನು ನೆಡುವುದರಿಂದ ದಾಸರಗುಂಪೂ, ತೃಪ್ತರಾಗುತ್ತಾರೆ ಹೆಬ್ಬೆಗಿಡವು ಕಳ್ಳತನವನ್ನೂ, ಚಂದನವು ಪುಣ್ಯವನ್ನೂ, ಹಲಸು ಸಂಪತ್ತನ್ನೂ, ಸಂಪಿಗೆಯು ಸೌಭಾಗ್ಯವನ್ನೂ, ಕಾರೀರವು ಪರದಾರಗಮನವನ್ನೂ ಉಂಟುಮಾಡುತ್ತದೆ. ತಾಲೆಯ ಮರವು ಮಕ್ಕಳ ನಾಶವನ್ನುಂಟುಮಾಡುತ್ತದೆ. ಪಗಡೆಯ ಮರವು ಕುಲವನ್ನು ವರ್ಧಿಸುತ್ತದೆ. ತೆಂಗಿನಮರವು ಭಾರ್ಯೆಯರನ್ನು ಕೊಡುತ್ತದೆ. ದ್ರಾಕ್ಷೆಯು ಸರ್ವಾಂಗಸುಂದರಿಯರನ್ನು ಕೊಡುತ್ತದೆ. ಯಗಚೀಗಿಡವು ರತಿಯನ್ನುಂಟುಮಾಡುತ್ತದೆ. ಕೇದಗೆಯು ಶತ್ರುಗಳನ್ನು ನಾಶಮಾಡುತ್ತದೆ. ಈ ರೀತಿ ನಾವು ಹೇಳದಿರುವ ಮರಗಳೂ ಅವುಗಳಿಗೆ ಯುಕ್ತವಾದುದನ್ನು ಕೊಡುತ್ತದೆ. ಆಯಾ ಮರಗಳನ್ನು ಬೆಳಸಿದವರು ಅವುಗಳನ್ನು ಹೊಂದುತ್ತಾರೆ.

೨೨೨. ಪುಲಸ್ತ್ಯನು ಹೇಳಿದನು :—ಹಿಂದೆ ಹೇಳಿದಂತೆಯೇ ಸರ್ವಕಾಮವನ್ನೂ ಕೊಡುವ ಸೌಭಾಗ್ಯಶಯನವೆಂಬ ವ್ರತವನ್ನು ಹೇಳುತ್ತೇನೆ.

ಪುರಾ ದಗ್ಧೇಷು ಲೋಕೇಷು ಭೂರ್ಭುವಃಸ್ವರ್ಮಹಾದಿಷು ।
ಸೌಭಾಗ್ಯಂ ಸರ್ವಭೂತಾನಾಮೇಕಸ್ಥಮಭವತ್ತದಾ ॥ ೨೨೩ ॥

ವೈಕುಂಠಂ ಸರ್ವಮಾಸಾದ್ಯ ವಿಷ್ಣೋರ್ವಕ್ಷಸ್ಥಲೇ ಸ್ಥಿತಂ ।
ತತಃ ಕಾಲೇನ ಮಹತಾ ಪುನಃ ಸರ್ಗವಿಧೌ ನೃಪ ॥ ೨೨೪ ॥

ಅಹಂಕಾರಾವೃತೇ ಲೋಕೇ ಪ್ರಧಾನಪುರುಷಾನ್ವಿತೇ ।
ಸ್ಪರ್ಧಾಯಾಂ ಚ ಸಮ್ಮುತ್ಥಾಯಾಂ ಕಮಲಾಸನಕೃಷ್ಣಯೋಃ ॥ ೨೨೫ ॥

ಪಿಂಗಾಕಾರಾ ಸಮುದ್ಭೂತಾ ವಹ್ನಿಜ್ವಾಲಾ ವಿಭೀಷಣಾ ।
ತಯಾಽಭಿತಪ್ತಸ್ಯ ಹರೇರ್ವಕ್ಷಸಸ್ತದ್ವಿನಿಃಸೃತಂ ॥ ೨೨೬ ॥

ಯದ್ವಕ್ಷಸ್ಥಲಮಾಶ್ರಿತ್ಯ ವಿಷ್ಣೌ ಸೌಭಾಗ್ಯಮಾಸ್ಥಿತಂ ।
ರಸಂ ರೂಪಂ ನ ತದ್ಯಾವದಾಪ್ನೋತಿ ವಸುಧಾತಲೇ ॥ ೨೨೭ ॥

ಉತ್ಕ್ಷಿಪ್ತಮಂತರಿಕ್ಷಂ ತು ಬ್ರಹ್ಮಪುತ್ರೇಣ ಧೀಮತಾ ।
ದಕ್ಷೇಣ ಪೀತಮಾತ್ರಂ ಚ ರೂಪಲಾವಣ್ಯಕಾರಕಂ ॥ ೨೨೮ ॥

---

೨೨೩. ಭೂ, ಭುವ, ಸ್ವ, ಮಹಾಲೋಕಗಳು ಸುಟ್ಟುಹೋಗಲಾಗಿ ಎಲ್ಲಾ ಪ್ರಾಣಿಗಳ ಸೌಭಾಗ್ಯಗಳು ಒಂದು ಕಡೆ ಸೇರಿದುವು.

೨೨೪—೨೨೬. ಆ ಸಂಪತ್ತೆಲ್ಲವೂ ವೈಕುಂಠಕ್ಕೆ ಹೋಗಿ ವಿಷ್ಣುವಿನ ವಕ್ಷಸ್ಥಳವನ್ನು ಹೊಂದಿತು. ಕೆಲವು ಕಾಲ ಕಳೆಯುತ್ತಲೂ ಮತ್ತೆ ಸೃಷ್ಟಿಕಾಲವು ಪ್ರಾಪ್ತವಾಗಲು ಪ್ರಧಾನ ಪುರುಷನಿಂದ ಕೂಡಿದ ಲೋಕವು ಅಹಂಕಾರದಿಂದ ಕೂಡಿಕೊಳ್ಳಲು ಬ್ರಹ್ಮ ವಿಷ್ಣುಗಳಿಗೆ ಸ್ಪರ್ಧೆಯುಂಟಾಗಲು ಆಗ ಒಂದು ಬೆಂಕಿಯ ಜ್ವಾಲೆಯು ಭಯಂಕರವಾಗಿ ಹೊಂಬಣ್ಣಕ್ಕೆ ಎದ್ದಿತು. ಆದರಿಂದ ಹರಿಗೆ ತಾಪವಾಗಲು ಆ ಸಂಪತ್ತು ಎದೆಯಿಂದ ಹೊರಗೆ ಬಂದಿತು.

೨೨೭—೨೨೯. ವಿಷ್ಣುವಿನ ವಕ್ಷಸ್ಥಳದಿಂದ ಹೊರಗೆ ಬಂದ ಸೌಭಾಗ್ಯವು ರಸ ರೂಪಗಳಾಗುವುದಕ್ಕೆ ಮೊದಲೇ ಬ್ರಹ್ಮಪುತ್ರನಾದ ದಕ್ಷನು ಅಂತರಿಕ್ಷವನ್ನು ಮೇಲಕ್ಕೆತ್ತಿ ರೂಪ ರಸಗಳನ್ನುಂಟುಮಾಡುವ ಆ ಸೌಭಾಗ್ಯವನ್ನು ಕುಡಿದನು. ಆಗ

ಬಲಂ ತೇಜೋ ಮಹಾಜಾತಂ ದಕ್ಷಸ್ಯ ಪರಮೇಷ್ಠಿನಃ ।
ಶೇಷಂ ಯದಪತದ್ಭೂಮಾವಷ್ಟಧಾ ತದ್ವ್ಯಜಾಯತ ॥ ೨೨೯ ॥

ತತಸ್ತ್ವೋಷಧಯೋ ಜಾತಾಃ ಸಪ್ತ ಸೌಭಾಗ್ಯದಾಯಿಕಾಃ ।
ಇಕ್ಷವಸ್ತರುರಾಜಶ್ಚ ನಿಷ್ಪಾವಾ ರಾಜಧಾನ್ಯಕಂ ॥ ೨೩೦ ॥

ವಿಕಾರವಚ್ಚ ಗೋಕ್ಷೀರಂ ಕುಸುಂಭಂ ಕುಸುಮಂ ತಥಾ ।
ಲವಣಂ ಚಾಷ್ಟಮಂ ತದ್ವತ್ಸೌಭಾಗ್ಯಾಷ್ಟಕಮುಚ್ಯತೇ ॥ ೨೩೧ ॥

ಪೀತಂ ಯದ್ಬ್ರಹ್ಮಪುತ್ರೇಣ ಯೋಗಜ್ಞಾನವಿದಾ ಪುರಾ ।
ಸುತಾ ಚ ಸಾಭವತ್ತಸ್ಯ ಯಾ ಸತೀತ್ಯಭಿಧೀಯತೇ ॥ ೨೩೨ ॥

ಲೋಕೇ ನೀಲೋತ್ಪಲನಿಭಾ ಲಲಿತಾ ತೇನ ಚೋಚ್ಯತೇ ।
ತ್ರೈಲೋಕ್ಯಸುಂದರೀಂ ದೇವೀಮುಪಯೇಮೇ ಪಿನಾಕಧೃಕ್ ॥ ೨೩೩ ॥

---

ಆ ದಕ್ಷಬ್ರಹ್ಮನಿಗೆ ಬಲವೂ, ತೇಜಸ್ಸೂ ಬಹುವಾಗಿ ಹೆಚ್ಚಿತು ಅವನು ಕುಡಿದು ಮಿಕ್ಕುದು ಭೂಮಿಯಲ್ಲಿ ಬಿದ್ದು ಎಂಟು ಭಾಗವಾಯಿತು.

೨೩೦-೨೩೧. ಅನಂತರ ಅವುಗಳಲ್ಲಿ ಏಳು ಸೌಭಾಗ್ಯವೆದ್ನು ಕೊಡುವ ಓಷಧಿಗಳಾದುವು. ಕಬ್ಬು, ಅಶ್ವತ್ಥ, ಅವರೆ, ಕೊತ್ತುಂಬರಿ, ಗೋಕ್ಷೀರ, ಕುಸುಂಬೆ ಲವಂಗದ ಹೂ ಈರೀತಿ ಓಷಧಿಗಳಾದುವು. ಎಂಟನೆಯ ಭಾಗವು ಉಪ್ಪಾಗಿ ಹುಟ್ಟಿತು. ಇವೇ ಎಂಟು ಸೌಭಾಗ್ಯಗಳು.

೨೩೨. ಯೋಗಜ್ಞಾನವನ್ನು ಬಲ್ಲ ಬ್ರಹ್ಮಪುತ್ರನಾದ ದಕ್ಷನು ಕುಡಿದ ಸೌಭಾಗ್ಯವು ಅವನ ಮಗಳಾಗಿ ಹುಟ್ಟಿದಳು. ಅವಳೇ ಸತೀ ಎಂಬ ಹೆಸರನ್ನು ಹೊಂದಿ ಪ್ರಸಿದ್ಧಳಾದಳು.

೨೩೩. ನೀಲೋತ್ಪಲದಂತೆ ಕಾಂತಿಯನ್ನೂ ಆಕೆಯು ಹೊಂದಿರುವುದರಿಂದ ಲಲಿತೆ ಎಂದು ಹೆಸರನ್ನು ಹೊಂದಿದಳು. ಆ ತ್ರಿಲೋಕಸುಂದರಿಯನ್ನು ಶಿವನು ಮದುವೆಯಾದನು.

ತ್ರಿವಿಶ್ವಸೌಭಾಗ್ಯಮಯೀ ಭುಕ್ತಿಮುಕ್ತಿಫಲಪ್ರದಾ ।
ತಾಮಾರಾಧ್ಯ ಪುಮಾನ್ಸ್ತ್ರೀ ವಾ ಕಿಂ ನ ವಿಂದತಿ ॥ ೨೩ ॥

॥ ಭೀಷ್ಮ ಉವಾಚ ॥

ಕಥಮಾರಾಧನಂ ತಸ್ಯಾ ಜಗದ್ಧಾತ್ರ್ಯಾ ಜನಾರ್ದನ ।
ಯದ್ವಿಧಾನಂ ಚ ಜಗತಃ ಶಾಂತಯೇ ತದ್ವದಸ್ವ ಮೇ ॥ ೨೩೫ ॥

॥ ಪುಲಸ್ತ್ಯ ಉವಾಚ ॥

ವಸಂತಮಾಸಮಾಸಾದ್ಯ ತೃತೀಯಾಯಾಂ ಜನಪ್ರಿಯಃ ।
ಶುಕ್ಲಪಕ್ಷಸ್ಯ ಪೂರ್ವಾಹ್ಣೇ ತಿಲಸ್ನಾನಂ ಸಮಾಚರೇತ್ ॥ ೨೩೬ ॥

ತಸ್ಮಿನ್ನಹನಿ ಸಾ ದೇವೀ ಕಿಲ ವಿಶ್ವಾತ್ಮನಾ ಸತೀ ।
ಪಾಣಿಗ್ರಹಣಕೈರ್ಮಂತ್ರೈರುದ್ವೋಢಾ ವರವರ್ಣಿನೀ ॥ ೨೩೭ ॥

ತಯಾ ಸಹೈವ ದೇವೇಶಂ ತೃತೀಯಾಯಾಮಥಾರ್ಚಯೇತ್ ।
ಫಲೈರ್ನಾನಾವಿಧೈರ್ದೀಪೈರ್ಧೂಪನೈವೇದ್ಯಸಂಯುತೈಃ ॥ ೨೩೮ ॥

---

೨೩೪. ಆಕೆಯು ಮೂರು ಲೋಕಕ್ಕೂ ಸುಂದರಿಯಾದಳು. ಭುಕ್ತಿ ಮುಕ್ತಿಗಳನ್ನು ಕೊಡತಕ್ಕವಳಾದಳು. ಗಂಡಸಾಗಲಿ ಹೆಂಗಸಾಗಲಿ ಆಕೆಯನ್ನು ಆರಾಧಿಸಿದ್ದರೆ ಎಲ್ಲವನ್ನೂ ಹೊಂದುತ್ತಾನೆ.

೨೩೫. ಭೀಷ್ಮನು ಹೇಳಿದನು:—ಆ ಜಗನ್ಮಾತೆಯನ್ನು ಪೂಜಿಸುವುದು ಹೇಗೆ? ಆಕೆಯ ಪೂಜಾ ವಿಧಾನವು ಜಗತ್ತಿಗೆ ಶಾಂತಿ ಎಂಬುದು ಹೇಗೆ? ನನಗೆ ಹೇಳು.

೨೩೬-೨೩೭. ಪುಲಸ್ತ್ಯನು ಹೇಳಿದನು:—ಚೈತ್ರ ಶುಕ್ಲ ತದಿಗೆಯ ದಿನ ಬೆಳಿಗ್ಗೆ ಎಳ್ಳೆಣ್ಣೆಯಿಂದ ಸ್ನಾನಮಾಡಬೇಕು. ಏಕೆಂದರೆ ಈ ದಿನವೇ ಈಶ್ವರನು ಮಂತ್ರಪೂರ್ವಕವಾಗಿ ಆಕೆಯನ್ನು ಮದುವೆಯಾದನು.

೨೩೮-೨೩೯. ಆ ಸತಿಯೊಡನೆಯೇ ಶಿವನನ್ನೂ, ಆ ತೃತೀಯೆಯ ದಿವಸ ಫಲಗಳಿಂದಲೂ, ಧೂಪ, ದೀಪ, ನೈವೇದ್ಯಗಳಿಂದಲೂ ಪೂಜಿಸಬೇಕು. ಪ್ರತಿಮೆ

ಪ್ರತಿಮಾಂ ಪಂಚಗವ್ಯೇನ ತಥಾ ಗಂಧೋದಕೇನ ಚ ।
ಸ್ನಾಪಯಿತ್ವಾಽರ್ಚಯೇದ್ಗೌರೀಮಿಂದುಶೇಖರಸಂಯುತಾಂ ॥ ೨೩೯ ॥

ನಮೋಽಸ್ತು ಪಾರ್ವತೀದೇವ್ಯೈ ಪಾದೌ ದೇವ್ಯಾಃ ಶಿವಸ್ಯ ಚ ।
ಶಿವಾಯೇತಿ ಚ ಸಂಕೀರ್ತ್ಯ ಜಯಾಯೈ ಗುಲ್ಫಯೋರ್ದ್ವಯೋಃ
॥ ೨೪೦ ॥

ತ್ರ್ಯಂಬಕಾಯೇತಿ ರುದ್ರಸ್ಯ ಭವಾನ್ಯೈ ಜಂಘಯೋರ್ದ್ವಯಂ ।
ಶಿರೋ ಭದ್ರೇಶ್ವರಾಯೇತಿ ವಿಜಯಾಯೈ ಚ ಜಾನುನೀ ॥ ೨೪೧ ॥

ಸಂಕೀರ್ತ್ಯ ಹರಿಕೇಶಾಯ ತಥೈವ ವರದೇ ನಮಃ ।
ಈಶಾಯೇತಿ ಕಟಿಂ ರತ್ಯೈ ಶಂಕರಾಯೇತಿ ಶಂಕರಂ ॥ ೨೪೨ ॥

ಕುಕ್ಷಿದ್ವಯಂ ಚ ಕೌಟಿನ್ಯೇ ಶೂಲಿನೇ ಶೂಲಪಾಣಯೇ ।
ಮಂಗಲಾಯೈ ನಮಸ್ತುಭ್ಯಮುದರಂ ಚಾಭಿಪೂಜಯೇತ್ ॥ ೨೪೩ ॥

ಸರ್ವಾತ್ಮನೇ ನಮೋ ರುದ್ರಮೀಶಾನ್ಯೈ ಚ ಕುಚದ್ವಯಂ ।
ಶಿವಂ ಚಿದಾತ್ಮನೇ ತದ್ವದ್ರುದ್ರಾಣ್ಯೈ ಕಂಠಮರ್ಚಯೇತ್ ॥ ೨೪೪ ॥

---

ಗಳನ್ನು ಪಂಚಗವ್ಯದಿಂದಲೂ ಗಂಧೋದಕದಿಂದಲೂ ಸ್ನಾನಮಾಡಿಸಬೇಕು. ಅನಂತರ ಆ ಎರಡು ಪ್ರತಿಮೆಗಳಿಗೂ ಪೂಜೆಮಾಡಬೇಕು.

೨೪೦—೨೫೧. ಪಾರ್ವತೀದೇವಿಗೆ ನಮಸ್ಕಾರವು, ಶಿವನಿಗೆ ನಮಸ್ಕಾರವು ಎಂದು ಅವರಿಬ್ಬರ ಪಾದಗಳನ್ನೂ, ಶಿವನಿಗೆ ನಮಸ್ಕಾರವು, ಜಯೆಗೆ ನಮಸ್ಕಾರವು, ಎಂದು ಇಬ್ಬರ ಮೊಣಕಾಲುಗಳನ್ನೂ, ತ್ರ್ಯಂಬಕನಿಗೆ ನಮಸ್ಕಾರವು ಭವಾನಿಗೆ ನಮಸ್ಕಾರವು ಎಂದು ಅವರಿಬ್ಬರ ಮುಂಡಿಗಳನ್ನೂ, ಭದ್ರೇಶ್ವರನಿಗೆ ನಮಸ್ಕಾರವು, ವಿಜಯೆಗೆ ನಮಸ್ಕಾರವು ಎಂದು ತಲೆಯನ್ನೂ, ಹರಿಕೇಶನಿಗೆ ನಮಸ್ಕಾರವು, ವರದನಿಗೆ ನಮಸ್ಕಾರವು ಎಂದು ಅವರಿಬ್ಬರ ಮುಂಡಿಯನ್ನೂ, ಈಶನಿಗೆ ನಮಸ್ಕಾರವು, ಶಂಕರನಿಗೆ ನಮಸ್ಕಾರವು ಎಂದು ಅವರಿಬ್ಬರ ಸೊಂಟವನ್ನೂ, ಕೌಟನಿಗೂ, ಶೂಲಪಾಣಿಗೂ ನಮಸ್ಕಾರವು ಎಂದು ಹೊಟ್ಟೆಯನ್ನೂ, ಮಂಗಳೆಗೆ ನಮಸ್ಕಾರವು, ಶೂಲಿಗೆ ನಮಸ್ಕಾರವು ಎಂದು ಎದೆಯ ಕೆಳಭಾಗವನ್ನೂ, ಸರ್ವಾತ್ಮನಿಗೆ ನಮಸ್ಕಾರವು, ಈಶಾನಿಗೆ ನಮಸ್ಕಾರವೆಂದು ಎರಡು ಮೊಲೆಗಳನ್ನೂ, ಚಿದಾತ್ಮನಿಗೆ ನಮಸ್ಕಾರವು, ರುದ್ರಾಣಿಗೆ ನಮಸ್ಕಾರವು ಎಂದು ಅವರ ಕತ್ತನ್ನೂ, ತ್ರಿಪುರನಾಶಕನಿಗೆ ನಮಸ್ಕಾರವು, ಅನಂತೆಗೆ

ತ್ರಿಪುರಘ್ನಾಯ ವಿಶ್ವೇಶಮನಂತಾಯೈ ಕರದ್ವಯಂ ।
ತ್ರಿಲೋಚನಾಯೇತಿ ಹರಂ ಬಾಹೂ ಕಾಲಾನಲಪ್ರಿಯೇ ॥ ೨೪೫ ॥

ಸೌಭಾಗ್ಯಭವನಾಯೇತಿ ಭೂಷಣಾನಿ ಸದಾಽರ್ಚಯೇತ್ ।
ಸ್ವಾಹಾ ಸ್ವಧಾಯೈ ಚ ಮುಖಮೀಶ್ವರಾಯೇತಿ ಶೂಲಿನಂ ॥ ೨೪೬ ॥

ಅಶೋಕವನವಾಸಿನ್ಯೈ ಪೂಜ್ಯಾವೋಷ್ಠೌ ವಿಭೂತಿದಾ ।
ಸ್ಥಾಣವೇ ಚ ಹರಂ ತದ್ವದಾಸ್ಯಂ ಚಂದ್ರಮುಖಪ್ರಿಯೇ ॥ ೨೪೭ ॥

ನಮೋಽರ್ಧನಾರೀಶ ಹರ ಅಸಿತಾಂಗೀತಿ ನಾಸಿಕಾಂ ।
ನಮ ಉಗ್ರಾಯ ಲೋಕೇಶಂ ಲಲಿತೇತಿ ಪುನರ್ಭ್ರುವೌ ॥ ೨೪೮ ॥

ಶರ್ವಾಯ ಪುರಹಂತಾರಂ ವಾಸುದೇವ್ಯೈ ತಥಾಽಲಕಾನ್ ।
ನಮಃ ಶ್ರೀಕಂಠನಾಥಾಯ ಶಿವಕೇಶಾಂಸ್ತಥಾಽರ್ಚಯೇತ್ ॥ ೨೪೯ ॥

ನಮೋ ಭೀಮೋಗ್ರರೂಪಿಣ್ಯೈ ಶಿರಃ ಸರ್ವಾತ್ಮನೇ ನಮಃ ।
ಹರಮಭ್ಯರ್ಚ್ಯ ವಿಧಿವತ್ಸೌಭಾಗ್ಯಾಷ್ಟಕಮಗ್ರತಃ ॥ ೨೫೦ ॥

ಸ್ಥಾಪಯೇತ್ತತ್ರ ನಿಷ್ಪಾವಾನ್ಕುಸುಂಭಂ ಕ್ಷೀರಜೀರಕಂ ।
ತರುರಾಜೇಕ್ಷುಲವಣಂ ಕುಸುಮಂ ಚ ತಥಾಽಷ್ಟಕಂ ॥ ೨೫೧ ॥

---

ನಮಸ್ಕಾರವು ಎಂದು ಎರಡು ಕೈಗಳನ್ನೂ, ತ್ರಿಲೋಚನನಿಗೆ ನಮಸ್ಕಾರವು, ಕಾಲಾನಳಪ್ರಿಯಳಿಗೆ ನಮಸ್ಕಾರವು ಎಂದು ತೋಳುಗಳನ್ನೂ, ಸೌಭಾಗ್ಯಭವನನಿಗೆ ನಮಸ್ಕಾರವು ಎಂದು ಆಭರಣಗಳನ್ನೂ, ಪೂಜಿಸಬೇಕು. ಸ್ವಾಹಾನಮಃ. ಸ್ವಧಾನಮಃ, ಈಶ್ವರನಿಗೆ ನಮಸ್ಕಾರವು ಎಂದು ಮುಖವನ್ನೂ, ಅಶೋಕವನವಾಸಿನಿಗೆ ವಿಭೂತಿದನಿಗೆ ನಮಸ್ಕಾರವು ಎಂದು ತುಟಿಗಳನ್ನೂ, ಸ್ಥಾಣುವಿಗೆ ನಮಸ್ಕಾರವು, ಚಂದ್ರಮುಖಪ್ರಿಯಳಿಗೆ ನಮಸ್ಕಾರವು ಎಂದು ಮುಖವನ್ನೂ, ಅರ್ಧನಾರೀಶನಿಗೆ ನಮಸ್ಕಾರವು, ಅಸಿತಾಂಗಿಗೆ ನಮಸ್ಕಾರವು ಎಂದು ಮೂಗನ್ನೂ, ಉಗ್ರನಿಗೆ ನಮಸ್ಕಾರವು, ಲಲಿತೆಗೆ ನಮಸ್ಕಾರವು ಎಂದು ಹುಬ್ಬುಗಳನ್ನೂ, ಶರ್ವನಿಗೆ ನಮಸ್ಕಾರವು, ವಾಸುದೇವನಿಗೆ ನಮಸ್ಕಾರವು ಎಂದು ಮುಂಗುರುಳನ್ನೂ, ಶ್ರೀಕಂಠನಾಥನಿಗೆ ನಮಸ್ಕಾರವು ಎಂದು ಈತನ ತಲೆಗೂದಲನ್ನೂ ಪೂಜಿಸಬೇಕು. ಉಗ್ರರೂಪಿಣಿಗೆ ನಮಸ್ಕಾರವು ಸರ್ವಾತ್ಮ

ದತ್ತಂ ಸೌಭಾಗ್ಯಮೇತಸ್ಮಾತ್ಸೌಭಾಗ್ಯಾಷ್ಟಕಮಿತ್ಯುತ ।
ಏವಂ ನಿವೇದ್ಯ ತತ್ಸರ್ವಮಗ್ರತಃ ಶಿವಯೋಃ ಪುನಃ ॥ ೨೫೨ ॥

ಚೈತ್ರೇ ಶೃಂಗಾಟಕಂ ಪ್ರಾಶ್ಯ ಸ್ವಪೇದ್ಭೂಮಾವರಿಂದಮ ।
ಪುನಃ ಪ್ರಭಾತ ಉತ್ಥಾಯ ಕೃತಸ್ನಾನಜಪಃ ಶುಚಿಃ ॥ ೨೫೩ ॥

ಸಂಪೂಜ್ಯ ದ್ವಿಜದಾಂಪತ್ಯಂ ಮಾಲ್ಯವಸ್ತ್ರವಿಭೂಷಣೈಃ ।
ಸೌಭಾಗ್ಯಾಷ್ಟಕಸಂಯುಕ್ತಂ ಸೌವರ್ಣಪ್ರತಿಮಾದ್ವಯಂ ॥ ೨೫೪ ॥

ಪ್ರೀಯತಾಂ ಮೇಽತ್ರ ಲಲಿತಾ ಬ್ರಾಹ್ಮಣಾಯ ನಿವೇದಯೇತ್ ।
ಏವಂ ಸಂವತ್ಸರಂ ಯಾವತ್ತೃತೀಯಾಯಾಂ ಸದಾ ನೃಪ ॥ ೨೫೫ ॥

ಪ್ರಾಶನೇ ದಾನಮಂತ್ರೇ ಚ ವಿಶೇಷೋಽಯಂ ನಿಬೋಧ ಮೇ ।
ಗೋಶೃಂಗಾಂಬು ಮಧೌ ಪ್ರೋಕ್ತಂ ವೈಶಾಖೇ ಗೋಮಯಂ ಪುನಃ ॥ ೨೫೬ ॥

---

ನಿಗೆ ನಮಸ್ಕಾರವು ಎಂದು ತಲೆಯನ್ನೂ ಪೂಜಿಸಬೇಕು. ಹೀಗೆ ಪೂಜಿಸಿ ಸೌಭಾಗ್ಯಾಷ್ಟಕಗಳನ್ನು ಮುಂದುಗಡೆಯಲ್ಲಿಡಬೇಕು. ಅವರೆ, ಕುಸುಮೆ, ಹಾಲು, ಜೀರಿಗೆ, ಅರಳಿ, ಕಬ್ಬು, ಉಪ್ಪು, ಕೊತ್ತಂಬರಿ ಇವು ಸೌಭಾಗ್ಯಾಷ್ಟಕಗಳು.

೨೫೨. ನೀನು ಕೊಟ್ಟಿರುವ ಸೌಭಾಗ್ಯಾಷ್ಟಕವನ್ನು ನಿನ್ನ ಮುಂದೆಯೇ ಇಟ್ಟಿರುವೆನೆಂದು ಹೇಳಿ ಆ ಪಾರ್ವತೀ ಪರಮೇಶ್ವರರ ಮುಂದೆ ಇವನ್ನು ಇಡಬೇಕು.

೨೫೩—೨೫೫. ಚೈತ್ರ ಮಾಸದಲ್ಲಿ ಶುಂಠಿಯನ್ನು ತಿಂದು ನೆಲದ ಮೇಲೆ ಮಲಗಬೇಕು. ಮತ್ತೆ ಬೆಳಿಗ್ಗೆ ಎದ್ದು ಸ್ನಾನ ಜಪಗಳನ್ನು ಮಾಡಿಕೊಂಡು ಶುಚಿಯಾಗಿ ಬ್ರಾಹ್ಮಣ ದಂಪತಿಗಳನ್ನು ಕರೆದು ವಸ್ತ್ರ ಮುಂತಾದುವುಗಳಿಂದ ಪೂಜಿಸಿ ಅಲ್ಲಿಟ್ಟಿರುವ ಸೌಭಾಗ್ಯಾಷ್ಟಕವನ್ನೂ, ಆ ಉಮಾಮಹೇಶ್ವರ ಪ್ರತಿಮೆಗಳನ್ನೂ ಆ ಬ್ರಾಹ್ಮಣನಿಗೆ ದಾನಮಾಡಬೇಕು. ಈರೀತಿ ತದಿಗೆಯ ದಿಸವ ಒಂದು ವರ್ಷ ಪೂರ್ತಿಯಾಗಿ ಮಾಡಬೇಕು. ಆಗ ಲಲಿತೆಯು ನನಗೋಸ್ಕರ ಪ್ರೀತಿಯನ್ನು ಹೊಂದಲಿ ಎಂದು ಹೇಳಬೇಕು.

೨೫೬—೨೫೮. ತಿನ್ನುವುದು, ದಾನಮಂತ್ರಗಳಲ್ಲಿ ವಿಶೇಷಗಳನ್ನು ಹೇಳುತ್ತೇನೆ. ಚೈತ್ರದಲ್ಲಿ ಗೋಶೃಂಗದ ನೀರನ್ನೂ, ವೈಶಾಖದಲ್ಲಿ ಗೋಮಯವನ್ನೂ,

**ಜ್ಯೇಷ್ಠೇ ಮಂದಾರಕುಸುಮಂ ಬಿಲ್ವಪತ್ರಂ ಶುಚೌ ಸ್ಮೃತಂ ।**
**ಶ್ರಾವಣೇ ದಧಿ ಸಂಪ್ರಾಶ್ಯಂ ನಭಸ್ಯೇ ತು ಕುಶೋದಕಂ ॥ ೨೫೭ ॥**

**ಕ್ಷೀರಂ ಚಾಶ್ವಯುಜೇ ಮಾಸಿ ಕಾರ್ತಿಕೇ ಪೃಷದಾಜ್ಯಕಂ ।**
**ಮಾರ್ಗೇ ತು ಮಾಸೇ ಗೋಮೂತ್ರಂ ಪೌಷೇ ಸಂಪ್ರಾಶಯೇದ್ಘೃತಂ ॥ ೨೫೮ ॥**

**ಮಾಘೇ ಕೃಷ್ಣತಿಲಾಂಸ್ತದ್ವತ್ಪಂಚಗವ್ಯಂ ಚ ಫಾಲ್ಗುನೇ ।**
**ಲಲಿತಾ ವಿಜಯಾ ಭದ್ರಾ ಭವಾನೀ ಕುಮುದಾ ಶಿವಾ ॥ ೨೫೯ ॥**

**ವಾಸುದೇವಾ ತಥಾ ಗೌರೀ, ಮಂಗಳಾ ಕಮಲಾ ಸತೀ ।**
**ಉಮಾ ಚ ದಾನಕಾಲೇ ತು ಪ್ರೀಯತಾಮಿತಿ ಕೀರ್ತಯೇತ್ ॥ ೨೬೦ ॥**

**ತಸ್ಮಿಂಸ್ತು ದ್ವಾದಶೇ ಮಾಸಿ ದ್ವಾದಶ್ಯಾಂ ವಿಷ್ಣುಮರ್ಚಯೇತ್ ।**
**ತಥಾ ಲಕ್ಷ್ಮೀಂ ತತ್ರೈವ ಭರ್ತ್ರಾ ಸಹ ಸಮರ್ಚಯೇತ್ ॥ ೨೬೧ ॥**

---

ಜ್ಯೇಷ್ಠದಲ್ಲಿ ಮಂದಾರಕುಸುಮವನ್ನೂ, ಆಷಾಢದಲ್ಲಿ ಬಿಲ್ವಪತ್ರೆಯನ್ನೂ, ಶ್ರಾವಣದಲ್ಲಿ ಮೊಸರನ್ನೂ, ಭಾದ್ರಪದದಲ್ಲಿ ಕುಶೋದಕವನ್ನೂ, ಆಶ್ವಯುಜದಲ್ಲಿ ಹಾಲನ್ನೂ, ಕಾರ್ತಿಕದಲ್ಲಿ ಪೃಷದಾಜ್ಯವನ್ನೂ, ಮಾರ್ಗಶಿರದಲ್ಲಿ ಗೋಮೂತ್ರವನ್ನೂ, ಪುಷ್ಯದಲ್ಲಿ ತುಪ್ಪವನ್ನೂ, ಮಾಘದಲ್ಲಿ ಕರೀ ಎಳ್ಳನ್ನೂ, ಫಾಲ್ಗುಣದಲ್ಲಿ ಪಂಚಗವ್ಯವನ್ನೂ ಭಕ್ಷಿಸಬೇಕು.

೨೫೯-೨೬೦. ದಾನಕೊಡುವಾಗ ಚೈತ್ರದಲ್ಲಿ ಲಲಿತೆಯು ಪ್ರೀತಳಾಗಲೆಂದೂ, ವೈಶಾಖದಲ್ಲಿ ಭದ್ರೆಯು ಪ್ರೀತಳಾಗಲೆಂದೂ, ಜ್ಯೇಷ್ಠದಲ್ಲಿ ಭದ್ರೆಯು ಪ್ರೀತಳಾಗಲೆಂದೂ, ಆಷಾಢದಲ್ಲಿ ಭವಾನಿಯು ಪ್ರೀತಳಾಗಲೆಂದೂ, ಶ್ರಾವಣದಲ್ಲಿ ಕುಮುದೆಯು ಪ್ರೀತಳಾಗಲೆಂದೂ, ಭಾದ್ರಪದಲ್ಲಿ ಶಿವೆಯು ಪ್ರೀತಳಾಗಲೆಂದೂ, ಆಶ್ವಯುಜದಲ್ಲಿ ವಾಸುದೇವೆಯು ಪ್ರೀತಳಾಗಲೆಂದೂ, ಕಾರ್ತಿಕದಲ್ಲಿ ಗೌರಿಯು ಪ್ರೀತಳಾಗಲೆಂದೂ, ಮಾರ್ಗಶೀರ್ಷದಲ್ಲಿ ಮಂಗಳೆಯು ಪ್ರೀತಳಾಗಲೆಂದೂ, ಪುಷ್ಯದಲ್ಲಿ ಕಮಲೆಯು ಪ್ರೀತಳಾಗಲೆಂದೂ, ಮಾಘದಲ್ಲಿ ಸತಿಯು ಪ್ರೀತಳಾಗಲೆಂದೂ, ಫಾಲ್ಗುಣದಲ್ಲಿ ಉಮೆಯು ಪ್ರೀತಳಾಗಲೆಂದೂ ಹೇಳಬೇಕು.

೨೬೧. ಹನ್ನೆರಡನೆಯ ತಿಂಗಳಲ್ಲಿ ದ್ವಾದಶಿಯ ದಿನ ಲಕ್ಷ್ಮೀ ವಿಷ್ಣುಗಳನ್ನು ಪೂಜಿಸಬೇಕು.

ಪೌರ್ಣಮಾಸ್ಯಾಮಥೋ ತದ್ವತ್ಸಪತ್ನೀಕಃ ಪಿತಾಮಹಃ ।
ಉಪಾಸನೀಯೋ ವಿಧಿನಾ ಪರತ್ರ ಗತಿಮಿಚ್ಛತಾ ॥ ೨೬೨ ॥

ಸೌಭಾಗ್ಯಾಷ್ಟಕಂ ತದ್ವಚ್ಚ ದಾತವ್ಯಂ ಭೂತಿಮಿಚ್ಛತಾ ।
ಮಲ್ಲಿಕಾಶೋಕಕಮಲಂ ಕದಂಬೋತ್ಪಲಚಂಪಕಂ ॥ ೨೬೩ ॥

ಕುಬ್ಜಕಂ ಕರವೀರಂ ಚ ಬಾಲಮುಮ್ಲಾನಪಂಕಜಂ ।
ಸಿಂಧುವಾರಂ ಚ ಸರ್ವೇಷು ಮಾಸೇಷು ಕುಸುಮಂ ಸ್ಮೃತಂ ॥ ೨೬೪ ॥

ಜಪಾಕುಸುಂಭಕುಸುಮಂ ಮಾಲತೀ ಶತಪತ್ರಿಕಾ ।
ಯಥಾಲಾಭಂ ಪ್ರಶಸ್ತಾನಿ ಕರವೀರಂ ಚ ಸರ್ವದಾ ॥ ೨೬೫ ॥

ಏವಂ ಸಂವತ್ಸರಂ ಯಾವದುಪೋಷ್ಯ ವಿಧಿವನ್ನರಃ ।
ಸ್ತ್ರೀ ವಾ ನಕ್ತಂ ಕುಮಾರೀ ವಾ ಶಿವಮಭ್ಯರ್ಚ್ಯ ಭಕ್ತಿತಃ ॥ ೨೬೬ ॥

---

೨೬೨. ಹುಣ್ಣಿಮೆಯ ದಿನ ಸಪತ್ನೀಕನಾದ ಬ್ರಹ್ಮನನ್ನು ಪೂಜಿಸಬೇಕು.

೨೬೩-೨೬೪. ಹೀಗೆ ಪೂಜಿಸಿ ಸೌಭಾಗ್ಯಾಷ್ಟಕಗಳನ್ನು ದಾನಮಾಡಬೇಕು. ಚೈತ್ರದಲ್ಲಿ ಮಲ್ಲಿಗೆಯ ಹೂವನ್ನೂ, ವೈಶಾಖದಲ್ಲಿ ಅಶೋಕ ಕುಸುಮವನ್ನೂ, ಜ್ಯೇಷ್ಠದಲ್ಲಿ ಮಲದ ಹೂವನ್ನೂ, ಆಷಾಢದಲ್ಲಿ ಕದಂಬದ ಹೂವನ್ನೂ, ಶ್ರಾವಣದಲ್ಲಿ ಕನ್ನೈದಿಲೆ ಹೂವನ್ನೂ, ಭಾದ್ರಪದದಲ್ಲಿ ಸಂಪಿಗೆ ಹೂವನ್ನೂ, ಆಶ್ವಯುಜದಲ್ಲಿ ಕುಬ್ಜದ ಹೂವನ್ನೂ, ಕಾರ್ತಿಕದಲ್ಲಿ ಕಣಿಗಲೆ ಹೂವನ್ನೂ, ಮಾರ್ಗಶಿರದಲ್ಲಿ ಕಿರುಗೋರಂಟಿ ಹೂವನ್ನೂ, ಪುಷ್ಯದಲ್ಲಿ ಹೆಗ್ಗೋರಂಟಿ ಹೂವನ್ನೂ, ಮಾಘದಲ್ಲಿ ಅದ ಹೂವನ್ನೂ, ಫಾಲ್ಗುಣದಲ್ಲಿ ಲಕ್ಕಿ ಹೂವನ್ನೂ, ಪೂಜೆಮಾಡಬೇಕು. ಇವುಗಳಿಗೆ ಮಾಸ ಕುಸುಮಗಳೆಂದು ಹೆಸರು.

೨೬೫. ದಾಸವಾಳ, ಕುಸುಮಹೂ, ಜಾಜೀ, ಕಮಲ, ಇವುಗಳು ಸಿಕ್ಕುವಾಗ ಪೂಜೆಗೆ ಪ್ರಶಸ್ತಗಳು. ಕಣಿಗಲೆಯು ಯಾವಾಗಲೂ ಪ್ರಶಸ್ತವು.

೨೬೬-೨೬೭. ಮನುಷ್ಯನು ಉಕ್ತಕಾಲಗಳಲ್ಲಿ ಉಪವಾಸಮಾಡುತ್ತ ವಿಧಿವತ್ತಾಗಿ ಒಂದು ವರ್ಷದವರೆಗೂ ಮಾಡಬೇಕು. ಹೆಂಗಸಾಗಲಿ ಹುಡುಗಿಯಾಗಲಿ

ವ್ರತಾಂತೇ ಶಯನಂ ದದ್ಯಾತ್ಸರ್ವೋಪಸ್ಕರಸಂಯುತಂ ।
ಉಮಾಮಹೇಶ್ವರೌ ಹೇಮೌ ವೃಷಭಂ ಚ ಗವಾ ಸಹ ॥ ೨೬೭ ॥

ಸ್ಥಾಪಯಿತ್ವಾ ತು ಶಯನಂ ಬ್ರಾಹ್ಮಣಾಯ ನಿವೇದಯೇತ್ ।
ದ್ವಾದಶ್ಯಾಂ ವತ್ಸರಂ ತ್ವೇಕಂ ಮಹಾಲಕ್ಷ್ಮ್ಯಾ ಚ ಕೇಶವಂ ॥ ೨೬೮ ॥

ಬ್ರಹ್ಮಾಣಂ ಸಹ ಸಾವಿತ್ರ್ಯಾ ಪೂಜಯಿತ್ವಾ ಕರೋದ್ವ್ರತ ।
ಸರ್ವಾನ್ಕಾಮಾನವಾಪ್ನೋತಿ ಮನಸಾ ಯಾನಭೀಪ್ಸತಿ ॥ ೨೬೯ ॥

ಅನ್ಯಾನ್ಯಪಿ ಯಥಾಶಕ್ತಿ ಮಿಥುನಾನ್ಯಂಬರಾದಿಭಿಃ ।
ಧಾನ್ಯಾಲಂಕಾರಗೋದಾನೈರನ್ಯೈಶ್ಚ ಧನಸಂಚಯೈಃ ॥ ೨೭೦ ॥

ವಿತ್ತಶಾಠ್ಯೇನ ರಹಿತಃ ಪೂಜಯೇತ್ಕೃತನಿಶ್ಚಯಃ ।
ಏವಂ ಕರೋತಿ ಯಾ ಸಮ್ಯಕ್ಸೌಭಾಗ್ಯಶಯನವ್ರತಂ ॥ ೨೭೧ ॥

---

ಫಲಾಹಾರವನ್ನು ಮಾಡಿ ಭಕ್ತಿಯಿಂದಿರಬೇಕು. ವ್ರತ ಮುಗಿದನಂತರ ಉಪಕರಣಗಳಿಂದ ಕೂಡಿದ ಹಾಸಿಗೆಯನ್ನು ದಾನಮಾಡಬೇಕು. ಚಿನ್ನದಲ್ಲಿ ಉಮಾಮಹೇಶ್ವರರ ವಿಗ್ರಹಗಳನ್ನು ಮಾಡಿಸಿ ಅವನ್ನು ಆ ಹಾಸಿಗೆಯ ಮೇಲಿಟ್ಟು ಅದರ ಜೊತೆಗೆ ಒಂದು ಕರೆಯುವ ಹಸು, ಒಂದು ಹೋರಿಯನ್ನು ಸೇರಿಸಿ ಆ ಬ್ರಾಹ್ಮಣನಿಗೆ ದಾನಮಾಡಬೇಕು.

೨೬೮-೨೬೯. ಮಹಾಲಕ್ಷ್ಮೀ ಕೇಶವರನ್ನು ದ್ವಾದಶಿ ದ್ವಾದಶಿಯಲ್ಲಿಯೂ ಪೂಜಿಮಾಡಿ ವರ್ಷ ಮುಗಿಯಲು ಬ್ರಾಹ್ಮಣನಿಗೆ ದಾನಮಾಡಬೇಕು. ಬ್ರಹ್ಮನನ್ನು ಸಾವಿತ್ರಿಯನ್ನು ವರ್ಷಪರ್ಯಂತರ ಪೂಜಿಮಾಡಿ ದಾನಮಾಡಿದರೆ ಮನಸ್ಸಿನ ಇಷ್ಟಾರ್ಥಗಳೆಲ್ಲಾ ಕೈಗೂಡುತ್ತವೆ.

೨೭೦. ಮತ್ತು ಶಚೀಪುರಂದರಾದಿ ದಂಪತಿಗಳನ್ನು ಶಕ್ತಿಗನುಗುಣವಾಗಿ ಧಾನ್ಯ, ಅಲಂಕಾರ, ಗೋದಾನ, ದಕ್ಷಿಣೆಗಳಿಂದ ದೃಢಮನಸ್ಸಿನಿಂದ ಪೂಜೆಮಾಡಬೇಕು. ಲೋಭಿತನಮಾಡಬಾರದು.

೨೭೧. ಯಾವಳು ಈ ಸೌಭಾಗ್ಯಶಯನ ವ್ರತವನ್ನು ಮಾಡುತ್ತಾಳೆಯೋ ಆಕೆಯು ಇಷ್ಟಾರ್ಥಗಳನ್ನು ಹೊಂದಿ ಉತ್ತಮಪದವನ್ನು ಹೊಂದುತ್ತಾಳೆ.

ಸರ್ವಾನ್ಕಾಮಾನವಾಪ್ನೋತಿ ಪದಂ ವಾ ನಿತ್ಯಮಶ್ನುತೇ ।
ಫಲಸ್ಯೈಕಸ್ಯ ಚ ತ್ಯಾಗಮೇತತ್ಕುರ್ವನ್ಸಮಾಚರೇತ್ ॥ ೨೭೨ ॥

ಯಶಃ ಕೀರ್ತಿಮವಾಪ್ನೋತಿ ಪ್ರತಿಮಾಸಂ ನರಾಧಿಪ ।
ಸೌಭಾಗ್ಯಾರೋಗ್ಯರೂಪೈಶ್ಚ ವಸ್ತ್ರಾಲಂಕಾರಭೂಷಣೈಃ ॥ ೨೭೩ ॥

ನ ವಿಯುಕ್ತೋ ಭವೇದ್ರಾಜನ್ಸೌಭಾಗ್ಯಶಯನಪ್ರದಃ ।
ಯಸ್ತು ದ್ವಾದಶವರ್ಷಾಣಿ ಸೌಭಾಗ್ಯಶಯನವ್ರತಂ ॥ ೨೭೪ ॥

ಕರೋತಿ ಸಪ್ತ ವಾಷ್ಟೌ ವಾ ಬ್ರಹ್ಮಲೋಕಗತೈರ್ನರೈಃ ।
ಪೂಜ್ಯಮಾನೋ ವಸೇತ್ಸಮ್ಯಗ್ಯಾವತ್ಕಲ್ಪಾಯುತಂ ನರಃ ॥ ೨೭೫ ॥

ವಿಷ್ಣುಲೋಕಮಥಾಸಾದ್ಯ ಶಿವಲೋಕಗತಸ್ತಥಾ ।
ನಾರೀ ವಾ ಕುರುತೇ ಯಾ ತು ಕುಮಾರೀ ವಾ ನರೇಶ್ವರ ॥ ೨೭೬ ॥

ಸಾಽಪಿ ತತ್ಫಲಮಾಪ್ನೋತಿ ದೇವ್ಯನುಗ್ರಹಲಾಲಿತಾ ।
ಶೃಣುಯಾದಪಿ ಯಶ್ಚೈವಂ ಪ್ರದದ್ಯಾದಪಿ ವಾ ಮತಿಂ ।
ಸೋಽಪಿ ವಿದ್ಯಾಧರೋ ಭೂತ್ವಾ ಸ್ವರ್ಗಲೋಕೇ ಚಿರಂ ವಸೇತ್ ॥ ೨೭೭ ॥

---

೨೭೨-೨೭೩. ಈ ವ್ರತವನ್ನು ಮಾಡುವವನು ಫಲತ್ಯಾಗವನ್ನು ಮಾಡಬೇಕು. ಹಾಗಾದರೆ ಯಶಸ್ಸನ್ನು ಹೊಂದುತ್ತಾನೆ. ತಿಂಗಳು ತಿಂಗಳಿಗೂ ಹೀಗೆ ಮಾಡಿದರೆ ಸೌಭಾಗ್ಯ, ಆರೋಗ್ಯ. ರೂಪು, ವಸ್ತ್ರ, ಅಲಂಕಾರ ಭೂಷಣಗಳಿಂದ ಬಿಡಲ್ಪಡುವುದಿಲ್ಲ. ಸೌಭಾಗ್ಯಶಯನವನ್ನು ಹೀಗೆ ದಾನಮಾಡಬೇಕು.

೨೭೪-೨೭೫. ಯಾವನು ಹನ್ನೆರಡು ವರ್ಷಗಳ ವರೆಗೆ ಈ ಸೌಭಾಗ್ಯಶಯನ ವ್ರತವನ್ನು ಮಾಡುವನೋ ಅಥವಾ ಏಳು ಎಂಟು ವರ್ಷವಾದರೂ ಮಾಡುವನೋ ಅವನು ಬ್ರಹ್ಮಲೋಕದಲ್ಲಿ ಗೌರವಿಸಲ್ಪಡುತ್ತಾ ಸಾವಿರ ಕಲ್ಪಗಳವರೆಗೂ ಇರುತ್ತಾನೆ. ಹಾಗೆಯೇ ವಿಷ್ಣುಲೋಕಕ್ಕೂ ಹೋಗುವನು. ಮತ್ತು ಶಿವಲೋಕಕ್ಕೂ ಹೋಗುವನು.

೨೭೬. ದೊಡ್ಡ ಹೆಂಗಸಾಗಲಿ ಕುಮಾರಿಯಾಗಲಿ ಯಾರು ಇದನ್ನು ಮಾಡುವರೋ ಆಕೆಯು ದೇವಿಯ ಅನುಗ್ರಹಪುಷ್ಟವಳಾಗಿ ಆ ಫಲವನ್ನು ಹೊಂದುವಳು.

೨೭೭. ಇದನ್ನು ಕೇಳಿದವನೂ, ಮಾಡುವಂತೆ ಬೋಧಿಸಿದವನೂ ವಿದ್ಯಾಧರನಾಗಿ ಸ್ವರ್ಗಲೋಕದಲ್ಲಿ ಬಹುಕಾಲ ಇರುವನು.

